|| श्रीः ||

# ಶ್ರೀಮಾಧವೀಯ
# ಶ್ರೀಮಚ್ಛಂಕರ ದಿಗ್ವಿಜಯಃ

ಭಾಗ ೨



ಶ್ರೀ ಜಗದ್ಗುರು ಶಂಕರಾಚಾರ್ಯ ಮಹಾಸಂಸ್ಥಾನಮ್
ದಕ್ಷಿಣಾಮ್ನಾಯ ಶ್ರೀ ಶಾರದಾ ಪೀಠಂ
ಶೃಂಗೇರಿ 577 139

रामकृष्ण भट्टः कूटेलु
३/०८/२००६

# ಶ್ರೀಮಾಧವೀಯ
# ಶ್ರೀಮಚ್ಛಂಕರ ದಿಗ್ವಿಜಯಃ

(ಶ್ರೀ ವಿದ್ಯಾರಣ್ಯ ಪ್ರಣೀತಃ)

ಭಾಗ ೨


ಕನ್ನಡ ಅನುವಾದ ಮತ್ತು ಟಿಪ್ಪಣಿಗಳೊಡನೆ
ವಿದ್ವಾನ್ ಎನ್. ರಂಗನಾಥಶರ್ಮಾ



ಶ್ರೀ ಜಗದ್ಗುರು ಶಂಕರಾಚಾರ್ಯ ಮಹಾಸಂಸ್ಥಾನಮ್
ದಕ್ಷಿಣಾಮ್ನಾಯ ಶ್ರೀ ಶಾರದಾ ಪೀಠಂ
ಶೃಂಗೇರಿ 577 139

ಶ್ರೀಮಚ್ಛಂಕರ ದಿಗ್ವಿಜಯಃ - ಶ್ರೀವಿದ್ಯಾರಣ್ಯಪ್ರಣೀತಃ

ಕನ್ನಡ ಅನುವಾದ – ವಿದ್ವಾನ್ ಎನ್. ರಂಗನಾಥ ಶರ್ಮಾ, ಬೆಂಗಳೂರು.

ದ್ವಿತೀಯ ಸಂಪುಟ ೧೦-೧೬ ಸರ್ಗಗಳು: ಪುಟಗಳು: liv+ ೩೨೪

ಪ್ರಥಮ ಮುದ್ರಣ ೧೯೯೬



ಬೆಲೆ:ರೂ.75-00

Typeset at: M&M Hi-tech DTP
Bangalore-560 084 Ph: 5475991

ಮುದ್ರಕರು: ಶ್ರೀ ಆಫ್‌ಸೆಟ್
ಶಂಕರಮಠ ರಸ್ತೆ, ಶಂಕರಪುರಂ
ಬೆಂಗಳೂರು - 560 004

## || श्री शृङ्गेरी श्रीजगद्गुरुमहासंस्थानम् ||

**श्रीमत्परमहंसपरिव्राजकाचार्यवर्य पदवाक्यप्रमाणपारावारपारीण**
**यमनियमासनप्रणायामप्रत्याहारधारणाध्यानसमाध्यष्टाङ्गयोगानुष्ठाननिष्ठ**
**तपश्चक्रवर्त्यनाद्यविच्छिन्न श्रीशङ्कराचार्यगुरुपरम्पराप्राप्त षड्दर्शनस्थापनाचार्य**
**व्याख्यानसिंहासनाधीश्वर सकलनिगमागमसारहृदय सांख्यत्रयप्रतिपादक वैदिकमार्गप्रवर्तक**
**सर्वतन्त्रस्वतन्त्रादिराजधानी विद्यानगरमहाराजधानी कर्णाटकसिंहासनप्रतिष्ठापनाचार्य**
**श्रीमद्राजाधिराजगुरुभूमण्डलाचार्य ऋष्यशृङ्गपुरवराधीश्वर तुङ्गभद्रातीरवासि**
**श्रीमद्विद्या शङ्करपादपद्माराधक श्रीजगद्गुरु श्रीमदभिनवविद्यातीर्थस्वामिगुरुकरकमलसञ्जात**

# || श्री जगद्गुरु शृङ्गेरी श्रीमद्भारतीतीर्थमहास्वामिभिः ||

निखिलास्तिकमहाजनेषु नारायणस्मरणपूर्वकं विरचिता आशिषस्समुल्लसन्तु ।

इह खलु सर्वंसहायामस्यां लब्धजन्मनां लोकानां वेदबोधितस्य सनातनस्य धर्मस्याचरणमेव ऐहिकामुष्मिक श्रेयोनिदानमिति निश्चप्रचम् । परन्तु दुष्कलिप्रभावेण केचन नास्तिकाः प्रादुर्भूय सिद्धान्तमिमं प्रदूष्य लोकान् श्रेयोमार्गात् प्रच्यावयन्तो ददृशिरे । अतो भगवान् कलानिधिशेखरः श्री शंकराचार्यरूपेण स्वयमवतीर्य तान् दुर्वादिनो विद्राव्य सनातनं धर्ममविकलं प्रतिष्ठाप्य लोकानतिवेलमन्वग्रहीत् ।

ते खलु श्रीशंकरभगवत्पादाचार्याः केरलेषु कालट्यामवतीर्य बाल्य एव चुलुकीकृतसकल शास्त्रपारावाराः श्रीगोविन्द-भगवत्पादयोगिभ्यः स्वीकृतपारमहंस्याः प्रस्थानत्रय भाष्याद्यनेक निबन्धान् विरचय्य सर्वत्रदेशे सञ्चर्य स्वीययुक्तिशतकोटिधाराभिः

प्रतिपक्षगिरीन् विभिद्य औपनिषदमद्वैतमात्मत्त्वं सर्वानवबोध्य तस्यास्य धर्मस्य सार्वदिकप्रचाराय चतुराम्नायपीठानि प्रतिष्ठाप्य काश्मीरे सर्वज्ञपीठमधिरुह्य हिमालयेषु केदारक्षेत्रे अन्तर्दधिरे ।

तदीयं पवित्रं चरित्रं माधवीयशंकरविजये विस्तरेणोपलभ्यते । स एव ग्रन्थः भगवत्पादचरित्रप्रतिपादकग्रन्थेषु मूर्धन्यो वरीवर्ति । आसेतुशीतनगं सकलशिष्टजनादृतस्य अत एव नैकभाषास्वनूदितस्य ग्रन्थतल्लजस्यास्य कर्णाटकभाषानुवाददौर्लभ्यमाकलय्य तदिदं नैयून्यं परिजिहीर्षवो वयं विद्वत्तल्लजान् ईदृशेषु कार्येषु सोत्साहं प्रवर्तनशीलान् श्री यन्. रंङ्गनाथशर्मणः ग्रन्थमिमं कर्णाटकभाषया अनुवदितुं प्रैरयाम । ते च आत्मनः श्रममविगणय्य पुण्यप्रदमिदं कार्यमिति, गुर्वाज्ञा पालनीयेति, अनेन परस्सहस्त्रलोकानाम् उपकृतिर्भवेदिति च धिया स्वरसतया अन्ववादिषुः। वयं चेममनुवादमवलोक्य नितरां अमोदिष्महि ।

श्रीशारदाचन्द्रकलावतंसयोर्निरवग्रहानुग्रहेण ग्रन्थोऽयं आस्तिकजनादरपात्रतामेत्वित्याशास्महे ।

शृङ्गगिरिः
ईश्वरवत्सरीय वैशाख शुद्धपञ्चमी रविवासरः
11-5-1997

इति नारायणस्मरणम्



श्री श्री जगद्गुरु शङ्कराचार्य महासंस्थानम्, दक्षिणाम्नाय श्री शारदापीठम्, शृङ्गेरी

**V. R. GOWRI SHANKAR** B.E.,D.I.I.Sc.,AMIMA
Administrator

# ಪ್ರಕಾಶಕರ ಮಾತು

ಧರ್ಮಗ್ಲಾನಿಯಾದಾಗ ಶಿಷ್ಟರ ರಕ್ಷಣೆಗಾಗಿ ಮತ್ತು ದುಷ್ಟರ ಶಿಕ್ಷೆಗಾಗಿ ಭಗವಂತನು ಅವತರಿಸುವನೆಂದು ಸ್ವತಃ ಭಗವಂತನೇ ಭಗವದ್ಗೀತೆಯಲ್ಲಿ ಅಭಯ ವಚನವನ್ನಿತ್ತಿದ್ದಾನಷ್ಟೇ. ಅಂತಹ ಒಂದು ಧರ್ಮ ವಿಪ್ಲವದ ಸಂದರ್ಭವು ಭಾರತ ದೇಶಕ್ಕೆ ಸುಮಾರು 7-8ರ ಶತಮಾನದ ಮಧ್ಯಭಾಗದಲ್ಲಿ ಒದಗಿ ಬಂದಿತ್ತು. ಈ ಸಂದಿಗ್ಧ ಸಂದರ್ಭದಲ್ಲಿ ಕೇರಳ ರಾಜ್ಯದ ಕಾಲಟಿ ಕ್ಷೇತ್ರದಲ್ಲಿ ಮಹಾಚೇತನವೊಂದು ಜನ್ಮತಾಳಿತು. ಸಾಕ್ಷಾತ್ ಪರಮೇಶ್ವರನ ಅವತಾರವೆಂದೇ ಭಾವಿಸಲಾದ ಈ ಚೇತನವು ಆದಿ ಶ್ರೀ ಶಂಕರ ಭಗವತ್ಪಾದರೆಂದು ಪ್ರಥಿತವಾಯಿತು.

ಅಪ್ರತಿಮ ಪ್ರತಿಭಾಶಾಲಿಗಳಾದ ಶ್ರೀ ಶಂಕರ ಭಗವತ್ಪಾದರು ತಮ್ಮ 8ನೇ ವಯಸ್ಸಿನಲ್ಲಿಯೇ ಮಹಾ ವಿದ್ವಾಂಸರೆನಿಸಿ, 16ನೇ ವಯಸ್ಸಿನಲ್ಲಿ ಪ್ರಸ್ಥಾನತ್ರಯಗಳಿಗೆ ಭಾಷ್ಯಗಳನ್ನೂ, ಅನೇಕ ಪ್ರಕರಣ ಗ್ರಂಥಗಳನ್ನೂ ಹಾಗೂ ಸ್ತೋತ್ರ ಕಾವ್ಯಗಳನ್ನೂ ರಚಿಸಿ, ಕೇವಲ ತಮ್ಮ 32ವರ್ಷಗಳ ವಯೋಮಾನದಲ್ಲಿ ಸಮಗ್ರ ಭಾರತ ದೇಶವನ್ನು ಕಾಲ್ನಡಿಗೆಯಲ್ಲಿ ಸಂಚರಿಸಿದ ಹಿರಿಮೆಯುಳ್ಳವರು. ಜನರಲ್ಲಿ ಪ್ರಚಲಿತವಾಗಿದ್ದ ನಾಸ್ತಿಕ್ಯ ಭಾವವನ್ನು ನಿರ್ಮೂಲಮಾಡಿ, ಅವೈದಿಕ ಮತಗಳಲ್ಲಿದ್ದ ದೋಷಗಳನ್ನು ತೋರಿಸಿ, ವೈದಿಕ ಕರ್ಮಗಳನ್ನು ಪರಿಶುದ್ಧಗೊಳಿಸಿ, ಆರ್ಷೇಯವಾದ ಔಪನಿಷದ ದರ್ಶನವನ್ನು ಪ್ರಸಾರಮಾಡುವುದರ ಮೂಲಕ ಸನಾತನ ಧರ್ಮವನ್ನು ಪುನಃ ಭದ್ರವಾಗಿ ಪ್ರತಿಷ್ಠಾಪಿತಗೊಳಿಸಿದರು. ಈ ಕಾರ್ಯವನ್ನು ಮಾಡಿದ್ದರಿಂದ ಷಣ್ಮತಸ್ಥಾಪನಾಚಾರ್ಯ ಎಂಬ ಪ್ರಖ್ಯಾತಿಗೆ ಪಾತ್ರರಾದ ಮಹಾಮಹಿಮರು.

ಈ ಅವತಾರ ಪುರುಷರ ಜೀವನ ಮತ್ತು ಸಾಧನೆಗಳನ್ನು ವಿವರವಾಗಿ ಪ್ರಸ್ತಾಪ ಮಾಡುವ "ಶ್ರೀ ಶಂಕರ ವಿಜಯ" ವೆಂಬ ಹೆಸರಿನ ಅನೇಕ ಗ್ರಂಥಗಳು ಉಪಲಬ್ಧವಾಗುತ್ತವೆ. ಪ್ರಕೃತ ಉಪಲಬ್ಧವಾಗಿರುವ ಶಂಕರ ವಿಜಯ ಗ್ರಂಥಗಳಲ್ಲೆಲ್ಲಾ ಪರಂಪರೆಗೆ ಅನುಸಾರವಾಗಿ ಪ್ರಾಮಾಣಿಕವಾಗಿರುವುದು - ಶ್ರೀ ಮಾಧವೀಯ ಶಂಕರ ವಿಜಯ ಗ್ರಂಥ. ಈ ಗ್ರಂಥದಲ್ಲಿ ಶ್ರೀ ಭಗವತ್ಪಾದರ ಜೀವನ ವೃತ್ತಾಂತ, ಸಾಧನೆ ಮುಂತಾದವುಗಳ ಪ್ರಾಮಾಣಿಕವಾದ ವರ್ಣನೆ ಇರುತ್ತದೆ. 16 ಸರ್ಗಗಳಿಂದ ಕೂಡಿರುವ ಈ ಗ್ರಂಥವು ಅತ್ಯಂತ ಪ್ರೌಢವಾದ ಕಾವ್ಯಶೈಲಿಯಲ್ಲಿ

ರಚಿತವಾಗಿದೆ.

ಈ ಪ್ರೌಢ ಗ್ರಂಥದ ಕನ್ನಡ ಅನುವಾದವು ಈಗ ಸಿಗುವುದು ದುರ್ಲಭ. ಮಾಧವೀಯ ಶಂಕರ ವಿಜಯದಂತಹ ಶ್ರೇಷ್ಠ ಗ್ರಂಥದ ಕನ್ನಡ ಅನುವಾದವು ಇಲ್ಲದಿರುವುದು, ಮತ್ತು ತತ್ಪರಿಣಾಮವಾಗಿ ಶ್ರೀ ಶಂಕರ ಭಗವತ್ಪಾದರ ಜೀವನ ಮತ್ತು ಸಾಧನೆಯನ್ನೊಳಗೊಂಡ ಪ್ರಾಮಾಣಿಕ ಗ್ರಂಥದ ಪರಿಚಯ ಕನ್ನಡ ಜನತೆಗೆ ಲಭ್ಯವಾಗದಿರುವುದನ್ನು ಮನಗಂಡ ಪರಮಪೂಜ್ಯ ಜಗದ್ಗುರು ಶ್ರೀ ಶ್ರೀ ಮಹಾಸ್ವಾಮಿಗಳವರು ಈ ಗ್ರಂಥವನ್ನು ಸಮರ್ಥ ವಿದ್ವಾಂಸರಾದ ವಿದ್ವಾನ್ ಶ್ರೀ ಎನ್. ರಂಗನಾಥ ಶರ್ಮ ಅವರಿಂದ ಅನುವಾದ ಮಾಡಿಸಿ ಪ್ರಕಾಶಪಡಿಸಲು ಆದೇಶ ವಿತ್ತರು. ಅದರಂತೆ ನಮ್ಮ ನಾಡಿನ ಶ್ರೇಷ್ಠ ವಿದ್ವಾಂಸರಲ್ಲೊಬ್ಬರೂ, ರಾಷ್ಟ್ರ ಹಾಗೂ ರಾಜ್ಯ ಪ್ರಶಸ್ತಿಗಳಿಂದ ಸನ್ಮಾನಿತರೂ ಹಾಗೂ ಶ್ರೀ ಮಠದ ಪ್ರಿಯಶಿಷ್ಯರೂ ಆದ ವಿದ್ವಾನ್ ಶ್ರೀ ಎನ್. ರಂಗನಾಥ ಶರ್ಮಾ ಅವರು ತಮ್ಮ ವಯೋಧರ್ಮಕ್ಕನುಗುಣವಾದ ಕ್ಲೇಶಗಳನ್ನು ಪರಿಗಣಿಸದೆ, ಈ ಕಾರ್ಯವನ್ನು ಅತ್ಯಂತ ಶ್ರದ್ಧೆಯಿಂದ ನಿರ್ವಹಿಸಿಕೊಟ್ಟಿದ್ದಾರೆ. ಇವರಿಗೂ ಮತ್ತು ಲೇಖನ ಕಾರ್ಯದಲ್ಲಿ ಸಹಕರಿಸಿದ ಶ್ರೀಮತಿ ಸರೋಜ ಗಣಪತಿ ಇವರಿಗೂ ಶ್ರೀ ಶಾರದಾ ಚಂದ್ರಮೌಳೀಶ್ವರರು ಸಕಲ ಸನ್ಮಂಗಳಗಳನ್ನು ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

"ಶ್ರೀ ಮಾಧವೀಯ ಶ್ರೀ ಶಂಕರ ವಿಜಯ" ದ 9 ಸರ್ಗಗಳ ಅನುವಾದವನ್ನೊಳಗೊಂಡ ಮೊದಲನೆಯ ಸಂಪುಟವು ಕಳೆದ ವರ್ಷ, ೧೯೯೬ರ "ಶಂಕರಜಯಂತಿ"ಯಂದು ಬಿಡುಗಡೆಯಾಯಿತು. ಪ್ರಕೃತ, ಗ್ರಂಥದ ಉಳಿದ 7 ಸರ್ಗಗಳ ಅನುವಾದವನ್ನೊಳಗೊಂಡ ಎರಡನೆಯ ಸಂಪುಟವನ್ನು ಈಗ ಪ್ರಕಾಶಪಡಿಸಲಾಗುತ್ತಿದೆ.

ಈ ಮುದ್ರಣ ಕಾರ್ಯದಲ್ಲಿ ಸಹಕರಿಸಿದ ಎಂ.ಎಂ. ಹೈಟೆಕ್‌ನ ಶ್ರೀ ವೈದ್ಯನಾಥನ್ ಮತ್ತು ಶ್ರೀ ಆಫ್‌ಸೆಟ್ ಮುದ್ರಣಾಲಯದವರಿಗೂ ಕೃತಜ್ಞತೆಗಳು.

ಶ್ರೀ ಭಗವತ್ಪಾದರ ಜೀವನ ವೃತ್ತಾಂತ, ಸಾಧನೆ ಮುಂತಾದವುಗಳನ್ನು ಕನ್ನಡ ಜನತೆ ಅರಿತುಕೊಳ್ಳುವಂತೆ ಆಗಬೇಕೆಂಬ ಮಹೋದ್ದೇಶದಿಂದ ಶ್ರೀ ಶ್ರೀ ಭಾರತೀತೀರ್ಥ ಮಹಾಸ್ವಾಮಿಗಳವರ ಅಪ್ಪಣೆಯಂತೆ ಶ್ರೀ ಶಾರದಾ ಪೀಠದ ವತಿಯಿಂದ ಈ ಗ್ರಂಥವನ್ನು ಪ್ರಕಾಶಿಸಿ, ಕಡಿಮೆ ಬೆಲೆಯಲ್ಲಿ ದೊರಕುವಂತೆ ಮಾಡಿದ್ದು, ಇದು ಆಸ್ತಿಕ ಜನತೆಯ ಕೈಸೇರಿ, ಉಪಯೋಗ ಪಡೆಯುವಂತಾದರೆ ನಮ್ಮ ಉದ್ದೇಶ ಸಫಲವಾಗುವುದು.

ಶೃಂಗೇರಿ
12.5.1997

ವಿ.ಆರ್. ಗೌರಿಶಂಕರ್
ಆಡಳಿತಾಧಿಕಾರಿಗಳು

# ಪ್ರಸ್ತಾವನೆ

ಈ ಅನುವಾದಗ್ರಂಥದ ಪ್ರಥಮಭಾಗದ ಪ್ರಸ್ತಾವನೆಯಲ್ಲಿ ಶ್ರೀ ಶಂಕರಭಗವತ್ಪಾದರ ಚರಿತ್ರೆಯಲ್ಲಿರುವ ಕೆಲವು ಅಂಶಗಳನ್ನುಸಂಕ್ಷೇಪವಾಗಿ ಬರೆದಿದ್ದೇನೆ. ಶ್ರೀಶಂಕರರು ಶ್ರೀಗೋವಿಂದಭಗವತ್ಪಾದರ ಶಿಷ್ಯರಾಗಿ ಅವರಿಂದ ವಿಧಿವತ್ತಾಗಿ ಸಂನ್ಯಾಸದೀಕ್ಷೆಯನ್ನು ಪಡೆದರು. ಗುರುಶುಶ್ರೂಷೆಮಾಡುತ್ತ ಸಂಪ್ರದಾಯಪೂರ್ವಕವಾಗಿ ವೇದಾಂತದ ರಹಸ್ಯಾರ್ಥಗಳನ್ನು ತಮ್ಮ ಗುರುಗಳಿಂದ ತಿಳಿದುಕೊಂಡರು. ಅನಂತರ ಶ್ರೀಗೋವಿಂದಭಗವತ್ಪಾದರು ಶ್ರೀಶಂಕರರನ್ನು ಕುರಿತು "ನೀನು ಕಾಶೀನಗರಕ್ಕೆಹೋಗು. ಪ್ರಸ್ಥಾನತ್ರಯ ಭಾಷ್ಯಗಳನ್ನು ರಚಿಸಿ ವೇದಾಂತಸಾರವಾದ ಅದ್ವೈತಸಿದ್ಧಾಂತವನ್ನು ಪ್ರತಿಷ್ಠಾಪಿಸು" ಎಂದು ಹೇಳಿದರು. ಗುರುಗಳ ಆಜ್ಞೆಯನ್ನು ಪಡೆದು ಶ್ರೀಶಂಕರಾಚಾರ್ಯರು ಕಾಶೀನಗರದ ಕಡೆಗೆ ಪ್ರಯಾಣಮಾಡಿದರು - ಎಂಬುದನ್ನೀಗ ಸ್ಮರಿಸಿಕೊಳ್ಳಬೇಕು. ಆಚಾರ್ಯರು ಮುಂದೆ ನಡೆಸಲಿರುವ ಮಹಿಮಾನ್ವಿತವೂ ಅದ್ವಿತೀಯವೂ ಆದ ಕಾರ್ಯವಿಶೇಷಕ್ಕೆ ಇದು ಪೂರ್ವಸಿದ್ಧತೆ. ಇದಿಷ್ಟು ೫ನೆಯ ಸರ್ಗದ ೧೬೪ನೆಯ ಶ್ಲೋಕದವರೆಗಿರುವ ಕಥಾಂಶ. ಮುಂದಿನ ವೃತ್ತಾಂತವನ್ನು ಹೀಗೆ ಸಂಗ್ರಹಿಸಬಹುದು.

ಶ್ರೀಶಂಕರರು ಗುರುಗಳಾದ ಶ್ರೀಗೋವಿಂದಭಗವತ್ಪಾದರನ್ನು ಸ್ಮರಿಸಿಕೊಳ್ಳುತ್ತಾ ಕಾಶಿಗೆ ಹೋದರು. ಗಂಗಾನದಿಯಲ್ಲಿ ಸ್ನಾನಮಾಡಿ ಶ್ರೀವಿಶ್ವನಾಥಸ್ವಾಮಿಯನ್ನು ಸಂದರ್ಶಿಸಿ ಆತನ ಚರಣಯುಗಳಕ್ಕೆ ಭಕ್ತಿಯಿಂದ ನಮಸ್ಕರಿಸಿದರು. ಅನಂತರ ಆ ಕಾಶೀಕ್ಷೇತ್ರದಲ್ಲಿ ಕೆಲವು ದಿನಗಳನ್ನು ಕಳೆದರು. ಹೀಗಿರುವಾಗ ಒಂದು ದಿನ ವೇದಾಧ್ಯಯನ ಸಂಪನ್ನನಾದ ಒಬ್ಬ ವಿಪ್ರಕುಮಾರನು ಶ್ರೀಶಂಕರಾಚಾರ್ಯರ ಬಳಿಗೆ ಬಂದು ವಿನಯದಿಂದ ನಮಸ್ಕರಿಸಿದನು. "ನೀನು ಯಾರು?" ಎಂದು ಆಚಾರ್ಯರು ಕೇಳಲಾಗಿ, ಆತನು "ಮಹಾತ್ಮರೆ, ನಾನು ಚೋಳದೇಶದಿಂದ ಬಂದಿದ್ದೇನೆ. ಜ್ಞಾನಿಯಾದ ಗುರುವನ್ನರಸುತ್ತಾ ಕಡೆಗೆ ನಿಮ್ಮ ಮಾಹಾತ್ಮ್ಯವನ್ನು ಕೇಳಿ ಬಂದು ನಿಮಗೆ ಶರಣಾಗಿದ್ದೇನೆ. ನನ್ನನ್ನು ಶಿಷ್ಯನನ್ನಾಗಿ ಸ್ವೀಕರಿಸಿ" ಎಂದು ವಿಜ್ಞಾಪಿಸಿದನು. ಆಚಾರ್ಯರು ಆತನ ಪೂರ್ವೋತ್ತರಗಳನ್ನು ವಿಚಾರಿಸಿ, ಅವನಿಗೆ ಅರ್ಹತೆ ಇದೆಯೆಂದು ನಿಶ್ಚಯಿಸಿಕೊಂಡರು. ಅವನಿಗೆ ವಿಧಿವತ್ತಾಗಿ ಸಂನ್ಯಾಸದೀಕ್ಷೆಯನ್ನು ಕೊಟ್ಟರು. ಆ ಯತಿಯ ಹೆಸರು ಸನಂದನ. ಅವನು ಆಚಾರ್ಯರ ಪ್ರಥಮ ಶಿಷ್ಯ. ಈ ಸನಂದನನೇ ಮುಂದೆ ಪದ್ಮಪಾದಾಚಾರ್ಯನೆಂದು ಪ್ರಸಿದ್ಧನಾದನು. ಹೀಗೆಯೇ ವೈರಾಗ್ಯವನ್ನು ಪಡೆದ ಇನ್ನೂ ಅನೇಕರು ಬಂದು ಆಚಾರ್ಯರ ಶಿಷ್ಯರಾದರು. ಅವರೆಲ್ಲರಿಗೂ ಆಚಾರ್ಯರು ವೇದಾಂತವನ್ನು ಬೋಧಿಸುತ್ತಿದ್ದರು.

ಒಂದು ದಿನ ಶ್ರೀಶಂಕರರು ಶಿಷ್ಯಪರಿವೃತರಾಗಿ, ಸ್ನಾನಮಾಡುವುದಕ್ಕೋಸ್ಕರ ಗಂಗಾನದಿಗೆ ಹೋಗುತ್ತಿದ್ದರು. ಮಧ್ಯಾಹ್ನದ ಬಿಸಿಲು ಸುಡುತ್ತಿತ್ತು. ದಾರಿಯಲ್ಲಿ ಒಬ್ಬ ಅಂತ್ಯಜನು ನಾಲ್ಕುನಾಯಿಗಳನ್ನು ಜೊತೆಗೆ ಕರೆತರುತ್ತಾ ಆಚಾರ್ಯರಿಗೆ ಎದುರಾದನು. ಆಚಾರ್ಯರು ತಮ್ಮ

ಎದುರಿಗೆ ತಡೆಯಿಲ್ಲದೆ ಬರುತ್ತಿದ್ದ ಅವನನ್ನುನೋಡಿ "ದಾರಿಬಿಡು, ದೂರ ಸರಿ" ಎಂದರು. ಅದಕ್ಕೆ ಅಂತ್ಯಜನು " ವಿದ್ವಾಂಸರೆ, ದೂರ ಸರಿ ಎನ್ನುತ್ತೀರಲ್ಲ. ದೇಹವನ್ನು ದೂರಸರಿಸಬೇಕೋ? ಅಥವಾ ಆತ್ಮವನ್ನೋ? ಅನ್ನಮಯವಾದ ದೇಹವು ಉಭಯರಿಗೂ ಸಮಾನವಾಗಿದೆ. ಆತ್ಮನಾದರೋ ಇಬ್ಬರ ದೇಹದಲ್ಲಿಯೂ ಒಬ್ಬನೇ! ಅವನನ್ನು ದೂರ ಸರಿಸಲು ಬರುವುದೂ ಇಲ್ಲ! ಅದ್ವಿತೀಯನಾದ ಪ್ರತ್ಯಗಾತ್ಮನಲ್ಲಿ ಭೇದಕಲ್ಪನೆ ನಿಮಗೆ ಯೋಗ್ಯವಾದದ್ದಲ್ಲ. ಆತ್ಮನು ಸಚ್ಚಿದಾನಂದಸ್ವರೂಪನೆಂದು ಉಪನಿಷತ್ತುಗಳು ಘೋಷಿಸುತ್ತಿದ್ದರೂ ವೇದಾಂತಿಗಳಾದ ನೀವು ಹೀಗೆ ಹೇಳುವಿರಲ್ಲ, ಆಶ್ಚರ್ಯ!" ಎಂದನು. ಆಗ ಶ್ರೀಶಂಕರರು ಚಕಿತರಾಗಿ "ನೀನು ಆತ್ಮಜ್ಞಾನಿಯೇ ಹೌದು. ಯಾವಾತನಿಗೆ ಸಮಸ್ತಜಗತ್ತೂ ಆತ್ಮಸ್ವರೂಪಾಗಿಯೇ ತೋರುತ್ತದೆಯೋ ಸರ್ವಪ್ರಾಣಿಗಳಲ್ಲಿಯೂ ಬೆಳಗುತ್ತಿರುವ ಚೈತನ್ಯವೇ ನಾನು ಎಂದು ದೃಢನಿಶ್ಚಯವಿರುತ್ತದೆಯೋ ಆತನು ನಮಸ್ಕಾರಯೋಗ್ಯನಾದ ಗುರುವೆಂದು ತಿಳಿಯುತ್ತೇನೆ. ಅವನು ಬ್ರಾಹ್ಮಣನಾಗಲಿ ಚಾಂಡಾಲನಾಗಲಿ ನನ್ನಗುರುವೆಂದೇ ಭಾವಿಸುತ್ತೇನೆ" ಎಂದು ಉದ್ಗರಿಸಿದರು. ಅಷ್ಟರಲ್ಲಿ ಅಂತ್ಯಜನಿಗೆ ಬದಲಾಗಿ ಚಂದ್ರಮೌಳಿಯಾದ ಸಾಕ್ಷಾತ್‌ಪರಮೇಶ್ವರನೇ ಎದುರಿಗೆ ನಿಂತಿರುವುದನ್ನು ಆಚಾರ್ಯರು ಕಂಡರು.

ಆಚ್ಚರಿಗೊಂಡ ಶ್ರೀಶಂಕರರು ಪರಶಿವನನ್ನು ನಾನಾವಿಧವಾಗಿ ಸ್ತುತಿಸಿದರು. ಸ್ವಾಮಿಯು"ಎಲೈತಪೋಧನ, ನಿನ್ನ ಜ್ಞಾನನಿಷ್ಠೆಯನ್ನು ಪರೀಕ್ಷಿಸಿದೆನು. ಬಾದರಾಯಣನ ಬ್ರಹ್ಮಸೂತ್ರಗಳಿಗೆ ಕಲಿದೋಷದಿಂದ ಜನರು ತಮಗೆ ತೋರಿದಂತೆ ವ್ಯಾಖ್ಯಾನಮಾಡಿ ಪರತತ್ತ್ವವನ್ನರಿಯಲಾರದೆ ಆತನ ವೇದಾಂತಸಿದ್ಧಾಂತವನ್ನು ಕಲುಷಿತ ಗೊಳಿಸುತ್ತಿದ್ದಾರೆ. ನೀನು ಅವರೆಲ್ಲರ ಮಾತುಗಳನ್ನೂ ಖಂಡಿಸಿ ಶ್ರುತಿಸಂಮತಯುಕ್ತಿಗಳಿಂದ ಆ ಸೂತ್ರಗಳಿಗೆ ಭಾಷ್ಯವನ್ನು ರಚಿಸಿ ಸತ್ಯವಾದ ಸಿದ್ಧಾಂತವನ್ನು ಸ್ಥಾಪಿಸು. ನಿನ್ನದು ಸರ್ವೋತ್ತಮಭಾಷ್ಯವೆಂದು ಲೋಕದಲ್ಲಿ ಗೌರವವನ್ನು ಪಡೆಯುವುದು. ಪರತತ್ತ್ವವನ್ನು ಯಥಾರ್ಥವಾಗಿ ಬೋಧಿಸುವ ಅದ್ವೈತಸಿದ್ಧಾಂತವನ್ನು ಜಗತ್ತಿನಲ್ಲಿ ಪ್ರಚಾರಮಾಡು. ಅಜ್ಞಾನದ ಕತ್ತಲೆಗೆ ಸೂರ್ಯಸದೃಶರಾದ ನಿನ್ನ ಶಿಷ್ಯರನ್ನು ಅಲ್ಲಲ್ಲಿ ಸ್ಥಾಪಿಸು. ನಿನ್ನ ಕರ್ತವ್ಯವೆಲ್ಲವನ್ನೂನೆರವೇರಿಸಿ ಕೃತಕೃತ್ಯನಾದ ಬಳಿಕ ನನ್ನಲ್ಲಿ ಸೇರಿಕೊಳ್ಳುವೆ" ಎಂದು ನುಡಿದನು. ಪರಮೇಶ್ವರನು ಈ ಪ್ರಕಾರವಾಗಿ ಆಚಾರ್ಯರನ್ನು ಅನುಗ್ರಹಿಸಿ ನಾಲ್ಕುನಾಯಿಗಳಂತಿದ್ದ ನಾಲ್ಕುವೇದಗಳೊಡನೆ ಅಂತರ್ಧಾನಹೊಂದಿದನು. ಶ್ರೀಶಂಕರರು ಗಂಗಾನದಿಯಲ್ಲಿ ಸ್ನಾನಾದಿವಿಧಿಗಳನ್ನು ಮುಗಿಸಿ ಶಿಷ್ಯರೊಡನೆ ಹಿಂದಿರುಗಿದರು. ಶ್ರೀವಿಶ್ವನಾಥಸ್ವಾಮಿಯ ಅನುಗ್ರಹಪ್ರಕಾರವನ್ನು ವಿಸ್ಮಯಾನಂದಗಳಿಂದ ಸ್ಮರಿಸಿಕೊಳ್ಳುತ್ತ ಸೂತ್ರಭಾಷ್ಯವನ್ನು ರಚಿಸಬೇಕೆಂದು ನಿಶ್ಚಯಿಸಿದರು. ಅನಂತರ ಶಿಷ್ಯರೊಡನೆ ಬದರೀಕ್ಷೇತ್ರಕ್ಕೆ ಪ್ರಯಾಣಮಾಡಿದರು.

ಆಗ ಶ್ರೀಶಂಕರರಿಗೆ ಕೇವಲ ಹನ್ನೆರಡು ವರ್ಷವಯಸ್ಸು. ಅವರು ಬದರೀಕ್ಷೇತ್ರದಲ್ಲಿದ್ದ ಬ್ರಹ್ಮರ್ಷಿಗಳೊಡನೆ ಉಪನಿಷತ್ತುಗಳ ತಾತ್ಪರ್ಯವೇನೆಂಬುದನ್ನು ಬಹುವಿಧವಾಗಿ ಸಮಾಲೋಚಿಸಿ ಶಾರೀರಕಸೂತ್ರಗಳಿಗೂ ಈಶಾದಿದಶೋಪನಿಷತ್ತುಗಳಿಗೂ ನೃಸಿಂಹತಾಪನೀಯವೆಂಬ ಉಪನಿಷತ್ತಿಗೂ ಭಗವದ್ಗೀತೆಗೂ ಸನತ್ಸುಜಾತೀಯಕ್ಕೂ ಭಾಷ್ಯಗಳನ್ನು ರಚಿಸಿದರು. ಅಲ್ಲದೆ ಉಪದೇಶಸಾಹಸ್ರಿ, ವಿವೇಕಚೂಡಾಮಣಿ - ಮೊದಲಾದ ಅನೇಕ ಗ್ರಂಥಗಳು ಆಚಾರ್ಯರಿಂದ ರಚಿತವಾದವು. ಅವರು ಕಾಶಿಗೆ ಹಿಂತಿರುಗಿ ಬಂದು ತಮ್ಮಗ್ರಂಥಗಳನ್ನು ಶಿಷ್ಯರಿಗೆ ಬೋಧಿಸತೊಡಗಿದರು. ಕೀರ್ತಿಯು ಹರಡಿತು. ಅವರ ಗ್ರಂಥಗಳು ವಿದ್ವಾಂಸರ ಮೆಚ್ಚುಗೆಗೆ ಪಾತ್ರವಾದವು.

ಶಿಷ್ಯರಲ್ಲಿ ಸೂಕ್ಷ್ಮಮತಿಯೂ ವಿಧೇಯನೂ ಆದ ಸನಂದನನಲ್ಲಿ ಆಚಾರ್ಯರಿಗೆ ವಿಶೇಷವಾದ ವಾತ್ಸಲ್ಯವಿತ್ತು. ಒಂದು ದಿನ ಗಂಗಾನದಿಯ ಇನ್ನೊಂದು ದಡದಲ್ಲಿದ್ದ ಆತನನ್ನು ಆಚಾರ್ಯರು ಕರೆದಾಗ, ಸನಂದನನು ತಡಮಾಡದೆ ಗಂಗಾನದಿಯ ಪ್ರವಾಹದಲ್ಲಿಯೇ ಕಾಲಿಟ್ಟು ಬರತೊಡಗಿದನು. ಅವನ ಗುರುಭಕ್ತಿಗೆ ಮೆಚ್ಚಿ ಗಂಗಾದೇವಿಯು ಆತನ ಕಾಲಿಗೆ ಆಸರೆಯಾಗಿ ಒಂದೊಂದು ಪದ್ಮವನ್ನು ಇಡುತ್ತಾ ಬಂದಳು! ಶ್ರೀಶಂಕರರು ಆತನ ಭಕ್ತಿಶ್ರದ್ಧೆಗಳನ್ನು ಕಂಡು ಆನಂದಿಸಿ ಸನಂದನನಿಗೆ ಪದ್ಮಪಾದ ಎಂದು ಹೆಸರಿಟ್ಟರು.

ಒಂದುದಿನ ಶ್ರೀಶಂಕರರು ಗಂಗಾತೀರದಲ್ಲಿ ಶಿಷ್ಯರಿಗೆ ಸೂತ್ರಭಾಷ್ಯದ ಪಾಠವನ್ನುಹೇಳುತ್ತಿದ್ದಾಗ, ವ್ಯಾಸಮಹರ್ಷಿಗಳು ವೃದ್ಧಬ್ರಾಹ್ಮಣನ ವೇಷದಲ್ಲಿ ಬಂದು ಆಚಾರ್ಯರೊಡನೆ ವಾದವನ್ನಾರಂಭಿಸಿದರು. 'ತದಂತರಪ್ರತಿಪತ್ತೌ ರಂಹತಿ ಸಂಪರಿಷ್ವಕ್ತಃ ಪ್ರಶ್ನನಿರೂಪಣಾಭ್ಯಾಮ್' ಎಂಬ ಸೂತ್ರಾರ್ಥದ ವಿಷಯವಾಗಿ ಉಭಯರಿಗೂ ವಾದ ಕೋಲಾಹಲವೇ ಆಯಿತು. ವೃದ್ಧಬ್ರಾಹ್ಮಣನು ವ್ಯಾಸಮುನಿಗಳೇ ಸರಿಯೆಂದು ಪದ್ಮಪಾದನು ಸೂಚಿಸಿದಾಗ, ಆಚಾರ್ಯರಿಗೆ ಸತ್ಯವು ಹೊಳೆಯಿತು. ಶ್ರೀಗೌಡಪಾದರಿಗೇ ಪರಮಗುರುಗಳಾದ ವ್ಯಾಸಮಹರ್ಷಿಗಳೊಡನೆ ವಾದಮಾಡಿದ್ದಕ್ಕಾಗಿ ಅನುತಪಿಸಿದ ಆಚಾರ್ಯರು ವ್ಯಾಸಮುನಿಗಳ ಕ್ಷಮೆಯನ್ನು ಬೇಡಿದರಲ್ಲದೆ, ತಮ್ಮ ಭಾಷ್ಯಗ್ರಂಥವನ್ನು ವ್ಯಾಸರ ಕೈಯಲ್ಲಿಟ್ಟರು. ಅದನ್ನು ಅವಲೋಕಿಸಿದ ವ್ಯಾಸರು ಪರಮಸಂತೋಷದಿಂದ "ವತ್ಸ, ಗೋವಿಂದಭಗವತ್ಪಾದರ ಶಿಷ್ಯನಾದ ನಿನ್ನ ಮುಖದಿಂದ ತಪ್ಪಾದ ಮಾತು ಹೇಗೆ ಬಂದೀತು? ನೀನು ಪರಮಶ್ರೇಷ್ಠನಾದ ವಿದ್ವಾಂಸನೇ ಹೌದು. ನನ್ನ ಬ್ರಹ್ಮಸೂತ್ರಗಳಿಗೆ ಎಷ್ಟೋ ಜನರು ಹಿಂದೆ ಭಾಷ್ಯಗಳನ್ನು ಬರೆದಿದ್ದಾರೆ. ಮುಂದೆಯೂ ಬರೆಯಬಹುದು. ನನ್ನ ಅಭಿಪ್ರಾಯವನ್ನು ಸರಿಯಾಗಿ ಗ್ರಹಿಸಿ ಭಾಷ್ಯವನ್ನು ರಚಿಸಿದವನು ನೀನೊಬ್ಬನೇ. ನನಗೆ ಪರಮಹರ್ಷವಾಯಿತು. ನೀನು ಪರಶಿವನ ಅಂಶದಿಂದ ಹುಟ್ಟಿದವನೇ ಸರಿ. ಸಾಂಖ್ಯಾದಿದರ್ಶನಕಾರರು ಉಪನಿಷನ್ಮಾರ್ಗವನ್ನು ಕೆಡಿಸಿ ದಾರಿತಪ್ಪಿಸಿದ್ದಾರೆ. ಅದೆಲ್ಲವನ್ನೂ ಸರಿಪಡಿಸುವ ಭಾರ ನಿನ್ನ ಮೇಲಿದೆ. ನಿನಗೆ ಶುಭವಾಗಲಿ. ನಾನಿನ್ನು ಹೊರಡುತ್ತೇನೆ" ಎಂದರು. ಆಗ ಆಚಾರ್ಯರು "ಮಹರ್ಷಿಗಳೆ, ನಾನು ಧನ್ಯನಾದೆನು.

ಉಪನಿಷದ್‌ಭಾಷ್ಯಗಳನ್ನೂ ಮತ್ತಿತರ ಗ್ರಂಥಗಳನ್ನೂ ರಚಿಸಿಬಿಟ್ಟಿದ್ದೇನೆ. ಶಿಷ್ಯರಿಗೆ ಅಧ್ಯಾಪನವನ್ನೂ ಮಾಡಿದ್ದೇನೆ. ನನ್ನ ಕರ್ತವ್ಯಮುಗಿಯಿತು. ಒಂದು ಮುಹೂರ್ತಕಾಲ ನಿಮ್ಮ ಸಾಂನಿಧ್ಯವನ್ನು ಅನುಗ್ರಹಿಸಿರಿ. ನನ್ನ ಪರಮಾಯುಸ್ಸಾದ ಹದಿನಾರು ವರ್ಷಗಳು ಮುಗಿಯುತ್ತಾಬಂದವು. ಈ ದೇಹವನ್ನು ತ್ಯಜಿಸುವೆನು" ಎಂದು ನುಡಿದರು. ಆಗ ವ್ಯಾಸಮುನೀಂದ್ರರು ಸ್ವಲ್ಪಹೊತ್ತು ಆಲೋಚಿಸಿ " ಹೇ ವತ್ಸ, ನೀನು ಮಾಡಬೇಕಾದ ಕಾರ್ಯವು ಇನ್ನೂ ಇದೆ. ಅದ್ವೈತವಿದ್ಯೆಗೆ ವಿರೋಧಿಗಳಾದ ಇನ್ನೂ ಕೆಲವು ವಿದ್ವಾಂಸರನ್ನು ಜಯಿಸಿ ಪರಮೋತ್ತಮವಾದ ಈ ಅದ್ವೈತಸಿದ್ಧಾಂತವನ್ನು ಲೋಕದಲ್ಲಿ ಪ್ರತಿಷ್ಠೆಮಾಡು. ಜನರು ಬ್ರಹ್ಮತತ್ತ್ವವನ್ನರಿತು ಶ್ರೇಯೋಭಾಜನರಾಗಲಿ. ನಿನಗೆ ವಿಧಿಪ್ರಾಪ್ತವಾದ ಎಂಟುವರ್ಷ ಆಯುಸ್ಸು ಸಂನ್ಯಾಸಸ್ವೀಕಾರದಿಂದ ದ್ವಿಗುಣಗೊಂಡಿತು. ಈಗ ಪರಮೇಶ್ವರನ ಆಜ್ಞೆಯಂತೆ ಇನ್ನೂ ಹದಿನಾರು ವರ್ಷಗಳ ಆಯುಸ್ಸು ನಿನಗೆ ಬರಲಿ. ಸೂರ್ಯಚಂದ್ರನಕ್ಷತ್ರಗಳಿರುವವರೆಗೆ ಈ ಭಾಷ್ಯವು ಸರ್ವೋತ್ಕರ್ಷವನ್ನು ಪಡೆದು ವಿರಾಜಿಸುತ್ತಿರಲಿ" ಎಂದು ವರವನ್ನಿತ್ತು ಅಂತರ್ಹಿತರಾದರು. ಕರುಣಾಳುಗಳಾದ ವ್ಯಾಸಮುನೀಂದ್ರರ ವಿರಹದಿಂದ ಆಚಾರ್ಯರಿಗೆ ತುಂಬ ವಿಷಾದವಾಯಿತು. ಆ ಯತೀಶ್ವರರು ವ್ಯಾಸಮುನಿಗಳ ಪಾದಕಮಲಗಳನ್ನು ಧ್ಯಾನಿಸುತ್ತ, ತಮಗಾದ ವಿರಹ ದುಃಖವನ್ನು ಹೇಗೋ ನಿಗ್ರಹಿಸಿ, ಅವರ ಆಜ್ಞೆಯಂತೆ ಮುಂದಿನ ಕರ್ತವ್ಯವನ್ನು ನೆರವೇರಿಸುವುದಕ್ಕೆ ಸಿದ್ಧರಾದರು.

ಇದಿಷ್ಟು ಶ್ರೀಶಂಕರಭಗವತ್ಪಾದರ ಸರ್ವೋತ್ಕೃಷ್ಟವಾದ ಜ್ಞಾನಸಂಪತ್ತನ್ನೂ ಅದ್ವೈತಪರವಾಗಿ ಅವರು ವಿರಚಿಸಿದ ಶಾರೀರಕಸೂತ್ರಭಾಷ್ಯವು ಯಥಾರ್ಥವಾಗಿ ಉಪನಿಷದರ್ಥವನ್ನು ಪ್ರತಿಪಾದಿಸತಕ್ಕದ್ದೂ ಪ್ರಾಮಾಣಿಕವೂ ಸೂತ್ರಕಾರಸಂಮತವೂ ಆದದ್ದೆಂಬುದನ್ನೂ ಭಾಷ್ಯಕಾರರಿಗೆ ಅದ್ವೈತಸಿದ್ಧಾಂತವನ್ನು ಪುನಃ ಪ್ರತಿಷ್ಠಾಪಿಸುವ ಅಧಿಕಾರವೂ ಸಾಮರ್ಥ್ಯವೂ ಇದೆಯೆಂಬುದನ್ನೂ ವ್ಯಕ್ತಪಡಿಸುವ ಚಿತ್ರಣ. ಮುಂದಿನ ಕಥಾ ಸಂಕ್ಷೇಪ ಹೀಗಿದೆ.

ಆಗ ಮಹಾವಿದ್ವಾಂಸರೆಂದು ವಿಖ್ಯಾತರೂ ಮೀಮಾಂಸಕರೂ ಆದ ಕುಮಾರಿಲಭಟ್ಟರನ್ನು ಜಯಿಸಿ, ಅವರಿಂದ ಸೂತ್ರಭಾಷ್ಯಕ್ಕೆ ವಾರ್ತಿಕವನ್ನು ಬರೆಸಬೇಕೆಂಬ ಉದ್ದೇಶದಿಂದ ಈ ಯತಿವರೇಣ್ಯರು ಶಿಷ್ಯರೊಡನೆ ಪ್ರಯಾಗಕ್ಕೆ ಹೋದರು. ತ್ರಿವೇಣಿಯಲ್ಲಿ ಸ್ನಾನಾಹ್ನಿಕಾದಿಕೃತ್ಯಗಳನ್ನು ಮುಗಿಸಿದರು. ಕುಮಾರಿಲಭಟ್ಟರು ಬೌದ್ಧಗುರುವಿಗೆ ದ್ರೋಹವನ್ನು ಮಾಡಿದೆನೆಂದು ಪ್ರಾಯಶ್ಚಿತ್ತಾರ್ಥವಾಗಿ ತುಷಾಗ್ನಿಯನ್ನು ಪ್ರವೇಶಿಸಿದರೆಂಬ ಸುದ್ದಿಮುಟ್ಟಿತು. ಒಡನೆಯೇ ಆಚಾರ್ಯರು ಅವರಿದ್ದ ಸ್ಥಳಕ್ಕೆ ಧಾವಿಸಿ, ಭಟ್ಟಪಾದರಿಗೆ ಸೂತ್ರಭಾಷ್ಯದ ವಿಚಾರವನ್ನು ಹೇಳಿದರು. ಅವರು ಭಾಷ್ಯಗ್ರಂಥವನ್ನು ಅವಲೋಕಿಸಿ "ಮಹಾತ್ಮರೆ, ಅಮೂಲ್ಯವಾದ ಈ ಭಾಷ್ಯಕ್ಕೆ ವಾರ್ತಿಕವನ್ನು ಬರೆಯುವ ಭಾಗ್ಯವು ನನಗಿಲ್ಲ. ಆದರೇನು? ನನ್ನ ಶಿಷ್ಯನಾದ ಮಂಡನಮಿಶ್ರನು ವಾರ್ತಿಕಗಳನ್ನು ರಚಿಸುವಷ್ಟು

ಪಾಂಡಿತ್ಯವನ್ನು ಗಳಿಸಿದ್ದಾನೆ. ಆತನಿರುವ ಮಾಹಿಷ್ಮತಿಗೆ ಹೋಗಿರಿ" ಎಂದರು. ಶ್ರೀಶಂಕರರು ಕುಮಾರಿಲರನ್ನು ಅನುಗ್ರಹಿಸಿ ನರ್ಮದಾತೀರದಲ್ಲಿದ್ದ ಮಾಹಿಷ್ಮತೀನಗರಕ್ಕೆ ಪ್ರಯಾಣಮಾಡಿದರು.

ವಿಶ್ವರೂಪನಿಗೆ ಮಂಡನಮಿಶ್ರನೆಂದು ಹೆಸರಿತ್ತು. ಸರಸ್ವತಿಯ ಅವತಾರವಾದ ಉಭಯಭಾರತಿಯು ಅವನ ಪತ್ನಿ. ಆತನು ಪೂರ್ವಮೀಮಾಂಸೆಯಲ್ಲಿ ಶ್ರದ್ಧೆಯನ್ನಿಟ್ಟಿದ್ದ ಕರ್ಮಠ. ಆಚಾರ್ಯರಿಗೂ ಆತನಿಗೂ ಏಳುದಿನಗಳವರೆಗೆ ಪ್ರಬಲವಾದ ವಾದವೇ ನಡೆಯಿತು. ಮಂಡನಮಿಶ್ರನು ಪರಾಜಿತನಾದನು. ಮೊದಲೇ ಗೊತ್ತಾದ ಪ್ರತಿಜ್ಞೆಯಂತೆ ಆತನು ಸಂನ್ಯಾಸವನ್ನು ಸ್ವೀಕರಿಸಬೇಕಾಗಿ ಬಂದಿತು. ಆಗ ಮಂಡನಮಿಶ್ರನ ಪತ್ನಿಯಾಗಿ ಅವತರಿಸಿದ್ದ ಸರಸ್ವತಿಯು ದುರ್ವಾಸರ ಶಾಪಾವಧಿ ಮುಗಿದದ್ದರಿಂದ ಬ್ರಹ್ಮಲೋಕಕ್ಕೆ ತೆರಳಲು ಉದ್ದೇಶಿಸಿದಳು. ಆಚಾರ್ಯರು ವನದುರ್ಗಾಮಂತ್ರದಿಂದ ಅವಳನ್ನು ತಡೆದರು. ಅಲ್ಲದೆ ಜೈಮಿನಿಮುನಿಗಳು ಕರ್ಮಮಾರ್ಗವನ್ನು ಬೋಧಿಸಿದ್ದರ ಉದ್ದೇಶವನ್ನು ತಿಳಿಸಿದರು. ಜೈಮಿನಿಮುನಿಗಳೂ ಪ್ರತ್ಯಕ್ಷರಾಗಿ ಶ್ರೀಶಂಕರರು ಹೇಳಿರುವುದೇ ತಮ್ಮ ಅಭಿಪ್ರಾಯವೆಂದೂ ಚಿತ್ತಶುದ್ಧಿಗಾಗಿ ಕರ್ಮವನ್ನು ಮಾಡಬೇಕೆಂದೂ ಜ್ಞಾನಮಾರ್ಗವೇ ಪರಮಾರ್ಥವೆಂದೂ ತಿಳಿಸಿದರು. ಮಂಡನಪಂಡಿತನ ಎಲ್ಲ ಸಂದೇಹಗಳೂ ನಿವೃತ್ತವಾದವು.

ಅನಂತರ ಶ್ರೀಶಂಕರರು ಉಭಯಭಾರತಿಯೊಡನೆ ವಾದಮಾಡಬೇಕಾಯಿತು. ಅವಳು ಕಾಮಶಾಸ್ತ್ರದ ವಿಷಯವಾಗಿ ಪ್ರಶ್ನೆಯನ್ನು ಕೇಳಿದಾಗ ಶ್ರೀಶಂಕರಯತಿಗಳು ಉತ್ತರಹೇಳಲು ಸಂಕೋಚಪಟ್ಟು ಒಂದು ತಿಂಗಳ ಅವಧಿಯನ್ನು ಹೇಳಿ ಅಲ್ಲಿಂದ ನಿರ್ಗಮಿಸಿದರು.

ಆಕಾಶಮಾರ್ಗದಲ್ಲಿ ಬರುತ್ತಿರುವಾಗ ಅಮರುಕರಾಜನು ಮೃತನಾಗಿ ಮಲಗಿರುವುದು ಕಾಣಿಸಿತು. ಆಚಾರ್ಯರು ಶಿಷ್ಯರಿಗೆ ಸಮಾಧಾನ ಕೇಳಿ ಪರಕಾಯಪ್ರವೇಶ ವಿದ್ಯಾಬಲದಿಂದ ಅಮರುಕರಾಜನ ದೇಹವನ್ನು ಪ್ರವೇಶಿಸಿ, ಅಂತಃಪುರಸ್ತ್ರೀಯರೊಡನೆ ಇದ್ದು ಕಾಮಕಲೆಯನ್ನರಿತು ಮತ್ತೆ ತಮ್ಮ ನಿಜದೇಹವನ್ನು ಪ್ರವೇಶಿಸಿ ವಾದಕ್ಕಾಗಿ ಮಂಡನಮಿಶ್ರನ ಭವನಕ್ಕೆ ಆಗಮಿಸಿದರು. ಉಭಯಭಾರತಿಯು ಆಗ ವಾದವನ್ನು ಮುಂದುವರಿಸದೆ ತನ್ನ ಲೋಕಕ್ಕೆ ಹೋಗಲು ಸಿದ್ಧಳಾದಳು. ಆಚಾರ್ಯರು "ದೇವಿ, ನೀನು ಸಾಕ್ಷಾತ್ ಶಾರದಾಂಬೆಯೆಂಬುದನ್ನು ನಾನು ಬಲ್ಲೆ. ನಾನು ಸ್ಥಾಪಿಸಲಿರುವ ಮಠಗಳಲ್ಲಿ ಸಂನಿಹಿತಳಾಗಿ ಭಕ್ತರನ್ನು ಉದ್ಧರಿಸುತ್ತಿರು" ಎಂದು ಪ್ರಾರ್ಥಿಸಿದರು. ದೇವಿಯು'ತಥಾಸ್ತು' ಎಂದು ನುಡಿದು ಬ್ರಹ್ಮಲೋಕಕ್ಕೆ ತೆರಳಿದಳು. ಮಂಡನಮಿಶ್ರನು ಆಚಾರ್ಯರಿಂದ ವಿಧಿವತ್ತಾಗಿ ಸಂನ್ಯಾಸವನ್ನು ಪರಿಗ್ರಹಿಸಿದನು. ಆಚಾರ್ಯರು ಆತನಿಗೆ 'ಸುರೇಶ್ವರಾಚಾರ್ಯ' ನೆಂದು ನೂತನನಾಮವನ್ನು ನಿರ್ದೇಶಿಸಿ ವೇದಾಂತಸಿದ್ಧಾಂತವನ್ನು ಉಪದೇಶಿಸಿದರು. ಸುರೇಶ್ವರರು ಆಚಾರ್ಯರ ಶಿಷ್ಯರಾದರು.

ಆಮೇಲೆ ಆಚಾರ್ಯರು ಸುರೇಶ್ವರಾದಿ ಶಿಷ್ಯರೊಡನೆ ಮಹಾರಾಷ್ಟ್ರಾದಿದೇಶಗಳಲ್ಲಿ ಸಂಚರಿಸಿ

ತಮ್ಮ ಗ್ರಂಥಗಳನ್ನು ಪ್ರಚಾರಮಾಡಿ ಶ್ರೀಶೈಲಕ್ಕೆ ಬಂದರು. ಅಲ್ಲಿ ಪಾಶುಪತ, ವೈಷ್ಣವಾದಿ ಮತಗಳನ್ನು ಶಿಷ್ಯರಾದ ಸುರೇಶ್ವರಾದಿಗಳೇ ಖಂಡಿಸಿದರು. ಸಾಂಖ್ಯರು, ವೈಶೇಷಿಕರು ಬೌದ್ಧರು, ನೈಯಾಯಿಕರು, ಜೈನರು - ಮೊದಲಾದವರ ಸಿದ್ಧಾಂತಗಳು ಮೂಲೆಗುಂಪಾದವು.

ಒಮ್ಮೆ ಶ್ರೀಶೈಲದಲ್ಲಿ ಶ್ರೀಶಂಕರಮುನಿಗಳು ಶಿಷ್ಯರಿಗೆ ಪಾಠಹೇಳಿ ಏಕಾಂತದಲ್ಲಿ ಕುಳಿತಿದ್ದರು. ಆ ಸಮಯದಲ್ಲಿ ಒಬ್ಬ ಕಾಪಾಲಿಕನು ಈ ಯತೀಶ್ವರರ ಬಳಿಗೆ ಆಗಮಿಸಿ, ತನ್ನ ಒಂದು ಇಷ್ಟಸಿದ್ಧಿಗಾಗಿ ಆಚಾರ್ಯರ ಶಿರಸ್ಸನ್ನು ಯಾಚಿಸಿದನು. ಶ್ರೀಶಂಕರಮುನಿಗಳು ನಿಶ್ಚಿಂತೆಯಿಂದ 'ಆಗಲಿ, ನಾನು ನಾಳೆ ಏಕಾಂತದಲ್ಲಿದ್ದಾಗ ನನ್ನ ಶಿಷ್ಯರಿಗೆ ತಿಳಿಯದಂತೆ ಈ ಶಿರಸ್ಸನ್ನು ತೆಗೆದುಕೊಂಡು ಹೋಗು' ಎಂದರು. ಮರುದಿನ ಆಚಾರ್ಯರು ಧ್ಯಾನನಿಷ್ಠರಾಗಿದ್ದಾಗ ಆ ಕಾಪಾಲಿಕನು ಬಂದು ಶಿರಸ್ಸನ್ನು ಕತ್ತರಿಸಲು ಹವಣಿಸಿದನು. ಆಗ ಸಮಾಧಿಸ್ಥರಾಗಿದ್ದ ಪದ್ಮಪಾದರಿಗೆ ಇದು ತಿಳಿಯಿತು. ಅವರು ಕೋಪೋದ್ರಿಕ್ತರಾಗಿ ನರಸಿಂಹಸ್ವಾಮಿಯ ವರಬಲದಿಂದ ಸ್ವತಃ ಉಗ್ರನರಸಿಂಹನೇ ಆದರು. ಛಂಗನೆ ಹಾರಿಬಂದು ನಖಗಳಿಂದ ಆ ಭೈರವನನ್ನು ಬಗೆದು ಸೀಳಿಹಾಕಿದರು. ನೃಸಿಂಹನ ಗರ್ಜನೆಯಿಂದ ಬಾಹ್ಯಸ್ಥಿತಿಗೆ ಬಂದ ಆಚಾರ್ಯರು ಶ್ರೀನೃಸಿಂಹಸ್ವಾಮಿಯನ್ನು ಸ್ತುತಿಸಿ ಶಾಂತನಾಗುವಂತೆ ಬೇಡಿದರು. ಆಗ ಪದ್ಮಪಾದರು ಆವೇಶದಿಂದ ಮುಕ್ತರಾಗಿ ಪ್ರಕೃತಿಸ್ಥರಾದರು.

ಅನಂತರ ಶ್ರೀಶಂಕರಯತೀಶ್ವರರು ಶಿಷ್ಯಸಮೇತರಾಗಿ ಶ್ರೀಶೈಲದಿಂದ ಹೊರಟು ಗೋಕರ್ಣಕ್ಕೆ ಹೋಗಿ ಮಹಾಬಲೇಶ್ವರನನ್ನು ಸ್ತುತಿಸಿ ಮೂಕಾಂಬಿಕಾಕ್ಷೇತ್ರಕ್ಕೆ ಹೋದರು. ದಾರಿಯಲ್ಲಿ ಒಬ್ಬ ಬ್ರಾಹ್ಮಣಸ್ತ್ರೀಯು ತನ್ನ ಒಬ್ಬನೇ ಮಗನು ಸತ್ತು ಹೋದನೆಂದು ಶೋಕಿಸುತ್ತಿದ್ದಳು. ಆಚಾರ್ಯರು ಕರುಣಾರ್ದ್ರಚಿತ್ತರಾಗಿ ಆ ಬಾಲಕನನ್ನು ಬದುಕಿಸಿ, ಮೂಕಾಂಬಿಕೆಯ ದರ್ಶನವನ್ನು ಮಾಡಿ ಶ್ರೀಬಲಿಯೆಂಬ ಅಗ್ರಹಾರಕ್ಕೆ ತೆರಳಿದರು. ಅಲ್ಲಿ ಪ್ರಭಾಕರನೆಂಬ ಪಂಡಿತನು ಜಡನೂ ಮೂಕನೂ ಆಗಿದ್ದ ತನ್ನ ಪುತ್ರನನ್ನು ಕರೆತಂದು ಶ್ರೀಶಂಕರರಿಗೆ ತನ್ನ ದುಃಖವನ್ನು ನಿವೇದಿಸಿಕೊಂಡನು. ಆಚಾರ್ಯರು ಆ ಬಾಲಕನನ್ನು ಕುರಿತು 'ನೀನು ಯಾರು? ಏಕೆ ಜಡನಂತೆ ಇದ್ದೀಯೆ?' ಎಂದು ಕೇಳಲು, ಆ ಬಾಲಕನು ತತ್ತ್ವಾರ್ಥಗರ್ಭಿತವಾದ ಹನ್ನೆರಡು ಶ್ಲೋಕಗಳನ್ನು ಹೇಳಿ ಎಲ್ಲರನ್ನೂ ವಿಸ್ಮಯಗೊಳಿಸಿದನು. ಆಚಾರ್ಯರು ಆತನಿಗೆ ಹಸ್ತಾಮಲಕನೆಂದು ನಾಮಕರಣಮಾಡಿ, ಶಿಷ್ಯನನ್ನಾಗಿ ಪರಿಗ್ರಹಿಸಿ ಜೊತೆಯಲ್ಲಿ ಕರೆದು ಕೊಂಡು ಶೃಂಗೇರಿಗೆ ಆಗಮಿಸಿದರು.

ಶೃಂಗೇರಿಯಲ್ಲಿ ಭಗವತ್ಪಾದರು ಶಾರದಾಮಂದಿರವನ್ನು ಕಟ್ಟಿಸಿ, ಶ್ರೀಶಾರದಾಂಬೆಯನ್ನು ಪ್ರತಿಷ್ಠಾಪಿಸಿ, ಶಿಷ್ಯರಿಗೆ ಭಾಷ್ಯಾದಿ ಗ್ರಂಥಗಳನ್ನು ಬೋಧಿಸುತ್ತ ಕೆಲವು ಕಾಲ ಇದ್ದರು. ಆಗ ಗಿರಿ ಎಂಬ ಶಿಷ್ಯನಿಗೆ ತಮ್ಮ ದಿವ್ಯಶಕ್ತಿಯಿಂದ ಸಕಲವಿದ್ಯೆಗಳನ್ನೂ ಅನುಗ್ರಹಿಸಿದರು. ಆತನು ಗುರುಗಳ ಅನುಗ್ರಹವನ್ನು ಪಡೆದು ತೋಟಕವೃತ್ತಗಳಿಂದ ಆಚಾರ್ಯರನ್ನು ಸ್ತುತಿಸಿದ್ದರಿಂದ ತೋಟಕಾಚಾರ್ಯನೆಂದು ಪ್ರಸಿದ್ಧನಾದನು. ಭಗವತ್ಪಾದರ ಶಿಷ್ಯರಲ್ಲಿ ಪದ್ಮಪಾದ, ಸುರೇಶ್ವರ,

ಹಸ್ತಾಮಲಕ, ತೋಟಕ - ಎಂಬ ನಾಲ್ವರು ಆಚಾರ್ಯರು ವಿಖ್ಯಾತರಾದವರು. ಅವರೆಲ್ಲರೂ ತತ್ತ್ವಜ್ಞಾನಿಗಳೂ ಮಹಾವಿದ್ವಾಂಸರೂ ಆಗಿದ್ದರು.

## ಶಿಷ್ಯರಿಂದ ಗ್ರಂಥನಿರ್ಮಾಣ

ಶ್ರೀಶಂಕರಯತೀಶ್ವರರಿಗೆ ಸುರೇಶ್ವರಾಚಾರ್ಯರಿಂದ ಸೂತ್ರಭಾಷ್ಯಕ್ಕೆ ವಾರ್ತಿಕವನ್ನು ಬರೆಸಬೇಕೆಂದು ಸಂಕಲ್ಪವಿತ್ತು. ಇತರ ಶಿಷ್ಯರು ಅಸಹನೆಯಿಂದ "ಸುರೇಶ್ವರನು ಹಿಂದೆ ಗೃಹಸ್ಥನೂ ಕರ್ಮಠನೂ ಆಗಿದ್ದವನು. ಅವನು ನಿವೃತ್ತಿಮಾರ್ಗಕ್ಕೆ ಪ್ರಾಧಾನ್ಯವನ್ನು ಕೊಡುವುದಿಲ್ಲ. ಅವನಿಂದ ವಾರ್ತಿಕವನ್ನು ಬರೆಸಬಾರದು" ಎಂದು ದೂರಿದರು. ಬಹುಜನರಿಂದ ವಿರೋಧ ಬಂದದ್ದರಿಂದ, ಬಹಳ ವ್ಯಥೆಪಡುತ್ತಲೇ ಆ ಉದ್ದೇಶವನ್ನು ತ್ಯಜಿಸಬೇಕಾಯಿತು. ಸುರೇಶ್ವರರಿಂದ ನೈಷ್ಕರ್ಮ್ಯಸಿದ್ಧಿ ಎಂಬ ಸ್ವತಂತ್ರನಿಬಂಧವನ್ನೂ ತೈತ್ತಿರೀಯ ಮತ್ತು ಬೃಹದಾರಣ್ಯಕ - ಉಪನಿಷದ್ಭಾಷ್ಯಗಳಿಗೆ ವಾರ್ತಿಕಗಳನ್ನೂ ಬರೆಸಿದರು. ಸೂತ್ರಭಾಷ್ಯಕ್ಕೆ ಟೀಕೆಯನ್ನು ಬರೆಯುವಂತೆ ಪದ್ಮಪಾದರಿಗೆ ಆದೇಶವನ್ನಿತ್ತರು. ಅಂತೆಯೇ ತೋಟಕಾಚಾರ್ಯರೇ ಮೊದಲಾದ ಶಿಷ್ಯರಿಗೂ ಕೆಲವು ಗ್ರಂಥಗಳನ್ನು ರಚಿಸುವಂತೆ ತಿಳಿಸಿದರು. ಎಲ್ಲರೂ ಉದ್ದಿಷ್ಟಗ್ರಂಥಗಳನ್ನು ರಚಿಸಿದರು.

## ಪದ್ಮಪಾದರ ತೀರ್ಥಯಾತ್ರೆ. ಆರ್ಯಾಂಬೆಯ ದೇಹತ್ಯಾಗ

ಪದ್ಮಪಾದರು ತೀರ್ಥಯಾತ್ರೆಗೆ ಹೋಗಬೇಕೆಂದು ಸಂಕಲ್ಪಿಸಿ ಆಚಾರ್ಯರಿಗೆ ನಿವೇದಿಸಿದರು. ತೀರ್ಥಯಾತ್ರೆಯ ಗುಣದೋಷಗಳ ಪರಾಮರ್ಶೆಯಾದಮೇಲೆ ಗುರುಗಳ ಸಂಮತಿಯನ್ನು ಪಡೆದು ಅವರು ಶೃಂಗೇರಿಯಿಂದ ಹೊರಟರು. ಇತ್ತ ಶೃಂಗೇರಿಯಲ್ಲಿದ್ದ ಆಚಾರ್ಯರು ತಾಯಿಯ ಅಂತ್ಯಕಾಲವು ಸಮೀಪಿಸಿತೆಂದು ಕಾಲಟಿಗೆ ತೆರಳಿ ಆರ್ಯಾಂಬೆಯನ್ನು ಸಂತೈಸಿದರು. ಅವಳ ಇಷ್ಟದಂತೆ ಶ್ರೀಶಂಕರರು ವಿಷ್ಣುವನ್ನು ಸ್ತುತಿಸಲಾಗಿ ವಿಷ್ಣುದೂತರು ಆಗಮಿಸಿ ಅವಳನ್ನು ವಿಷ್ಣುವಿನ ಪರಂಧಾಮವಾದ ವೈಕುಂಠಕ್ಕೆ ಕರೆದೊಯ್ದರು. ತಾಯಿಗೆ ಮಾತುಕೊಟ್ಟಂತೆ ಶ್ರೀಶಂಕರರು ಅವಳ ಅಂತ್ಯಸಂಸ್ಕಾರವನ್ನು ಮಾಡಲು ಬಯಸಿದರು. ಬಂಧುಗಳು ಸಹಕರಿಸಲಿಲ್ಲ. ದಹನಮಾಡಲು ಅಗ್ನಿಯನ್ನೂಕೊಡಲಿಲ್ಲ. ಆಚಾರ್ಯರು ಬಲಗೈಯಲ್ಲಿ ಅಗ್ನಿಯನ್ನುತ್ಪಾದಿಸಿ, ಮನೆಯ ಹಿತ್ತಿಲಲ್ಲಿಯೇ ತಾಯಿಯ ಕಳೇವರವನ್ನು ದಹಿಸಿದರು. ಅಲ್ಲದೆ ಅಲ್ಲಿಯ ವಿಪ್ರರನ್ನು ನೋಡಿ "ನೀವು ಅಗ್ನಿಯನ್ನೂ ಕೊಡದೆಹೋದಿರಿ. ನೀವು ವೇದಬಾಹ್ಯರಾಗಿರಿ. ಇನ್ನುಮುಂದೆ ಮನೆಯ ಹಿತ್ತಿಲೇ ನಿಮಗೆ ಶ್ಮಶಾನವಾಗಲಿ" ಎಂದು ಶಪಿಸಿ ಅಲ್ಲಿಂದ ನಿರ್ಗಮಿಸಿದರು. ಅನಂತರ ಶಾಂತಚಿತ್ತರಾಗಿ ತಮ್ಮ ಶಿಷ್ಯರ ಆಗಮನವನ್ನು ಪ್ರತೀಕ್ಷಿಸುತ್ತ ಕೇರಳದೇಶದಲ್ಲಿ ಸಂಚರಿಸುತ್ತಿದ್ದರು.

ಇತ್ತ ಪದ್ಮಪಾದರು ಕೆಲವು ಸತೀರ್ಥ್ಯರಾದ ಸಂನ್ಯಾಸಿಗಳೊಡನೆ ಉತ್ತರದೇಶದ

ಯಾತ್ರೆಯನ್ನು ಮುಗಿಸಿ, ದಕ್ಷಿಣದಿಕ್ಕಿಗೆ ಹೊರಟು ಕಾವೇರೀನದಿಯ ಬಳಿಯಲ್ಲಿದ್ದ ತಮ್ಮ ಪೂರ್ವಾಶ್ರಮದ ಸೋದರಮಾವನ ಮನೆಗೆ ಬಂದರು. ತಾವು ಬರೆದಿದ್ದ ಭಾಷ್ಯಟೀಕೆಯ ಪುಸ್ತಕವನ್ನು ಆತನ ಮನೆಯಲ್ಲಿಟ್ಟು ರಾಮೇಶ್ವರದ ಕಡೆಗೆ ಹೊರಟರು. ಸೋದರಮಾವನು ಪ್ರಾಭಾಕರಮತಾನುಯಾಯಿಯಾದ ಪಂಡಿತನೂ ಕರ್ಮಠನೂ ಆಗಿದ್ದನು. ನಿವೃತ್ತಿಮಾರ್ಗವನ್ನು ಪೋಷಿಸಿ ಬರೆದಿದ್ದ ಆ ಟೀಕಾಗ್ರಂಥವನ್ನೋದಿ ಆತನು ಅಸೂಯೆಯಿಂದ ತನ್ನ ಮನೆಗೇ ಬೆಂಕಿಯನ್ನಿಟ್ಟು ಆ ಪುಸ್ತಕವನ್ನು ಸುಟ್ಟುಹಾಕಿದನು. ಪದ್ಮಪಾದರು ಹಿಂದಿರುಗಿಬಂದು ತಮ್ಮ ಗ್ರಂಥದ ಗತಿಯನ್ನು ಕೇಳಿ ನೊಂದುಕೊಂಡರು. ಮತ್ತೆ ಅದೇರೀತಿಯಲ್ಲಿ ಟೀಕಾಗ್ರಂಥವನ್ನು ಸೋದರಳಿಯನು ಬರೆದು ಬಿಟ್ಟಾನೆಂಬ ಶಂಕೆಯಿಂದ ಆ ಸೋದರಮಾವನು ಯಾವುದೋ ಮದ್ದನ್ನು ಸೇರಿಸಿ ಪದ್ಮಪಾದರಿಗೆ ಭಿಕ್ಷೆಯನ್ನಿತ್ತನು. ಪದ್ಮಪಾದರ ಬುದ್ಧಿಶಕ್ತಿಯು ಕುಂದಿಹೋಯಿತು. ಕೇರಳದಲ್ಲಿದ್ದ ಶ್ರೀಶಂಕರರ ಬಳಿಗೆ ಬಂದು ಪದ್ಮಪಾದರು ತಮ್ಮ ದುಃಖವನ್ನು ನಿವೇದಿಸಿಕೊಂಡರು. ದಯಾರ್ದ್ರಹೃದಯರಾದ ಆಚಾರ್ಯರು"ಚಿಂತಿಸಬೇಡ, ಶೃಂಗೇರಿಯಲ್ಲಿ ನಿನ್ನ ಟೀಕಾಗ್ರಂಥವನ್ನು ನನಗೆ ಓದಿ ಹೇಳಿದ್ದೀಯೆ. ಅದನ್ನು ಹೇಳುತ್ತೇನೆ. ಬರೆದುಕೊ" ಎಂದು ಸಂತೈಸಿದರು. ಹಾಗೆಯೇ ತಮ್ಮ ಅಗಾಧವಾದ ಸ್ಮೃತಿಶಕ್ತಿಯಿಂದ ಪಂಚಪಾದಿಕಾ ಪರ್ಯಂತವಾದ ಭಾಷ್ಯಟೀಕೆಯನ್ನು ಯಥಾವತ್ತಾಗಿ ಹೇಳಿಬರೆಯಿಸಿದರು. ಪದ್ಮಪಾದರಿಗೆ ಹಿಡಿಸಲಾರದಷ್ಟು ಆನಂದವಾಯಿತು. ಹಾಗೆಯೇ ರಾಜಶೇಖರನೆಂಬ ರಾಜನು ಹಿಂದೆ ಆಚಾರ್ಯರಿಗೆ ತೋರಿಸಿದ್ದ ನಾಟಕತ್ರಯವೂ ನಷ್ಟವಾಗಿತ್ತು. ಅದನ್ನೂ ಸ್ಮೃತಿಶಕ್ತಿಯಿಂದಲೇ ಬರೆಯಿಸಿದರು.

ದಿಗ್ವಿಜಯಯಾತ್ರೆ

ಅನಂತರ ವೈದಿಕಧರ್ಮವನ್ನು ಸ್ಥಿರವಾಗಿ ಭರತಖಂಡದಲ್ಲಿ ಸ್ಥಾಪಿಸುವ ಉದ್ದೇಶದಿಂದ ಭಗವತ್ಪಾದರು ಶಿಷ್ಯಸಮೇತರಾಗಿ ಮೊದಲು ಶ್ರೀರಾಮಸೇತುವಿನ ಕಡೆಗೆ ಹೊರಟರು. ಅವರಿಗೆ ಏನಾದರೂ ಆಪತ್ತು ಒದಗೀತೆಂದು ಭಾವಿಸಿ ಸುಧನ್ವರಾಜನು ಸೈನ್ಯವನ್ನು ತೆಗೆದುಕೊಂಡು ಹಿಂಬಾಲಿಸಿ ಹೋದನು. ಆಚಾರ್ಯರು ರಾಮಸೇತುವಿನ ಬಳಿ ನೆಲೆಸಿದ್ದ ಶಾಕ್ತರನ್ನು ವಾದದಲ್ಲಿಜಯಿಸಿ ಶ್ರೀರಾಮೇಶ್ವರನನ್ನು ಅರ್ಚಿಸಿ, ಪಾಂಡ್ಯಾದಿದೇಶಗಳಲ್ಲಿದ್ದ ದುರ್ವಾದಿಗಳನ್ನು ಗೆದ್ದು ಕಾಂಚಿಗೆ ಬಂದರು. ಅಲ್ಲೊಂದು ದೇವಾಲಯವನ್ನು ಕಟ್ಟಿಸಿ ಕಾಮಾಕ್ಷೀದೇವಿಗೆ ವೈದಿಕವಿಧಿಯಂತೆ ಪೂಜಾಪದ್ಧತಿಯನ್ನು ಗೊತ್ತುಮಾಡಿ, ವೇಂಕಟೇಶ್ವರನನ್ನು ಸಂದರ್ಶಿಸಿ ವಿದರ್ಭದೇಶಕ್ಕೆ ಹೋದರು. ಭೈರವತಂತ್ರದವರನ್ನುಗೆದ್ದು ಕರ್ಣಾಟಕದೇಶಕ್ಕೆ ಹೋದರು. ಕ್ರಕಚನೆಂಬ ಕಾಪಾಲಿಕನ ಪ್ರೇರಣೆಯಿಂದ ಆಕ್ರಮಣಕಾರಿಗಳಾಗಿ ಬಂದ ಕಾಪಾಲಿಕರನ್ನು ಸುಧನ್ವನು ಸಂಹರಿಸಿದನು. ಆಚಾರ್ಯರನ್ನು ಕೊಲ್ಲುವುದಕ್ಕಾಗಿ ಬಂದ ಕ್ರಕಚನನ್ನು ಅವನ ಇಷ್ಟದೇವತೆಯಾದ ಭೈರವನೇ ಕೊಂದು ಹಾಕಿದನು. ಆಮೇಲೆ ಯತಿವರೇಣ್ಯರು ಗೋಕರ್ಣಕ್ಕೆ ಹೋದರು. ಅಲ್ಲಿ ಶೈವನಾದ

ನೀಲಕಂಠಾಚಾರ್ಯನನ್ನು ವಾದದಲ್ಲಿ ಸೋಲಿಸಲು, ಆತನು ಹರದತ್ತಾದಿಗಳೊಡನೆ ಆಚಾರ್ಯರಿಗೆ ಶರಣಾದನು. ಆಮೇಲೆ ಯತೀಶ್ವರರು ಸೌರಾಷ್ಟ್ರಾದಿದೇಶಗಳಲ್ಲಿ ತಮ್ಮ ಭಾಷ್ಯವನ್ನು ಪ್ರಚಾರಮಾಡುತ್ತ, ಪ್ರತಿವಾದಿಗಳನ್ನುಜಯಿಸುತ್ತಾ ದ್ವಾರಕೆಗೆ ತೆರಳಿದರು. ಅಲ್ಲಿ ವೈಷ್ಣವಾದಿಗಳನ್ನು ವಾದದಲ್ಲಿ ಪರಾಜಯಗೊಳಿಸಿ ಅದ್ವೈತಸಿದ್ಧಾಂತವನ್ನು ಬೋಧಿಸಿ ಉಜ್ಜಯಿನಿಗೆ ಬಂದರು. ಭೇದಾಭೇದವಾದಿಯೂ ಪಂಡಿತೋತ್ತಮನೂ ಆದ ಭಟ್ಟಭಾಸ್ಕರನೊಡನೆ ವಿಸ್ಮಯಕಾರಿಯಾದ ವಾದದಲ್ಲಿ ತೊಡಗಿ ಆತನನ್ನು ಪರಾಜಯ ಗೊಳಿಸಿದರು. ಆಮೇಲೆ ಬಾಹ್ಲಿಕ, ಕಾಮರೂಪ-ಮೊದಲಾದ ದೇಶಗಳಲ್ಲಿದ್ದ ಜೈನರನ್ನೂ ತಾರ್ಕಿಕರನ್ನು ಜಯಿಸಿದರು. ಅಭಿನವಗುಪ್ತನೆಂಬ ತಾಂತ್ರಿಕನು ವಾದದಲ್ಲಿ ಪರಾಜಿತನಾದನು. ಆತನು ದುರ್ಬುದ್ಧಿಗೆ ಒಳಗಾಗಿ ಶಿಷ್ಯನಂತೆ ನಟಿಸುತ್ತಾ ಆಚಾರ್ಯಶಿಷ್ಯರ ಗುಂಪಿನಲ್ಲಿ ಸೇರಿಕೊಂಡನು.

ಶ್ರೀಶಂಕರರು ತಾವು ಹೋದೆಡೆಯಲ್ಲೆಲ್ಲ ಶುದ್ಧವಾದ ವೈದಿಕಸಿದ್ಧಾಂತವನ್ನು ಬೋಧಿಸುತ್ತ ಪ್ರತಿವಾದಿಗಳನ್ನು ವಾದದಲ್ಲಿ ಸೋಲಿಸುತ್ತ ಉತ್ತರದೇಶಗಳನ್ನೆಲ್ಲಸಂಚರಿಸಿ, ನೈಮಿಷ, ದರದ, ಕುರು, ಪಾಂಚಾಲ, ಅಂಗ, ವಂಗಾದಿದೇಶಗಳಿಗೆ ಹೋಗಿ ಗೌಡದೇಶಕ್ಕೆಬಂದರು. ನೈಯಾಯಿಕರೇ ಮೊದಲಾದ ಸಕಲ ದ್ವೈತದಾರ್ಶನಿಕರನ್ನೂ ಅವೈದಿಕಮತಾವಲಂಬಿಗಳನ್ನೂ ವಾದದಲ್ಲಿ ಜಯಿಸಿ ಅದ್ವೈತ ಸಿದ್ಧಾಂತವನ್ನು ಪ್ರತಿಷ್ಠಾಪಿಸಿದರು. ಅವರ ಕೀರ್ತಿ ಎಲ್ಲೆಲ್ಲಿಯೂ ಹರಡಿತು.

ಕಪಟ ಶಿಷ್ಯನಾಗಿ ಬಂದಿದ್ದ ಅಭಿನವಗುಪ್ತನು ಸಮಯ ಸಾಧಿಸಿ ಆಚಾರ್ಯರಿಗೆ ಒಂದು ಅಭಿಚಾರಕ್ರಿಯೆಯನ್ನು ಮಾಡಿದನು. ಅದರಿಂದ ಆಚಾರ್ಯರಿಗೆ ಭಗಂದರರೋಗವು ಪ್ರಾಪ್ತವಾಯಿತು. ಯಾವ ಚಿಕಿತ್ಸೆಯೂ ಫಲಕಾರಿಯಾಗಲಿಲ್ಲ. ಅದು ಆಭಿಚಾರಿಕ ಕ್ರಿಯೆಯಿಂದ ಬಂದದ್ದೆಂದು ಪದ್ಮಪಾದರಿಗೆ ಗೊತ್ತಾಯಿತು. ಅವರು ಅತ್ಯಂತಕ್ರುದ್ಧರಾಗಿ ಪ್ರತೀಕಾರದ ಮಂತ್ರವನ್ನು ಜಪಿಸತೊಡಗಿದರು. ಭಗಂದರ ರೋಗವು ಗುಣವಾಯಿತು. ಅಭಿನವಗುಪ್ತನು ಪ್ರತೀಕಾರಮಂತ್ರದ ಬಲದಿಂದ ಸತ್ತುಹೋದನು.

### ಶ್ರೀಗೌಡಪಾದ ದರ್ಶನ

ಯತೀಂದ್ರರಾದ ಶ್ರೀಶಂಕರಾಚಾರ್ಯರು ಗಂಗಾತೀರದಲ್ಲಿ ಪರಬ್ರಹ್ಮವಸ್ತುವನ್ನು ಧ್ಯಾನಿಸುತ್ತಿರುವಾಗ, ಅವರ ಪರಮ ಗುರುಗಳಾದ ಶ್ರೀಗೌಡಪಾದಾಚಾರ್ಯರು ಆಗಮಿಸಿದರು. ಆಚಾರ್ಯರು ಥಟ್ಟನೆ ಎದ್ದು ನಿಂತು ಸಾಷ್ಟಾಂಗಪ್ರಣಾಮಮಾಡಿ ಅವರನ್ನು ಸ್ವಾಗತಿಸಿದರು. ಶ್ರೀಗೌಡಪಾದರು ಶ್ರೀಶಂಕರರನ್ನು ಕುರಿತು "ವತ್ಸ, ನೀನು ಗೋವಿಂದನಿಂದ ಪರಮಾರ್ಥವಸ್ತು

ವನ್ನರಿತಿದ್ದೀಯಷ್ಟೆ? ನಿನ್ನ ಶಿಷ್ಯರು ಭಕ್ತಿಭಾವದಿಂದ ನಿನ್ನನ್ನು ಸೇವಿಸುತ್ತಿದ್ದಾರಷ್ಟೆ?" ಎಂದು ಕುಶಲವನ್ನು ವಿಚಾರಿಸಿ ಅನಂತರ ಹೀಗೆಂದರು. " ನೀನು ಶಾರೀರಕಸೂತ್ರಗಳಿಗೂ ನನ್ನ ಮಾಂಡೂಕ್ಯಕಾರಿಕೆಗಳಿಗೂ ಉತ್ತಮವಾದ ಭಾಷ್ಯವನ್ನು ಬರೆದಿದ್ದೀಯೆ - ಎಂದು ಗೋವಿಂದನು ನನಗೆ ಹೇಳಿದನು. ಅದನ್ನು ಕೇಳಿ ನನಗೆ ಆನಂದವಾಯಿತು. ನಿನ್ನನ್ನು ಒಮ್ಮೆನೋಡೋಣವೆಂದು ಬಂದೆನು" ಎಂದರು. ಆಚಾರ್ಯರು ತಾವು ಬರೆದ ಭಾಷ್ಯಗಳನ್ನು ತೋರಿಸಿದರು. ಅವರ ಪರಮಗುರುಗಳು ಅದೆಲ್ಲವನ್ನೂ ವೀಕ್ಷಿಸಿ ಪರಮಸಂತುಷ್ಟರಾಗಿ "ವತ್ಸ, ನಿನ್ನ ಭಾಷ್ಯಗಳು ಅತ್ಯುತ್ತಮವಾಗಿವೆ. ನನ್ನ ಆಶಯವನ್ನು ಸೊಗಸಾಗಿ ಪ್ರತಿಪಾದಿಸಿದ್ದೀಯೆ. ಏನಾದರೂ ವರವನ್ನು ಕೇಳಿಕೊ" ಎಂದರು. ಶ್ರೀಶಂಕರರು "ಭಗವನ್, ನೀವು ದರ್ಶನವನ್ನಿತ್ತುದೇ ನನಗೆ ಶ್ರೇಷ್ಠವಾದ ವರವಾಗಿದೆ. ಆದರೂ ನನ್ನ ಹೃದಯವು ಸದಾ ಬ್ರಹ್ಮಚಿಂತನದಲ್ಲಿ ಮಗ್ನವಾಗಿರಲಿ. ಇದು ನಾನು ಬೇಡುವ ವರ" ಎಂದರು. ಶ್ರೀಗೌಡಪಾದರು 'ತಥಾಸ್ತು' ಎಂದು ನುಡಿದು ಅಂತರ್ಧಾನಹೊಂದಿದರು.

### ಸರ್ವಜ್ಞಪೀಠಾರೋಹಣ

ಕೆಲವು ದಿನಗಳು ಕಳೆದವು. ಒಂದು ದಿನ ಆಚಾರ್ಯರು ಗಂಗಾನದಿಯಲ್ಲಿ ಪ್ರಾತರಾಹ್ನಿಕಾದಿಗಳನ್ನು ನೆರವೇರಿಸಿ ಕುಳಿತಿರುವಾಗ ಒಂದು ವೃತ್ತಾಂತವನ್ನು ಕೇಳಿದರು. ಏನೆಂದರೆ,"ಕಾಶ್ಮೀರದೇಶದಲ್ಲಿ ಶ್ರೀಶಾರದಾದೇವಿಯ ಸುಂದರವಾದ ಒಂದು ಮಂದಿರವಿದೆ. ಅದಕ್ಕೆ ನಾಲ್ಕುದಿಕ್ಕಿನಲ್ಲಿ ನಾಲ್ಕುಮಹಾದ್ವಾರಗಳುಂಟು. ಮಂದಿರದೊಳಗೆ ಒಂದು ಸರ್ವಜ್ಞಪೀಠವಿದೆ. ಪಂಡಿತಪ್ರಕಾಂಡರಲ್ಲಿ ಯಾವ ಪಂಡಿತೋತ್ತಮನು ವಾದಿಗಳನ್ನು ಜಯಿಸಿ ಆ ಪೀಠದಲ್ಲಿ ಕುಳಿತುಕೊಳ್ಳುವನೋ ಅವನು ಸರ್ವಜ್ಞನೆಂದು ಸಂಮಾನಿತನಾಗುತ್ತಾನೆ. ಇದುವರೆಗೆ ಮೂರುದಿಕ್ಕುಗಳಿಂದ ವಿದ್ವಾಂಸರು ಬಂದು ಮಹಾದ್ವಾರವನ್ನುತೆಗೆಸಿ ಸರ್ವಜ್ಞಪೀಠವನ್ನೇರಿದ್ದಾರೆ. ದಕ್ಷಿಣದಿಕ್ಕಿನ ಬಾಗಿಲು ಮಾತ್ರ ತೆರೆದಿಲ್ಲ. ದಾಕ್ಷಿಣಾತ್ಯರಲ್ಲಿ ಯಾರೂ ಆ ಪೀಠವನ್ನೇರಲಿಲ್ಲ" ಎಂದು. ಆ ಸುದ್ದಿಯನ್ನು ಕೇಳಿ 'ಇದು ದಾಕ್ಷಿಣಾತ್ಯರಿಗೆ ಬಂದ ಒಂದು ಕಳಂಕವೇ ಸರಿ. ಈ ಅಪಕೀರ್ತಿಯನ್ನು ತೊಡೆದು ಹಾಕಬೇಕು' ಎಂದು ಆಚಾರ್ಯರು ಸಂಕಲ್ಪಿಸಿ ಕಾಶ್ಮೀರಕ್ಕೆ ಪ್ರಯಾಣಮಾಡಿದರು. ಶಿಷ್ಯಸಮೇತರಾಗಿ ಶಾರದಾಮಂದಿರಕ್ಕೆ ಹೋಗಿ ದಕ್ಷಿಣದ ಮಹಾದ್ವಾರವನ್ನು ತೆಗೆಸುವಂತೆ ಹೇಳಿದರು. ನಾನಾಶಾಸ್ತ್ರಗಳಲ್ಲಿ ಪ್ರವೀಣರಾದ ವಿದ್ವಾಂಸರು ಆಚಾರ್ಯರನ್ನು ತಡೆದರು. ಆಗ ಶ್ರೀಶಂಕರರು ವಾದದಲ್ಲಿ ಅವರನ್ನು ಜಯಿಸಿ ಅವರು ಕೇಳಿದ ಎಲ್ಲ ಪ್ರಶ್ನೆಗಳಿಗೂ ಸಮರ್ಪಕವಾದ ಉತ್ತರಗಳನ್ನಿತ್ತರು. ದಕ್ಷಿಣದ ಬಾಗಿಲು ತೆರೆಯಿತು. ಆಗ ಎಲ್ಲ ವಿದ್ವಾಂಸರೂ ಸೇರಿ ಸಂಭ್ರಮದಿಂದ ಶ್ರೀಶಂಕರಭಗವತ್ಪಾದರನ್ನು ಸರ್ವಜ್ಞಪೀಠದಲ್ಲಿ ಕುಳ್ಳಿರಿಸಿದರು. ದೇವದುಂದುಭಿಗಳು ಮೊಳಗಿದವು. ಪುಷ್ಪವೃಷ್ಟಿ ಯಾಯಿತು.

ಆಮೇಲೆ ಯತಿವರೇಣ್ಯರು ಶೃಂಗೇರಿ ಮೊದಲಾದ ಸ್ಥಳಗಳಲ್ಲಿ ತಮ್ಮ ಶಿಷ್ಯರಾದ ಸುರೇಶ್ವರಾಚಾರ್ಯರೇ ಮೊದಲಾದವರನ್ನು ವೈದಿಕಧರ್ಮರಕ್ಷಣೆಗಾಗಿ ಸ್ಥಾಪಿಸಿ, ಬದರೀಕ್ಷೇತ್ರಕ್ಕೆ ತೆರಳಿದರು. ಪಾತಂಜಲಯೋಗಶಾಸ್ತ್ರಾಭ್ಯಾಸದಲ್ಲಿ ನಿರತರಾಗಿದ್ದವರಿಗೆ ಅಲ್ಲಿ ತಮ್ಮ ಸೂತ್ರಭಾಷ್ಯಾದಿಗಳನ್ನು ಬೋಧಿಸಿದರು. ಅಲ್ಲಿಂದ ಕೇದಾರಕ್ಕೆ ಹೋದರು.

ಅವರು ಅವತರಿಸಿ ಮೂವತ್ತೆರಡು ವರ್ಷಗಳು ಕಳೆದವು. ಇನ್ನು ಶ್ರೀಶಂಕರಭಗವತ್ಪಾದರು ಈ ಭರತಭೂಮಿಯಲ್ಲಿ ಮಾಡಬೇಕಾದ ಯಾವ ಕರ್ತವ್ಯ ಉಳಿಯಿತು?"ಶ್ರೇಯೋ ಭೂಯೋ ಬುಧಾನಾಮಧಿಕತರಮಿತಃ ಶಂಕರಃ ಕಿಂ ಕರೋತು?"

ಕೈಲಾಸಕ್ಕೆ ಹಿಂದಿರುಗಬೇಕೆಂದು ಇಂದ್ರಾದಿದೇವತೆಗಳು ಪ್ರಾರ್ಥಿಸಿಕೊಂಡರು. ವೃಷಭವಾಹನವು ಪ್ರತ್ಯಕ್ಷವಾಯಿತು. ಶ್ರೀಶಂಕರನು ಆ ದಿವ್ಯವೃಷಭವನ್ನೇರಿ ಸ್ವಧಾಮಕ್ಕೆ ತೆರಳಿದನು - ಇತಿ ಶಮ್.

## ಆಚಾರ್ಯರ ಪಾದಯಾತ್ರೆಯ ವಿಹಂಗಮದೃಷ್ಟಿ

ಕೇರಳದೇಶದ ಕಾಲಟಿಯೆಂಬ ಅಗ್ರಹಾರದಲ್ಲಿ ಜನನ.- ಐದನೆಯ ವರ್ಷದಲ್ಲಿ ಉಪನಯನ - ಎಂಟನೆಯ ವರ್ಷದಲ್ಲಿ ಸಂನ್ಯಾಸಗ್ರಹಣ - ತಾಯಿ ಆರ್ಯಾಂಬೆಯನ್ನು ಬೀಳ್ಕೊಂಡು ಪ್ರಯಾಣ.

ನರ್ಮದಾತೀರದಲ್ಲಿದ್ದ ಗೋವಿಂದಭಗವತ್ಪಾದರ ಆಶ್ರಮ-ಕಾಶೀ-ಬದರೀ-ಪ್ರಯಾಗ-ಮಗಧರಾಜ್ಯದ ಮಾಹಿಷ್ಮತೀನಗರ-ಅಮರುಕರಾಜನ ದೇಹದಲ್ಲಿ ಪ್ರವೇಶ - ಮಾಹೀಷ್ಮತೀ- ನರ್ಮದಾತೀರವಾಸ - ಗೋಕರ್ಣ- ಕೊಲ್ಲೂರು- ಶ್ರೀಬಲಿ(ಶಿವಳ್ಳಿ-ಉಡುಪಿ) ಅಥವಾ ಶಿರಾಳಿ -ಶೃಂಗೇರಿಯಲ್ಲಿ ಶಾರದಾಪ್ರತಿಷ್ಠೆ - ಕಾಲಟಿಗೆ ಹೋಗಿ ತಾಯಿಯ ಸಂಸ್ಕಾರ - ಕೇರಳದೇಶ ಸಂಚಾರ.

ಕೇರಳದಿಂದ ದಿಗ್ವಿಜಯಯಾತ್ರೆಗೆ ಪ್ರಯಾಣ - ರಾಮಸೇತು-ಪಾಂಡ್ಯ- ಚೋಳ - ದ್ರಾವಿಡದೇಶಗಳು - ಕಾಂಚಿ - ಆಂಧ್ರ - ವಿದರ್ಭ(ಈಗಿನ ಮಹಾರಾಷ್ಟ್ರದ ಪೂರ್ವಭಾಗ) - ಕರ್ಣಾಟಕ - ಗೋಕರ್ಣ -ಸೌರಾಷ್ಟ್ರ(ಗುಜರಾತ್) - ಉಜ್ಜಯಿನೀ - ಅವಂತೀದೇಶ - ಬಾಹ್ಲಿಕ(ಪಂಜಾಬ್ ಸಮೀಪ) -ನೈಮಿಷ - ದರದ (ಕಾಶ್ಮೀರದ ಸಮೀಪ) - ಭರತ - ಶೂರಸೇನ (ಮಧುರಾದ ಸಮೀಪ) - ಕುರು- ಪಾಂಚಾಲ - ಕಾಮರೂಪ (ಅಸ್ಸಾಂ ಪಶ್ಚಿಮಭಾಗ) - ವಿದೇಹ(ಮಿಥಿಲಾ) - ಕೋಸಲ - ಅಂಗ (ಭಾಗಲ್ಪುರಪ್ರಾಂತ) - ವಂಗ - ಗೌಡ (ಬಂಗಾಳದಿಂದ ಭುವನೇಶ್ವರದ ವರೆಗಿನ ಪ್ರಾಂತ - ಕಾಶೀ(ಗಂಗಾತೀರದಲ್ಲಿ ಗೌಡಪಾದರ ದರ್ಶನ)-ಕಾಶ್ಮೀರ -

ಬದರೀ - ಕೇದಾರ - ಕೈಲಾಸಗಮನ.

ಜೀವನಚರಿತೆಯ ಪರಾಮರ್ಶೆ

ಶ್ರೀಶಂಕರಭಗತ್ಪಾದರ ಜೀವನಚರಿತೆಯನ್ನು ಅವಲೋಕಿಸಿದಾಗ, ಇವರೊಬ್ಬ ಅಸಾಧಾರಣಕರ್ತೃತ್ವಶಕ್ತಿಯುಳ್ಳ ಮಹಾಪುರುಷರೆಂದು ಯಾರಿಗಾದರೂ ಹೊಳೆಯದಿರದು. ಭರತಖಂಡದ ಉದ್ದ-ಅಗಲ-ಆದ್ಯಂತವೂ ಆ ಕಾಲದಲ್ಲಿ ಕಾಲ್ನಡಿಗೆಯಿಂದಲೇ ಸಂಚರಿಸಿ ವೈದಿಕಧರ್ಮವನ್ನು ಪುನರುದ್ಧರಿಸಿದ ಕಾರ್ಯವು ಸಾಮಾನ್ಯವಾದ್ದಲ್ಲ. ವೈದಿಕಧರ್ಮದ ತವರು ಮನೆಯಾಗಿದ್ದ ಈ ಭಾರತದೇಶದಲ್ಲಿ ಅದೇ ಈಗ ಮುಗ್ಗುರಿಸುತ್ತಿದೆ ಎಂಬ ಚಿಂತೆಯೂ ಆ ಧರ್ಮವನ್ನು ಮೊದಲಿನ ಉನ್ನತ ಸ್ಥಾನಕ್ಕೆ ಏರಿಸಬೇಕೆಂಬ ಕಳಕಳಿಯೂ ಆಚಾರ್ಯರನ್ನು ಪ್ರಬಲವಾಗಿ ಪ್ರೇರಿಸಿರಬೇಕು. ಅದಕ್ಕೋಸ್ಕರ ಅವರು ಕಟಿಬದ್ಧರಾಗಿ ಮಾನಸಶ್ರಮವನ್ನೂ ದೈಹಿಕವಾದ ಆಯಾಸವನ್ನೂ ಕಡೆಗಣಿಸಿ, ಆವಿಷ್ಟರಾದವರಂತೆ ಧರ್ಮರಕ್ಷಣೆಗಾಗಿ ಪಣತೊಟ್ಟು, ಆಸೇತು ಹಿಮಾಚಲ ಪರ್ಯಂತವಾಗಿ ಮತ್ತೆ ಮತ್ತೆ ಸಂಚರಿಸಿದರು. ಅಷ್ಟುಚಿಕ್ಕವಯಸ್ಸಿನಲ್ಲಿ ಗಳಿಸಿದ ವಿದ್ಯೆ, ಎಲ್ಲವೇದಗಳ ಅಧ್ಯಯನ, ಶಾಸ್ತ್ರಪಾಂಡಿತ್ಯ, ವೈದಿಕ - ಅವೈದಿಕ ದರ್ಶನಗಳಲ್ಲಿ ಸಹ ತಳಸ್ಪರ್ಶಿಯಾದ ವೈದುಷ್ಯ, ಅಪಾರಗ್ರಂಥಗಳ ರಚನೆ, ಇವುಗಳೊಡನೆ ದೇಶಪರ್ಯಟನೆ - ಇವೆಲ್ಲವನ್ನೂ ಪರಿಶೀಲಿಸಿ ಆಶ್ಚರ್ಯಚಕಿತರಾದ ವಿದ್ವಾಂಸರು ಭಗವಾನ್ ಶಂಕರನೇ ಶ್ರೀಶಂಕರಾಚಾರ್ಯರ ರೂಪದಿಂದ ಅವತರಿಸಿದನೆಂದು ಭಾವಿಸಿರುವುದು ಆಶ್ಚರ್ಯವೇನಲ್ಲ.

ಯದ್ಯದ್ ವಿಭೂತಿಮತ್ ಸತ್ತ್ವಂ ಶ್ರೀಮದೂರ್ಜಿತಮೇವ ವಾ |
ತತ್ತದೇವಾವಗಚ್ಛ ತ್ವಂ ಮಮತೇಜೋಽಂಶ ಸಂಭವಮ್ ||

ಎಂದು ಶ್ರೀಕೃಷ್ಣನು ಹೇಳಿಯೇ ಇದ್ದಾನೆ. ಶ್ರೀರಾಮ ಶ್ರೀಕೃಷ್ಣರು ಧರ್ಮಸಂಸ್ಥಾಪನೆಗಾಗಿ ಬಾಹುಬಲವನ್ನು ಪ್ರದರ್ಶಿಸಿದರೆ, ಶ್ರೀಶಂಕರರು ವಿದ್ಯಾಬಲವನ್ನು ಪ್ರದರ್ಶಿಸಿದರೆಂಬುದಿಷ್ಟೇ ಭೇದ. ಅಭೇದವನ್ನೇ ಸಕಲಜೀವಾತ್ಮಪರಮಾತ್ಮರಿಗೂ ಬೋಧಿಸಿ, 'ಚಿದಾನಂದರೂಪಃ ಶಿವೋಽಹಂ ಶಿವೋಽಹಮ್' ಎಂದು ಘೋಷಿಸಿದವರು ಶಿವನೇ ಸರಿಯೆಂಬುದು ಯುಕ್ತರೂಪವೂ ಹೌದು. 'ಬ್ರಹ್ಮವಿದ್ ಬ್ರಹ್ಮೈವ ಭವತಿ' ಎಂದು ಶ್ರುತಿಯೂ ಸ್ಪಷ್ಟವಾಗಿ ತಿಳಿಸಿದೆ.

"ಸ್ಯಾತ್ ಪರಮೇಶ್ವರಸ್ಯಾಪಿ ಇಚ್ಛಾವಶಾನ್ಮಾಯಾಮಯಂ ರೂಪಂ ಸಾಧಕಾನುಗ್ರಹಾರ್ಥಮ್" (ಸೂ.ಭಾ. ೧-೧-೨೦) ಸಾಧಕರನ್ನು ಅನುಗ್ರಹಿಸುವುದಕ್ಕೋಸ್ಕರ ಪರಮೇಶ್ವರನು ಮಾಯಾಮಯವಾದ ರೂಪವನ್ನು ತನ್ನ ಇಚ್ಛಾನುಸಾರವಾಗಿ ಧರಿಸಬಹುದು - ಎಂದು ಶ್ರೀಶಂಕರರು ಸೂತ್ರಭಾಷ್ಯದಲ್ಲಿ ಬರೆದಿದ್ದಾರೆ. ಗೀತಾಭಾಷ್ಯದ

ಅವತರಣಿಕೆಯಲ್ಲಿಯೂ ಆದಿಕರ್ತನಾದ ವಿಷ್ಣುವು ಶ್ರೀಕೃಷ್ಣನಾಗಿ ಅವತರಿಸಿದನೆಂದು ಬರೆದಿದ್ದಾರೆ. ಶ್ರೀರಾಮನು ತಾನು ಅವತಾರಪುರುಷನೆಂದು ಹೇಳಿಕೊಳ್ಳಲಿಲ್ಲ. ತನ್ನ ಬಾಹುಬಲದ ಮಹಿಮೆಯಿಂದ ತಾನು ಅವತಾರಪುರುಷನೆಂಬುದನ್ನು ತೋರಿಸಿಕೊಟ್ಟಿದ್ದಾನೆ. ಶ್ರೀಶಂಕರಾಚಾರ್ಯರು. ತಮ್ಮ ವಿದ್ಯಾಬಲದ ಮಹಿಮೆಯಿಂದ ತಾವು ಅವತಾರಪುರುಷ ರೆಂಬುದನ್ನು ಪ್ರಮಾಣೀಕರಿಸಿದರು. ತಮ್ಮ ನಿಜಸ್ವರೂಪವನ್ನು ತಿಳಿಸಲಿಲ್ಲ. "ನಾನೊಬ್ಬನೇ ಅವತಾರಪುರುಷನಲ್ಲ, ಯಾವ ಜಾತಿಭೇದವೂ ಲಿಂಗಭೇದವೂ ಇಲ್ಲದೆ ನೀವೆಲ್ಲರೂ ಪರಮಾತ್ಮನ ಅವತಾರವೇ ಆಗಿದ್ದೀರಿ" ಎಂದು ತಿಳಿಸಿಕೊಡುವುದು ಅವರ ಜೀವಿತದ ಪರಮಧ್ಯೇಯವಾಗಿತ್ತೆಂಬುದು ಆಚಾರ್ಯರ ಸರ್ವಾಧಿಕವಾದ ವೈಶಿಷ್ಟ್ಯವಾಗಿದೆ. ಆದ್ದರಿಂದ ಶ್ರೀಶಂಕರದಿಗ್ವಿಜಯದ ಕವಿಯು ಗ್ರಂಥದ ಅವತರಣಿಕೆಯಲ್ಲಿ ಆಚಾರ್ಯರು ಪರಮೇಶ್ವರನ ಅವತಾರವೆಂದು ಬರೆದಿದ್ದಾನೆ. ಸಮಾಪ್ತಿಯಲ್ಲಿಯೂ ಅವರು ಶ್ರೀಶಂಕರಸ್ವರೂಪದಿಂದಲೇ ಕೈಲಾಸಕ್ಕೆ ನಿರ್ಗಮಿಸಿದರೆಂದು ವರ್ಣಿಸಿದ್ದಾನೆ.

ಆಚಾರ್ಯರು ಬಾಲ್ಯದಲ್ಲಿಯೇ ಸಕಲವೇದಗಳನ್ನೂ ಕಲಿತರಲ್ಲದೆ ಎಲ್ಲ ಶಾಸ್ತ್ರಗಳಲ್ಲಿಯೂ ಪಾರಂಗತರಾದರೆಂದೂ ಅತ್ಯಂತಮೇಧಾವಿಯದ ಬಾಲಕನಾಗಿದ್ದರೆಂದೂ ಕವಿಯು ಹೇಳಿದ್ದಾನೆ. ಕೇರಳದ ರಾಜನು ತಾನು ಬರೆದ ಮೂರುನಾಟಕಗಳನ್ನು ಅವರೆದುರಿಗೆ ಓದಿಹೇಳಿದನು. ಕಾಲಾಂತರದಲ್ಲಿ ಅವು ಸುಟ್ಟುಹೋದವೆಂದೂ ಆಚಾರ್ಯರು ನೆನಪಿನ ಶಕ್ತಿಯಿಂದ ಅವನ್ನು ಬರೆಸಿದರೆಂದೂ ತಿಳಿದು ಬರುತ್ತದೆ. ಪದ್ಮಪಾದರು ಬರೆದಿದ್ದ ಪಂಚಪಾದಿಕೆಯೆಂಬ ಭಾಷ್ಯಟೀಕೆಯನ್ನೂಸಹ ಸ್ಮರಣಶಕ್ತಿಯಿಂದಲೇ ಯಥಾವತ್ತಾಗಿ ಪುನಃ ಹೇಳಿಬರೆಯಿಸಿದರೆಂದೂ ವರ್ಣನೆ ಇದೆ. ಇದರಿಂದ ಅವರು ಏಕಸಂಧಿ ಗ್ರಾಹಿಗಳಾಗಿದ್ದರೆಂದು ಗೊತ್ತಾಗುತ್ತದೆ.

ಅಷ್ಟವರ್ಷೇ ಚತುರ್ವೇದೀ ದ್ವಾದಶೇ ಸರ್ವಶಾಸ್ತ್ರವಿತ್ |
ಷೋಡಶೇ ಕೃತವಾನ್ ಭಾಷ್ಯಂ ದ್ವಾತ್ರಿಂಶೇ ಮುನಿರಭ್ಯಗಾತ್ ||

ಎಂಬ ಉಕ್ತಿಯು ಪ್ರಸಿದ್ಧವಾಗಿದೆ. ಇದೇನೂ ಅತಿಶಯೋಕ್ತಿಯಲ್ಲ. ಚಿಕ್ಕವಯಸ್ಸಿನಲ್ಲಿಯೇ ಅತಿಶಯವಾದ ಮೇಧಾಶಕ್ತಿ ಇರುವುದು ಅನ್ಯತ್ರ ಕಂಡು ಬಂದಿದೆ. ಫ್ರಾನ್ಸ್‌ದೇಶದ ರಾಜನ ಮಂತ್ರಿಯಾಗಿದ್ದ ಟರ್ಗೊ ಎಂಬವನು ಬಾಲ್ಯದಲ್ಲಿಯೇ ದೊಡ್ಡ ವಿದ್ವಾಂಸನಾಗಿದ್ದನು. ಜಾನ್ ಸ್ಟೂಅರ್ಟ್‌ಮಿಲ್ ಮೂರನೆಯ ವರ್ಷದಲ್ಲಿಯೇ ಗ್ರೀಕ್ ಮುಂತಾದ ಅನೇಕ ಭಾಷೆಗಳನ್ನು ಕಲಿತಿದ್ದನು. ಹೀನಿಕರ್ ಎಂಬ ಹುಡುಗನು ಇನ್ನೊಬ್ಬರಾಡಿದ ಯಾವ ಭಾಷೆಯ ಮಾತುಗಳನ್ನಾದರೂ ಯಥಾವತ್ತಾಗಿ ಪುನರುಚ್ಚರಿಸಬಲ್ಲವನಾಗಿದ್ದನು. ವಿಲಿಯಂ ಜೇಮ್ಸ್‌ಸಿದಿಸ್ ಎಂಬವನು ಹನ್ನೊಂದನೆಯ ವರ್ಷದಲ್ಲಿ ಹಾರ್ವರ್ಡ್ ವಿಶ್ವವಿದ್ಯಾಲಯದಲ್ಲಿ ಗಣಿತಶಾಸ್ತ್ರದ ಮೇಲೆ ಉಪನ್ಯಾಸಮಾಡಿದನು. ನಮ್ಮ ದೇಶದಲ್ಲಿಯೇ ರಾಮಾನುಜಂ ಎಂಬಾತನು ಗಣಿತಶಾಸ್ತ್ರದಲ್ಲಿರುವ ಕ್ಲಿಷ್ಟವಾದ

ಸಮಸ್ಯೆಗಳನ್ನು ಚಿಕ್ಕವಯಸ್ಸಿನಲ್ಲಿಯೇ ಬಿಡಿಸಬಲ್ಲವನಾಗಿದ್ದನೆಂಬುದು ಪ್ರಸಿದ್ಧವಾಗಿಯೇ ಇದೆ. ವಂಶಧರಸರಸ್ವತಿ ಎಂಬ ಬಂಗಾಳಿ ಬ್ರಾಹ್ಮಣನ ಮಗನು ಐದನೆಯ ವರ್ಷದಲ್ಲಿಯೇ ಹಿಂದಿ, ಬಂಗಾಳಿ, ಇಂಗ್ಲಿಷ್, ಸಂಸ್ಕೃತ - ಈ ೪ ಭಾಷೆಗಳಲ್ಲಿ ಚೆನ್ನಾಗಿ ಮಾತಾಡುತ್ತಿದ್ದನೆಂದೂ ಪಾಣಿನಿಯ ಅಷ್ಟಾಧ್ಯಾಯಿಯನ್ನು ಕಲಿಯುತ್ತಿದ್ದಾನೆಂದೂ'ಹಿತವಾದ' ಎಂಬ ಪತ್ರಿಕೆಯಲ್ಲಿ ಪ್ರಕಟವಾಗಿತ್ತು. ನೈಷಧಮಹಾಕಾವ್ಯವನ್ನು ರಚಿಸಿದ ಶ್ರೀಹರ್ಷನೆಂಬ ಕವಿಯು ಕಾಶ್ಮೀರದೇಶಕ್ಕೆ ಹೋಗಿ ಒಂದು ಕೊಳದ ಬಳಿ ಕುಳಿತಿದ್ದಾಗ, ನೀರಿಗಾಗಿ ಬಂದ ಇಬ್ಬರು ಹೆಂಗಸರಿಗೆ ಭಾರಿ ಜಗಳವೇ ಆಯಿತು. ಶ್ರೀಹರ್ಷನು ರಾಜನೆದುರಿಗೆ ಸಾಕ್ಷ್ಯವನ್ನು ಹೇಳಬೇಕಾಗಿ ಬಂದಿತು. ಅವನಿಗೆ ಕಾಶ್ಮಿರೀಭಾಷೆ ಗೊತ್ತಿರಲಿಲ್ಲ. ಆದರೂ ಆ ಹೆಂಗಸರಲ್ಲಿ ಯಾರು ಯಾರು ಏನೇನು ಹೇಳಿದರೆಂಬುದನ್ನು ಯಥಾವತ್ತಾಗಿ ಉಚ್ಚರಿಸಿ ರಾಜನನ್ನು ಆಶ್ಚರ್ಯಪಡಿಸಿದನೆಂದು ಕಥೆ ಇದೆ. ಇಂತಹ ಎಷ್ಟೋ ಅದ್ಭುತಗಳು ಈಗಲೂ ಕಂಡು ಬರುತ್ತವೆ. ಸಾಮಾನ್ಯಜನರಲ್ಲಿಯೋ ಇಂತಹ ಅಪೂರ್ವಬುದ್ಧಿಶಕ್ತಿಯು ಕಂಡುಬಂದಿರುವಾಗ ತಪೋಯೋಗಾದಿಗಳ ನಿಧಿಗಳೇ ಆದ ಆಚಾರ್ಯರಲ್ಲಿ ಸರ್ವಾತಿಶಾಯಿಯಾದ ಮೇಧಾಶಕ್ತಿಯು ಕಂಗೊಳಿಸಿತೆಂಬುದು ಅಚ್ಚರಿಯಲ್ಲ.

ಶ್ರೀಶಂಕರರು ಬಾಲ್ಯದಿಂದಲೂ ವಿರಕ್ತಸ್ವಭಾವದವರಾಗಿದ್ದರು. ಕೇರಳದ ರಾಜನು ಪಾರಿತೋಷಿಕವಾಗಿ ಕಳಿಸಿದ ಸುವರ್ಣನಾಣ್ಯಗಳನ್ನೂ ಅವರು ತಿರಸ್ಕರಿಸಿದರು. ಪಿತ್ರಾರ್ಜಿತವಾದ ಆಸ್ತಿ ಯಥೇಷ್ಟವಾಗಿತ್ತು. ಅವರ ತಂದೆ ಶಿವಗುರುವಿನ ವಿವಾಹ ಸಮಯದಲ್ಲಿಯೇ ಇದು ಸ್ಪಷ್ಟವಾಗಿದೆ. ಅಷ್ಟು ಚಿಕ್ಕವಯಸ್ಸಿನಲ್ಲಿಯೇ ಯಾರ ಪ್ರೇರಣೆಯೂ ಇಲ್ಲದಿದ್ದರೂ ತಾವಾಗಿ ಸಂನ್ಯಾಸವನ್ನು ಸ್ವೀಕರಿಸಿ, ಹಡೆದ ತಾಯಿಯನ್ನೂ ಬಿಟ್ಟು, ದೇಶಾಂತರಕ್ಕೆ ಹೊರಟುಹೋದರು. ಇಂತಹ ಪರಮವೈರಾಗ್ಯವು ಶುಕಮಹರ್ಷಿಗಳಿಗೆ ಮಾತ್ರ ಉಂಟಾಗಿತ್ತೆಂದು ಪುರಾಣಕಥೆ ಇದೆ.

ಶ್ರೀಶಂಕರರು ಗೋವಿಂದಭಗವತ್ಪಾದರ ಬಳಿಗೆ ಹೋದದ್ದು ವಿಧಿವತ್ತಾಗಿ ಕ್ರಮಸಂನ್ಯಾಸವನ್ನು ಸ್ವೀಕರಿಸುವುದಕ್ಕಾಗಿ. ಅವರು ಗೋವಿಂದ ಭಗವತ್ಪಾದರ ಪಾದಗಳಿಗೆ ಪೂಜೆಮಾಡಿದರೆಂದೂ ಗುರುಗಳು ಶ್ರೀಶಂಕರರನ್ನು ಶಿಷ್ಯನನ್ನಾಗಿ ಸ್ವೀಕರಿಸಿ ಉಪನಿಷತ್ತಿನ ನಾಲ್ಕುಮಹಾವಾಕ್ಯಗಳನ್ನು ಉಪದೇಶಿಸಿದರೆಂದೂ ಈ ಮಾಧವೀಯದಲ್ಲಿ ಬರೆದಿದೆ. ಕ್ರಮಸಂನ್ಯಾಸದ ವಿಷಯವನ್ನು ಹೇಳದಿದ್ದರೂ ಪಾದಪೂಜೆಯೇ ಕ್ರಮಸಂನ್ಯಾಸಕ್ಕೆ ಉಪಲಕ್ಷಣವೆಂದು ತಿಳಿಯಬೇಕು. ಆದ್ದರಿಂದಲೇ ಚಿದ್ವಿಲಾಸೀಯದಲ್ಲಿ 'ಕ್ರಮ ಸಂನ್ಯಾಸೋಪಲಬ್ಧಯೇ, ದತ್ತ್ವಾ ಚ ಕ್ರಮಸಂನ್ಯಾಸಂ' ಎಂದು ಸ್ಪಷ್ಟವಾಗಿ ಬರೆದಿದೆ. ಸಂನ್ಯಾಸಿಗಳಲ್ಲಿ ಕುಟೀಚಕ, ಬಹೂದಕ, ಹಂಸ, ಪರಮಹಂಸ - ಎಂಬ ನಾಲ್ಕು ಭೇದಗಳಿವೆಯೆಂದು ಧರ್ಮಶಾಸ್ತ್ರಗಳು ಹೇಳುತ್ತವೆ. ಇವುಗಳಲ್ಲಿ ಪರಮಹಂಸ ಪಾರಿವ್ರಾಜ್ಯವನ್ನೇ ಗೋವಿಂದಭಗವತ್ಪಾದರು ಶ್ರೀಶಂಕರಾಚಾರ್ಯರಿಗೆ ಕೊಟ್ಟರೆಂದು

ನಿಶ್ಚಯಿಸಬಹುದು. ಏಕೆಂದರೆ, ಛಾಂದೋಗ್ಯೋಪನಿಷದ್ ಭಾಷ್ಯದಲ್ಲಿ ಆಚಾರ್ಯರು ಬ್ರಹ್ಮಸಂಸ್ಥಶಬ್ದಕ್ಕೆ ಅತ್ಯಾಶ್ರಮಿಯಾದ ಪರಮಹಂಸ ಪರಿವ್ರಾಜಕನೆಂದು ಅರ್ಥವನ್ನು ಬರೆದು"ಇದಮೇವೈಕಂ ವೇದೋಕ್ತಂ ಪಾರಿವ್ರಾಜ್ಯಮ್ = ಇದೊಂದೇ ವೇದೋಕ್ತವಾದ ಪಾರಿವ್ರಾಜ್ಯ" ಎಂದು ತಿಳಿಸಿದ್ದಾರೆ (ಛಾಂ. ಭಾ. ೨-೨೩-೧). ಆದ್ದರಿಂದಲೇ ಶ್ರೀಶಂಕರಾಚಾರ್ಯರು ಬರೆದ ಎಲ್ಲ ಕೃತಿಗಳ ಸಮಾಪ್ತಿಯಲ್ಲಿ ಬರುವ ಪುಷ್ಪಿಕೆಯಲ್ಲಿ 'ಪರಮಹಂಸಪರಿವ್ರಾಜಕಾಚಾರ್ಯ'ಎಂಬ ವಿಶೇಷಣವು ತಪ್ಪದೆ ಬರುತ್ತದೆ.

ಆಚಾರ್ಯರು ಸೂತ್ರಭಾಷ್ಯವನ್ನು ರಚಿಸಿದಾಗ ಪೂರ್ವಮೀಮಾಂಸಕರಾದ ಕುಮಾರಿಲ ಭಟ್ಟರು ವಿಖ್ಯಾತವಿದ್ವಾಂಸರಾಗಿದ್ದರು. ವೈದಿಕಮತವನ್ನು ನಿಂದಿಸುತ್ತಿದ್ದ ಬೌದ್ಧಪಂಡಿತರನ್ನು ಜಯಿಸಬೇಕೆಂಬುದು ಭಟ್ಟಪಾದರ ಸಂಕಲ್ಪವಾಗಿತ್ತು. ಬೌದ್ಧಮತವನ್ನು ಮೊದಲು ಸರಿಯಾಗಿ ತಿಳಿದು ಕೊಂಡಿರಬೇಕೆಂದು ಅವರು ಒಬ್ಬ ಬೌದ್ಧಪಂಡಿತನನ್ನು ಆಶ್ರಯಿಸಿದರು. ಅನಂತರ ಬೌದ್ಧಮತರಹಸ್ಯಗಳನ್ನರಿತುಕೊಂಡು ಬಂದು, ತಮ್ಮ ನಿಶಿತಯುಕ್ತಿಗಳಿಂದ ಆ ಮತವನ್ನು ಖಂಡಿಸತೊಡಗಿದರು. ಆ ಕಾರ್ಯದಲ್ಲಿಯಶಸ್ವಿಗಳೂ ಆದರು. ವೇದರಕ್ಷಣೆಯ ಪವಿತ್ರೋದ್ದೇಶದಿಂದ ಬೌದ್ಧಮತವನ್ನು ದೂಷಿಸಿದರು. ಅದರಿಂದ ಗುರುದ್ರೋಹವಾಯಿತೆಂದು ಅತ್ಯಂತ ಕರ್ಮಠರಾದ ಭಟ್ಟಪಾದರಿಗೆ ಪಶ್ಚಾತ್ತಾಪವಾಯಿತು. ಕೆಲವು ಕಾಲ ತಮಗೆ ಗುರುವಾಗಿದ್ದ ಬೌದ್ಧಪಂಡಿತನ ಸಿದ್ಧಾಂತವನ್ನು ಖಂಡಿಸಿದ್ದು ಗುರುದ್ರೋಹವೆಂದು ಬಗೆದು ಪ್ರಾಯಶ್ಚಿತ್ತಾರ್ಥವಾಗಿ ತುಷಾಗ್ನಿಯ ಮಧ್ಯದಲ್ಲಿ ಕುಳಿತು ದೇಹತ್ಯಾಗಮಾಡಿದರು. ಅವರ ಧರ್ಮನಿಷ್ಠೆ ಎಷ್ಟು ಉಚ್ಚಕೋಟಿಯದೆಂದು ಇದರಿಂದ ಗೊತ್ತಾಗುತ್ತದೆ. ಅವರು ಸುಧನ್ವರಾಜನ ಆಸ್ಥಾನದಲ್ಲಿದ್ದ ಬೌದ್ಧರನ್ನು ವಾದದಲ್ಲಿ ಪರಾಜಯಗೊಳಿಸಿದಮೇಲೆ, ಆ ರಾಜನು ಆಸ್ಥಾನದಲ್ಲಿದ್ದ ಬೌದ್ಧರನ್ನು ಕೊಲ್ಲಿಸಿದನೆಂದು ಈ ಗ್ರಂಥದ ಒಂದನೆಯ ಸರ್ಗದಲ್ಲಿ ಹೇಳಿದೆ. ಕುಮಾರಿಲಭಟ್ಟರಂತೂ ರಾಜನನ್ನು ಪ್ರೇರಿಸಿದವರಲ್ಲ. ವಸ್ತುತಃ ಸುಧನ್ವರಾಜನು ಬೌದ್ಧರನ್ನು ಕೊಲ್ಲಿಸಿದನೆಂಬುದು ಕಾವ್ಯಶೈಲಿಯಲ್ಲಿ ಬರುವ ಅತ್ಯುಕ್ತಿಯೇ ಹೊರತು ಸತ್ಯಸಂಗತಿಯಲ್ಲ. ಅದಕ್ಕೆ ಇತಿಹಾಸದಲ್ಲಿ ಯಾವ ಆಧಾರವೂ ಇಲ್ಲ. ತನ್ನ ಆಸ್ಥಾನದಿಂದ ರಾಜನು ಬೌದ್ಧರನ್ನು ಉಚ್ಚಾಟಿಸಿದನು - ಎಂಬುದಿಷ್ಟೇ ಇಲ್ಲಿ ಗ್ರಾಹ್ಯವಾದ ಅಂಶ. ಸುಧನ್ವನು ಯಾವ ರಾಜ್ಯವನ್ನಾಳುತ್ತಿದ್ದನೆಂಬುದೂ ತಿಳಿಯದು. ಇತಿಹಾಸದಲ್ಲಿ ಎಲ್ಲಿಯೂ ಅವನ ಹೆಸರಿನ ಉಲ್ಲೇಖವಿಲ್ಲ. ಗುರುದ್ರೋಹವಾಯಿತೆಂದು ಆತ್ಮಾರ್ಪಣವನ್ನೇಮಾಡಿಕೊಂಡ ಭಟ್ಟಪಾದರ ಕಣ್ಣೆದುರಿಗೆ ಅಂತಹ ಹಿಂಸಾಕೃತ್ಯವು ನಡೆಯಿತೆಂಬುದು ಒಪ್ಪತಕ್ಕಮಾತೇ ಅಲ್ಲ. ಭರತಖಂಡದಲ್ಲಿ ಜೈನ, ಬೌದ್ಧ, ಪಾಶುಪತಾದಿ ನಾನಾಮತಗಳೂ ದರ್ಶನಗಳೂ ಹುಟ್ಟಿಬೆಳೆದಿವೆ. ವಿರೋಧವೇನಿದ್ದರೂ ವಿದ್ವದ್‌ಗೋಷ್ಠಿಗಳಲ್ಲಿ, ಪಂಡಿತರು ನಡೆಸುತ್ತಿದ್ದ ಖಂಡನ ಮಂಡನಗಳಿಗೆ ಸೀಮಿತವಾಗಿತ್ತು. ಹಿಂದೂಧರ್ಮವು ಸಕಲ ಮತಧರ್ಮಗಳೊಡನೆ

ಸಹಬಾಳ್ವೆನಡೆಸುತ್ತಬಂದಿದೆ. ಈ ದೇಶದಲ್ಲಿ ಮತನಿಮಿತ್ತವಾಗಿ ಹಿಂಸಾಚಾರಗಳು ನಡೆದವೆಂಬುದಕ್ಕೆ ಇತಿಹಾಸದಲ್ಲಿಯಾವ ದಾಖಲೆಯೂ ಇಲ್ಲ. ವೈದಿಕ ಮತವಂತೂ ಯಾವಾಗಲೂ ಆಕ್ರಮಣಕಾರಿಯಾಗಿರಲಿಲ್ಲ. ಮತಾಂತರೀಕರಣವಂತೂ ಇದಕ್ಕೆ ತಿಳಿಯದ ಸಂಗತಿ. ಬೌದ್ಧಮತವು ಈ ರಾಷ್ಟ್ರದಲ್ಲಿ ಕ್ಷೀಣಿಸಿದ್ದಕ್ಕೆ ಅನೇಕಕಾರಣಗಳಿವೆ. ಮೊದಲನೆಯದಾಗಿ ಅದರ ನೈರಾತ್ಮ್ಯವಾದವು ಭಾರತೀಯರಿಗೆ ಹಿಡಿಸಲಿಲ್ಲ. ಜೈನಪಂಡಿತರೇ ಬೌದ್ಧಮತವನ್ನು ವಿಶೇಷವಾಗಿ ದೂಷಿಸಿದ್ದಾರೆ. ಸಾವಿರಾರು ಭಿಕ್ಷುಗಳು ವಿಹಾರಗಳಲ್ಲಿ ಸೇರಿಕೊಂಡು ಭಿಕ್ಷಾವೃತ್ತಿಗೆ ಇಳಿದದ್ದು ಸಮಾಜಕ್ಕೆ ಹೊರೆಯಾಯಿತು. ಅವರಲ್ಲಿ ದುಷ್ಕರ್ಮಗಳೂ ಅನೈತಿಕವ್ಯವಹಾರಗಳೂ ಪ್ರವೇಶಿಸಿದವು. ಗೃಹಸ್ಥರಿಗೂ ಬೌದ್ಧಮತಕ್ಕೂ ಹೊಂದಾಣಿಕೆಯೇ ಇಲ್ಲವಾಗಿ, ಬೌದ್ಧರೆಲ್ಲರೂ ಭಿಕ್ಷುಗಳಾಗಬೇಕೆಂಬ ಗ್ರಹಿಕೆ ಬಂದು ಬಿಟ್ಟಿತು. ಮಹಮ್ಮದ್ ಬಾಖಿ ಎಂಬ ಮುಸ್ಲಿಂದಂಡನಾಯಕನು ಬೌದ್ಧಮತದ ಕೇಂದ್ರಗಳಾಗಿದ್ದ ನಲಂದಾ, ವಿಕ್ರಮಶಿಲಾ ವಿಶ್ವವಿದ್ಯಾಲಯಗಳನ್ನು ಧ್ವಂಸಮಾಡಿ ಬೌದ್ಧ ಭಿಕ್ಷುಗಳನ್ನು ಓಡಿಸಿದನು. ದಕ್ಷಿಣದಲ್ಲಿ ಪೋರ್ಚ್‌ಗೀಸರು ಕನ್ಹೇರಿಸಂಘಾರಾಮದಲ್ಲಿದ್ದ ಬೌದ್ಧರನ್ನೆಲ್ಲ ಬಲವಂತವಾಗಿ ಕ್ರೈಸ್ತಮತಕ್ಕೆ ಸೇರಿಸಿಕೊಂಡರು. ಅಹಿಂಸೆಯನ್ನು ಬೋಧಿಸುತ್ತಿದ್ದ ಬೌದ್ಧರು ಮಾಂಸಾಹಾರಿಗಳಾಗಿದ್ದರು ಈ ಐತಿಹಾಸಿಕ ಸತ್ಯವನ್ನು ಮರೆಮಾಚಿ, ನಿಷ್ಕಾರಣವಾಗಿ ಆಚಾರ್ಯರನ್ನು ದೂರುವುದು ಅಕ್ಷಮ್ಯವಾದ ಅಪರಾಧ.

### ಶೃಂಗೇರಿಯಲ್ಲಿ ಶಾರದಾ ಪ್ರತಿಷ್ಠೆ

ಆಚಾರ್ಯರು ಶೃಂಗೇರಿಯಲ್ಲಿ ಭವ್ಯವಾದ ದೇವಾಲಯವನ್ನು ನಿರ್ಮಿಸಿ, ಅದರಲ್ಲಿ ಶ್ರೀಶಾರದಾಪ್ರತಿಷ್ಠೆಯನ್ನು ಮಾಡಿದರೆಂದು ಈ ಗ್ರಂಥದ ಹನ್ನೆರಡನೆಯ ಸರ್ಗದಲ್ಲಿ ಬಂದಿದೆ. ಅವರ ಅಮೃತಹಸ್ತದಿಂದಲೇ ಈ ಪ್ರತಿಷ್ಠಾಕಾರ್ಯವು ನಡೆದದ್ದರಿಂದ ಶ್ರೀಶೃಂಗೇರಿಶಾರದಾ ಪೀಠವು ಇಂದಿಗೂ ಉಜ್ಜ್ವಲವಾಗಿ ಪ್ರಕಾಶಿಸುತ್ತಲೇ ಇದೆ. ಇಲ್ಲಿರುವ ನದಿಯ ಹೆಸರು ತುಂಗಭದ್ರಾ ಎಂದು ಕವಿಯು ಬರೆದಿದ್ದಾನೆ. 'ವಿದ್ಯೋತತೇ ಯತ್ರ ಚ ತುಂಗಭದ್ರಾ' (೧೨-೬೪) ತುಂಗಾನದಿಗೆ ಈ ಹೆಸರು ಹಿಂದೆ ಇದ್ದಿರಬೇಕೆಂದು ಈ ಶ್ಲೋಕದ ಅಡಿಟಿಪ್ಪಣಿಯಲ್ಲಿ ಬರೆದಿದ್ದೇನೆ. ಇದಕ್ಕೆ ಇನ್ನೂ ಕೆಲವು ಪ್ರಮಾಣಗಳು ದೊರೆಯುತ್ತವೆ—

೧. ಆನಂದಗಿರಿಯ ಶಂಕರವಿಜಯದಲ್ಲಿ "ಶೃಂಗಗಿರಿಸಮೀಪೇ ತುಂಗಭದ್ರಾತೀರೇ" ಶಾರದಾ ಪ್ರತಿಷ್ಠೆಯೂ ಶ್ರೀಮಠಸ್ಥಾಪನೆಯೂ ಆಚಾರ್ಯರಿಂದ ನಡೆದವು - ಎಂದು ಉಕ್ತವಾಗಿದೆ (೨೩-೨೪ ನೆಯ ಅಧ್ಯಾಯ)

೨. ಚಿದ್ವಿಲಾಸೀಯದಲ್ಲಿಯೂ ಈ ನದಿಯನ್ನು ತುಂಗಭದ್ರಾ ಎಂದೇ ಕರೆದಿದ್ದಾರೆ (೨೧ ನೆಯ ಅಧ್ಯಾಯ)

ಶೃಂಗೇರಿ ಮಠಾಮ್ನಾಯದಲ್ಲಿ -

ವರಾಹೋ ದೇವತಾ ತತ್ರ ರಾಮಕ್ಷೇತ್ರಮುದಾಹೃತಮ್ |
ತೀರ್ಥಂ ಚ ತುಂಗಭದ್ರಾಖ್ಯಂ ಶಕ್ತಿ: ಶ್ರೀಶಾರದೇತಿ ಚ || ಎಂದಿದೆ.

ಈ ಮಾಧವೀಯ ಶಂಕರದಿಗ್ವಿಜಯವು ರಾಮಾಯಣ ಮಹಾಭಾರತಗಳಂತೆ ಇತಿಹಾಸ ಮೂಲಕವಾದ ಒಂದು ಮಹಾಕಾವ್ಯ. ರಾವಣನಿಗೆ ಹತ್ತು ತಲೆಗಳಿದ್ದವೆ, ಕಪಿಗಳು ಮನುಷ್ಯರಂತೆ ಮಾತಾಡುತ್ತವೆಯೆ, ಶ್ರೀರಾಮನು ಹನುಮಂತನೊಡನೆ ಯಾವ ಭಾಷೆಯಲ್ಲಿಮಾತಾಡಿದ ? -ಎಂದು ವಿಮರ್ಶಿಸುವುದು ಹೇಗೋ ಹಾಗೆ ಈ ಗ್ರಂಥದಲ್ಲಿ ವರ್ಣಿತವಾದ ಒಂದೊಂದು ಅಂಶವನ್ನು ಇತಿಹಾಸದ ಒರೆಗೆ ಹಚ್ಚುವುದು ಅಯುಕ್ತವೇ ಸರಿ. ಆಚಾರ್ಯರಿಂದ ಪರಾಜಿತರಾದ ನೀಲಕಂಠಾಚಾರ್ಯ, ಭಟ್ಟಭಾಸ್ಕರ, ಅಭಿನವಗುಪ್ತ-ಮೊದಲಾದವರು ಆಯಾ ಸಿದ್ಧಾಂತಗಳ ಪ್ರತಿನಿಧಿಗಳು. ಆ ಹೆಸರುಗಳು ಕವಿಕಲ್ಪಿತ ಸಾಂಕೇತಿಕನಾಮಗಳಾಗಿರಬಹುದು. ಅಥವಾ ಅವರು ಅದೇ ಹೆಸರಿನ ಬೇರೆ ಬೇರೆ ವ್ಯಕ್ತಿಗಳಾಗಿರಬಹುದು. ಬಾಣ, ದಂಡಿ- ಇವರು ಕವಿಗಳೆಂದು ಪ್ರಸಿದ್ಧರಾದರೂ ಬಾಣನು ಶೈವಮತವನ್ನೋ ದಂಡಿಯು ಸಾರಸ್ವತಮತವನ್ನೋ ಪ್ರತಿನಿಧಿಸುತ್ತಾರೆಂದು ಸಮನ್ವಯಿಸಿ ಕೊಳ್ಳಬಹುದು. ಆಚಾರ್ಯರು ಆಕಾಶಮಾರ್ಗದಲ್ಲಿ ಪ್ರಯಾಣ ಮಾಡಿದರೆಂಬ ವರ್ಣನೆಯು ಭಗವತ್ಪಾದರ ತಪೋಮಹಿಮೆಯನ್ನೂ ಪ್ರಯಾಣದ ಶೀಘ್ರತೆಯನ್ನೂ ಅಭಿವ್ಯಂಜಿಸುವ ಕಾವ್ಯಮಾರ್ಗವೆಂದು ತಿಳಿಯಬಹುದು. ಪರಕಾಯಪ್ರವೇಶದಂತೆ ಆಕಾಶಯಾನವೂ ಯೋಗಶಾಸ್ತ್ರಸಿದ್ಧವಾಗಿದೆ. ಪಾತಂಜಲಯೋಗಶಾಸ್ತ್ರದ ವಿಭೂತಿಪಾದದಲ್ಲಿರುವ ಈ ಸೂತ್ರಗಳನ್ನು ಪರಿಶೀಲಿಸಬಹುದು.

೧. ಬಂಧಕಾರಣಶೈಥಿಲ್ಯಾತ್ ಪ್ರಚಾರಸಂವೇದನಾಚ್ಚ ಚಿತ್ತಸ್ಯ ಪರಶರೀರಾವೇಶಃ |(ಸೂ. ೩೮)

೨. ಕಾಯಾಕಾಶಯೋಃ ಸಂಬಂಧಸಂಯಮಾಲ್ಲಘುತೂಲಸಮಾಪತ್ತೇಶ್ಚಾಕಾಶ ಗಮನಮ್ |(ಸೂ. ೪೨)

ಪ್ರತಿಯೊಂದು ವಿಷಯವನ್ನೂ ಹಿಸುಕಿಹಿಸುಕಿ ಪರೀಕ್ಷಿಸುವುದು ನ್ಯಾಯಾಲಯದಲ್ಲಿ ಹಾಜರು ಪಡಿಸಿದ ದಾಖಲೆಪತ್ರದಲ್ಲಿ, ಕಾವ್ಯದಲ್ಲಲ್ಲ. ಒಬ್ಬ ಯತಿಯು ತನ್ನ ಚಿಕ್ಕವಯಸ್ಸಿನಲ್ಲಿಯೇ-ಜೀವಿತದ ಅಲ್ಪಕಾಲದಲ್ಲಿಯೇ ವೈದಿಕಧರ್ಮರಕ್ಷಣೆಗಾಗಿ ಅಭೂತಪೂರ್ವವಾದ ಎಂತಹ ಬೃಹತ್ಕಾರ್ಯವನ್ನೆಸಗಿದನೆಂಬುದನ್ನು ತೋರಿಸಿಕೊಡುವುದೇ ಕವಿಯ ಮುಖ್ಯಧ್ಯೇಯವೂ ಈ ಕಾವ್ಯದ ಮಹಾತಾತ್ಪರ್ಯವೂ ಆಗಿದೆ.

ಆಚಾರ್ಯರು ಕಾಶ್ಮೀರದೇಶಕ್ಕೆ ಹೋಗಿ ಸರ್ವಜ್ಞಪೀಠವನ್ನು ಆರೋಹಣಮಾಡಿರುವುದು ಸರ್ವಶಾಸ್ತ್ರಗಳಲ್ಲಿಯೂ ಅವರಿಗೆ ಅಜೇಯವಾದ ಪಾಂಡಿತ್ಯವಿತ್ತೆಂಬುದಕ್ಕೆ ನಿದರ್ಶನ. ಅವರ

ಸರ್ವಜ್ಞಪೀಠಾರೋಹಣವು ದಾಕ್ಷಿಣಾತ್ಯರಿಗೆ ಬಂದಿದ್ದ ಅಪಕೀರ್ತಿಯನ್ನು ತೊಡೆದುಹಾಕುವುದಕ್ಕಾಗಿ ಎಂದು ಮಾಧವಕವಿಯು ಹೇಳಿದ್ದಾನೆ. ಶ್ರೀಶಂಕರಾಚಾರ್ಯರು ಕಾಶ್ಮೀರದಲ್ಲಿ ಸರ್ವತೋಮುಖವಾದ ವಿಜಯವನ್ನು ಸಂಪಾದಿಸಿದರೆಂಬುದಕ್ಕೆ ಶ್ರೀನಗರದಲ್ಲಿ ಸಾವಿರ ಅಡಿಗಳ ಎತ್ತರದ ಬೆಟ್ಟದ ಮೇಲೆ ಕಟ್ಟಿರುವ ಸುಂದರವಾದ ಈಶ್ವರ ದೇವಾಲಯವು ಇಂದಿಗೂ ಸಾಕ್ಷಿಯಾಗಿದೆ. ಕಾಶ್ಮೀರದಲ್ಲಿ ಹಿಂದೆ ದಿವಾನರಾಗಿದ್ದ ಶ್ರೀರಾಮಚಂದ್ರಕಾಕ್ ಅವರು ಆಧಾರಗಳನ್ನು ಪರಿಶೀಲಿಸಿ, ಆ ದೇವಸ್ಥಾನವು, ಕ್ರಿ.ಶ. ೭೦೦ ರ ಸುಮಾರಿನಲ್ಲಿ ನಿರ್ಮಿತವಾಗಿದೆಯೆಂದು ತೀರ್ಮಾನಿಸಿದ್ದಾರೆ. ದೇವಾಲಯವಿರುವ ಬೆಟ್ಟಕ್ಕೆ ಶಂಕರಗಿರಿ(shankara hill) ಎಂದು ಈಗಲೂ ಹೆಸರಿದೆ.

ಕಲಿಯುಗದಲ್ಲಿ ಪರಮೇಶ್ವರನು ಧರ್ಮಸ್ಥಾಪನೆಗಾಗಿ ಶಂಕರಾಚಾರ್ಯರೂಪದಿಂದ ಅವತರಿಸುವನೆಂದು ಈ ಗ್ರಂಥಗಳಲ್ಲಿದೆ - ಶಿವರಹಸ್ಯ, ಲಿಂಗಪುರಾಣ, ಕೂರ್ಮಪುರಾಣ, ವಾಯುಪುರಾಣ, ಭವಿಷ್ಯೋತ್ತರಪುರಾಣ ಮತ್ತು ಸೌರಪುರಾಣ.

## ಎರಡು ವಿಚಿತ್ರಪ್ರಸಂಗಗಳು

ಆಚಾರ್ಯರ ಜೀವನಚರಿತ್ರೆಯಲ್ಲಿ ಎರಡು ಪ್ರಸಂಗಗಳು ಹೆಚ್ಚು ವಿಚಾರಾರ್ಹವಾದವು. ಉಭಯಭಾರತಿಯೊಡನೆ ವಾದವು ಪ್ರಸಕ್ತವಾದಾಗ ಪರಕಾಯಪ್ರವೇಶ ಮತ್ತು ಮಾತೃಸಂಸ್ಕಾರನಿಮಿತ್ತವಾಗಿ ಕಾಲಟಿಯ ದ್ವಿಜರಿಗೆ ಶಾಪ - ಈ ಎರಡು ಸಂದರ್ಭಗಳನ್ನು ಆಳವಾಗಿ ಪರಿಶೀಲಿಸುವುದರಿಂದ ಪ್ರಯೋಜನ ಉಂಟು. ಈ ಸಂದರ್ಭಗಳಲ್ಲೇಳುವ ಶಂಕೆಗಳು ಹಲವು. ಇವುಗಳಿಗೆ ಸಮಾಧಾನವೇನೆಂಬುದರ ವಿವರಣೆ ಶ್ರೀಶಂಕರವಿಜಯಗ್ರಂಥದಲ್ಲಿ ಸಾಕಷ್ಟು ಬಂದಿಲ್ಲ.

### ೧. ಪರಕಾಯ ಪ್ರವೇಶ

ಮಂಡನಮಿಶ್ರನೊಡನೆ ವಾದಕ್ಕಿಳಿದಾಗ ಆತನ ಪತ್ನಿಯಾದ ಉಭಯಭಾರತಿಯು ಮಧ್ಯಸ್ಥಳಾದಳು. ತಾನು ವಾದದಲ್ಲಿ ಸೋತರೆ ಸಂನ್ಯಾಸವನ್ನು ಸ್ವೀಕರಿಸುತ್ತೇನೆಂದು ಮಂಡನಮಿಶ್ರನ ಪ್ರತಿಜ್ಞೆಯಾಗಿತ್ತು. ಪತಿಯು ಸಂನ್ಯಾಸವನ್ನು ಸ್ವೀಕರಿಸುವುದು ಗೃಹಿಣಿಗೆ ಸಂಕಟದ ಪ್ರಶ್ನೆ. ಪತಿಯು ಪರಾಜಿತನಾದದ್ದು ಸತ್ಯವೆಂಬುದು ಉಭಯಭಾರತಿಗೆ ನಿಃಸಂದೇಹವಾಗಿ ಮನವರಿಕೆಯಾಗಬೇಕಾಗಿದೆ. ಅವಳು ಮಹಾವಿದುಷಿಯಾದ್ದರಿಂದ ಆಕೆಯೇ ಮಧ್ಯಸ್ಥಳಾಗಿರಲೆಂಬ ಸಲಹೆಯನ್ನು ಸೂಕ್ಷ್ಮಜ್ಞರಾದ ಆಚಾರ್ಯರು ಒಪ್ಪಿದರು. ಮಂಡನನು ವಾದದಲ್ಲಿ ಪರಾಜಿತನಾದನು. ಅದರಲ್ಲಿ ಸಂದೇಹವೇನೂ ಪತ್ನಿಯಾದ ಭಾರತಿಗೆ ಬರಲಿಲ್ಲ. ವಾದದಲ್ಲಿ ಯಾವಾಗಲೂ ಪರಾಜಯವನ್ನೇ ಕಾಣದಿದ್ದ ವಿಖ್ಯಾತಕೀರ್ತಿಯಾದ ಮಂಡನಪಂಡಿತಾಗ್ರಣಿಯು ಒಬ್ಬ ಬಾಲಸಂನ್ಯಾಸಿಯೊಡನೆ ವಾದಮಾಡಿ ಸೋತು

ಹೋದನೆಂಬುದು ಧರ್ಮಪತ್ನಿಯಾದ ಉಭಯಭಾರತಿಗೆ ತುಂಬ ಚಿಂತೆಯನ್ನುಂಟು ಮಾಡಿರಬೇಕು. ಚಿಕ್ಕವಯಸ್ಸಿನ ಒಬ್ಬಸಂನ್ಯಾಸಿಯು ಎಲ್ಲಿಂದಲೋಬಂದು, ಪ್ರೌಢವಯಸ್ಕನೂ ಕರ್ಮಠನೂ ಆದ ತನ್ನಪತಿಗೆ ಸಂನ್ಯಾಸದೀಕ್ಷೆಯನ್ನಿತ್ತು ಮನೆಯಿಂದ ಕರೆದೊಯ್ಯುವನೆಂಬುದು ಆ ಗೃಹಿಣಿಗೆ ತಡೆಯಲಾರದ ಶೋಕವನ್ನುಂಟುಮಾಡಿತು. ಆದ್ದರಿಂದ ತಾನು ಪತಿಯ ಅರ್ಧಾಂಗಿಯೆಂಬ ನೆಪವನ್ನೊಡ್ಡಿ ಶ್ರೀಶಂಕರಾಚಾರ್ಯರೊಡನೆ ಅವಳು ವಾದಕ್ಕಿಳಿದಳು.

ಇತರಶಾಸ್ತ್ರಗಳಲ್ಲಿ ಆಚಾರ್ಯರು ಅಜೇಯರೆಂಬುದನ್ನರಿತು, ಕಡೆಯಲ್ಲಿ ಉಭಯಭಾರತಿಯು ಕಾಮಶಾಸ್ತ್ರಕ್ಕೆ ಸಂಬಂಧಿಸಿದ ಪ್ರಶ್ನೆಗಳನ್ನುಹಾಕಿ ಆಚಾರ್ಯರನ್ನು ಇಕ್ಕಟ್ಟಿಗೆ ಸಿಕ್ಕಿಸಿಬಿಟ್ಟಳು. ಆಚಾರ್ಯರು ಸರ್ವಜ್ಞರಾದ್ದರಿಂದ ಉತ್ತರವನ್ನು ಹೇಳಬಹುದಾಗಿತ್ತು. ಆದರೆ ಹೇಳುವಂತಿರಲಿಲ್ಲ. ಹೇಳಿದರೆ, 'ಈ ಸಂನ್ಯಾಸಿಯು ಕಾಮಶಾಸ್ತ್ರದಲ್ಲಿ ಪ್ರವೀಣನಾಗಿದ್ದಾನೆ!' ಎಂದು ಸಭಾಮಧ್ಯದಲ್ಲಿ ಅವಹೇಳನವಾಗುತ್ತಿತ್ತು. ಹೇಳದಿದ್ದರೆ ತಮಗೆ ಜಯವಾಯಿತೆಂದು ಸಿದ್ಧವಾಗುತ್ತಿರಲಿಲ್ಲ. ಈ ಇಕ್ಕಟ್ಟಿನಿಂದ ಪಾರಾಗಲು ಚಿಂತನೆಗೆ ಅವಕಾಶವಿರಲೆಂದು ಅವರು ಉತ್ತರಹೇಳಲು ಒಂದುತಿಂಗಳ ಗಡುವನ್ನು ಗೊತ್ತುಮಾಡಿಕೊಂಡು ಅಲ್ಲಿಂದ ನಿರ್ಗಮಿಸಿದರು.

ಇಲ್ಲೊಂದು ಶಂಕೆ ಹುಟ್ಟುತ್ತದೆ. ಪ್ರಕೃತವಾದ ವಿಷಯ ಬ್ರಹ್ಮಮೀಮಾಂಸೆ -ಕರ್ಮಮೀಮಾಂಸೆ. ಇದನ್ನುಬಿಟ್ಟು ಕಾಮಶಾಸ್ತ್ರದಲ್ಲಿ ಪ್ರಶ್ನೆಮಾಡುವುದರ ಔಚಿತ್ಯವೇನು? ಆ ಪ್ರಶ್ನೆಯನ್ನು ಉಭಯಭಾರತಿಯು ಎತ್ತಬಹುದೇ?ನಿಜ; ಮಧ್ಯಸ್ಥಳಾಗಿದ್ದ ಭಾರತಿಯೇ ಈ ಪ್ರಶ್ನೆಯನ್ನು ಹಾಕಿದಾಗ ಅದು ಅನುಚಿತವೆಂದು ಹೇಳತಕ್ಕವರು ಯಾರು!ಬಹುಶಃ ಸಂದರ್ಭ ಹೀಗಿರಬೇಕು - ಆಚಾರ್ಯರಿಗೂ ಮಂಡನಮಿಶ್ರನಿಗೂ ವಾದವು ಆರಂಭವಾಗುವಾಗ, ತಾವು ಯಾವುದನ್ನು ಪ್ರತಿಪಾದಿಸುತ್ತೇವೆಂಬುದನ್ನು ಉಭಯರೂ ಹೇಳಿಕೊಂಡಿದ್ದರು. ಆಗ ವಾದಕ್ಕೆ ಪ್ರತಿಜ್ಞಾತವಾದ ವಿಷಯವು ನಿಶ್ಚಿತವಾಗಿತ್ತು. ಉಭಯಭಾರತಿಯೊಡನೆ ವಾದವನ್ನಾರಂಭಿಸಿದಾಗ ಅಂತಹ ಪ್ರತಿಜ್ಞೆ ಯಾವುದೂ ನಡೆದಿರಲಿಲ್ಲ. ಯಾವ ಶಾಸ್ತ್ರದಲ್ಲಾದರೂ ಅವಳು ಪ್ರಶ್ನೆಯನ್ನು ಕೇಳಬಹುದಿತ್ತು. ಆಚಾರ್ಯರು ಉತ್ತರವನ್ನು ಹೇಳಬೇಕಾಗಿತ್ತು. ಆದ್ದರಿಂದ ಅವಳು ಕಾಮಶಾಸ್ತ್ರದಲ್ಲಿ ಪ್ರಶ್ನೆಯನ್ನೆತ್ತಿದಳು. ಇಲ್ಲದಿದ್ದರೆ ಆಚಾರ್ಯರೇ 'ಇದು ಅನುಚಿತವೂ ಅಪ್ರಕೃತವೂ ಆದ ಪ್ರಶ್ನೆ' ಎಂದು ತಿರಸ್ಕರಿಸಿಬಿಡುತ್ತಿದ್ದರು. ಇದೇ ಸಂಭವನೀಯವಾದ ಸಂಗತಿಯಾದ್ದರಿಂದ ಅನೌಚಿತ್ಯದ ಪ್ರಶ್ನೆ ಏಳುವುದಿಲ್ಲ.

ಮುಂದೆ ಶ್ರೀಶಂಕರರಿಗೆ ದಾರಿಯಾವುದು? ಮೃತನಾದ ಅಮರುಕರಾಜನನ್ನು ನೋಡಿದಾಗ, ಪರಕಾಯಪ್ರವೇಶದ ವಿಚಾರವು ಅವರಿಗೆ ಸ್ಫುರಿಸಿತು. ಆ ರಾಜನ ದೇಹದಲ್ಲಿ ನಡೆದ ಘಟನೆಗೆ ಉತ್ತರವು ಗ್ರಂಥದಲ್ಲಿಯೇ ಇದೆ. ಅನಂತರ ಆಚಾರ್ಯರು ಮಂಡನನ ಗೃಹಕ್ಕೆ ಹಿಂದಿರುಗಿ ಬಂದಾಗ ಭಾರತಿಯು ಯಾವ ಪ್ರಶ್ನೆಯನ್ನೂ ಮಾಡಲಿಲ್ಲ. ಆ ಮಹಾಯೋಗಿಯೊಡನೆ ಇನ್ನು

ವಾದಮಾಡುವುದು ಅಯುಕ್ತವೆಂದು ವಿವೇಕಿನಿಯೂ ವಿದುಷಿಯೂ ಆದ ಅವಳು ನಿರ್ಧರಿಸಿ ಸೋಲನ್ನೊಪ್ಪಿಕೊಂಡಳು.

೨. ಮಾತೃಸಂಸ್ಕಾರ -ಕಾಲಟಿಯ ಬ್ರಾಹ್ಮಣರಿಗೆ ಶಾಪ

ಶ್ರೀಶಂಕರಾಚಾರ್ಯರು ಸಂನ್ಯಾಸಿಗಳಾಗಿದ್ದರಿಂದ ಆರ್ಯಾಂಬೆಗೆ ಮರಣಸಂಸ್ಕಾರವನ್ನು ಮಾಡುವುದು ಸ್ಥೂಲದೃಷ್ಟಿಯಿಂದ ಅಶಾಸ್ತ್ರೀಯವೇ ಹೌದು. ಆದರೂ ಆ ಸಂಸ್ಕಾರವನ್ನು ಮಾಡಬೇಕಾದ ಪ್ರಸಂಗವೇಕೆ ಒದಗಿತು? ಮತ್ತು ಅಗ್ನಿಯನ್ನು ಕೊಡಲಿಲ್ಲವೆಂಬ ಕಾರಣದಿಂದ ಕಾಲಟಿಯಲ್ಲಿದ್ದ ಆ ಬ್ರಾಹ್ಮಣರಿಗೆ ವೇದಬಾಹ್ಯರಾಗಿರೆಂದೂ ಮನೆಯ ಬಳಿಯಲ್ಲಿಯೇ ಶ್ಮಶಾನವಾಗಲೆಂದೂ ಕ್ರೂರವಾದ ಶಾಪವನ್ನಿತ್ತರಲ್ಲ. ಇದು ಯುಕ್ತವೆನಿಸುತ್ತದೆಯೆ? ಅಗ್ನಿಯನ್ನಿತ್ತರೆ ಶಾಸ್ತ್ರವಿರುದ್ಧವಾದ ಕರ್ಮವನ್ನು ನಡೆಸಲು ಅನುಮೋದಿಸಿದಂತೆಯೂ ಪ್ರೋತ್ಸಾಹಿಸಿದಂತೆಯೂ ಆಗುತ್ತದೆಯೆಂದೂ ಅದು ಪಾಪಕೃತ್ಯವೇ ಸರಿಯೆಂದೂ ಕರ್ಮಠರಾದ ಆ ಬ್ರಾಹ್ಮಣರು ಭಾವಿಸಿದ್ದರೆ ಆಶ್ಚರ್ಯವಿಲ್ಲ. ಆಚಾರ್ಯರಾದರೋ ಪರಮವಿರಕ್ತರೂ ಶಾಂತಮೂರ್ತಿಗಳೂ ಆಗಿದ್ದರು. ಉಗ್ರಭೈರವನು ಅವರ ಶಿರಸ್ಸನ್ನು ಯಾಚಿಸಿದಾಗ, ಸ್ವಲ್ಪವೂ ಉದ್ವಿಗ್ನರಾಗದೆ ದೇಹಾಭಿಮಾನವನ್ನುತೊರೆದು ಪ್ರಾಣವನ್ನೇ ಅರ್ಪಿಸಲು ಸಿದ್ಧರಾಗಿದ್ದರು. ಭಗಂದರ ರೋಗವನ್ನುಂಟುಮಾಡಿದ ಮಾಂತ್ರಿಕನನ್ನೂ ಕ್ಷಮಿಸಿ, ಪ್ರತೀಕಾರಮಂತ್ರವನ್ನು ಜಪಿಸುವುದು ಬೇಡವೆಂದು ಪದ್ಮಪಾದರಿಗೆ ಹೇಳಿದ್ದರು. ರೋಗವನ್ನಾದರೂ ಸಹಿಸಿಕೊಂಡಿರುತ್ತೇನೆ, ದುಷ್ಕೃತ್ಯವನ್ನೆಸಗಿದ ಮಾಂತ್ರಿಕನಿಗೆ ಕೇಡಾಗುವುದು ಬೇಡವೆಂದ ಕ್ಷಮಾಮೂರ್ತಿಗಳು ಆಚಾರ್ಯರು. ಅವರು ಒಂದು ಕ್ಷುದ್ರನಿಮಿತ್ತದಿಂದ ಬ್ರಾಹ್ಮಣರಿಗೆ ಕ್ರೂರವಾದ ಆ ಶಾಪವನ್ನೀಯಬಹುದೆ? ಆ ವಿಪ್ರರನ್ನು ವೇದಬಾಹ್ಯರಾಗುವಂತೆ ಶಪಿಸುವುದಕ್ಕೆ ನಿಮಿತ್ತವೇನು? ವೇದಬಾಹ್ಯರಾಗಲು ಯಾವ ದುಷ್ಕರ್ಮವನ್ನು ಅವರು ಮಾಡಿದ್ದರು?

ಈ ಶಂಕೆಗಳಿಗೆ ಉತ್ತರಹೇಳುವಾಗ ನಾವು ಆಳವಾಗಿ ವಿಮರ್ಶಿಸಬೇಕಾಗುತ್ತದೆ. ಕವಿಯು ಇದನ್ನೆಲ್ಲ ವಿವರಿಸಲು ಯತ್ನಿಸಿಲ್ಲ. ಮನುಷ್ಯಸಮಾಜವು ರಜೋಗುಣಪ್ರಧಾನವಾದದ್ದು. ಲೋಭ, ಆಸೆ, ಆಕಾಂಕ್ಷೆಗಳು ಜನರಲ್ಲಿ ವಿಪುಲವಾಗಿರುತ್ತವೆ. ಲೌಕಿಕದೃಷ್ಟಿಯಿಂದ ವಿಚಾರಿಸಿದಾಗ ಆಚಾರ್ಯರು ಶಾಪವನ್ನಿತ್ತ ಪ್ರಸಂಗವನ್ನು ಊಹಿಸುವುದು ಕಠಿಣವೇನಲ್ಲ.

ಆರ್ಯಾಂಬೆಗೆ ಆಸ್ತಿ, ಸಂಪತ್ತುಗಳ ಕೊರತೆ ಏನೂ ಇರಲಿಲ್ಲ. ಇರುವ ಒಬ್ಬಮಗನು ಸಂನ್ಯಾಸದೀಕ್ಷೆಯನ್ನು ವಹಿಸಿ ಹೊರಟು ಹೋದರೆ ಸ್ತ್ರೀಯೂ ವೃದ್ಧೆಯೂ ಆದ ತನ್ನ ಗತಿಯೇನೆಂದು ಅವಳು ಶೋಕಾಕ್ರಾಂತಳಾಗಿದ್ದಳು. ಆಗ ಶ್ರೀಶಂಕರರು ತಾಯಿಗೆ ಹೇಳಿದ ಸಮಾಧಾನವೇನು?

"ಅಮ್ಮ, ನಾನು ಸಂನ್ಯಾಸದ ಸಂಕಲ್ಪವನ್ನು ಮಾಡಿಬಿಟ್ಟಿದ್ದೇನೆ. ಸಂನ್ಯಾಸಿಗೆ ಉಚಿತವಾದ ಕಾರ್ಯವೇನಿದ್ದರೂ ಅದನ್ನು ಹೇಳು, ನಿಶ್ಚಯವಾಗಿ ಮಾಡುತ್ತೇನೆ. ಹೇಗಿದ್ದರೂ ನಮ್ಮ ದಾಯಾದಿಗಳು ನನ್ನತಂದೆಯ ಆಸ್ತಿಯನ್ನು ತೆಗೆದು ಕೊಳ್ಳುವುದರಿಂದ ನಿನಗೆ ಯಥೇಷ್ಟವಾಗಿ ಅನ್ನಬಟ್ಟೆಗಳನ್ನು ಕೊಟ್ಟು ನಿನ್ನಯೋಗಕ್ಷೇಮಗಳನ್ನು ನೋಡಿಕೊಳ್ಳುತ್ತಾರೆ. ನಿನಗೆ ರೋಗರುಜಿನಗಳು ಬಂದರೂ ಸರಿಯಾಗಿ ಉಪಚರಿಸುವರು. ಇನ್ನು ಮರಣ ಪ್ರಸಂಗವು ಬಂದಾಗ ಶಾಸ್ತ್ರೋಕ್ತವಾಗಿ ನಿನಗೆ ಉತ್ತರಕ್ರಿಯೆಯನ್ನು ಮಾಡಿಯೇಮಾಡುತ್ತಾರೆ. ಏಕೆಂದರೆ, ನಿನ್ನ ಧನವನ್ನು ಅವರು ತೆಗೆದುಕೊಳ್ಳುತ್ತಾರೆ"(ಸರ್ಗ ೫ -ಶ್ಲೋಕ ೬೮-೬೯)

ಇಲ್ಲಿ ಸ್ಪಷ್ಟವಾಗಿ 'ದಾಯಾದಿಗಳು ನಿನಗೆ ಉತ್ತರಕ್ರಿಯೆಯನ್ನು ಮಾಡುವರು' ಎಂದು ನುಡಿದಿದ್ದಾರೆ. ಸಂನ್ಯಾಸಿಗಳಾದ ತಮಗೆ ಶವಸಂಸ್ಕಾರಮಾಡಲು ಅಧಿಕಾರವಿಲ್ಲ-ಎಂಬುದನ್ನು ಸೂಚಿಸಿದ್ದಾರೆ. ಆರ್ಯಾಂಬೆಯು ತನ್ನ ಮಗನಿಂದಲೇ ಉತ್ತರಕ್ರಿಯೆ ಯಾಗಬೇಕೆಂಬ ವ್ಯಾಮೋಹದಿಂದ "ಶಂಕರ, ನೀನೇ ಬಂದು ವಿಧಿವತ್ತಾಗಿ ನನಗೆ ಸಂಸ್ಕಾರವನ್ನು ಮಾಡು. ಇಲ್ಲದಿದ್ದರೆ ನಿನ್ನನ್ನು ಪಡೆದದ್ದಕ್ಕೆ ನನಗೇನು ಫಲವಾಯಿತು?"ಎಂದಳು. ಶ್ರೀಶಂಕರರು "ಆಗಲಿ. ಮೃತಾವಪಿ ಸಂಸ್ಕರಿಷ್ಯೇ" ಎಂದು ತಿಳಿಸಿದರು. ಆಮೇಲೆ ಬಂಧುಗಳನ್ನು ಕಂಡು 'ನನ್ನ ತಾಯಿಯನ್ನು ಸರಿಯಾಗಿ ನೋಡಿಕೊಳ್ಳಿ'ರೆಂದು ಕೈಮುಗಿದು ಪ್ರಾರ್ಥಿಸಿದರು. ಈ ಹಿನ್ನೆಲೆಯನ್ನಿಟ್ಟುಕೊಂಡಾಗ ನಡೆದ ಸಂದರ್ಭಗಳು ಏನಿರಬಹುದೆಂದು ಊಹಿಸಬಹುದು.

ಆಚಾರ್ಯರು ನಿರ್ಗಮಿಸಿದಮೇಲೆ ಆರಂಭದಲ್ಲಿ ಕೆಲವುದಿನ ಆ ದಾಯಾದಿಬಂಧುಗಳು ಆರ್ಯಾಂಬೆಯ ಯೋಗಕ್ಷೇಮಗಳನ್ನು ನೊಡಿಕೊಳ್ಳುತ್ತಿದ್ದರು. ಕ್ರಮವಾಗಿ ಅವರಲ್ಲಿ ಕಲಿಪುರುಷನ ಪ್ರವೇಶವಾಯಿತು."ಈ ಮನೆಯಲ್ಲಿ ಗಟ್ಟಿಯಾಗಿ ನಮ್ಮನ್ನು ಕೇಳತಕ್ಕವರು ಯಾರೂ ಇಲ್ಲ. ಈ ವೃದ್ಧೆ ಕೆಲವುದಿನಗಳಲ್ಲಿ ಗತಿಸುತ್ತಾಳೆ. ಆ ಹುಡುಗನು ಸಂನ್ಯಾಸಿಯಾಗಿ ದೇಶಾಂತರಕ್ಕೆ ಹೊರಟುಹೋದ. ಈ ಮನೆ ಆಸ್ತಿ ಸಂಪತ್ತು- ಎಲ್ಲವೂ ನಮಗೆ ಸೇರಿದಂತೆಯೇ. ಈ ಮುದುಕಿಗೆ ಎಷ್ಟು ಉಪಚಾರಮಾಡುವುದು?" ಎಂಬ ಅಸಡ್ಡೆ ಮೂಡಿತು. ರಜೋಗುಣವು ಪ್ರಬಲವಾಯಿತು. ಆದಾಯವನ್ನೆಲ್ಲ ತಾವೇ ಕಬಳಿಸತೊಡಗಿದರು.

ಆರ್ಯಾಂಬೆಯು ಮರಣಾವಸ್ಥೆಯಲ್ಲಿ ನರಳುತ್ತಿದ್ದಾಗ ಆಚಾರ್ಯರು ತಾಯಿಯ ಬಳಿಗೆ ಬಂದರಷ್ಟೆ. ಆಗ ಆಕೆಯ ಬಳಿಯಾರಿದ್ದರು? ಏಕಾಕಿನಿಯಾಗಿ ಆ ವೃದ್ಧೆ ಪರಲೋಕಯಾನಕ್ಕಾಗಿ ಕಾಯುತ್ತಿದ್ದಳು. ಮಗನು ಬಂದಾಗ ತನ್ನ ಪಾಡು ಏನಾಯಿತೆಂಬುದನ್ನು ಹೇಳಿಕೊಳ್ಳುವ ಸ್ಥಿತಿಯಲ್ಲಿಯೂ ಅವಳಿರಲಿಲ್ಲ. ಆಕೆಯು ಪ್ರಾಣವನ್ನು ಬಿಟ್ಟಾಗಲೂ ಒಬ್ಬ ಬಂಧುವೂ ಬಳಿಯಲ್ಲಿಸುಳಿಯಲಿಲ್ಲ. ಅನಂತರ ತಮ್ಮ ತಾಯಿಯ ಸಂಸ್ಕಾರವನ್ನು ಮಾಡುವಂತೆ ಆಚಾರ್ಯರು ಬಂಧುಜನರನ್ನು ಕೇಳಿಕೊಂಡಿರಬೇಕು. ಆ ದುಷ್ಟಜನರು ಒಪ್ಪಲಿಲ್ಲ. ಉತ್ತರಕ್ರಿಯೆ ಒಂದು ದಿನದಲ್ಲಿ ಮುಗಿಯುವಂತಹುದಲ್ಲ. ಸಪಿಂಡೀಕರಣಾಂತವಾದರೂ ಆಗಲೇ ಬೇಕು.

ಅಷ್ಟುದಿನಗಳವರೆಗೆ ನವೆಯತಕ್ಕವರು ಯಾರು? ಧನವ್ಯಯವೂ ಆಗುತ್ತದೆ. ಖರ್ಚಿಗೆ ಹಣವನ್ನು ಕೊಡತಕ್ಕವರುಯಾರು! ಈ ಸಂನ್ಯಾಸಿಯ ಬಳಿ ಏನಿದೆ?- ಎಂಬ ದುರ್ಬುದ್ಧಿಯಿಂದ ಆ ದಾಯಾದಿಗಳು ಉತ್ತರಕ್ರಿಯೆಯನ್ನುಮಾಡಲು ಒಪ್ಪಲಿಲ್ಲ.

ಮುಂದೇನು ಮಾಡುವುದು? ತಮ್ಮ ತಾಯಿಯ ದೇಹವು ಅನಾಥವಾಯಿತಲ್ಲ - ಎಂಬ ಚಿಂತಾದುಃಖಗಳಿಂದ ಆಚಾರ್ಯರು ನೊಂದು ಹೋಗಿರಬೇಕು. 'ಸಂಸ್ಕರಿಷ್ಯೇ' ಎಂಬ ಮಾತು ಅಕ್ಷರಶಃ ಸತ್ಯವಾಗುವ ಕಾಲಬಂದಿತೆಂದು ಅವರಿಗೆ ಅನ್ನಿಸಿರಬೇಕು. ಆಶ್ರಮಧರ್ಮಕ್ಕೆ ವಿರುದ್ಧವಾದರೂ ಬೇರೆಮಾರ್ಗವು ಇರಲಿಲ್ಲ. ತಾವೇ ಸಂಸ್ಕಾರವನ್ನು ಮಾಡಬೇಕೆಂದು ನಿರ್ಧರಿಸಿ ಅಗ್ನಿಯನ್ನು ಬ್ರಾಹ್ಮಣರಿಂದ ಯಾಚಿಸಿದರು. ಆ ಬ್ರಾಹ್ಮಣರು ಯತಿಯನ್ನು ಹಂಗಿಸಿದರೇಹೊರತು ಅಗ್ನಿಯನ್ನುಕೊಡಲಿಲ್ಲ. ಶವವನ್ನು ಶ್ಮಶಾನಕ್ಕೆ ಸಾಗಿಸಲು ನೆರವಾಗಲಿಲ್ಲ. ಬೇರೆ ಮಾರ್ಗವಿಲ್ಲದೆ ಇದೊಂದು ವಿಚಿತ್ರವಾಗಿ ಒದಗಿಬಂದ ಆಪದ್ಧರ್ಮವೆಂದುಭಾವಿಸಿ, ಅಗ್ನಿಯನ್ನು ಉತ್ಪಾದಿಸಿ ಮನೆಯ ಹಿತ್ತಿಲಿನಲ್ಲಿಯೇ ಮಂತ್ರಪೂತವಾಗಿ ದಹನಕ್ರಿಯೆಯನ್ನು ಶ್ರೀಶಂಕರರು ನಡೆಸಿದರು. ಸಪಿಂಡಾಂತವಾದ ಉತ್ತರಕ್ರಿಯೆಯನ್ನು ನಡೆಸಿದರೋ ಇಲ್ಲವೋ ತಿಳಿಯುವುದಿಲ್ಲ. ಬಹುಶಃ ನಡೆದಿರಲಾರದು. ತಮ್ಮ ಕಣ್ಣೆದುರಿಗೇ ಆರ್ಯಾಂಬೆಯು ವಿಷ್ಣುಲೋಕವನ್ನು ಸೇರಿದಳೆಂದು ಅವರು ಸಮಾಧಾನವನ್ನು ತಂದು ಕೊಂಡಿರಬೇಕು.

"ಈ ದಾಯಾದಿಗಳಾದ ಬ್ರಾಹ್ಮಣರು ಪಿತ್ರಾರ್ಜಿತವಾದ ಎಲ್ಲಭೂಮಿ, ಸಂಪತ್ತುಗಳನ್ನೂ ತಿಂದು ತೇಗಿದರು. ಬಾಲಸಂನ್ಯಾಸಿಯಾಗಿ ಹೊರಟುನಿಂತಿದ್ದ ತನಗೆ ಕೊಟ್ಟಮಾತನ್ನು ನಡೆಸದೆ ತಾಯಿಗೆ ವಂಚನೆಮಾಡಿದರು. ಅವಳ ಯೋಗಕ್ಷೇಮಗಳನ್ನೂ ನೋಡಿಕೊಳ್ಳಲಿಲ್ಲ. ರೋಗದಿಂದ ನರಳುತ್ತಿರುವಾಗಲೂ ಉಪಚರಿಸಲಿಲ್ಲ. ದೇಹವನ್ನುಬಿಟ್ಟಮೇಲೆ ಆಕೆಯ ಶವವನ್ನು ಸಾಗಿಸಲೂ ಸಹ ಸಹಕರಿಸಲಿಲ್ಲ, ದಾಯಾದಿಗಳಾಗಿ ಉತ್ತರಕ್ರಿಯೆಯನ್ನೂ ಮಾಡಲಿಲ್ಲ. ಕರ್ತವ್ಯಭ್ರಷ್ಟರಾದ ಈ ಬ್ರಾಹ್ಮಣಬ್ರುವರು ಅಗ್ನಿಯನ್ನು ಕೊಡದೇ ಇದ್ದುದು ಅಧರ್ಮಕ್ಕೆ ಹೆದರಿ ಅಲ್ಲ. ಇವರು ಧರ್ಮದ್ರೋಹಿಗಳು. ಈ ಮನೆಯೂ ಈ ಜನರಿಗೇ ಸೇರಿಹೋಗುತ್ತದೆ. ಇವರನ್ನು ನಂಬಿ ತಾಯಿಗೆ ನಿಷ್ಕಾರಣವಾಗಿ ಕಷ್ಟವನ್ನುನಾನು ತಂದಿಟ್ಟೆನಲ್ಲವೆ?ಅವಳಿಗೆ ಶಾಸ್ತ್ರೀಯಪದ್ಧತಿಯಂತೆ ಕ್ರಮವಾದ ಉತ್ತರಕ್ರಿಯೆಯೂ ನಡೆಯದೇಹೋಯಿತು" - ಎಂದು ಮನಸ್ಸು ರೋಸಿಹೋಗಿ, ವೈದಿಕಕರ್ಮಭ್ರಷ್ಟರಾದ ಆ ಜನರು ವೇದಾಧ್ಯಯನ ಭ್ರಷ್ಟರಾಗಿಯೇ ಇರಲೆಂದು ಆಚಾರ್ಯರು ಶಾಪವನ್ನಿತ್ತರು. ಇದೇ ಶಾಪದ ವಾಸ್ತವವಾದ ಹಿನ್ನೆಲೆ ಎಂಬುದರಲ್ಲಿ ಸಂದೇಹವಿಲ್ಲ.

ದಾಯಾದಿಯಾದವನು ಮೃತರ ಆಸ್ತಿಯನ್ನು ತಿಂದಮೇಲೆ ಅವರ ಉತ್ತರಕ್ರಿಯೆಯನ್ನೂ ಮಾಡಬೇಕೆಂಬುದು ಧರ್ಮಶಾಸ್ತ್ರ ವಿಧಿ. ಇದನ್ನು ಆಲೋಚಿಸಿಯೇ ಆಚಾರ್ಯರು 'ಆ

ಬ್ರಾಹ್ಮಣರು ನಿನಗೆ ಉತ್ತರಕ್ರಿಯೆಯನ್ನು ಮಾಡುತ್ತಾರೆ' ಎಂದು ತಾಯಿಗೆ ಹೇಳಿದ್ದರು. ಆರ್ಯಾಂಬೆಯು 'ನೀನೇ ನನಗೆ ಉತ್ತರಕ್ರಿಯೆಯನ್ನು ಮಾಡು'ಎಂದು ಹೇಳಿದಾಗ, ಸಂನ್ಯಾಸಿಗೆ ಅದು ವಿಹಿತವಲ್ಲ ಎಂಬುದು ಬಹುಶಃ ಅವಳಿಗೆ ಗೊತ್ತಿರಲಿಲ್ಲ. ಗೊತ್ತಿದ್ದರೆ'ನೀನೇ ಎದುರಿಗೆ ನಿಂತು ಎಲ್ಲ ಸಂಸ್ಕಾರವಿಧಿಯೂ ಸರಿಯಾಗಿ ನಡೆಯುವಂತೆ ನೋಡಿಕೊಳ್ಳಬೇಕು' ಎಂದು ಅವಳ ಮಾತಿನ ತಾತ್ಪರ್ಯವಾಗಿತ್ತು. ಆಚಾರ್ಯರು ತಾಯಿಗೆ'ಮೃತಾವಪಿ ಸಂಸ್ಕರಿಷ್ಯೇ' ಎಂದು ಹೇಳಿರುವುದು ಸಹ ಈ ಅಭಿಪ್ರಾಯದಿಂದಲೇ ಇರಬೇಕು.

ಒಟ್ಟಿನಲ್ಲಿ ಅವರು ತಾಯಿಗೆ ಮೃತಸಂಸ್ಕಾರವನ್ನು ಮಾಡಬೇಕಾಯಿತು. ಆಚಾರ್ಯರಿಗೆ ಅದೊಂದು ಧರ್ಮಸಂಕಟದ ಪ್ರಶ್ನೆ ಎದುರಾಯಿತು. ಸಾಕ್ಷಾತ್ ತಾಯಿಯಾದವಳ ಶವವನ್ನು ಹಾಗೆಯೇ ಬಿಟ್ಟು ಹೊರಟು ಹೋಗಬೇಕೆ? ಅಥವಾ ಅವಳ ಸಂಸ್ಕಾರವನ್ನು ಸ್ವತಃ ಮಾಡಬೇಕೆ? ಈ ಧರ್ಮಸಂಕಟದ ಸಮಯದಲ್ಲಿ ಮಾರ್ಗ ಯಾವುದು? ಧರ್ಮಶಾಸ್ತ್ರವು ಏನನ್ನು ಹೇಳುತ್ತದೆ? ' ಆತ್ಮನಸ್ತುಷ್ಟಿರೇವ ಚ' ಎಂಬ ಮನುವಚನವೇ ಅವರಿಗೆ ಮಾರ್ಗದರ್ಶಕವಾಯಿತು. 'ಸತಾಂ ಹಿ ಸಂದೇಹಪದೇಷು ವಸ್ತುಷು ಪ್ರಮಾಣ ಮಂತಃಕರಣಪ್ರವೃತ್ತಯಃ' ಎಂದು ಮಹಾಕವಿಕಾಳಿದಾಸನು ಹೇಳಿಯೇ ಇದ್ದಾನೆ. ಮಾತೃಸಂಸ್ಕಾರವು ಅವರಿಗೆ ಧಾರ್ಮಿಕವಿಧಿಯೇ ಆಯಿತು. 'ತೇಜೀಯಸಾಂ ನ ದೋಷಾಯ ವಹ್ನೇಃ ಸರ್ವಭುಜೋ ಯಥಾ' (ಭಾಗ ೧೦ - ೩೩ - ೩೦) 'ನಿಸ್ತ್ರೈಗುಣ್ಯೇ ಪಥಿ ವಿಚರತಾಂ ಕೋವಿಧಿಃ ಕೋ ನಿಷೇಧಃ -' ಎಂಬುದು ಇನ್ನೊಂದು ಸಮಾಧಾನ. ಪರಶುರಾಮನು ತಾಯಿಯನ್ನು ಕೊಂದದ್ದು, ಶ್ರೀಕೃಷ್ಣನು ಗೋಪಿಕಾಸ್ತ್ರೀಯರೊಡನೆ ವಿಹರಿಸಿದ್ದು - ಇವುಗಳಿಗೂ ಆಚಾರ್ಯರು ಮಾಡಿದ ಮಾತೃಸಂಸ್ಕಾರಕ್ಕೂ ಒಂದು ದೊಡ್ಡ ವ್ಯತ್ಯಾಸವಿದೆ. ಮಾತೃವಧೆ, ಪರಸ್ತ್ರೀ ಸಂಸರ್ಗ - ಇವು ಸ್ವತಃ ದುಷ್ಕೃತ್ಯಗಳು. ಸರ್ವದಾ ಸರ್ವರಿಗೂ ನಿಷಿದ್ಧವಾದವು. ಮಾತೃಸಂಸ್ಕಾರವಾದರೋ ಮಗನಿಗೆ ಅವಶ್ಯಕರ್ತವ್ಯವಾದ ಧಾರ್ಮಿಕವಿಧಿ. ಅದನ್ನು ಮಾಡದಿರುವುದೇ ಮಹತ್ತರವಾದ ಅಧರ್ಮ. ಸಂನ್ಯಾಸಿಗೆ ಅದರಲ್ಲಿ ಅಧಿಕಾರವಿಲ್ಲವೆಂಬುದಿಷ್ಟೇ ವಿಶೇಷ. ಸಂನ್ಯಾಸಿಯೂ ಇನ್ನೊಬ್ಬರಿಂದ ಅದನ್ನು ಮಾಡಿಸಬಹುದು. ಆಚಾರ್ಯರಿಗಾದರೋ ಮಾತೃಸಂಸ್ಕಾರವನ್ನು ಮಾಡತಕ್ಕ ಇನ್ನೊಬ್ಬರು ದೊರಕಲಿಲ್ಲ. ಇದು ಗಮನಾರ್ಹವಾದದ್ದು.

## ಅದ್ವೈತಸಿದ್ಧಾಂತ

ಉಪನಿಷತ್ತುಗಳಿಗೆ ವೇದಾಂತವೆಂಬ ಹೆಸರಿದೆ. ಆದ್ದರಿಂದ ಉಪನಿಷತ್ ಪ್ರತಿಪಾದ್ಯವಾದ ಅಧ್ಯಾತ್ಮಶಾಸ್ತ್ರವು ವೇದಾಂತಶಾಸ್ತ್ರವೆಂದು ಪ್ರಸಿದ್ಧವಾಯಿತು. ವೇದಾಂತಿಗಳನ್ನು ಉಪನಿಷದ್ವಾದಿಗಳೆಂದೂ ಔಪನಿಷದರೆಂದೂ ವ್ಯವಹರಿಸುವುದುಂಟು. 'ನಾನು ನಾನು' ಎಂದು ಕೊಳ್ಳುವ ಜೀವ, ಸುತ್ತಲೂ ಕಾಣುವ ಜಗತ್ತು, ಇವುಗಳಿಗೆ ನಿಯಾಮಕನಾದ ಈಶ್ವರ -ಈ

ಮೂವರ ವಿಚಾರವೇ ಅಧ್ಯಾತ್ಮಶಾಸ್ತ್ರದ ತಿರುಳು. ಸಾಂಖ್ಯಾದಿ ದರ್ಶನಗಳೆಲ್ಲವೂ ಈ ಮೂರು ಪದಾರ್ಥಗಳ ನಿಷ್ಕರ್ಷವನ್ನು ಹೇಳುವುದಕ್ಕಾಗಿಯೇ ಹೊರಟಿವೆ. ಬೌದ್ಧ, ಜೈನ, ಚಾರ್ವಾಕ ದರ್ಶನಗಳ ಉದ್ದೇಶವೂ ಇದೇ ಆಗಿದೆ.

ಇವುಗಳಲ್ಲಿ ಅದ್ವೈತವನ್ನು ಪ್ರತಿಪಾದಿಸತಕ್ಕದ್ದು ವೇದಾಂತ ಒಂದೇ. ಸಾಂಖ್ಯಾದಿದರ್ಶನಕಾರರೆಲ್ಲರೂ ದ್ವೈತವಾದಿಗಳು. ಭಗವತ್ಪಾದರು ಸಾಂಖ್ಯಾದಿಗಳನ್ನು ಮಾತ್ರ ದ್ವೈತವಾದಿಗಳೆಂದು ಪರಾಮರ್ಶಿಸಿ ಅವರ ಮತಗಳನ್ನು ನಿರಾಕರಿಸಿದ್ದಾರೆ. ದ್ವೈತವೇದಾಂತ, ವಿಶಿಷ್ಟಾದ್ವೈತವೇದಾಂತ- ಇತ್ಯಾದಿ ಭೇದಗಳನ್ನು ನಾಮಮಾತ್ರದಿಂದಲೂ ನಿರ್ದೇಶಿಸಿಲ್ಲ. ಅವರ ಕಾಲದಲ್ಲಿ ದ್ವೈತವೇದಾಂತ - ಮೊದಲಾದ ಭೇದಗಳು ಇರಲಿಲ್ಲವೆಂದು ಇದರಿಂದ ಗೊತ್ತಾಗುತ್ತದೆ. ಬೃಹದಾರಣ್ಯಕಭಾಷ್ಯದಲ್ಲಿ ಆಚಾರ್ಯರು ಬರೆಯುತ್ತಾರೆ- "ಸರ್ವೋಪನಿಷತ್ಸು ಹಿ ವಿಜ್ಞಾನಾತ್ಮನಃ ಪರಮಾತ್ಮನಾ ಏಕತ್ವಪ್ರತ್ಯಯೋ ವಿಧೀಯತ ಇತ್ಯವಿಪ್ರತಿಪತ್ತಿಃ ಸರ್ವೇಷಾಮುಪನಿಷದ್ವಾದಿನಾಮ್" (ಬೃಹ. ೨-೧-೨೦) ಸಕಲೋಪನಿಷತ್ತುಗಳಲ್ಲಿಯೂ ವಿಜ್ಞಾನಾತ್ಮನಾದ ಜೀವನಿಗೂ ಪರಮಾತ್ಮನಿಗೂ ಅಭೇದಪ್ರತ್ಯಯವು ವಿಹಿತವಾಗಿದೆಯೆಂಬುದರಲ್ಲಿ ಸಕಲವೇದಾಂತಿಗಳಿಗೂ ಮತಭೇದ ವಿಲ್ಲವಷ್ಟೆ". ಭರ್ತೃಪ್ರಪಂಚ- ಮೊದಲಾದ ವೇದಾಂತಿಗಳು ಜ್ಞಾನಕರ್ಮಸಮುಚ್ಚಯವಾದ, ಉಪಾಸನೆಯಿಂದಲೇ ಮೋಕ್ಷ -ಇತ್ಯಾದಿ ಪ್ರಕ್ರಿಯಾಭೇದಗಳನ್ನು ಹೇಳುತ್ತಿದ್ದರು. ಅವನ್ನುಮಾತ್ರ ಆಚಾರ್ಯರು ನಿರಾಕರಿಸಿದ್ದಾರೆ. ಅವರೆಲ್ಲರೂ ಅದ್ವೈತಿಗಳೇ. ಅಲ್ಲದೆ ಸಾಂಖ್ಯಾದಿಗಳೂ ಸಹ ತಮ್ಮ ಗ್ರಂಥಗಳಲ್ಲಿ ಅದ್ವೈತವನ್ನೇ ವೇದಾಂತ ಸಿದ್ಧಾಂತವೆಂದು ಅನುವಾದಿಸುತ್ತಾರೆ. ದ್ವೈತಾದಿಭೇದಗಳನ್ನು ವೇದಾಂತವೆಂದು ಅವರು ಎಲ್ಲಿಯೂ ಗ್ರಹಿಸಿಲ್ಲ. ಬೌದ್ಧರೂ ಜೈನರೂ ಸಹ ತಮ್ಮ ಗ್ರಂಥಗಳಲ್ಲಿ ವೇದಾಂತಿಗಳ ಮತವೆಂದು ಅದ್ವೈತಸಿದ್ಧಾಂತವನ್ನು ಮಾತ್ರ ಉದಾಹರಿಸಿದ್ದಾರೆ. ಅಯ್ಯಣ್ಣದೀಕ್ಷಿತರೆಂಬ ಘನವಿದ್ವಾಂಸರು'ವ್ಯಾಸತಾತ್ಪರ್ಯ ನಿರ್ಣಯ' ವೆಂಬ ತಮ್ಮ ಗ್ರಂಥದಲ್ಲಿ ಈ ವಿಷಯವನ್ನು ಬಹುಸುಂದರವಾಗಿ ನಿರೂಪಿಸಿ, ಬ್ರಹ್ಮಸೂತ್ರಗಳಲ್ಲಿ ಪ್ರತಿಪಾದಿಸಿರುವುದು ಅದ್ವೈತವೇ ಎಂದು ಸಿದ್ಧಾಂತಿಸಿದ್ದಾರೆ.

ಅದ್ವೈತವೇ ವೇದಾಂತಸಿದ್ಧಾಂತವೆಂದು ಪೂರ್ವದಲ್ಲಿ ಸರ್ವಸಂಪ್ರತಿಪನ್ನವಾಗಿದ್ದರೂ ಅದರಲ್ಲಿ ಅನೇಕ ಪ್ರಕ್ರಿಯಾಭೇದಗಳಿದ್ದವು. ಅವುಗಳಲ್ಲಿ ಶ್ರೀಗೌಡಪಾದರ ಸಂಪ್ರದಾಯವು ಆಚಾರ್ಯರಿಗೆ ಸಂಮತವಾದದ್ದು. 'ತಥಾ ಚ ಸಂಪ್ರದಾಯವಿದೋ ವದಂತಿ' (ಸೂ. ಭಾ. ೧-೪-೧೪) 'ಅತ್ರೋಕ್ತಂ ವೇದಾಂತಾರ್ಥಸಂಪ್ರದಾಯವಿದ್ಭಿರಾಚಾರ್ಯೈಃ' (ಸೂ. ಭಾ. ೨-೧-೯)ಇತ್ಯಾದಿಸ್ಥಳಗಳಲ್ಲಿ ಶ್ರೀಶಂಕರರು ಶ್ರೀಗೌಡಪಾದರ ಮಾಂಡೂಕ್ಯಕಾರಿಕೆಗಳನ್ನು ಉದಾಹರಿಸಿದ್ದಾರೆ. ಆಚಾರ್ಯರ ಸಾಕ್ಷಾತ್ ಶಿಷ್ಯರಾದ ಶ್ರೀಸುರೇಶ್ವರಾಚಾರ್ಯರೂ ಸಹ -

ನಿಃಶೇಷ ವೇದಸಿದ್ಧಾಂತ ವಿದ್ವದ್ಭಿರಪಿ ಭಾಷಿತಮ್ |
ಗೌಡಾಚಾರ್ಯೈರಿದಂ ವಸ್ತು ಯಥಾಸ್ಮಾಭಿಃ ಪ್ರಪಂಚಿತಮ್ ||

ಎಂದು ಶ್ರೀಗೌಡಪಾದರನ್ನು ಅನೇಕಸ್ಥಳಗಳಲ್ಲಿ ಉದಾಹರಿಸಿದ್ದಾರೆ. ಅವರನ್ನು 'ನಿಃಶೇಷವೇದ ಸಿದ್ಧಾಂತವಿದರೆಂದು' ವಿಶೇಷಿಸಿರುವುದನ್ನು ಗಮನಿಸಬೇಕು. ಆಚಾರ್ಯರ ಪರಮಗುರುಗಳು ಶ್ರೀಗೌಡಪಾದರೆಂಬುದು ಪ್ರಸಿದ್ಧವಾಗಿಯೇ ಇದೆ. ಅವರು ಗೌಡಪಾದರ ಮಾಂಡೂಕ್ಯಕಾರಿಕೆಗಳಿಗೆ ಭಾಷ್ಯವನ್ನು ರಚಿಸಿದರಲ್ಲದೆ ಆ ಭಾಷ್ಯದ ಕಡೆಯಲ್ಲಿ - 'ಪರಮಗುರುಮಹಂ ಪಾದಪಾತೈರ್ನತೋಽಸ್ಮಿ' ಎಂದು ಭಕ್ತಿಯಿಂದ ಶ್ರೀಗೌಡಪಾದರನ್ನು ನಮಸ್ಕರಿಸಿದ್ದಾರೆ.

ಬಾದರಾಯಣರ ಬ್ರಹ್ಮಸೂತ್ರಗಳು ಅಲ್ಪಾಕ್ಷರಘಟಿತಗಳಾಗಿ ವಿಶ್ವತೋಮುಖವಾಗಿ ಬಿಟ್ಟಿವೆ. ಅವುಗಳ ಅರ್ಥವನ್ನು ತಿರುಚಿ ಎತ್ತಬೇಕಾದರೂ ಎಳೆದು ಬಿಡಲು ಸಾಧ್ಯವಿದೆ. ಕ್ರಮಬದ್ಧವಾಗಿ ವೇದಾಂತಸಂಪ್ರದಾಯವನ್ನರಿತವರಿಗೆ ಮಾತ್ರ ಸೂತ್ರಗಳ ಅರ್ಥವನ್ನು ಸೂತ್ರಕಾರಸಂಮತವಾದ ರೀತಿಯಲ್ಲಿ ಬರೆದು ಬಾದರಾಯಣರ ಆಶಯವನ್ನು ವಿವರಿಸುವುದು ಸಾಧ್ಯವಾಗುತ್ತದೆ. ಆದ್ದರಿಂದಲೇ ಶ್ರೀಶಂಕರರು ಸಂಪ್ರದಾಯಕ್ಕೆ ಮಹತ್ತ್ವವನ್ನು ನೀಡುತ್ತಾರೆ. ಗೀತಾಭಾಷ್ಯದಲ್ಲಿ 'ಅಸಂಪ್ರದಾಯವಿತ್ ಸರ್ವಶಾಸ್ತ್ರವಿದಪಿ ಮೂರ್ಖವದೇವೋಪೇಕ್ಷಣೀಯಃ' ಎಂದು ಬರೆದಿದ್ದಾರೆ (ಗೀ. ಭಾ. ೧೩-೨) "ಸರ್ವಶಾಸ್ತ್ರಗಳನ್ನು ಬಲ್ಲವನಾದರೂ ಯಾವನು ಸಂಪ್ರದಾಯವನ್ನು ಅರಿತಿಲ್ಲವೋ ಅವನು ಮೂರ್ಖನಂತೆ ಉಪೇಕ್ಷೆಗೆ ಅರ್ಹನು."

ಆಚಾರ್ಯರ ಗುರುಪರಂಪರೆಯು ಶ್ರೀಮನ್ನಾರಾಯಣನಿಂದ ಆರಂಭವಾಗುತ್ತದೆಯೆಂದು ಈ ಪ್ರಾಚೀನಶ್ಲೋಕಗಳು ತಿಳಿಸುತ್ತವೆ -

ನಾರಾಯಣಂ ಪದ್ಮಭುವಂ ವಸಿಷ್ಠಂ
ಶಕ್ತಿಂ ಚ ತತ್ಪುತ್ರ ಪರಾಶರಂ ಚ ।
ವ್ಯಾಸಂ ಶುಕಂ ಗೌಡಪದಂ ಮಹಾಂತಂ
ಗೋವಿಂದಯೋಗೀಂದ್ರಮಥಾಸ್ಯ ಶಿಷ್ಯಮ್ ॥

ಶ್ರೀಶಂಕರಾಚಾರ್ಯಮಥಾಸ್ಯ ಪದ್ಮ -
ಪಾದಂ ಚ ಹಸ್ತಾಮಲಕಂ ಚ ಶಿಷ್ಯಮ್ ।
ತಂ ತೋಟಕಂ ವಾರ್ತಿಕಕಾರಮನ್ಯಾನ್
ಅಸ್ಮದ್ಗುರೂನ್ ಸಂತತಮಾನತೋಽಸ್ಮಿ ॥

ಈ ಪರಂಪರೆಯಲ್ಲಿ ಪದ್ಮಪಾದನೇ ಮೊದಲಾದ ನಾಲ್ವರು ಆಚಾರ್ಯರ ಸಾಕ್ಷಾತ್ ಶಿಷ್ಯರು. ವಾರ್ತಿಕಕಾರರೆಂದರೆ ಸುರೇಶ್ವರಾಚಾರ್ಯರು. ಅನಾದಿಯಾದ ಈ ಗುರುಪರಂಪರೆಯಲ್ಲಿ ಮುಖ್ಯರಾದ ಕೆಲವರನ್ನು ಮಾತ್ರ ಸ್ಮರಿಸಿದ್ದಾರೆ. ಆದಕಾರಣ ಶುಕರಿಗೂ ಗೌಡಪಾದರಿಗೂ ಕಾಲಭೇದವು ಕಾಣಿಸಿದರೂ ದೋಷವಿಲ್ಲವೆಂದು ತಿಳಿಯಬೇಕು. ಆಚಾರ್ಯರು ರಚಿಸಿದ

ತೈತ್ತಿರೀಯಭಾಷ್ಯದ ಆರಂಭದಲ್ಲಿ ಎರಡನೆಯ ಮಂಗಳಶ್ಲೋಕವು ಹೀಗಿದೆ -

ಯೈರಿಮೇ ಗುರುಭಿಃ ಪೂರ್ವಂ ಪದವಾಕ್ಯಪ್ರಮಾಣತಃ |
ವ್ಯಾಖ್ಯಾತಾಃ ಸರ್ವವೇದಾಂತಾಸ್ತಾನ್ನಿತ್ಯಂ ಪ್ರಣತೋಽಸ್ಮ್ಯಹಮ್ ||

ಶ್ರೀಶಂಕರರಿಗಿಂತ ಪೂರ್ವದಲ್ಲಿಯೇ ಎಷ್ಟೋಮಂದಿ ಅದ್ವೈತಿಗಳಾದ ಆಚಾರ್ಯರು ಉಪನಿಷತ್ತುಗಳಿಗೆ ವ್ಯಾಖ್ಯಾನಗಳನ್ನು ಬರೆದಿದ್ದರೆಂದು ಈ ಶ್ಲೋಕದಿಂದ ಸ್ಪಷ್ಟವಾಗುತ್ತದೆ. ಆದರೆ ಶ್ರೀಗೌಡಪಾದರ ಮಾಂಡೂಕ್ಯಕಾರಿಕೆಗಳ ಹೊರತಾಗಿ ಬೇರೆಯಾವ ಪ್ರಾಚೀನ ವ್ಯಾಖ್ಯಾನ ಗ್ರಂಥಗಳೂ ಈಗ ದೊರೆಯುವುದಿಲ್ಲ. ಶ್ರೀಶಂಕರಭಗವತ್ಪಾದರು ಉಪಲಬ್ಧವಾದ ವ್ಯಾಖ್ಯಾನಗಳೆಲ್ಲವನ್ನೂ ಪರಿಶೀಲಿಸಿ, ಪ್ರಸನ್ನಗಂಭೀರವಾದ ಪ್ರಸ್ಥಾನತ್ರಯ ಭಾಷ್ಯಗಳನ್ನು ವಿರಚಿಸಿದಮೇಲೆ, ಬಹುಶಃ ಪ್ರಾಚೀನವ್ಯಾಖ್ಯಾನಗಳು ಗತಾರ್ಥವಾದವು. ಮಹಾವೈಯಾಕರಣನಾದ ಪಾಣಿನಿಯು ಅಷ್ಟಾಧ್ಯಾಯಿಯೆಂಬ ವ್ಯಾಕರಣಶಾಸ್ತ್ರವನ್ನು ರಚಿಸಿದಮೇಲೆ, ಶಾಕಲ್ಯನೇ ಮೊದಲಾದವರ ವ್ಯಾಕರಣಗಳು ನಷ್ಟವಾದಂತೆ ಪ್ರಾಚೀನವೇದಾಂತವ್ಯಾಖ್ಯಾನಗಳು ಅಸ್ತಂಗತವಾದವೆಂದು ಊಹಿಸಬಹುದು.

ವೇದವು ಮಾತ್ರವಲ್ಲ, ವೇದಾರ್ಥದ ಉಪಬೃಂಹಣಕ್ಕಾಗಿ ಹೊರಟಿರುವ ವಿಷ್ಣುಪುರಾಣ, ಭಾಗವತ, ಸ್ಕಾಂದ, ಶೈವಾದಿಪುರಾಣಗಳೂ ಭಗವದ್ಗೀತೆ, ಯಾಜ್ಞವಲ್ಕ್ಯಸ್ಮೃತಿ - ಮೊದಲಾದವೂ ಪಾಂಚರಾತ್ರ ವೈಖಾನಸಾದ್ಯಾಗಮಗಳೂ ಕೇವಲಾದ್ವೈತವನ್ನೇ ಪ್ರತಿಪಾದಿಸುತ್ತವೆಯೆಂದು ಪೂರ್ವೋಕ್ತವಾದ ವ್ಯಾಸತಾತ್ಪರ್ಯನಿರ್ಣಯದಲ್ಲಿ ಸೋದಾಹರಣವಾಗಿ ವಿವರಿಸಿದ್ದಾರೆ. ಶೈವ, ಶಾಕ್ತ, ಪಾಶುಪತಾದಿ ತಂತ್ರಗ್ರಂಥಗಳೂ ಸಹ ಕೇವಲಾದ್ವೈತದಲ್ಲಿ ತಾತ್ಪರ್ಯವುಳ್ಳವುಗಳೆಂದು ಅದೇಗ್ರಂಥದಲ್ಲಿ ಸ್ಪಷ್ಟವಾಗಿದೆ. ಕಿಂಬಹುನಾ -ಸಾಂಖ್ಯಾದಿವೈದಿಕದರ್ಶನಗಳೂ ಅದ್ವೈತದಲ್ಲಿಯೇ ತಾತ್ಪರ್ಯವನ್ನಿಟ್ಟು, ಚಿತ್ತಶುದ್ಧಿಯಾಗದಿರುವ ಸಾಮಾನ್ಯಜನರಿಗೆ ಅದ್ವಯವಾದ ಆತ್ಮಜ್ಞಾನವು ಹುಟ್ಟಲಾರದೆಂದು ಸೋಪಾನಕ್ರಮದಿಂದ ಅವರನ್ನು ಮೇಲೆತ್ತುವುದಕ್ಕಾಗಿ ದ್ವೈತವನ್ನು ಅವಲಂಬಿಸಿ ಪ್ರವೃತ್ತವಾದವೆಂದು ಸೂತಸಂಹಿತೆಯು ಸ್ಫುಟವಾಗಿ ತಿಳಿಸಿಕೊಟ್ಟಿದೆ -

ಸೋಪಾನಕ್ರಮತೋ ದೇವೋ ವೇದಮಾರ್ಗಸ್ಯಕಾರಣಮ್ |
ವೇದ ಮಾರ್ಗಸ್ಥಿತೋ ದೇವಃ ಸಾಕ್ಷಾನ್ಮುಕ್ತೇಸ್ತು ಕಾರಣಮ್ ||
ತತ್ರಾಪಿ ಕರ್ಮಮಾರ್ಗಸ್ಥೋ ಜ್ಞಾನಶ್ರದ್ಧಾಪ್ರದೋ ಹರಃ |
ಜ್ಞಾನಮಾರ್ಗಸ್ಥಿತಃ ಶಂಭುರ್ಜ್ಞಾನದ್ವಾರೇಣ ಮೋಕ್ಷದಃ ||

—ಯಜ್ಞವೈಭವಖಂಡ, ೨೨ನೆಯ ಅಧ್ಯಾಯ

ಇರಲಿ, ಇದೆಲ್ಲವನ್ನೂ ಇಲ್ಲಿ ವಿಸ್ತರಿಸುವುದು ಬೇಡ. ಕಾಶ್ಮೀರದ ಪ್ರತ್ಯಭಿಜ್ಞಾಶಾಸ್ತ್ರದಲ್ಲಿ ಪರಿಣತನೂ ಮಹಾದಾರ್ಶನಿಕನೂ ಆದ ಅಭಿನವಗುಪ್ತನು ಹೇಳುತ್ತಾನೆ -

ತೀರ್ಥಕ್ರಿಯಾವ್ಯಸನಿನಃ ಸ್ವಮನೀಷಿಕಾಭಿಃ
ಉತ್ಪ್ರೇಕ್ಷ್ಯ ತತ್ತ್ವಮಿತಿ ಯದ್ಯದಮೀ ವದಂತಿ |
ತತ್ತತ್ತ್ವಮೇವ ಭವತೋಽಸ್ತಿ ನ ಕಿಂಚಿದನ್ಯತ್
ಸಂಜ್ಞಾಸು ಕೇವಲಮಯಂ ವಿದುಷಾಂ ವಿವಾದಃ ||

"ಶಾಸ್ತ್ರರಚನೆಗೆ ತೊಡಗಿರುವ ವಿದ್ವಾಂಸರು ತಮ್ಮ ಬುದ್ಧಿಚಾತುರ್ಯದಿಂದ 'ಇದು ಸತ್ಯ, ಹೀಗೆ ವಿಂಗಡಿಸಬೇಕು'ಎಂದು ಉತ್ಪ್ರೇಕ್ಷಿಸಿಕೊಂಡು ಯಾವ ಯಾವ ಪದಾರ್ಥಗಳನ್ನು ಹೇಳುತ್ತಾರೋ, ಅದೆಲ್ಲವೂ, ಹೇ ಪರಶಿವನೆ, ನೀನೇ ಆಗಿದ್ದೀಯೆ. ನಿನ್ನನ್ನು ಬಿಟ್ಟು ಇನ್ನೊಂದು ವಸ್ತುವೇ ಇಲ್ಲ. ಇರುವ ಕೇವಲ ಒಂದೇ ವಸ್ತುವಿಗೆ ಈ ವಿದ್ವಾಂಸರು ಬೇರೆ ಬೇರೆ ಹೆಸರಿಟ್ಟು ವಿವಾದವನ್ನು ಮಾಡುತ್ತಾರೆ !"

ಆಚಾರ್ಯರ ಭಗಂದರರೋಗಕ್ಕೆ ಕಾರಣನಾದ ಅಭಿನವಗುಪ್ತ ಎಂಬವನು ಈತನಲ್ಲ. ಆ ಮಾಂತ್ರಿಕನು ಅಸ್ಸಾಂಪ್ರಾಂತದವನು. ನಾನಾಶಾಸ್ತ್ರ ಪಾರಂಗತನೂ ಪ್ರತ್ಯಭಿಜ್ಞಾಶಾಸ್ತ್ರದ ದಾರ್ಶನಿಕನೂ ಆದ ಈತನು ಕಾಶ್ಮೀರ ದೇಶದವನು. ನಿಶ್ಚಿತವಾಗಿ ಇವರು ಭಿನ್ನವ್ಯಕ್ತಿಗಳು.

## ಅದ್ವೈತವು ಸುಲಭಗ್ರಾಹ್ಯವಲ್ಲ

ಪರಮಾರ್ಥವಾಗಿ ಈ ವಿಶ್ವಕ್ಕೆ ಮೂಲವಾದದ್ದು ಒಂದೇ ಒಂದು ಪದಾರ್ಥ, ಎರಡೆಂಬುದೇ ಇಲ್ಲ.'ಏಕಮೇವಾದ್ವಿತೀಯಂ' 'ಆತ್ಮವೇದಂ ಸರ್ವಂ'ಇತ್ಯಾದಿಯಾಗಿ ಶ್ರುತಿಗಳು ಏಕಕಂಠದಿಂದ ಘೋಷಿಸಿಬಿಟ್ಟಿವೆ. ನಾಮರೂಪಾತ್ಮಕವಾದ ಈ ಜಗತ್ತು ನಮಗಾದರೋ ದ್ವೈತಮಯವಾಗಿಯೇ ತೋರುತ್ತದೆ. ದ್ವೈತವಿಲ್ಲದೆ ನಮ್ಮ ವ್ಯವಹಾರವೇ ನಡೆಯದು. ಈ ಪರಿಸ್ಥಿತಿಯಲ್ಲಿ ಅದ್ವೈತವನ್ನು ಉಪಪಾದನೆ ಮಾಡುವುದು ಅತ್ಯಂತಕಠಿಣವೆಂಬುದು ಎಲ್ಲರಿಗೂ ಹೊಳೆಯುತ್ತದೆ. ಶಿಶುವಿನಿಂದ ಹಿಡಿದು ವೃದ್ಧನವರೆಗೆ ಸಕಲ ಮಾನವಪ್ರಾಣಿಯೂ ಜಗತ್ತು ಸತ್ಯವೆಂದು ನಂಬಿ ಭೇದಬುದ್ಧಿಯಿಂದಲೇ ನಡೆದುಕೊಳ್ಳುತ್ತಿದೆ. ನಾನು, ನೀನು, ಅವನು -ಎಂಬ ಭೇದವನ್ನು ಯಾರೂ ಹೇಳಿಕೊಡಬೇಕಾಗಿಯೇ ಇಲ್ಲ. ಇಂದ್ರಿಯಗಳಿಗೆ ಗೋಚರವಾಗುವುದಷ್ಟೂ ಭೇದಮಯವಾಗಿ ತೋರುತ್ತದೆಯೇ ಹೊರತು ಏಕರೂಪವಾಗಿರುವುದು ಕಾಣಿಸುವುದೇಇಲ್ಲ. ಈ ನಡುವೆ ಭೇದವಾದಿಗಳಾದ ಸಾಂಖ್ಯಾದಿದರ್ಶನಕಾರರು ವಿದ್ವಾಂಸರಾದ್ದರಿಂದ, ಅವರು ಯುಕ್ತಿಜಾಲಗಳಿಂದ ಅದ್ವೈತಿಗಳನ್ನು ಎದುರಿಸುತ್ತಾರೆ. ಹೀಗೆ ಸಮಸ್ತಜನತೆಯನ್ನೂ ಸಮಸ್ತಶಾಸ್ತ್ರಜ್ಞರನ್ನೂ ಎದುರು ಹಾಕಿಕೊಂಡು, ಅವರೆಲ್ಲರಿಗೂ ಸಮಂಜಸವಾದ ಉತ್ತರಗಳನ್ನಿತ್ತು ಅದ್ವೈತವನ್ನು

ಸ್ಥಾಪಿಸುವುದೆಂದರೆ ಸಾಧಾರಣವಾದ ಕಾರ್ಯವಲ್ಲ. ಸಮಸ್ತಶಾಸ್ತ್ರಗಳಲ್ಲಿ ಅಗಾಧವಾದ ಪಾಂಡಿತ್ಯವೂ ಲೋಕೋತ್ತರವಾದ ಮೇಧಾಶಕ್ತಿಯೂ ಉಳ್ಳ ಮಹಾಪುರುಷನಿಗೆ ಮಾತ್ರ ಸಾಧ್ಯವಾಗತಕ್ಕದ್ದು ಇದು -ಎಂದು ಯಾವನಾದರೂ ಒಪ್ಪಿಕೊಳ್ಳಲೇ ಬೇಕಾಗುತ್ತದೆ. ಯಾವ ದ್ವೈತಶಾಸ್ತ್ರದಲ್ಲಿಯೂ ಈ ಬಗೆಯ ಕಾಠಿಣ್ಯವು ತಲೆದೋರುವುದಿಲ್ಲ. ಅದ್ವೈತವು ಅರ್ಥವಾಗದೆ ಹೋದ್ದರಿಂದಲೇ ಇತರ ದ್ವೈತಶಾಸ್ತ್ರಗಳು ತಲೆದೋರಿದವು.

ಆಚಾರ್ಯರ ಪಾಂಡಿತ್ಯ

ಅತ್ಯಂತಕ್ಲಿಷ್ಟವಾದ ಈ ಕಾರ್ಯದಲ್ಲಿ ಧೈರ್ಯದಿಂದ ಮುಂದೆ ನುಗ್ಗಿ ನಿಖಿಲ ಪ್ರತಿವಾದಿಗಳನ್ನೂ ಜಯಿಸಿ, ಅದ್ವೈತವೇದಾಂತದ ಧ್ವಜಪಟವನ್ನು ಮತ್ತೆ ಗಗನದೆತ್ತರಕ್ಕೆ ಹಾರಿಸಿದ ಕೀರ್ತಿ ಶ್ರೀಶಂಕರಭಗವತ್ಪಾದರಿಗೆ ಸಲ್ಲುತ್ತದೆ. ಕಾಶ್ಮೀರದ ಸರ್ವಜ್ಞಪೀಠಾರೋಹಣವು ಈ ಸಾಧನೆಯ ಒಂದು ಸಂಕೇತಮಾತ್ರವಾಗಿದೆ. ಆನಂದವಲ್ಲೀಭಾಷ್ಯದಲ್ಲಿರುವ ಆಚಾರ್ಯರ ಈ ಧೀರವಾಣಿಯನ್ನು ಕೇಳಿರಿ-

"ಏಕತ್ವವಾದೀ ತ್ವಮ್, ವೇದಾರ್ಥಪರತ್ವಾತ್, ಬಹವೋ ಹಿ ನಾನಾತ್ವವಾದಿನೋ ವೇದಬಾಹ್ಯಾಃ ತ್ವತ್ಪ್ರತಿಪಕ್ಷಾಃ, ಅತೋ ಮಮಾಶಂಕಾ ನ ನಿರ್ಣೇಷ್ಯಸೀತಿ |ಏತದೇವ ಮೇ ಸ್ವಸ್ತ್ಯಯನಂ ಯನ್ಮಾಮೇಕಯೋಗಿನಮನೇಕಯೋಗಿ ಬಹುಪ್ರತಿಪಕ್ಷಮಾತ್ಥ |ಅತೋ ಜೇಷ್ಯಾಮಿ ಸರ್ವಾನ್;ಆರಭೇ ಚ ಚಿಂತಾಮ್"(ಅನುವಾಕ. ೮)

ಸಂದರ್ಭವೇನೆಂದರೆ, ಏತಮನ್ನಮಯಮಾತ್ಮಾನಮುಪಸಂಕ್ರಾಮತಿ, ಏತಮಾನಂದ ಮಯಮಾತ್ಮಾನಮುಪ ಸಂಕ್ರಾಮತಿ - ಇತ್ಯಾದಿ ವಾಕ್ಯಗಳಲ್ಲಿ ಉಪಸಂಕ್ರಮಣ ಕರ್ತನು ಯಾರು? ಉಪಸಂಕ್ರಮಣ ಕರ್ಮ ಯಾವುದು? ಎಂದು ಶಂಕೆ. ಏಕತ್ವವಾದದಲ್ಲಿ ಒಬ್ಬನೇ ಕರ್ತೃವೆಂದೂ ಕರ್ಮವೆಂದೂ ಹೇಳಬೇಕಾಗುತ್ತದೆ. ಒಂದೇ ಕ್ರಿಯೆಯಲ್ಲಿ ಒಬ್ಬನೇ ಕರ್ತೃವೂ ಹೌದು, ಕರ್ಮವೂ ಹೌದು -ಎಂದರೆ ಕರ್ತೃಕರ್ಮ ವಿರೋಧಬರುವುದು-ಎಂದು ವಿಚಾರ ಬಂದಿದೆ. ಸಿದ್ಧಾಂತಿಯು ಇದನ್ನು ನಿರ್ಣಯಿಸಿ ಹೇಳುತ್ತೇನೆ - ಎಂದಾಗ ಶಂಕಾಕರ್ತನಿಗೂ ಸಿದ್ಧಾಂತಿಗೂ ನಡೆಯುವ ಸಂಭಾಷಣೆ ಇದು-

ಶಂಕಾಕರ್ತ - ನೀನು ವೇದಾರ್ಥಪರನಾದ್ದರಿಂದ ಏಕತ್ವವಾದಿಯಾಗಿದ್ದೀಯೆ. ವೇದಬಾಹ್ಯರಾದ ದ್ವೈತವಾದಿಗಳು ನಿನಗೆ ಬಹಳ ಮಂದಿ ಪ್ರತಿಪಕ್ಷದವರಾಗಿದ್ದಾರೆ, ಆದ್ದರಿಂದ ಇದನ್ನು ನೀನು ನಿರ್ಣಯಿಸಲಾರೆಯೆಂದು ನಾನು ಭಾವಿಸುತ್ತೇನೆ.

ಸಿದ್ಧಾಂತಿ - ಆಹಾ!ನಾನು ಏಕತ್ವವಾದಿಯೆಂದೂ ನನಗೆ ಬಹುಮಂದಿ ವಿರೋಧಿಗಳಾದ ಪ್ರತಿಪಕ್ಷವರಿದ್ದಾರೆಂದೂ ಹೇಳುತ್ತೀಯಲ್ಲ, ಇದೇ ನನಗೆ ಸ್ವಸ್ತ್ಯಯನ(ಶುಭಹಾರೈಕೆ). ಎಲ್ಲರನ್ನೂ ಜಯಿಸಿಬಿಡುತ್ತೇನೆ. ನನ್ನ ಚಿಂತನೆಯನ್ನು, ಇದೋ, ಆರಂಭಿಸುತ್ತೇನೆ !"

ವಿದ್ವದ್ವರೇಣ್ಯನೂ ಷಡ್‌ದರ್ಶನಗಳ ವ್ಯಾಖ್ಯಾತನೂ ಆದ ವಾಚಸ್ಪತಿಮಿಶ್ರನು ಆಚಾರ್ಯರ ಸೂತ್ರಭಾಷ್ಯಕ್ಕೆ ಭಾಮತೀ ಎಂಬ ವ್ಯಾಖ್ಯಾನವನ್ನು ಬರೆದಿದ್ದಾನೆ. ಅದರ ಆರಂಭದಲ್ಲಿ ಹೀಗೆ ಹೇಳುತ್ತಾನೆ -

ಆಚಾರ್ಯಕೃತಿನಿವೇಶನಮಪ್ಯವಧೂತಂ ವಚೋಽಸ್ಮದಾದೀನಾಂ |
ರಥ್ಯೋದಕಮಿವ ಗಂಗಾಪ್ರವಾಹಪಾತಃ ಪವಿತ್ರಯತಿ ||

"ಆಚಾರ್ಯರ ಕೃತಿಯು ಗಂಗಾಪ್ರವಾಹವಿದ್ದಂತೆ. ನಮ್ಮಂಥವರ ಮಾತು ರಸ್ತೆಯಲ್ಲಿ ಹರಿದು ಬರುವ ಚರಂಡಿಯ ನೀರು ಇದ್ದಹಾಗೆ ! ಇದು ಗಂಗಾಪ್ರವಾಹದಲ್ಲಿ ಸೇರಿಕೊಂಡರೆ ಗಂಗಾಜಲವು ಇದನ್ನು ಹೇಗೆ ಪವಿತ್ರಗೊಳಿಸುವುದೋ ಹಾಗೆ, ನನ್ನ ವ್ಯಾಖ್ಯಾನವು ಆಚಾರ್ಯರ ಭಾಷ್ಯದೊಡನೆ ಸೇರಿಕೊಂಡರೆ ಸಾಕು, ಅದು ನನ್ನ ವ್ಯಾಖ್ಯಾನವನ್ನು ಪವಿತ್ರಗೊಳಿಸಿ ಬಿಡುತ್ತದೆ!"ಎಂದು ಅಭಿಪ್ರಾಯ. ಶ್ರೀಶಂಕರದಿಗ್ವಿಜಯದಲ್ಲಿ ಆಚಾರ್ಯರ ಪಾಂಡಿತ್ಯವನ್ನು ಭಾಷ್ಯದ ಸೌಭಾಗ್ಯವನ್ನೂ ಎಷ್ಟು ವರ್ಣಿಸಿದರೂ ಕವಿಗೆ ತೃಪ್ತಿ ಇಲ್ಲ.

ವಿದ್ವಜ್ಜಾಲತಪಃಫಲಂ ಶ್ರುತಿವಧೂಧಮ್ಮಿಲ್ಲಮಲ್ಲೀಸ್ರಜಂ
ಸದ್ವೈಯಾಸಿಕಸೂತ್ರಮುಗ್ಧಮಧುರಾಗಣ್ಯಾತಿಪುಣ್ಯೋದಯಮ್ |
ವಾಗ್ದೇವೀ ಚಿರಭೋಗ್ಯಭಾಗ್ಯವಿಭವಪ್ರಾಗ್ಭಾರಕೋಶಾಲಯಂ
ಭಾಷ್ಯಂ, ತೇನ ಪಿಬಂತಿ ಹಂತ ಕೃತಿನೋ ಯೇಷಾಂ ಭವೇಽಸಂಭವಃ ||

— ಸರ್ಗ ೬-೧೦೫

ಇತ್ಯಾದಿ ವರ್ಣನೆಗಳು ಭಾಷ್ಯವನ್ನು ವ್ಯಾಸಂಗಮಾಡಿದವರಿಗೆ ಅತಿಶಯೋಕ್ತಿಗಳೆನಿಸುವುದೇ ಇಲ್ಲ. ಪ್ರಸನ್ನಗಂಭೀರವಾಕ್ಯಗಳ ರಚನೆ, ನಾನಾಗ್ರಂಥಗಳಿಂದ ಪ್ರಮಾಣೋಕ್ತಿಗಳ ಸೂರೆ, ಯುಕ್ತಿಗಳ ಸುರಿಮಳೆ, ಪೂರ್ವಪಕ್ಷವನ್ನು ಬಲಪಡಿಸಿ ಪೂರ್ವಪಕ್ಷಿಯ ಒಂದೊಂದು ಮಾತನ್ನೂ ತೂಗಿ ತೂಗಿ ಅದರ ಮೌಲ್ಯವನ್ನು ಗೊತ್ತುಪಡಿಸುವ ರೀತಿ, ಸಂಶಯಲೇಶವೂ ಉಳಿಯದಂತೆ ಸ್ವಸಿದ್ಧಾಂತವನ್ನು ಭದ್ರಪಡಿಸುವ ಜಾಗರೂಕತೆ -ಇವು ಯಾವ ವಿದ್ವಾಂಸನನ್ನಾದರೂ ತಲೆದೂಗಿಸಿ ಬಿಡುತ್ತವೆ. ಆಚಾರ್ಯರ ಭಾಷ್ಯಗಳನ್ನೋದುವಾಗ, ವಾಚಕನು ಯಾವ ಪಕ್ಷದವನೇ ಆಗಿರಲಿ, ಯಾವ ಸಿದ್ಧಾಂತವನ್ನು ನಂಬಿದವನೇ ಆಗಿರಲಿ, ಅವನಿಗೆ "ನಾನೀಗ ಅಸಾಧಾರಣ ಮೇಧಾವಿಯಾದ ಒಬ್ಬ ಮಹಾದಾರ್ಶನಿಕನೊಡನೆ ವ್ಯವಹರಿಸುತ್ತಿದ್ದೇನೆ"ಎಂಬ ಭಾವನೆ ಉದಿಸದೆ ಇರದು. ಸೂತ್ರಭಾಷ್ಯ, ಬೃಹದಾರಣ್ಯಕ ಭಾಷ್ಯಗಳೆರಡರಲ್ಲಿ ಆಚಾರ್ಯರು ಉದಾಹರಿಸುವ ಗ್ರಂಥರಾಶಿಗಳನ್ನು ಪಟ್ಟಿಮಾಡಿದರೆ ಸಾಕು, ಅವರ ಪಾಂಡಿತ್ಯದ ಆಳ ಅಗಲಗಳು ಎಷ್ಟು ಬೃಹತ್ತಾಗಿತ್ತೆಂಬುದು ಸ್ಪಷ್ಟವಾಗುತ್ತದೆ. ವೇದಾಂತರ್ಗತ ಸಂಹಿತಾ ಬ್ರಾಹ್ಮಣಭೇದಗಳೊಡನೆ ನಾಲ್ಕುವೇದಗಳು, ಉಪನಿಷತ್ತುಗಳು, ವೇದಾಂಗಗಳು, ಷಡ್‌ದರ್ಶನಗಳು, ಶ್ರೌತಸೂತ್ರ, ಧರ್ಮಸೂತ್ರ, ಗೃಹ್ಯಸೂತ್ರಗಳು, ಮನುಸ್ಮೃತಿ ಮೊದಲಾದ ಸ್ಮೃತಿಗಳು, ಉಪವರ್ಷಾದಿ ಪ್ರಾಚೀನಾಚಾರ್ಯರ ಗ್ರಂಥಗಳು,

ರಾಮಾಯಣ ಮಹಾಭಾರತಗಳು, ವಿಷ್ಣುಪುರಾಣಾದಿ ಪುರಾಣಗಳು, ಪಾಂಚರಾತ್ರಾದ್ಯಾಗಮಗಳು, ಧರ್ಮಕೀರ್ತಿ, ದಿಙ್ನಾಗ ಮೊದಲಾದವರ ಬೌದ್ಧಜೈನ ಪಾಶುಪತಾದಿಗಳ ಗ್ರಂಥಗಳು -ಇವೆಲ್ಲವೂ ಆಚಾರ್ಯರಿಗೆ ವಶವಾಗಿ ನೆನೆದೊಡನೆ ಅಹಮಹಮಿಕೆಯಿಂದ ಮುಂದೆ ಬಂದು ಹಸ್ತಾಮಲಕಗಳಂತೆ ಗೋಚರಿಸುತ್ತಿದ್ದವೆಂದು ಸ್ಫುಟವಾಗುತ್ತದೆ.

ತಮಗೆ ವಿರೋಧಿಯಾದ ಪೂರ್ವಪಕ್ಷವನ್ನೂ ಪ್ರಮಾಣವಾಕ್ಯವನ್ನೂ ಉಪೇಕ್ಷಿಸಿ ಕೈಬಿಡುವುದಾಗಲಿ ತೇಲಿಸಿಬಿಡುವುದಾಗಲಿ ಭಗವತ್ಪಾದರಿಗೆ ಒಗ್ಗುವಂತಹದೇ ಅಲ್ಲ. ವಾಚಕರಿಗೂ ಹೊಳೆಯದಂತಹ ಪೂರ್ವಪಕ್ಷವನ್ನೆಬ್ಬಿಸಿ ಬೆಳೆಸಿ, ಪೂರ್ವಪಕ್ಷಿಯ ವಾದವನ್ನೇ ಪುಷ್ಟೀಕರಿಸಿ ಅನಂತರ ಖಂಡಿಸಿ ಹಾಕುವುದು ಅವರ ವಾದದ ವಿಶಿಷ್ಟ ಲಕ್ಷಣವಾಗಿರುತ್ತದೆ. ಕೆಲವು ಕಡೆಯಂತೂ ಆಚಾರ್ಯರು ಪೂರ್ವಪಕ್ಷವನ್ನು ಎಷ್ಟು ಎತ್ತರಕ್ಕೆ ಬೆಳೆಸುತ್ತಾರೆಂದರೆ, 'ಆಹಾ!ಇದೇನು? ಆಚಾರ್ಯರು ಇಷ್ಟು ಆಗ್ರಹದಿಂದ ಪೂರ್ವಪಕ್ಷವನ್ನು ಬೆಳೆಸುತ್ತಿದ್ದಾರಲ್ಲ, ಈ ಆಕ್ಷೇಪಗಳಿಗೆಲ್ಲ ಉತ್ತರವೇನಿರಬಹುದು ?' - ಎಂದು ಎಂತಹ ವಿದ್ವಾಂಸನೂ ದಿಗ್ಭ್ರಾಂತನಾಗಿ ಬಿಡುತ್ತಾನೆ. ವಿಶೇಷವಾಗಿ ಸೂತ್ರಭಾಷ್ಯ, ಬೃಹದಾರಣ್ಯಕಭಾಷ್ಯಗಳಲ್ಲಿ ಈ ತರ್ಕಸರಣಿಯು ಉಜ್ಜ್ವಲವಾಗಿ ಗೋಚರಿಸುತ್ತದೆ. ಎಲ್ಲ ತರ್ಕವೂ ಶ್ರುತ್ಯನುಕೂಲತರ್ಕವಾಗಿರಬೇಕೆಂದೂ ಶ್ರುತಿವಿರುದ್ಧವಾಗಿ ತರ್ಕಿಸಬಾರದೆಂದೂ ಅವರ ನಿರ್ಣಯವಿದೆ. ಶ್ರುತಿಯನ್ನು ಅಪ್ರತ್ಯಕ್ಷವಿಷಯದಲ್ಲಿ ಪರಮಪ್ರಮಾಣವೆಂದು ಒಪ್ಪಿರುವಾಗ ಶ್ರುತಿವಿರುದ್ಧವಾದ ತರ್ಕವು ಹೇಯವೆಂದು ಆಚಾರ್ಯರ ಅಭಿಮತ. ಆದ್ದರಿಂದಲೇ ಸಾಂಖ್ಯವೈಶೇಷಿಕಾದಿದಾರ್ಶನಿಕರು ಶುಷ್ಕತಾರ್ಕಿಕರೆಂದು ಆಚಾರ್ಯರು ಹಂಗಿಸಿರುವುದುಂಟು.

ಪಾಂಡಿತ್ಯವು ಎರಡು ವಿಧವಾಗಿರುತ್ತದೆ. ಆಕಸ್ಮಿಕವಾಗಿ ತನಗೆ ಗಂಟುಬಿದ್ದ ಪಕ್ಷವೇ ಸರಿಯೆಂದು ಛಲದಿಂದ ವಾಗ್ವೈಖರಿಯನ್ನು ಮೆರೆಸುವ ಪಾಂಡಿತ್ಯ ಒಂದು. ಸತ್ಯಾನ್ವೇಷಣೆಯ ಉದ್ದೇಶವೇನೂ ಇದಕ್ಕಿರುವುದಿಲ್ಲ. ಸತ್ಯದಲ್ಲಿಯೇ ಧರ್ಮವು ಪ್ರತಿಷ್ಠಿತವಾಗಿದೆಯೆಂದೂ ಜನತೆಯ ಅಭ್ಯುದಯ ನಿಃಶ್ರೇಯಸಗಳು ಸತ್ಯವನ್ನೇ ಆಶ್ರಯಿಸಿರುತ್ತವೆಯೆಂದೂ ನಂಬಿ ಸ್ವಚ್ಛಮನಸ್ಸಿನಿಂದ ಸತ್ಯಾನ್ವೇಷಣೆಗಾಗಿ ಹೊರಟು ವಾಗ್ವೈಭವವನ್ನು ಮೆರೆಸುವ ಪಾಂಡಿತ್ಯ ಇನ್ನೊಂದು. ಶ್ರೀ ಶಂಕರಭಗವತ್ಪಾದರ ಪಾಂಡಿತ್ಯವು ಈ ಎರಡನೆಯ ವಿಧಕ್ಕೆ ಸೇರಿದ್ದು. ಸತ್ಯಾನ್ವೇಷಣೆಯನ್ನೇ ಧ್ಯೇಯವಾಗಿಟ್ಟುಕೊಂಡು ತಮ್ಮ ಎಲ್ಲ ಶಾಸ್ತ್ರಪಾಂಡಿತ್ಯವನ್ನೂ ಅಪಾರವಾದ ತರ್ಕಕೌಶಲವನ್ನು ಬಳಸಿ ವಿಚಾರಮಾಡುತ್ತ ಮಾಡುತ್ತ ಲೋಕೋತ್ತರವಾದ ಧೀಶಕ್ತಿಯಿಂದ ಮೇಲೇರಿ"ಏಕಮೇವಾದ್ವಿತೀಯಂ" "ನೇಹ ನಾನಾಸ್ತಿ ಕಿಂಚನ" ಎಂಬ ಆರ್ಷವಚನವೇ ಪರಮಸತ್ಯವೆಂದು ನಿರ್ಣಯಿಸಿ ಬೋಧಿಸಿದವರು ಶ್ರೀಶಂಕರ ಭಗವತ್ಪಾದಾಚಾರ್ಯರು. ಯಾವ ಪೂರ್ವಗ್ರಹವೂ ಇಲ್ಲದೆ ಸತ್ಯಾನ್ವೇಷಣೆಯೇ ಲೋಕಹಿತಾರ್ಥವಾದ ಧ್ಯೇಯವಾದ್ದರಿಂದ ಅವರು ತಮ್ಮ ಬೃಹದಾರಣ್ಯಕಭಾಷ್ಯದಲ್ಲಿ ಹೀಗೆ ನುಡಿದಿದ್ದಾರೆ -

"ತಸ್ಮಾತ್ ಶ್ರುತ್ಯರ್ಥಕಲ್ಪನಾಕುಶಲಾಃ ಸರ್ವ ಏವೋಪನಿಷದರ್ಥಮನ್ಯಥಾ ಕುರ್ವಂತಿ| ತಥಾಪಿ ವೇದಾರ್ಥಶ್ಚೇತ್ ಸ್ಯಾತ್, ಕಾಮಂ ಭವತು ನ ಮೇ ದ್ವೇಷಃ" (ಬೃಹ. ೨-೩-೬). "ಶ್ರುತ್ಯರ್ಥಕಲ್ಪನಾಕುಶಲರಾದ ಉಳಿದವರೆಲ್ಲರೂ ಉಪನಿಷದರ್ಥವನ್ನು ಅನ್ಯಥಾ ಮಾಡಿಬಿಡುತ್ತಿದ್ದಾರೆ. ಆದರೂ ಅವರು ಹೇಳುವುದೇ ವೇದಾರ್ಥವಾಗುವುದಾದರೆ, ಅದೇ ಆಗಲಿ;ನನಗೇನೂ ದ್ವೇಷವಿಲ್ಲ" ಈ ಧೀರವಾಣಿಯು ಭಗವತ್ಪಾದರ ಶ್ರೀಮುಖದಿಂದ ಮಾತ್ರ ಬರಬಲ್ಲದು.

ಉಪರ್ಯುಪರ್ಯೇತ್ಯ ಯದರ್ಥತತ್ತ್ವಂ
  ಜಗದ್ಗುರೋರ್ಧೀರ್ಬ್ಯಶಮಾಲುಲೋಕೇ |
ಅತೀತ್ಯ ತದ್ವೈದಿಕ ಮನ್ಯದೀಕ್ಷಿತುಂ
  ಸುಧೀರ್ನ ಕಶ್ಚಿತ್ ಪ್ರಭುರಸ್ತಿ ಲೋಕೇ ||

(ಅನುವಾದಕ)

"ಜಗದ್ಗುರುಗಳಾದ ಶ್ರೀಶಂಕರರ ಧೀಶಕ್ತಿಯು ಮೇಲಮೇಲಕ್ಕೆ ಏರಿ ಯಾವ ಸತ್ಯವನ್ನು ಸ್ಪಷ್ಟವಾಗಿ ಕಂಡುಕೊಂಡಿತೋ ಅದನ್ನು ಮೀರಿ ವೇದಸಂಮತವಾದ ಇನ್ನೊಂದನ್ನು ಕಾಣಲು ಯಾವ ಧೀಮಂತನೂ ಈ ಭೂಲೋಕದಲ್ಲಿ ಸಮರ್ಥನಾಗಿಲ್ಲ"

ಮುಂದೆ ಹುಟ್ಟಬಹುದಾದ ಯಾವ ಮಹಾವಿಜ್ಞಾನಿಯೂ ಕೂಡ ಇದಕ್ಕಿಂತಲೂ ಮೇಲಕ್ಕೆ ಹೋಗಲಾರ. ಅವನ ಸಿದ್ಧಾಂತವನ್ನೂ ಬಗಲಲ್ಲಿಟ್ಟುಕೊಂಡು ಆಚಾರ್ಯವಾಣಿಯು ಇನ್ನೂ ಮುಂದಕ್ಕೆ ಧಾವಿಸುತ್ತಲೇ ಇರುತ್ತದೆ.

**ಅದ್ವೈತವು ಕೇವಲ ಪಾರಮಾರ್ಥಿಕ**

ಪ್ರತ್ಯಕ್ಷದಿಂದಾಗಲಿ ಅನುಮಾನದಿಂದಾಗಲಿ ತಿಳಿದುಕೊಳ್ಳಬಹುದಾದ ವಿಷಯವನ್ನು ವೇದವು ಬೋಧಿಸಬೇಕಾಗಿಲ್ಲ. ಜಗತ್ತೆಲ್ಲವೂ ದ್ವೈತಮಯವಾದದ್ದು. ಸಕಲ ಪ್ರಾಣಿಜಾತವೂ ದ್ವೈತವನ್ನೇ ನಂಬಿ ವ್ಯವಹಾರವನ್ನು ಸಾಗಿಸುತ್ತಿದೆ. ಅದ್ವೈತಸ್ಥಿತಿಯಲ್ಲಿ ವ್ಯವಹಾರವೇ ಇರುವುದಿಲ್ಲ."ನ ಚ ಉಪದೇಶಾರ್ಹಂ ದ್ವೈತಂ, ಜಾತಮಾತ್ರಪ್ರಾಣಿ ಬುದ್ಧಿಗಮ್ಯತ್ವಾತ್" ಎಂದು ಆಚಾರ್ಯರು ಹೇಳಿದ್ದಾರೆ. (ಬೃಹ. ಭಾ. ೫-೧ ಪೀಠಿಕೆ). ಬ್ರಹ್ಮಜ್ಞಾನಿಗೆ ಮಾತ್ರ ಅನುಭವಕ್ಕೆ ಬರುವ ಪಾರಮಾರ್ಥಿಕಸ್ಥಿತಿ ಅದು. 'ಭಾವಾದ್ವೈತಂ ಸದಾ ಕುರ್ಯಾತ್ ಕ್ರಿಯಾದ್ವೈತಂ ಕದಾಪಿ ನ' ಎಂಬುದೇ ಆಚಾರ್ಯರ ಉಪದೇಶ. ಅದ್ವೈತವು ಸತ್ಯವೆಂದು ಮಾನಸವಾದ ವಿಶ್ವಾಸವಿರಬೇಕೇ ಹೊರತು ವ್ಯವಹಾರದಲ್ಲಿ ಅದನ್ನೆಂದಿಗೂ ತರಕೂಡದು. ಬೋಧಿಸಲೂ ಕೂಡದು. ಆದ್ದರಿಂದಲೇ ಸಾಧಕನಿಗೆ ಕರ್ಮಾನುಷ್ಠಾನ, ಭಕ್ತಿ, ಗುರುಶುಶ್ರೂಷೆ- ಮೊದಲಾದವು ವಿಹಿತವಾಗಿವೆ. ಬ್ರಹ್ಮಜ್ಞಾನಿಯೂ ಸಹ ವ್ಯವಹಾರಮಾರ್ಗದಲ್ಲಿ

ತೊಡಗಿದಾಗ ಲೌಕಿಕನಂತೆಯೇ ನಡೆದುಕೊಳ್ಳುತ್ತಾನೆ. ಆಚಾರ್ಯರೇ ಇದಕ್ಕೆ ನಿದರ್ಶನ. ಗ್ರಂಥರಚನೆ, ಶಿಷ್ಯೋಪದೇಶ, ದೇವತಾಸ್ತುತಿ, ಮಾತೃಸಂಸ್ಕಾರ, ಪರಮತಖಂಡನೆ ಮೊದಲಾದ ಕ್ರಿಯೆಗಳು ದ್ವೈತಾವಲಂಬನದಿಂದಲೇ ಸಾಧ್ಯವಾಗತಕ್ಕವು. ಅವರು ತಮ್ಮ ಜೀವನದಲ್ಲಿ ಸದಾ ಉತ್ಸಾಹದಿಂದ ಕಾರ್ಯತತ್ಪರರಾಗಿಯೇ ಇದ್ದರು. ವಿದ್ಯಾರಣ್ಯಸ್ವಾಮಿಗಳು ಪಂಚದಶಿಯಲ್ಲಿ -

ತತ್ತ್ವವಿತ್ತ್ವವಿರೋಧಿತ್ವಾತ್ ಲೌಕಿಕಂ ಸಮ್ಯಗಾಚರೇತ್ ||
(ಧ್ಯಾನದೀಪ-೮೭)

ಜ್ಞಾನಿನಾಽಽಚರಿತುಂ ಶಕ್ಯಂ ಸಮ್ಯಗ್ರಾಜ್ಯಾದಿಲೌಕಿಕಮ್ ||
(ಧ್ಯಾನದೀಪ-೧೧೪)

ಎಂದು ಜ್ಞಾನಿಯೂ ಲೌಕಿಕ ವ್ಯವಹಾರವನ್ನು ಚೆನ್ನಾಗಿಯೇ ನಡೆಸಬಲ್ಲನೆಂದು ಸಾರಿದ್ದಾರೆ. ಪಾರಮಾರ್ಥಿಕಸತ್ತೆಗೆ ವ್ಯತಿರಿಕ್ತವಾದದ್ದು ವ್ಯಾವಹಾರಿಕಸತ್ತೆ. ಈ ವಸ್ತುಸ್ಥಿತಿಯನ್ನು ಗ್ರಹಿಸಲಾರದ ಜನರು ಅದ್ವೈತವನ್ನು ಒಪ್ಪಿದರೆ ಲೋಕವ್ಯವಹಾರವೇ ಮುಳುಗಿ ಹೋಗುತ್ತದೆಯೋ ಎಂಬಂತೆ ಹುರುಳಿಲ್ಲದ ಆಪಾದನೆಗಳನ್ನು ಮಾಡುತ್ತಾರೆ.

## ಆಚಾರ್ಯರಿಂದಾದ ಲೋಕೋಪಕಾರಗಳು

### ಸರ್ವಮತಸಾಮರಸ್ಯ

ಶ್ರೀಶಂಕರಭಗವತ್ಪಾದರು ಬೋಧಿಸಿದ ಸಿದ್ಧಾಂತವು ಪರಮಾರ್ಥವಾಗಿ ಯಾವ ಸಾಂಖ್ಯಾದಿದ್ವೈತದರ್ಶನಕ್ಕೂ ವಿರುದ್ಧವಾದ್ದಲ್ಲ. ಬೌದ್ಧಜೈನಾದ್ಯವೈದಿಕಮತಗಳಿಗೂ ವಿರುದ್ಧವಲ್ಲ. ಕಡೆಗೆ ನಾಸ್ತಿಕ ಮತದೊಡನೆಯೂ ಇದಕ್ಕೆ ಕಲಹವಿಲ್ಲ. ಹೆಚ್ಚೇನು? ಜಗತ್ತಿನಲ್ಲಿ ಯಾವ ಯಾವ ಮತಗಳಿವೆಯೋ ಅವೆಲ್ಲವನ್ನೂ ಅದ್ವೈತದರ್ಶನವು ತನ್ನ ಉದಾರವೂ ವಿಶಾಲವೂ ಆದ ತೆಕ್ಕೆಯಲ್ಲಿ ಸೇರಿಸಿಕೊಂಡು ಬಿಡುತ್ತದೆ. ಆದ್ದರಿಂದಲೇ ಶ್ರೀ ಗೌಡಪಾದಾಚಾರ್ಯರು-

ಸ್ವಸಿದ್ಧಾಂತವ್ಯವಸ್ಥಾಸು ದ್ವೈತಿನೋ ನಿಶ್ಚಿತಾ ದೃಢಮ್ |
ಪರಸ್ಪರಂ ವಿರುಧ್ಯಂತೇ ತೈರಯಂ ನ ವಿರುಧ್ಯತೇ ||
ಅದ್ವೈತಂ ಪರಮಾರ್ಥೋ ಹಿ ದ್ವೈತಂ ತದ್ಭೇದ ಉಚ್ಯತೇ |
ತೇಷಾಮುಭಯಥಾ ದ್ವೈತಂ ತೇನಾಯಂ ನ ವಿರುಧ್ಯತೇ ||
-ಮಾಂ.ಕಾ. ೩-೧೭, ೧೮

ಎಂದು ಹೇಳಿದ್ದಾರೆ.

ಇದರ ತಾತ್ಪರ್ಯವೇನೆಂದರೆ-

ಸಾಂಖ್ಯಾದಿದ್ವೈತದರ್ಶನಗಳು ಸತ್ಯದರ್ಶನಗಳಲ್ಲ. ಆ ದರ್ಶನವನ್ನೊಪ್ಪಿದವರೆಲ್ಲರೂ ದ್ವೈತಿಗಳಾದ್ದರಿಂದ ಪರಮಾರ್ಥವನ್ನು ತಪ್ಪಾಗಿ ಪ್ರತಿಪಾದಿಸುತ್ತಾರೆ. ಅವರಲ್ಲಿಯೂ ಪರಮಾರ್ಥದ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿವೆ. ಆದ್ದರಿಂದ ತಮ್ಮ ಸಿದ್ಧಾಂತವನ್ನು ಪ್ರತಿಪಾದಿಸುವಾಗ ಇದೇ ಸತ್ಯ, ಇದೇ ಪರಮಾರ್ಥ- ಎಂದು ಪರಸ್ಪರ ಜಗಳವಾಡುತ್ತಾರೆ. ಅದ್ವೈತಿಗಳಿಗೆ ಅವರೊಡನೆ ವಿರೋಧವೇನೂ ಇಲ್ಲ. ಏಕೆಂದರೆ, ಅದ್ವೈತವು ಸಮ್ಯಗ್ ದರ್ಶನ. ಸರ್ವವೂ ಬ್ರಹ್ಮವೆಂದೂ ಬ್ರಹ್ಮಾತಿರಕ್ತವಾದದ್ದು ಏನೇನೂ ಇಲ್ಲವೆಂದೂ ಬ್ರಹ್ಮವು ನಿರ್ಗುಣನಿರಂಜನ ಸ್ವರೂಪವಾದ್ದೆಂದೂ ಈ ದರ್ಶನವು ಪರಮಾರ್ಥವನ್ನು ಸರಿಯಾಗಿ ತಿಳಿಸಿಕೊಟ್ಟಿದೆ. ದ್ವೈತಗಳೆಲ್ಲವೂ ಅದ್ವೈತವಸ್ತುವಿನಿಂದಲೇ ಹೊರಬಂದವು. ಈ ದ್ವೈತಕಲ್ಪನೆಗಳು ಅದ್ವೈತದ ಅವಯವಗಳಿದ್ದಂತೆ. ಸಗುಣನಾದ ಶಿವನೇ ಪರಬ್ರಹ್ಮ, ಶೇಷಶಾಯಿಯಾದ ವಿಷ್ಣುವೇ ಪರಬ್ರಹ್ಮ - ಎಂದು ದ್ವೈತಿಗಳು ವಾದಿಸಿದರೆ ಅವೆರಡೂ ಆಂಶಿಕಸತ್ಯಗಳಾದ್ದರಿಂದ ಅದ್ವೈತಿಯು'ಅಸ್ತು' ಎಂದು ಸುಮ್ಮನಾಗಿಬಿಡುತ್ತಾನೆ. ಅನೇಕಜೀವಾತ್ಮಗಳಿವೆ ಎಂದು ದ್ವೈತಿಯು ವಾದಿಸಿದರೆ, ಉಪಾಧಿಭೇದದಿಂದ ಜೀವಾತ್ಮರೂ ಅನೇಕರೇ - ಎಂದು ಅದ್ವೈತಿ ಹೇಳುತ್ತಾನೆ. ಆದ್ದರಿಂದ ಅದ್ವೈತದಲ್ಲಿ ಸರ್ವಮತಸಮನ್ವಯ ಉಂಟು. ದ್ವೈತದಲ್ಲಿ ಈ ಸಮನ್ವಯವು ಶಕ್ಯವೇ ಅಲ್ಲ. ಇದೇ ಅಭಿಪ್ರಾಯವು ಪರಮಾರ್ಥಸಾರದಲ್ಲಿ ಸ್ಫುಟವಾಗಿದೆ-

ಯದ್ಯತ್ ಸಿದ್ಧಾಂತಾಗಮತರ್ಕೇಷು ಪ್ರಬ್ರುವಂತಿ ರಾಗಾಂಧಾಃ |
ಅನುಮೋದಾಮಸ್ತತ್ತತ್ ತೇಷಾಂ ಸರ್ವಾತ್ಮವಾದಧಿಯಾ ||

-ಪ.ಸಾ. ೬೫.

ಹೀಗಿರುವುದರಿಂದ ಅಹಿಂಸಾ, ಸತ್ಯ, ಅಕ್ರೋಧ, ತ್ಯಾಗ, ಶಾಂತಿ- ಮೊದಲಾದ ಸಾಮಾನ್ಯಧರ್ಮಗಳನ್ನು ಅಂಗೀಕರಿಸುವ ಸಕಲಸಿದ್ಧಾಂತಗಳೂ ಮತಗಳೂ ಆಚಾರ್ಯರು ಉಪದೇಶಿಸಿದ ಏಕಾತ್ಮತಾ ದರ್ಶನದ ತೆಕ್ಕೆಯಲ್ಲಿ ಸೇರಿಕೊಂಡು ಬಿಡುತ್ತವೆ.

ಲೋಕಧಲ್ಲಿ ನಾನಾಗುಣಸ್ವಭಾವದವರಿರುತ್ತಾರೆ. ಮಂದಾಧಿಕಾರಿಗಳೂ ಮಧ್ಯಮಾಧಿಕಾರಿಗಳೂ ಇರುತ್ತಾರೆ. ಅವರೆಲ್ಲರಿಗೂ ಅದ್ವಯಾತ್ಮದರ್ಶನದಲ್ಲಿ ಥಟ್ಟನೆ ಶ್ರದ್ಧೆ ಹುಟ್ಟುವುದಿಲ್ಲ. ಆದ್ದರಿಂದ ಅವಧೂತಗೀತೆಯು 'ಈಶ್ವರಾನುಗ್ರಹಾದೇವ ಪುಂಸಾಮದ್ವೈತವಾಸನಾ' ಎಂದು ಹೇಳಿಯೇ ಇದೆ. ಅಂತಹ ಸಾಮಾನ್ಯಾಧಿಕಾರಿಗಳನ್ನು ಹಂತಹಂತವಾಗಿ ಸೋಪಾನಕ್ರಮದಿಂದ ಶ್ರೇಯೋಮಾರ್ಗದಲ್ಲಿ ಕರೆದೊಯ್ಯಬೇಕೆಂಬ ಕೃಪಾದೃಷ್ಟಿಯಿಂದ ಕಪಿಲ, ಕಣಾದಾದಿ ಋಷಿಗಳು ಸಾಂಖ್ಯಾದಿದರ್ಶನಗಳನ್ನು ರಚಿಸಿದರು. ಅವರೇನೂ ಅಜ್ಞಾನಿಗಳಲ್ಲ. ಆದರೆ ಅವರ ಸಿದ್ಧಾಂತವೇ ಪರಮಾರ್ಥಸತ್ಯವಲ್ಲವೆಂದೂ

ಅದ್ವೈತವೇ ಸಮ್ಯಗ್ದರ್ಶನವೆಂದೂ ಉತ್ತಮಾಧಿಕಾರಿಗಳಿಗೆ ತಿಳಿಸಿಕೊಡುವುದಕ್ಕಾಗಿ ಆಚಾರ್ಯರು ಸಾಂಖ್ಯಾದಿದರ್ಶನಗಳನ್ನು ಖಂಡಿಸಿದ್ದಾರೆ. ಮಂಡನಮಿಶ್ರನು ವಾದದಲ್ಲಿ ಪರಾಜಿತನಾದಾಗ ಜೈಮಿನೀಯ ಸಿದ್ಧಾಂತದ ವಿಷಯವಾಗಿ ಇದನ್ನೇ ಆಚಾರ್ಯರು ಹೇಳಿದ್ದಾರೆ. ಜೈಮಿನಿಮುನಿಗಳೇ ಪ್ರತ್ಯಕ್ಷರಾಗಿ ಸ್ವಾಭಿಪ್ರಾಯವನ್ನು ಹೀಗೆಯೇ ಮಂಡನನಿಗೆ ತಿಳಿಸಿದರೆಂದು ಶಂಕರದಿಗ್ವಿಜಯದಲ್ಲಿ ವರ್ಣಿತವಾಗಿದೆ.

ವೇದಾಂತವು ಪರಮಾತ್ಮನನ್ನು ಬ್ರಹ್ಮ, ಆತ್ಮ- ಎಂಬ ಶಬ್ದಗಳಿಂದ ವ್ಯವಹರಿಸುತ್ತದೆ. ಸಾಂಖ್ಯಾದಿದರ್ಶನಗಳು ಈಶ್ವರ ಶಬ್ದವನ್ನು ಬಳಸುತ್ತವೆ. ಶಿವನೇ ಸರ್ವೋತ್ತಮ, ವಿಷ್ಣುವೇ ಸರ್ವೋತ್ತಮ -ಇತ್ಯಾದಿವಾದಗಳು ಅನಂತರ ಹುಟ್ಟಿಕೊಂಡವು. ತಂತ್ರಾಗಮಗಳ ಪ್ರಭಾವದಿಂದ ಅನೇಕನಾಮರೂಪಗಳ ಕಲ್ಪನೆಯುಳ್ಳ ಉಪಾಸನಾಭೇದಗಳು ತಲೆದೋರಿದವು. ಜನರಲ್ಲಿ ಸಹಜವಾದ ರಾಜಸತಾಮಸಗುಣಗಳಿಂದ ಶಿಷ್ಟಸಂಮತವಲ್ಲದ ದುರಾಚಾರಗಳು ಪೂಜಾಕ್ರಮದಲ್ಲಿ ಪ್ರವೇಶಿಸಿದವು. ಭರತಖಂಡವು ಅತ್ಯಂತವಿಶಾಲವಾದ ರಾಷ್ಟ್ರವಾದ್ದರಿಂದ ಯಾವ ಪ್ರಾಂತದಲ್ಲಿ ಯಾವ ಹೊಸಮತವು ಹುಟ್ಟಿತು, ಯಾವುದು ಪ್ರಬಲವಾಯಿತು-ಎಂಬುದೇ ತಿಳಿಯುತ್ತಿರಲಿಲ್ಲ. ವೇದೋಕ್ತವಾದ ಏಕೇಶ್ವರವಾದವು ಎಂದರೆ ಅದ್ವೈತಸಿದ್ಧಾಂತವು ಮರೆಯಾಯಿತು. ಮತೀಯ ಅನಾಯಕತ್ವವೇ ಪ್ರಾಪ್ತವಾಗಿ ಅಂತಃಕಲಹಗಳು ಬೆಳೆದವೆಂಬುದನ್ನು ಇತಿಹಾಸವೇ ಸಮರ್ಥಿಸುತ್ತದೆ. ಶಂಕರದಿಗ್ವಿಜಯ ದಿಂದಲೂ ಇದು ತಿಳಿದು ಬರುತ್ತದೆ. ಏಕಚ್ಛತ್ರಾಧಿಪತಿಯಾಗಿ ತನ್ನ ಶಾಸನವನ್ನು ರಾಷ್ಟ್ರದಲ್ಲೆಲ್ಲ ಮೆರೆಸಬಲ್ಲ ಚಕ್ರವರ್ತಿಯಂತೂ ಇರಲಿಲ್ಲ. ಹೀಗೆ ಅನ್ಯೋನ್ಯವಿರುದ್ಧವಾದ ನಾನಾ ಮತಗಳು ಹುಟ್ಟಿ ರಾಜಕೀಯವೂ ಅನಾಯಕವಾದಾಗ ರಾಷ್ಟ್ರದ ಗತಿ ಏನು?

ಮತನಿಮಿತ್ತಕವಾದ ಅಂತಃಕಲಹಗಳಿಂದ ಭಾರತೀಯ ಸಮಾಜವು ವಿಚ್ಛಿದ್ರವಾಗುತ್ತಿದೆ ಯೆಂದೂ ವೇದೋಕ್ತವಾದ ಏಕಾತ್ಮತಾ ಸಿದ್ಧಾಂತದಿಂದಲೇ ಸರ್ವಮತಸಾಮರಸ್ಯವನ್ನು ಬೋಧಿಸಿ ರಾಷ್ಟ್ರದ ಏಕತೆಯನ್ನುಳಿಸಬೇಕೆಂದೂ ಕಾರ್ಯಪ್ರವೃತ್ತರಾದ ವಿಭೂತಿಪುರುಷರು ಶ್ರೀಶಂಕರಾಚಾರ್ಯರು. ಅಖಂಡಭಾರತದಲ್ಲೆಲ್ಲ ಸಂಚರಿಸಿ ಜನತೆಯಲ್ಲಿ ಪ್ರಸಿದ್ಧರಾಗಿದ್ದ ಪಂಚದೇವತೆಗಳನ್ನು ಆರಿಸಿಕೊಂಡು ಪಂಚಾಯತನಪೂಜಾಪದ್ಧತಿಯನ್ನು ಆಚರಣೆಗೆ ತಂದರು. ಈ ದೇವತೆಗಳೆಲ್ಲರೂ ಸಮಾನರೇ, ಯಾರನ್ನು ಪೂಜಿಸಿದರೂ ಜಗದೀಶ್ವರನಿಗೇ ಸಲ್ಲುವುದು. ಒಬ್ಬನೇ ಈಶ್ವರನು ಭಕ್ತರ ರುಚಿಭೇದದಿಂದ ವಿಭಿನ್ನನಾಮರೂಪಗಳನ್ನು ಧರಿಸಿದಂತೆ ಕಾಣುತ್ತಾನೆ-ಎಂಬ ವಿಶ್ವಾಸವು ಜನತೆಯಲ್ಲಿ ಅನುಕ್ರಮವಾಗಿ ಮೂಡಲೆಂಬುದೇ ಈ ಪೂಜಾಪದ್ಧತಿಗೆ ನಿಮಿತ್ತವೆಂಬುದು ಸ್ಪಷ್ಟವಾಗಿದೆ.

ಆಚಾರ್ಯರು ಉಪದೇಶಿಸಿದ ವೇದಾಂತದರ್ಶನವು ಸಾಂಖ್ಯಾದಿದರ್ಶನಗಳಂತೆಯೇ ಕೇವಲ ದಾರ್ಶನಿಕವಿಚಾರಗಳಿಗೆ ಮೀಸಲಾದದ್ದು. ಮತೀಯ ಆಚಾರಗಳನ್ನು ಅವರು ವೇದಾಂತದರ್ಶನದ ಜೊತೆಗೆ ಗಂಟುಹಾಕಲೇ ಇಲ್ಲ. ಆಚಾರಪದ್ಧತಿಗಳೆಲ್ಲವೂ

ಧರ್ಮಶಾಸ್ತ್ರಗಳಿಗೆ ಸಂಬಂಧಿಸಿದವು. ಬ್ರಹ್ಮಮೀಮಾಂಸೆಗೂ ಮತೀಯಚಿಹ್ನೆಗಳಿಗೂ ಯಾವ ಸಂಬಂಧವೂ ಇಲ್ಲ. ಆದ್ದರಿಂದಲೇ ಶ್ರೀಶಂಕರರು ತಮ್ಮ ಭಾಷ್ಯಗಳಲ್ಲಿ ಯಾವ ಮತಚಿಹ್ನೆಗಳನ್ನೂ ಹೇಳಲೇಇಲ್ಲ. ಅವರು ಯಾವ ಹೊಸಮತವನ್ನೂ ಸ್ಥಾಪಿಸಲಿಲ್ಲವಾದ್ದರಿಂದ ಮತಾಂತರೀಕರಣದ ಪ್ರಶ್ನೆಯೇ ಬರಲಿಲ್ಲ. ಇಂದಿಗೂ ಶಾಂಕರರು ಎಂಬ ಯಾವ ಮತೀಯರೂ ಇಲ್ಲ. ಯಾರು ಮತಾಂತರಕ್ಕೆ ಸೇರದೆ ಸನಾತನವಾದ ವೈದಿಕ ಸಂಪ್ರದಾಯದಲ್ಲಿಯೇ ಉಳಿದು ಕೊಂಡರೋ ಅವರನ್ನು ಗುರುತಿಸುವುದಕ್ಕಾಗಿ ಪರಿಶೇಷಾತ್ ಸ್ಮಾರ್ತರೆಂಬ ಹೆಸರು ರೂಢಿಗೆ ಬಂದಿತು. ಸ್ಮಾರ್ತರೆಂದರೆ ಸ್ಮೃತ್ಯುಕ್ತವಾದ್ದನ್ನು ಪಾಲಿಸತಕ್ಕವರೆಂದು ಅರ್ಥ. ತಮ್ಮ ಮತಕ್ಕೆ ಸೇರಿಸಿಕೊಳ್ಳುವ ದೀಕ್ಷಾಪದ್ಧತಿ ಇವರಲ್ಲಿಲ್ಲ.

ಅದ್ವೈತಸಿದ್ಧಾಂತದಲ್ಲಿ ಸರ್ವಮತಸಮನ್ವಯವು ಸ್ವತಃಸಿದ್ಧವಾಗಿದೆ. ಅದನ್ನು ಹೊಸದಾಗಿ ಕಲ್ಪಿಸಬೇಕಾದ್ದಿಲ್ಲ. ಆಚಾರ್ಯರ ಸ್ತೋತ್ರಗ್ರಂಥಗಳಲ್ಲಿ ಎಲ್ಲ ದೇವತೆಗಳ ಸ್ತುತಿಗಳೂ ಇವೆ. ಈ ಗ್ರಂಥದಲ್ಲಿಯೇ ಶಿವ, ವಿಷ್ಣು, ದುರ್ಗಾ, ಲಕ್ಷ್ಮೀ, ಶಾರದಾಸ್ತುತಿಗಳಿವೆ. ವಿಷ್ಣುವಿನ ದಶಾವತಾರಗಳನ್ನೂ ಸ್ತುತಿಸಿದ್ದಾರೆ. ಬುದ್ಧನನ್ನೂ ಸ್ತುತಿಸಿದ್ದಾರೆ (ನೋಡಿ. ೧೨-೧೮). ಈ ಅದ್ವಯಾತ್ಮಸಿದ್ಧಾಂತದಲ್ಲಿ ಜಗತ್ತಿನಲ್ಲಿರುವ ಸಕಲಮತಗಳ ದೇವತಾಕಲ್ಪನೆಗಳೂ ಯಾವ ವಿರೋಧವೂ ಇಲ್ಲದೆ ಹೊಂದಿಕೊಳ್ಳುತ್ತವೆ, ಭಗವಂತನು ಸಾಕಾರ- ನಿರಾಕಾರ, ಸಗುಣ-ನಿರ್ಗುಣ, ಸ್ತ್ರೀ -ಪುರುಷ-ಎಂಬ ಛಲದ ವಾದಕ್ಕೆ ಅವಕಾಶವೇ ಇಲ್ಲ. ನಿಮಗೆ ಇಷ್ಟವಾದ ಯಾವ ನಾಮರೂಪಗಳನ್ನಾದರೂ ಇಟ್ಟುಕೊಳ್ಳಿರಿ, ಯಾವ ಭಾಷೆಯ ಯಾವ ಶಬ್ದವನ್ನಾದರೂ ಬಳಸಿರಿ. ಹಾಗೆ ದೇವರನ್ನು ಅರ್ಚಿಸಬಹುದು. ದ್ವೈತಮತಗಳಲ್ಲಿ ಈ ಸಾಮರಸ್ಯವಿಲ್ಲ. ಅದರಿಂದಲೇ ಮತೀಯ ಕಲಹಗಳು ನಡೆಯುತ್ತಿವೆ.

### ವಿಶ್ವಕುಟುಂಬ

ಅಣ್ಣತಮ್ಮಂದಿರಲ್ಲಿ ತಂದೆಯ ಒಂದೇ ರಕ್ತವು ಹರಿಯುವುದರಿಂದ ಅವರು ಜಗಳವಾಡದೆ ಭ್ರಾತೃವಾತ್ಸಲ್ಯದಿಂದ ಬಾಳಬೇಕೆಂಬುದು ಯುಕ್ತವಾದ ಉಪದೇಶವೇ ಹೌದು. ಆಚಾರ್ಯರು ಇನ್ನೂಮುಂದೆ ಹೋಗಿ "ಈ ಪೃಥ್ವಿಯಲ್ಲಿರುವ ಸಕಲಮಾನವರೂ ಅಣ್ಣತಮ್ಮಂದಿರೇ. ನೀವೆಲ್ಲರೂ ಪರಮಾತ್ಮನ ಮಕ್ಕಳೇ. ಪರಮಾತ್ಮನ ಪ್ರತಿಬಿಂಬಗಳೇ. ವಾಸ್ತವವಾಗಿ ಪರಮಾತ್ಮಸ್ವರೂಪರೇ ಆಗಿದ್ದೀರಿ. ಪ್ರಪಂಚದಲ್ಲಿರುವ ಸಕಲವಸ್ತುಗಳಿಗಿಂತಲೂ ತನಗೆ ತಾನು(ತನ್ನ ಆತ್ಮನು) ಪ್ರಿಯತಮನಾಗಿರುತ್ತಾನೆ. ಎಲ್ಲರೂ ನಿಮ್ಮ ಆತ್ಮನೇ ಆಗಿರುವಾಗ ಜಗಳವೇತಕ್ಕೆ?ತಾನೇ ತನ್ನ ಕೈಕಾಲುಕಣ್ಣು ಗಳೊಡನೆ ಕಲಹವಾಡಿದಂತೆ ಇದು ಹಾಸ್ಯಾಸ್ಪದ" ಎಂದು ಬೋಧಿಸುತ್ತಾರೆ.

ತ್ವಯಿ ಮಯಿ ಚಾನ್ಯತ್ರೈಕೋ ವಿಷ್ಣುಃ
ವ್ಯರ್ಥಂ ಕುಪ್ಯಸಿ ಮಯ್ಯಸಹಿಷ್ಣುಃ ||

ಎಂಬ ಉಪದೇಶದ ತಾತ್ಪರ್ಯವಿದು. ದ್ವೈತಸಿದ್ಧಾಂತದಲ್ಲಿ ದೇವರಿಗೂ ಮಾನವರಿಗೂ ಇರುವುದು ಸ್ವಾಮಿಭೃತ್ಯಸಂಬಂಧ. ತಂದೆ ಮಕ್ಕಳ ಸಂಬಂಧವೂ ಅಲ್ಲ. ಅದ್ವೈತ ಸಿದ್ಧಾಂತದಲ್ಲಾದರೋ ನಾನು, ನೀನು, ಅವನು, ಅವಳು, ಅದು ಎಂಬ ಭೇದವೇ ಇಲ್ಲ. ದೇಹ ಬೇರೆ ಪ್ರಾಣ ಒಂದೇ- ಎಂಬ ನುಡಿ ಇಲ್ಲಿ ಸರಿಯಾಗಿ ಅನ್ವಯಿಸುತ್ತದೆ. ಶ್ರೀಶಂಕರರ ಬೋಧನೆಯನ್ನು ಜನರು ಸರಿಯಾಗಿ ಅರ್ಥಮಾಡಿಕೊಂಡರೆ ಅನ್ಯೋನ್ಯವಾಗಿ ಕಾದಾಡುವುದಕ್ಕೂ ರಾಗ, ದ್ವೇಷ, ಕ್ರೋಧ, ಅಸೂಯೆಗಳಿಗೂ ಕಾರಣವೇ ಇರುವುದಿಲ್ಲ. ವಿಶ್ವವೇ ನನ್ನ ಕುಟುಂಬವೆಂಬ ಭಾವವು ದೃಢವಾಗುತ್ತದೆ. 'ಯತ್ರ ವಿಶ್ವಂ ಭವತ್ಯೇಕ ನೀಡಮ್' (ನಾರಾಯಣೋಪನಿಷತ್- ೩) - ಎಂಬ ವಾಣಿಯು ಸತ್ಯವಾಗಿ ವಿಶ್ವವೇ ನಮ್ಮ ಒಂದು ಮನೆಯಾಗಿ ಬಿಡುತ್ತದೆ.

### ವೈದಿಕಸಿದ್ಧಾಂತದ ಪುನರುಜ್ಜೀವನ

ಮಾನವಕುಲದ ಶ್ರೇಯಸ್ಸಿಗಾಗಿ ಆವಿರ್ಭವಿಸಿದ ವೇದಗಳಿಗೆ ಭಾರತವು ತವರುಮನೆ. ಅನಾದಿಕಾಲದಿಂದ ಈ ರಾಷ್ಟ್ರದಲ್ಲಿ ಪ್ರಚುರವಾಗಿದ್ದ ವೈದಿಕಸಿದ್ಧಾಂತಕ್ಕೆ ಹಲವಾರು ಕಾರಣಗಳಿಂದ ಕ್ಷೀಣಸ್ಥಿತಿಯು ಪ್ರಾಪ್ತವಾದಾಗ ಅದಕ್ಕೆ ಪುನಶ್ಚೈತನ್ಯವನ್ನು ನೀಡುವುದಕ್ಕಾಗಿ ಕುಮಾರಿಲಭಟ್ಟರೇ ಮೊದಲಾದ ವಿದ್ವಾಂಸರು ಪ್ರಯತ್ನಿಸಿ ಕೃತಕೃತ್ಯರೂ ಆದರು. ಅವರ ಪ್ರಯತ್ನವೇನಿದ್ದರೂ ವೇದಪ್ರಾಮಾಣ್ಯ, ಕರ್ಮಕಾಂಡದ ಪುನರುಜ್ಜೀವನ -ಇವುಗಳಿಗೆ ಮೀಸಲಾಗಿತ್ತು. ಜ್ಞಾನಕಾಂಡದ ಸಮ್ಯಗ್‌ದರ್ಶನದಕಡೆಗೆ ಅವರು ವಿಶೇಷಗಮನ ವನ್ನೀಯಲಿಲ್ಲ. ಅಲ್ಲದೆ ಅವರ ಪಾಂಡಿತ್ಯವು ವಾದಗೋಷ್ಠಿಗೆ ಸೀಮಿತವಾಗಿ ರಾಷ್ಟ್ರದ ಕೆಲವು ಪ್ರಾಂತಗಳಿಗೆ ಹರಡಿತೇಹೊರತು ಅಖಂಡಭಾರತದ ವ್ಯಾಪ್ತಿಯನ್ನು ಗಳಿಸಿಕೊಳ್ಳಲಿಲ್ಲ. ಇದೆಲ್ಲವೂ ಶ್ರೀಶಂಕರಾಚಾರ್ಯರ ಸೂಕ್ಷ್ಮದೃಷ್ಟಿಗೆ ಗೋಚರಿಸಿತು.

ಮಾನವಹಿತಕ್ಕಾಗಿ ವೇದ ಬೋಧಿತವಾದವು ಮೂರು- ಕರ್ಮ, ಉಪಾಸನೆ, ಆತ್ಮಜ್ಞಾನ. ಅಧಿಕಾರಿಭೇದದಿಂದ ಇವು ವ್ಯವಸ್ಥಿತವಾದವು. ಈ ಮೂರನ್ನೂ ಅಧಿಕಾರಾನುರೋಧವಾಗಿ ಸಮಸ್ತಭಾರತೀಯರಿಗೂ ತಿಳಿಸಿಕೊಟ್ಟರೆ ಮಾತ್ರ ವೈದಿಕಧರ್ಮವು ಈ ರಾಷ್ಟ್ರದಲ್ಲಿ ಪ್ರತಿಷ್ಠಿತವಾಗುವುದೆಂದು ಅವರು ನಿಶ್ಚಯಿಸಿದರು. ಅದರಂತೆಯೇ ವಿಜಯಯಾತ್ರೆಯನ್ನು ಕೈಗೊಂಡು ಈ ರಾಷ್ಟ್ರದ ನಾಲ್ಕು ಎಲ್ಲೆಗಳವರೆಗೂ ಸಂಚರಿಸಿ, ವೇದವೃಕ್ಷವು ಶಾಖೋಪಶಾಖೆಗಳಾಗಿ ಚಿಗುರುವಂತೆ ನವಚೈತನ್ಯವನ್ನು ತುಂಬಿದರು. ಅವರು ಹೋದಕಡೆಯಲ್ಲಿ ಶ್ರೋತೃವೃಂದವೇ ಬಂದು ನೆರೆಯುತ್ತಿತ್ತು. ಇದು ಶಂಕರ ದಿಗ್ವಿಜಯದಲ್ಲಿಯೇ ವರ್ಣಿತವಾಗಿದೆ. ಇದರಿಂದ ಸಾಮಾನ್ಯ ಜನತೆಗೂ ವೇದಸಂದೇಶವು ಮುಟ್ಟಿ ವೇದವೇ ಪ್ರಮಾಣಗ್ರಂಥವೆಂಬ ಬುದ್ಧಿಯು ದೃಢವಾಯಿತು. ರಾಷ್ಟ್ರದ ಆದ್ಯಂತವೂ ಸಂಚರಿಸಿ ಸತತವಾಗಿ ಪರಿಶ್ರಮಿಸಿದ್ದರಿಂದ ವೇದವೃಕ್ಷದ ಸುತ್ತಲೂ ಬೆಳೆದುನಿಂತ ಮುಳ್ಳುಬಳ್ಳಿಗಳನ್ನು ತೆಗೆದು ಪರಿಸರವನ್ನು ಒಮ್ಮೆ ಸ್ವಚ್ಛಗೊಳಿಸಿದ್ದಾಯಿತು. ಮತ್ತೆ ಈ

ಮುಳ್ಳುಬಳ್ಳಿಗಳು ಬೆಳೆಯದಿರುತ್ತವೆಯೆ? ಇದುವರೆಗೆ ಆದದ್ದು ಹೀಗೆಯೇ. ಈ ಪರಿಹಾರವು ಶಾಶ್ವತವಲ್ಲ. ಸುತ್ತಲೂ ಬಳ್ಳಿಗಳು ಬೆಳೆಯದಂತೆ ನೋಡಿಕೊಂಡು, ಈ ವೃಕ್ಷದ ಪಾತಿಗೆ ನೀರೆರೆಯುತ್ತಿರುವ ಒಂದು ಶಾಶ್ವತವ್ಯವಸ್ಥೆ ಇರಬೇಕೆಂದು ಆಚಾರ್ಯರ ದೂರದೃಷ್ಟಿಗೆ ಹೊಳೆಯಿತು. ಅದರ ಫಲವಾಗಿ ಮಠಗಳ ಸ್ಥಾಪನೆಯಾಯಿತು. ಭಾರತವು ವಿಶಾಲವಾದ ರಾಷ್ಟ್ರವಾದ್ದರಿಂದ ಎಲ್ಲೆಡೆಯೂ ವೈದಿಕಧರ್ಮವು ಅವಿಚ್ಛಿನ್ನವಾಗಿ ಪ್ರವಹಿಸುತ್ತಿರಲೆಂದು, ಧರ್ಮರಕ್ಷಾಕವಚಗಳಂತೆ ನಾಲ್ಕುದಿಕ್ಕುಗಳಲ್ಲಿ ನಾಲ್ಕುಮಠಗಳನ್ನು ಸ್ಥಾಪಿಸಿದರು. ಪೂರ್ವದಿಕ್ಕಿನಲ್ಲಿ ಜಗನ್ನಾಥ(ಪುರೀ), ದಕ್ಷಿಣದಲ್ಲಿ ಶೃಂಗೇರಿ, ಪಶ್ಚಿಮದಲ್ಲಿ ದ್ವಾರಕಾ, ಉತ್ತರದಲ್ಲಿ ಬದರೀನಾಥ[1] - ಈ ಪ್ರಸಿದ್ಧಿಕ್ಷೇತ್ರಗಳಲ್ಲಿ ಸ್ಥಾಪಿಸಿದ ನಾಲ್ಕುಮಠಗಳಿಗೆ, ಆಚಾರ್ಯರ ಪ್ರಧಾನಶಿಷ್ಯರಾದ ಹಸ್ತಾಮಲಕ, ಸುರೇಶ್ವರ, ಪದ್ಮಪಾದ, ತೋಟಕಾಚಾರ್ಯರು ಕ್ರಮವಾಗಿ ಪೀಠಾಧ್ಯಕ್ಷರಾದರು. ಆಚಾರ್ಯರ ಆದೇಶವನ್ನೂ ಆದರ್ಶವನ್ನೂ ಅನುಸರಿಸಿ ಅವರ ಶಿಷ್ಯರು ಇನ್ನೂ ಕೆಲವು ಮಠಗಳನ್ನು ಅಲ್ಲಲ್ಲಿ ಸ್ಥಾಪಿಸಿದರು. ಜಗನ್ನಾಥದಲ್ಲಿ ಪದ್ಮಪಾದ, ದ್ವಾರಕೆಯಲ್ಲಿ ಹಸ್ತಾಮಲಕ - ಎಂದು ಮತಭೇದವಿದೆ.

ಶ್ರೀಶಂಕರಭಗವತ್ಪಾದರು ಬಹಳ ಕಾಲ ಶೃಂಗೇರಿಯಲ್ಲಿ ನೆಲೆಸಿ ಪಾಠಪ್ರವಚನಗಳನ್ನು ಮಾಡುತ್ತ ಇಲ್ಲಿಯೇ ಶ್ರೀಶಾರದಾಪೀಠವನ್ನು ಸ್ಥಾಪಿಸಿದರು. ಅವರಿಗೆ ಅತ್ಯಂತ ಅಭಿಮಾನಾಸ್ಪದವಾದ ಈ ಶಾರದಾಪೀಠದಲ್ಲಿ ತಮ್ಮ ಪ್ರಿಯಶಿಷ್ಯರೂ ಮಹಾವಿದ್ವಾಂಸರೂ ಆದ ಶ್ರೀಸುರೇಶ್ವರಾಚಾರ್ಯರನ್ನು ಅಧಿಪತಿಗಳನ್ನಾಗಿ ನಿಯಮಿಸಿದ್ದು ಯುಕ್ತವಾಗಿಯೇ ಇದೆ. ಅಂದಿನಿಂದ ಇಂದಿನವರೆಗೆ ಅವಿಚ್ಛಿನ್ನಪರಂಪರೆಯಿಂದ, ಪೂಜ್ಯವಾದ ಈ ಜಗದ್ಗುರು ಪೀಠವನ್ನೇರಿದ ಆಚಾರ್ಯರೆಲ್ಲರೂ ತಪೋನಿಧಿಗಳೂ ಘನವಿದ್ವಾಂಸರೂ ಮಹಾಮಹಿಮರೂ ಆಗಿ ವೈದಿಕಧರ್ಮವನ್ನು ರಕ್ಷಿಸುತ್ತ ಪೋಷಿಸುತ್ತ ಪ್ರಚಾರಮಾಡುತ್ತ ಬಂದಿದ್ದಾರೆ. ವಿಖ್ಯಾತ ಮಹಿಮರಾದ ಶ್ರೀವಿದ್ಯಾರಣ್ಯಸ್ವಾಮಿಗಳೂ ಈ ಪೀಠವನ್ನಲಂಕರಿಸಿದ್ದರೆಂಬುದನ್ನು ಸ್ಮರಿಸಿಕೊಳ್ಳಬೇಕು. ಈ ಜಗದ್ಗುರುಪೀಠವನ್ನೇರಿದ ಎಲ್ಲ ಆಚಾರ್ಯರೂ ವೇದಾಧ್ಯಯನ, ಶಾಸ್ತ್ರಾಧ್ಯಯನಗಳಿಗೆ ಸಕಲವಿಧವಾದ ಪ್ರೋತ್ಸಾಹವನ್ನೀಯುತ್ತಿದ್ದಾರೆ. ಈ ಜಗದ್ಗುರುಪೀಠವು ಭಾರತದಲ್ಲಿ ಪರಮೋನ್ನತವಾದ ಗೌರವಾರ್ಹಸ್ಥಾನವನ್ನು ಗಳಿಸಿಕೊಂಡಿರುವುದು ಭಗವತ್ಪಾದರ ವಿಶಿಷ್ಟಕೃಪಾನುಗ್ರಹಗಳಿಂದ — ಎನ್ನುವುದು ಅತಿಶಯೋಕ್ತಿಯಲ್ಲ.

### ರಾಷ್ಟ್ರೈಕತಾದೃಢೀಕರಣ

ನಮ್ಮ ಭಾರತದೇಶದಲ್ಲಿ ನೂರಾರು ಭಾಷೆಗಳನ್ನಾಡುವ ಪ್ರಜೆಗಳಿದ್ದರೂ ಜಾತಿಭೇದಗಳಿದ್ದರೂ'ಭಾರತವು ಒಂದು ರಾಷ್ಟ್ರ' ಎಂಬ ಏಕತಾಭಾವನೆಯು

---

[1]ಬದರೀನಾಥಮಠವು ಆ ಕ್ಷೇತ್ರಕ್ಕೆ ಸುಮಾರು ೫೦ ಮೈಲಿಗಳ ದಕ್ಷಿಣದಲ್ಲಿದೆ. ಈ ಮಠಕ್ಕೆ ಜ್ಯೋತಿರ್ಮಠವೆಂದು ಹೆಸರಿದೆ.

ಅನಾದಿಕಾಲದಿಂದಲೂ ಇದೆ. ಇದಕ್ಕೆ ನಿಮಿತ್ತವೇನು? ರಾಜಕೀಯವಾದ ಏಕತೆಯಂತೂ ಅಲ್ಲ. ಕುರು, ಕೇಕಯ, ಮಗಧ-ಮುಂತಾದ ರಾಜ್ಯಗಳಲ್ಲಿ ಬೇರೆಬೇರೆ ಸ್ವತಂತ್ರರಾಜರು ಹಿಂದಿನಿಂದ ಇದ್ದರು. ಭಾರತವು ಅನೇಕ ಸ್ವತಂತ್ರರಾಜ್ಯಗಳ ಸಮುದಾಯವಾದರೂ ಏಕರಾಷ್ಟ್ರವೆನಿಸಿಕೊಂಡಿದೆ. ಏಕೆಂದರೆ, ದಕ್ಷಿಣಸಮುದ್ರದಿಂದ ಉತ್ತರದ ಹಿಮಾಲಯದ ವರೆಗೆ ವ್ಯಾಪಿಸಿಕೊಂಡಿರುವ ಒಂದೇ ಸಂಸ್ಕೃತಿಯು ಏಕರಾಷ್ಟ್ರತಾನಿಬಂಧನವಾಗಿದೆ. ವೇದಗಳಿಂದಲೂ ಸಂಸ್ಕೃತಭಾಷಾಸಾಹಿತ್ಯದಿಂದಲೂ ನಿರ್ಮಿತವಾದ ಸಂಸ್ಕೃತಿಯೇ ಅದು. ಶಿವ, ವಿಷ್ಣು ಮುಂತಾದ ದೇವತೆಗಳ ಪೂಜೆ, ವಿಗ್ರಹಾರಾಧನೆ, ಪುನರ್ಜನ್ಮವಿಶ್ವಾಸ, ರಾಮೇಶ್ವರ ಕಾಶಿ-ಮೊದಲಾದ ತೀರ್ಥಕ್ಷೇತ್ರಗಳ ಯಾತ್ರೆ, ವಿವಾಹಾದಿಸಂಸ್ಕಾರಗಳು, ರಾಮಾಯಣ ಮಹಾಭಾರತ ಮೊದಲಾದವು ಪುಣ್ಯಗ್ರಂಥಗಳೆಂಬ ವಿಶ್ವಾಸ- ಇವೆಲ್ಲವೂ ಈ ಸಂಸ್ಕೃತಿಯ ವಿವಿಧಮುಖಗಳು. ಪುಷ್ಪಮಾಲೆಯಲ್ಲಿರುವ ದಾರದಂತೆ ಭಾರತೀಯರನ್ನು ಒಟ್ಟುಗೂಡಿಸಿದ ಏಕಸೂತ್ರವೇ ಸಂಸ್ಕೃತಭಾಷೆ. ಬೌದ್ಧಜೈನಾದಿ ಸಾಹಿತ್ಯಗಳೂ ಸಂಸ್ಕೃತಭಾಷಾ ಪ್ರಭಾವಿತ ಗಳಾಗಿವೆಯೆಂಬುದು ಸರ್ವವಿದಿತ; ನಿರ್ವಿವಾದ. ಭಾರತವು ಏಕರಾಷ್ಟ್ರವೆಂಬ ಏಕತಾಭಾವನೆಗೆ ಈ ಸಂಸ್ಕೃತಸಾಹಿತ್ಯದಿಂದ ನಿರ್ಮಿತವಾದ ವಿಶಾಲಸಂಸ್ಕೃತಿಯೇ ನಿಜವಾದಕಾರಣವಾಗಿರುತ್ತದೆ.

ಭಗವತ್ಪಾದರ ಕಾಲದಲ್ಲಿ ಸಂಸ್ಕೃತಭಾಷೆಯು ರಾಷ್ಟ್ರವ್ಯಾಪಿಯಾಗಿದ್ದು ಎಲ್ಲಪ್ರಾಂತದ ಜನರಿಗೂ ಅರ್ಥವಾಗುತ್ತಿತ್ತು. ಆದ್ದರಿಂದಲೇ ಆಚಾರ್ಯರು ಪ್ರಾಚೀನರಂತೆ ಸಂಸ್ಕೃತದಲ್ಲಿಯೇ ತಮ್ಮ ಗ್ರಂಥಗಳನ್ನು ರಚಿಸಿದರು. ಸಂಸ್ಕೃತಭಾಷೆಯನ್ನು ಆಶ್ರಯಿಸಿದ್ದರಿಂದಲೇ ಅದ್ವೈತದರ್ಶನವು ರಾಷ್ಟ್ರದ ಮೂಲೆಮೂಲೆಯಲ್ಲಿಯೂ ಪುನರುಜ್ಜೀವನವನ್ನು ಪಡೆಯಿತು. ಸಿಕ್ ಮತವನ್ನು ಸ್ಥಾಪಿಸಿದ ಮಹಾತ್ಮನಾನಕರ ಉಪದೇಶವಿದು-

ಈಶ-ಜೀವಮೇಂ ಭೇದ ನ ಜಾನೋ
  ಸಾಧು, ಚೋರ, ಸಬ ಬ್ರಹ್ಮ ಪಹಚಾನೋ |
ವಾಸುದೇವ ವಿನ ಅವರ ನಕೋಊ
  ನಾನಕ್ ಓಂ ಸೋಽಹಂ ಆತಮ ಸೋಽಹಮ್ ||

"ಜೀವಾತ್ಮಪರಮಾತ್ಮರಲ್ಲಿ ಭೇದವಿದೆಯೆಂದು ತಿಳಿಯಬೇಡ. ಸಜ್ಜನ, ಕಳ್ಳ-ಎಲ್ಲರೂ ಬ್ರಹ್ಮವೇ ಎಂದು ಅರಿತುಕೊ ವಾಸುದೇವನನ್ನು ಬಿಟ್ಟು ಇನ್ನೊಬ್ಬಯಾವನೂ ಇಲ್ಲ. ಓಂ ಎಂಬುದೇ ಸತ್ಯ. ಸೋಽಹಂ ಸೋಽಹಂ ಅವನೇ ನಾನು ಅವನೇ ನಾನು!"

ಆಚಾರ್ಯರಿಂದ ಸಂಸ್ಕೃತಸಾಹಿತ್ಯವು ಸಮೃದ್ಧವಾಗಿ ಬೆಳೆಯಿತು. ಅದ್ವೈತದ ಮೇಲೆ ಸಂಸ್ಕೃತದಲ್ಲಿರಚಿತವಾಗಿರುವ ಗ್ರಂಥಗಳ ಪಟ್ಟಿಯನ್ನು ಮಾಡಿ ಮುಗಿಸಲು ಸಾಧ್ಯವಿಲ್ಲ. ಇಷ್ಟು ಗ್ರಂಥಗಳು ಇನ್ನು ಯಾವ ಶಾಸ್ತ್ರವನ್ನು ಕುರಿತೂ ರಚಿತವಾಗಿಲ್ಲ - ಎಂದು ಪ್ರಸಿದ್ಧವಿದ್ವಾಂಸರಾದ ಡಾ ||ವಿ. ರಾಘವನ್ ಅವರು ಹೇಳಿದ್ದಾರೆ. ಆಚಾರ್ಯಪ್ರಣೀತ

ಸ್ತೋತ್ರಗ್ರಂಥಗಳೂ ಜನಪ್ರಿಯವಾಗಿ ರಾಷ್ಟ್ರದಲ್ಲಿ ವ್ಯಾಪಿಸಿದವು. ಕೇರಳದಿಂದ ಕಾಶ್ಮೀರದವರೆಗೆ ಕಾಲ್ನಡಿಗೆಯಲ್ಲಿ ಸಂಚರಿಸಿ, ಪ್ರತಿಯೊಂದು ರಾಜ್ಯದಲ್ಲಿಯೂ ವೈದಿಕಸಂಸ್ಕೃತಿಯನ್ನು ಬೋಧಿಸಿ "ನಾವೆಲ್ಲರೂ ಒಂದೇ ಸಂಸ್ಕೃತಿಯವರು. ಒಂದೇ ರಾಷ್ಟ್ರದವರು, ಒಂದೇ ಭಾಷೆಯವರು"ಎಂಬ ಭಾವನೆಯನ್ನು ಬೇರೂರಿಸಿ ಭಾರತದ ಏಕರಾಷ್ಟ್ರತೆಯನ್ನು ದೃಢಗೊಳಿಸಿದ ಮಹಾಮಹಿಮರು ಇತಿಹಾಸದಲ್ಲಿ ಭಗತ್ಪಾದರೊಬ್ಬರೇ. ನಾಲ್ಕು ದಿಕ್ಕುಗಳಲ್ಲಿ ನಾಲ್ಕು ಮಠಗಳನ್ನು ಸ್ಥಾಪಿಸಿರುವುದು ಭಾರತದ ಏಕರಾಷ್ಟ್ರತೆಯನ್ನು ದೃಢೀಕರಿಸುವದಕ್ಕಾಗಿಯೇ ಎಂಬುದನ್ನಿಲ್ಲಿ ಸ್ಮರಿಸಿಕೊಳ್ಳಬೇಕು.

### ಉಪದೇಶದ ವ್ಯಾಪ್ತಿ

ಲೋಕದಲ್ಲಿ ಸೌಖ್ಯ, ಶಾಂತಿ, ಸಂತೃಪ್ತಿಗಳು ನೆಲೆಸಬೇಕಾದರೆ ಧರ್ಮದ ಪರಿಪಾಲನೆ ಅತ್ಯಾವಶ್ಯಕವಾದದ್ದು. ಧರ್ಮಕ್ಕೆ ಅಧ್ಯಾತ್ಮಜ್ಞಾನದ ಬಲವಿಲ್ಲದಾಗ ಅದು ನಿಃಸತ್ತ್ವವಾಗುತ್ತದೆ. ಆಚಾರ್ಯರು ಅಧಿಕಾರಾನುರೋಧವಾಗಿ ಪ್ರವೃತ್ತಿನಿವೃತ್ತಿ ಲಕ್ಷಣಧರ್ಮಗಳೆರಡನ್ನೂ ಎತ್ತಿ ಹಿಡಿದಿದ್ದಾರೆ. ಪ್ರವೃತ್ತಿಧರ್ಮವು ಸಾರ್ವತ್ರಿಕವಾದದ್ದು. ನಿವೃತ್ತಿಧರ್ಮವು ವೈಯಕ್ತಿಕವಾದದ್ದು. ನಿವೃತ್ತಿಧರ್ಮವು ಎಲ್ಲರಿಗೂ ಅಲ್ಲ. "ಬ್ರಹ್ಮಕ್ಷತ್ರೇ ಹಿ ಸಮ್ಯಕ್‌ಪರಿಪಾಲಿತೇ ಜಗತ್‌ಪರಿಪಾಲಯಿತುಮಲಮ್" ಎಂಬ ಅವರ ಧೀರವಾಣಿಯನ್ನು ಗಮನಿಸಬೇಕು. ಕ್ಷತ್ರಿಯ ಧರ್ಮದಲ್ಲಂತೂ ನಿವೃತ್ತಿಯ ಸೋಂಕು ಇಲ್ಲವೇ ಇಲ್ಲ. ಆಚಾರ್ಯರು ಹೇಳಿದ್ದು ಜಗತ್‌ಪರಿಪಾಲನೆಯ ವಿಷಯ, ಒಂದು ಗುಂಪಿನ ಪರಿಪಾಲನೆಯಲ್ಲ. ಇದು ಆಚಾರ್ಯರ ದೃಷ್ಟಿ ಎಷ್ಟು ವಿಶಾಲವಾಗಿತ್ತೆಂಬುದಕ್ಕೆ ಸಾಕ್ಷಿಯಾಗಿದೆ.

ಕ್ಷತ್ರಿಯಧರ್ಮದಲ್ಲಿ ಯುದ್ಧ ಉಂಟು, ಹಿಂಸೆಯುಂಟು, ದುಷ್ಟರ ಮರ್ದನವು ಅಹಿಂಸೆಯಿಂದ ಆಗತಕ್ಕದ್ದಲ್ಲ. ಶ್ರೀಕೃಷ್ಣನು ಅರ್ಜುನನಿಗೆ ಬೋಧಿಸಿದ್ದು ಅಧ್ಯಾತ್ಮದ ಬೆಂಬಲವನ್ನು ಪಡೆದ ರಾಜಧರ್ಮ. ಅದು 'ಸತ್ಯ-ಅಹಿಂಸೆ, ಸತ್ಯ-ಅಹಿಂಸೆ' ಎಂಬ ಗಳಗಳ ರೋದನವಲ್ಲ. ಗೀತಾಭಾಷ್ಯದಲ್ಲಿ ಶ್ರೀಶಂಕರರು ಶ್ರೀಕೃಷ್ಣನ ಉಪದೇಶವನ್ನು ಇನ್ನೂ ವಿಶದವಾಗಿ ವಿವರಿಸಿ ಪೋಷಿಸಿದರೇ ಹೊರತು, ವಿರುದ್ಧವಾಗಿ ಒಂದು ಮಾತನ್ನೂ ನುಡಿಯಲಿಲ್ಲ.

ಶ್ರೀಶಂಕರಭಗತ್ಪಾದರ ಗ್ರಂಥಗಳನ್ನೋದಿದವರೆಲ್ಲರೂ ಆತ್ಮಜ್ಞಾನಿಗಳಾಗಿ ಬಿಡುವುದಿಲ್ಲ. ಆತ್ಮಜ್ಞಾನದ ಮೌಲ್ಯವೆಷ್ಟೆಂಬುದಾದರೂ ಗೊತ್ತಾಗುತ್ತದೆ. ಧರ್ಮದಲ್ಲಿ ಶ್ರದ್ಧೆಯೂ ಭಗವಂತನಲ್ಲಿ ಭಕ್ತಿಯೂ ಮೂಡಿತೆಂದರೆ ಸಾಕು, ಆತನು ಸನ್ಮಾರ್ಗವನ್ನು ಹಿಡಿದನೆಂದರ್ಥ. ಅವನು ಅನುದಿನವೂ ತನ್ನಲ್ಲಿ ದೈವೀಸಂಪತ್ತನ್ನು ಬೆಳೆಸಿಕೊಳ್ಳಲು ಯತ್ನಿಸುತ್ತಾನೆ. ಅವನ ಪ್ರವೃತ್ತಿಗಳೆಲ್ಲವೂ ಧರ್ಮಚಿಂತನೆಯ ಮಾರ್ಗದಲ್ಲಿ ಸಾಗುತ್ತವೆ.

ಮನಸ್ಸಿಗೆ ಶಾಂತಿಯೂ ಸಂತೃಪ್ತಿಯೂ ತಲೆದೋರುತ್ತವೆ. ಅಧ್ಯಾತ್ಮಜ್ಞಾನದ ಹಿನ್ನೆಲೆಯಿಲ್ಲದ ಈ ಪರಿವರ್ತನೆ ಸ್ಥಿರವಾದದ್ದು. ಈ ಪರಿವರ್ತನೆಯನ್ನು ರಾಜಕೀಯಶಾಸನವಾಗಲಿ, 'ಇಸಮ್' ಆಗಲಿ, ವಿಜ್ಞಾನದ ಆವಿಷ್ಕಾರವಾಗಲಿ ಮಾಡಲಾರದು. ಅವೆಲ್ಲವೂ ಸೋತು ಹೋಗಿರುವುದು ಇಂದು ರುಜುವಾತಾಗಿದೆ.

## ಆಚಾರ್ಯರ ಭಾಷ್ಯ ಮತ್ತು ಭಾಷಾ ಶೈಲಿ

ಬರಿಯ ವ್ಯಾಖ್ಯಾನ ಅಥವಾ ಟೀಕೆಯು ಭಾಷ್ಯವೆನಿಸುವುದಿಲ್ಲ. ಅದಕ್ಕೊಂದು ಲಕ್ಷಣವಿದೆ.

ಸೂತ್ರಾರ್ಥೋ ವರ್ಣ್ಯತೇ ಯತ್ರ ವಾಕ್ಯೈಃ ಸೂತ್ರಾನುಸಾರಿಭಿಃ |
ಸ್ವಪದಾನಿ ಚ ವರ್ಣ್ಯಂತೇ ಭಾಷ್ಯಂ ಭಾಷ್ಯವಿದೋ ವಿದುಃ ||

ಎಂದು ವಿಷ್ಣುಧರ್ಮೋತ್ತರದಲ್ಲಿಯೂ ಪಾರಾಶರೋಪಪುರಾಣದಲ್ಲಿಯೂ ಭಾಷ್ಯ ಲಕ್ಷಣವನ್ನು ಹೇಳಿದ್ದಾರೆ. ಇದರ ತಾತ್ಪರ್ಯವೇನೆಂದರೆ, ಸೂತ್ರವನ್ನು ಅಥವಾ ಮೂಲಗ್ರಂಥವನ್ನು ಅದಕ್ಕೆ ಅನುಗುಣವಾಗಿ ಸ್ವತಂತ್ರವಾಕ್ಯಗಳಿಂದ ವಿವರಿಸಬೇಕು. ಆ ವಿವರಣೆಯಲ್ಲಿ ತಾವೇ ಹೇಳಿದ ಸಂಕ್ಷಿಪ್ತವಾಕ್ಯಗಳ ವಿವರಣೆಯೂ ಇರಬೇಕು. ಅಂತಹ ವ್ಯಾಖ್ಯಾನಕ್ಕೆ ಭಾಷ್ಯವೆಂದು ಹೆಸರು. ಆಚಾರ್ಯರ ಪ್ರಸ್ಥಾನತ್ರಯ ಭಾಷ್ಯಗಳಲ್ಲಿ ಸ್ಪಷ್ಟವಾಗಿ ಈ ಲಕ್ಷಣವು ಕಂಡುಬರುತ್ತದೆ. ಒಂದು ಆಕ್ಷೇಪವನ್ನೋ ಸಮಾಧಾನವನ್ನೋ ಅರ್ಥಗರ್ಭಿತವಾದ ಒಂದು ವಾಕ್ಯದಿಂದ ಹೇಳಿ ಅನಂತರ ಆ ವಾಕ್ಯದ ಅರ್ಥವನ್ನು ತಾವೇ ವಿವರಿಸುವ ಪರಿಪಾಟಿ ಇಲ್ಲಿ ಸಹಜವಾಗಿ ಗೋಚರಿಸುತ್ತದೆ. ಈ ಕ್ರಮವನ್ನು ವ್ಯಾಕರಣಮಹಾಭಾಷ್ಯದಲ್ಲಿಯೂ ಕಾಣಬಹುದು. ಈ ಲಕ್ಷಣವಿಲ್ಲದ ಟೀಕೆಯು ಭಾಷ್ಯವೆನಿಸಲು ಅರ್ಹವಾದ್ದಲ್ಲ.

ಎಲ್ಲ ಭಾಷೆಗಳಿಗಿರುವಂತೆ ಸಂಸ್ಕೃತಭಾಷೆಗೆ ಒಂದು ವಿಶಿಷ್ಟಶೈಲಿ ಇದೆ. ಈ ಶೈಲಿಯ ಸೌಂದರ್ಯವನ್ನು ಅಭಿಜ್ಞರು ಮಾತ್ರ ಗುರುತಿಸಬಲ್ಲರು. ವ್ಯಾಕರಣಮಹಾಭಾಷ್ಯ, ಶಾಬರಭಾಷ್ಯ, ಶಾಂಕರಭಾಷ್ಯ- ಇವು ಮೂರೇ ವಿಶಾಲವಾದ ಸಂಸ್ಕೃತಸಾಹಿತ್ಯಕ್ಷೇತ್ರದಲ್ಲಿ ಚೇತೋಹಾರಿಯಾದ ಸುಂದರ ಭಾಷಾಶೈಲಿಗೆ ಉದಾಹರಣೆಗಳೆಂದು ಆಧುನಿಕವಿದ್ವಾಂಸರೂ ಸಹ ಹೇಳಿದ್ದಾರೆ. ಆಚಾರ್ಯರ ಭಾಷಾಶೈಲಿಯನ್ನು ಈ ಗ್ರಂಥದ ಅನುಬಂಧದಲ್ಲಿ ಕೊಟ್ಟಿರುವ ವಾಕ್ಯಗಳಲ್ಲಿ ಗಮನಿಸಬಹುದು.

## ಭಗವತ್ಪಾದರು

ಆಚಾರ್ಯರ ಗ್ರಂಥಗಳ ಸಮಾಪ್ತಿಯಲ್ಲಿ 'ಶ್ರೀಮಚ್ಛಂಕರ ಭಗವತಃ ಕೃತೌ' ಎಂಬ ಪುಷ್ಪಿಕೆ ನಿಯಮದಿಂದ ತಪ್ಪದೆ ಕಂಡು ಬರುತ್ತದೆ. ಮಹರ್ಷಿಗಳನ್ನೂ, ಪೂಜ್ಯರಾದ ಆಚಾರ್ಯರನ್ನೂ ಭಗವಾನ್ ಎಂದು ವಿಶೇಷಿಸುವುದು ಹೊಸದೇನಲ್ಲ. ಭಗವಾನ್ ವೇದವ್ಯಾಸ, ಭಗವಾನ್

ವಸಿಷ್ಠ, ಭಗವಾನ್ ಪಾಣಿನಿ, ಭಗವಾನ್ ಕಣಾದ-ಇತ್ಯಾದಿ ಪ್ರಯೋಗಗಳು ಹಿಂದಿನಿಂದಲೂ ಇವೆ.'ಭಗವತ್ಪಾದ'ಎಂಬ ಶಬ್ದವು ಮಾತ್ರ ಶ್ರೀಶಂಕರಾಚಾರ್ಯರಿಗೆ ಅನ್ವಯಿಸಿ ಪ್ರಥಮ ಪ್ರಯುಕ್ತವಾಗಿದೆಯೆಂದು ಕಂಡುಬರುತ್ತದೆ. ಅನಂತರವೇ ಅವರ ಗುರುಗಳಿಗೂ ಶ್ರೀಗೋವಿಂದಭಗವತ್ಪಾದರು ಎಂಬ ವ್ಯವಹಾರವು ರೂಢಿಗೆ ಬಂದಿರಬೇಕು. ಶಂಕರ ವಿಜಯದಲ್ಲಿ 'ಇತ್ಥಂ ಸ ಉಕ್ತೋ ಭಗವತ್ಪದೇನ' ಎಂದು ಆಚಾರ್ಯರನ್ನು ಭಗವತ್ಪದ ಎಂದೂ ಕರೆಯಲಾಗಿದೆ (ಸರ್ಗ ೧೩-೬೮). ಆ ಶ್ಲೋಕದ ಅದ್ವೈತರಾಜ್ಯಲಕ್ಷ್ಮೀವ್ಯಾಖ್ಯಾನದಲ್ಲಿ ಶಬ್ದದ ವ್ಯುತ್ಪತ್ತಿಯನ್ನು ಹೀಗೆ ಪ್ರದರ್ಶಿಸಿದ್ದಾರೆ.'ಭಗವತೀ ಐಶ್ವರ್ಯವತೀ ಪದೇ ಚರಣೌ ಯಸ್ಯಸಃ ಭಗವತ್ಪದಃ. ಯದ್ವಾ ಭಗವಂತೋ ವಿಷ್ಣ್ವಾದ್ಯವತಾರತ್ವೇನ ಐಶ್ವರ್ಯವಂತಃ ಪದ್ಮಪಾದಾಚಾರ್ಯಾದಯಃ ಶಿಷ್ಯಾಃ ಪದಯೋರ್ಯಸ್ಯ ಸಃ ಭಗವತ್ಪದಃ' ಇದರ ತಾತ್ಪರ್ಯವೇನೆಂದರೆ, ಭಗವೆಂದರೆ ಅಣಿಮಾದ್ಯೈಶ್ವರ್ಯ. ಇದನ್ನುಳ್ಳ ಪಾದಗಳು ಯಾರಿಗಿವೆಯೋ ಆತನು ಭಗವತ್ಪದ. ಅಥವಾ ವಿಷ್ಣು, ಬ್ರಹ್ಮ ಮೊದಲಾದ ದೇವತೆಗಳು ಭಗವಂತರು. ಪದ್ಮಪಾದ ಮೊದಲಾದ ಶಿಷ್ಯರು ಈ ದೇವತೆಗಳ ಅವತಾರಗಳು. ಅವರು ಆಚಾರ್ಯರ ಪಾದಗಳ ಬಳಿ ಕುಳಿತು ಕೊಳ್ಳುತ್ತಿದ್ದುದರಿಂದ ಶ್ರೀಶಂಕರರು ಭಗವತ್ಪದರು -ಎಂದು.

ಮೇಲ್ಕಂಡ ಶ್ಲೋಕದಲ್ಲಿ ಛಂದೋಽನುರೋಧವಾಗಿ ಭಗವತ್ಪದ ಎಂಬ ಪ್ರಯೋಗವಿದೆ. ಅದಕ್ಕೆ ಅನುಗುಣವಾಗಿ ಮೇಲ್ಕಂಡ ವ್ಯುತ್ಪತ್ತಿಯು ಸರಿ ಎನ್ನಬಹುದು. ಆದರೆ ಭಗವತ್ಪಾದ ಎಂಬ ಶಬ್ದವೇ ಅನ್ಯತ್ರ ಬಳಕೆಯಲ್ಲಿದೆ. ಇದಕ್ಕೆ ಈ ಬಗೆಯಲ್ಲಿ ಅರ್ಥವನ್ನು ಹೇಳಬಹುದೆಂದು ತೋರುತ್ತದೆ.

೧. ಭಗವಂತೌ ಪಾದೌ ಯಸ್ಯಸಃ. ಆಚಾರ್ಯರ ಪಾದಗಳೇ ಅಷ್ಟಸಿದ್ಧ್ಯಾದಿಗಳನ್ನು ಕೊಡಬಲ್ಲವಾದ್ದರಿಂದ ಅವರು ಭಗವತ್ಪಾದರು.

೨. ಪಾದಶಬ್ದಕ್ಕೆ ಅಂಶ, ನಾಲ್ಕನೆಯ ಒಂದಂಶ ಎಂಬ ಅರ್ಥವಿದೆ. ಭಗವಂತನ ಅಂಶವುಳ್ಳವರು ಭಗತ್ಪಾದರು. ಭಗವಂತನ ಅವತಾರ ಸ್ವರೂಪರೆಂದು ಅರ್ಥ.

೩. ಪಾದ, ಮಿಶ್ರ -ಎಂಬ ಶಬ್ದಗಳಿಗೆ ಪೂಜಾರ್ಥದಲ್ಲಿ ಪ್ರಯೋಗ ಉಂಟು. ಗೌಡಪಾದ. ಆಚಾರ್ಯಪಾದ, ಗುರುಪಾದ, ಶಾಸ್ತ್ರಿಪಾದ, ಮಂಡನಮಿಶ್ರ, ವಾಚಸ್ಪತಿಮಿಶ್ರ -ಇತ್ಯಾದಿ ಪ್ರಯೋಗಗಳು ಪ್ರಸಿದ್ಧವಾದವು. ಪೂಜ್ಯೋ ಭಗವಾನೇವ ಭಗತ್ಪಾದ, ಪಾದಶಬ್ದವನ್ನು ಬಳಸಿದಾಗ ಸ್ವರಾಂತ ಶಬ್ದವಾಗುವುದರಿಂದ ಪ್ರಯೋಗಿಸಲು ಹಿತಕರವಾಗಿರುತ್ತದೆ.

ಈ 'ಭಗವತ್ಪಾದ'ಶಬ್ದವು ಶ್ರೀಶಂಕರಾಚಾರ್ಯರಿಗೆ ಪ್ರಥಮ ಪ್ರಯುಕ್ತವಾಗಿದ್ದು ಅವರೊಬ್ಬರಿಗೇ ಮೀಸಲಾಗಿರುತ್ತದೆ. ಆನಂದಜ್ಞಾನರು ಸೂತ್ರಭಾಷ್ಯ ವ್ಯಾಖ್ಯಾನದ ಆದಿಯಲ್ಲಿ "ತಸ್ಮೈಭಾಷ್ಯಕೃತೇ ನಮೋಽಸ್ತು ಭಗವತ್ಪಾದಾಭಿಧಾಂ ಬಿಭ್ರತೇ" ಎಂದು ಆಚಾರ್ಯರನ್ನು ನಮಸ್ಕರಿಸಿದ್ದಾರೆ.

## ಜಗದ್ಗುರುಗಳು

ಶ್ರೀ ಶಂಕರಭಗವತ್ಪಾದರನ್ನು ಜಗದ್ಗುರುಗಳೆಂದೂ ಅವರು ಸ್ಥಾಪಿಸಿರುವ ಪೀಠವನ್ನು ಜಗದ್ಗುರು ಪೀಠವೆಂದೂ ವ್ಯವಹರಿಸುವುದು ಪರಂಪರೆಯಿಂದ ಬಂದಿದೆ. 'ಕೃಷ್ಣಂ ವಂದೇ ಜಗದ್ಗುರುಂ' ಎಂದಾಗ ಪರಮಾತ್ಮನು ಜಗದ್ಗುರುವಾಗುವುದು ಹೇಗೆ?- ಎಂಬ ಜಿಜ್ಞಾಸೆ ಯಾರಿಗೂ ಹುಟ್ಟುವುದಿಲ್ಲ. ಒಬ್ಬ ಆಚಾರ್ಯರಿಗೆ ಈ ಶಬ್ದವನ್ನು ಅನ್ವಯಿಸಿದಾಗ ಕೆಲವರಿಗಾದರೂ ಈ ಜಿಜ್ಞಾಸೆ ಹುಟ್ಟುತ್ತದೆ. ಇದೇನು ಲೋಕಾಭಿರಾಮವಾದ ಜಗದ್ಗುರುಶಬ್ದವೆ? ಅಥವಾ ಶ್ರೀಶಂಕರಾಚಾರ್ಯರಿಗೆ ಒಪ್ಪುವ ಯಥಾರ್ಥವಾಗಿರುವ ಶಬ್ದವೆ? - ಎಂದು ಪರ್ಯಾಲೋಚಿಸುವುದರಿಂದ ಪ್ರಯೋಜನ ಉಂಟು. ಗುರುವಾದವರಲ್ಲಿ ಜ್ಞಾನ, ವೈರಾಗ್ಯ, ಕಾರುಣ್ಯ, ಸದಾಚಾರ, ಶಿಷ್ಯರಿಗೆ ಮಾರ್ಗದರ್ಶನಮಾಡುವ ಸಾಮರ್ಥ್ಯ ಮುಂತಾದ ಗುಣಗಳು ಇರಬೇಕೆಂದು ನಿರೀಕ್ಷಿಸುವುದು ಸಹಜ. ಆದರೆ ಇವರ ಉಪದೇಶವೂ ಮಾರ್ಗದರ್ಶನ ಸಾಮರ್ಥ್ಯವೂ ಒಂದು ಜನಾಂಗಕ್ಕೆ ಅಥವಾ ಗೊತ್ತಾದ ಒಂದು ಮತದ ಜನರಿಗೆ ಸೀಮಿತವಾಗಿರುತ್ತದೆ. ಜಗತ್ತಿನಲ್ಲಾದರೋ ನಾನಾ ಜನಾಂಗದವರೂ ನಾನಾಮತೀಯರೂ ಇರುತ್ತಾರೆ. ಆದ್ದರಿಂದ ಜಗದ್ಗುರುವಿನ ಉಪದೇಶವು ಸೀಮಿತವಾಗಿರಬಾರದು. ಸಹಜವಾಗಿ ಜನರಲ್ಲಿರಬಹುದಾದ ಶ್ರದ್ಧಾಭಕ್ತಿಗಳನ್ನು ಕೆಣಕದೆ, ನಂಬಿಕೆಯನ್ನು ಕೆಡಿಸದೆ, ಮತಾಂತರಗೊಳಿಸದೆ, ಆ ಜನರಲ್ಲಿರುವ ಸದಾಚಾರಕ್ಕೆ ಅಪೋಹವಾಗದಂತೆ ಉಪದೇಶಿಸಿ ಸನ್ಮಾರ್ಗಕ್ಕೆ ಒಯ್ಯುವ ಸಾಮರ್ಥ್ಯವು ಅವನ ಉಪದೇಶದಲ್ಲಿರಬೇಕಾಗುತ್ತದೆ. ಜಗದ್ಗುರುವೆನಿಸಲು ಬೇಕಾದ ಅರ್ಹತೆಗಳಿವು -

೧. ಆತನು ಸರ್ವಶಾಸ್ತ್ರವಿಶಾರದನಾಗಿ ಸಕಲಮತಗಳ ಸಾರವನ್ನೂ ತಿಳಿದುಕೊಂಡಿರುತ್ತಾನೆ.

೨. ಸಮಸ್ತಮಾನವರಲ್ಲಿ ಮೈತ್ರೀಭಾವದಿಂದ ವರ್ತಿಸಿ ಅವರನ್ನು ಸಮದೃಷ್ಟಿಯಿಂದ ಕಾಣುತ್ತಾನೆ.

೩. ಅವನು ಅತ್ಯಂತ ವಿರಕ್ತನಾಗಿ ಸಕಲ ವಿಷಯಸುಖಭೋಗಗಳನ್ನೂ ತ್ಯಜಿಸಿರುತ್ತಾನೆ.

೪. ಅವನಲ್ಲಿ ಅಹಂಕಾರ ಮಮಕಾರಗಳು ಸುಳಿಯುವುದಿಲ್ಲ. ಪರೋಪಕಾರಕ್ಕಾಗಿ ತನ್ನ ದೇಹವನ್ನು ತ್ಯಜಿಸಲೂ ಸಿದ್ಧನಾಗಿರುತ್ತಾನೆ.

೫. ಆತನ ಸಿದ್ಧಾಂತವು ಸಪ್ರಮಾಣವೂ ಸಂಪ್ರದಾಯಸಿದ್ಧವೂ ಆಗಿರುತ್ತದೆ. ಸ್ವಕಪೋಲಕಲ್ಪಿತವಾಗಿರುವುದಿಲ್ಲ.

೬. ಎಲ್ಲ ಬಗೆಯ ಯುಕ್ತಿವಾದವನ್ನೂ ಅವನ ದರ್ಶನವು ಎದುರಿಸಬಲ್ಲದು.

ಯಾವುದಕ್ಕೂ ಅದು ಜಗ್ಗುವುದಿಲ್ಲ.

೭. ಅವನು ಉಪದೇಶಿಸುವುದು ಬರಿಯ ನೀತಿಶಾಸ್ತ್ರವಲ್ಲ. ಅದು ಮೋಕ್ಷಶಾಸ್ತ್ರ. ಪರಮಪುರುಷಾರ್ಥವಾದ ಮೋಕ್ಷದ ಸ್ವರೂಪವನ್ನೂ ಅದಕ್ಕೆ ಬೇಕಾದ ಸಾಧನ ಸಂಪತ್ತನ್ನೂ ತಿಳಿಸಿಕೊಡುತ್ತದೆ.

೮. ಅವನು ಪ್ರತಿಪಾದಿಸುವ ಮೋಕ್ಷವು ಸತ್ತಮೇಲೇ ದೊರೆಯತಕ್ಕ ಒಂದು ವಸ್ತುವಲ್ಲ. ಇಲ್ಲಿಯೇ ಈ ದೇಹದಲ್ಲಿಯೇ ಅದು ದೊರೆಯುತ್ತದೆ. ಆದ್ದರಿಂದ ಸಂದೇಹಬಿಂದುವಿಗೆ ಇದರಲ್ಲಿ ಅವಕಾಶವಿಲ್ಲ.

೯. ಆತನ ತತ್ತ್ವದರ್ಶನವು ಅನುಭವಗಮ್ಯವಾದ್ದರಿಂದ, ವೈಜ್ಞಾನಿಕಸಿದ್ಧಾಂತದಂತೆ ವಿಶ್ವಾಸಾರ್ಹವಾದದ್ದು. ಅದು ಮೂಢನಂಬಿಕೆಯಲ್ಲ.

೧೦. ತಾನು ದೇವತಾಪುರುಷನೆಂದೂ ದೇವದೂತನೆಂದೂ ಆತನು ಹೇಳಿಕೊಳ್ಳುವುದಿಲ್ಲ. ತನ್ನ ಅಭಿಪ್ರಾಯವನ್ನು ಬಲಾತ್ಕಾರವಾಗಿ ಯಾರ ಮೇಲೂ ಹೇರುವುದಿಲ್ಲ.

೧೧. ಆತನ ಸಿದ್ಧಾಂತವು ಎಲ್ಲ ಮತಗಳ ಸಾರವನ್ನು ಹಿಂಡಿ ತಾನು ಹೇಳುವ ಸಾಧನಸಂಪತ್ತುಗಳಲ್ಲಿ ಅಳವಡಿಸಿಕೊಂಡಿರುತ್ತದೆ. ಅದರಲ್ಲಿ ಕರ್ಮ, ಉಪಾಸನೆ, ಭಕ್ತಿ, ಜ್ಞಾನ -ಇವುಗಳಿಗೆ ಯಥಾರ್ಹವಾದ ಸ್ಥಾನವಿರುತ್ತದೆ. ಯಾವುದನ್ನೂ ವಿರೋಧಿಸುವುದಿಲ್ಲ.

೧೨. ಆತನ ದರ್ಶನದಲ್ಲಿ ದೇವರು ಸರ್ವಶಕ್ತನಾದ್ದರಿಂದ ನಿರಾಕಾರನೂ ಹೌದು; ಸಾಕಾರನೂ ಹೌದು. ವಿಗ್ರಹಪೂಜೆಯೂ ಸಂಮತ, ನಿರಾಕಾರಮಾನಸ ಪೂಜೆಯೂ ಸಂಮತ.

೧೩. ಆತನ ಬೋಧನೆಯಲ್ಲಿ ಜಗತ್ತಿನ ಸರ್ವಮಾನವರಿಗೂ ಮೋಕ್ಷದಲ್ಲಿ ಅಧಿಕಾರ ಉಂಟು. ಆತ್ಮನಿಗೆ ಜಾತಿ ಕುಲಗಳಾವುವೂ ಇಲ್ಲ. ಸ್ತ್ರೀ ಪುರುಷ ಎಂಬ ಭೇದವೂ ಇಲ್ಲ.

೧೪. ಯಾವ ಮತಚಿಹ್ನೆಯನ್ನೂ ವೇಷವನ್ನೂ ಆತನು ಬೋಧಿಸುವುದೂಇಲ್ಲ. ವಿರೋಧಿಸುವುದೂ ಇಲ್ಲ.

೧೫. ತನ್ನ ಪರಮಸಿದ್ಧಾಂತದ ನಿಲುವಿನಲ್ಲಿ ಒಂದಂಶವನ್ನೂ ಆತನು ಬಿಟ್ಟು ಕೊಡುವುದಿಲ್ಲ. ಆತನ ಸಮ್ಯಗ್‌ದರ್ಶನ ಸಾಮ್ರಾಜ್ಯದಲ್ಲಿ ವಿಭಿನ್ನ ವಿಶ್ವಾಸಗಳಿರುವ ಎಲ್ಲ ಸಜ್ಜನರಿಗೂ ಸುಖದಿಂದ ಬಾಳಲು ಅವಕಾಶವಿರುತ್ತದೆ.

೧೬. ಆತನು ತನ್ನ ಶ್ರೇಯಸ್ಸನ್ನು ಸಂಪಾದಿಸಿಕೊಂಡು ತಟಸ್ಥನಾಗಿ ಸುಮ್ಮನೆ ಇದ್ದುಬಿಡುವುದಿಲ್ಲ. ಲೋಕಕಲ್ಯಾಣಕ್ಕಾಗಿ ಸದಾ ಕಾರ್ಯಪ್ರವೃತ್ತನಾಗಿರುತ್ತಾನೆ.

ಈ ಷೋಡಶ ಲಕ್ಷಣಗಳ ಅರ್ಹತೆಗಳೆಲ್ಲವೂ ಆಚಾರ್ಯರಲ್ಲಿ ಸಂಮಿಳಿತವಾಗಿದ್ದವೆಂಬುದನ್ನು ಹಿಂದೆ ಪ್ರಸ್ತಾವನೆಯಲ್ಲಿ ಸಂಕ್ಷೇಪವಾಗಿ ನಿರೂಪಿಸಲಾಗಿದೆ. ಆದ್ದರಿಂದ ಶ್ರೀಶಂಕರಭಗವತ್ಪಾದರು ಜಗದ್ಗುರುಗಳೆಂದು ಸಂಮಾನಿತರಾಗಿದ್ದಾರೆ.

## ಅಪಶೂದ್ರಾಧಿಕರಣ

ಶ್ರೀಶಂಕರಾಚಾರ್ಯರು ಶೂದ್ರನಿಗೆ ವೇದಾಧಿಕಾರವಿಲ್ಲವೆಂದು ಬರೆದಿದ್ದಾರೆ. ಇದು ಜಗದ್ಗುರುವಿನಲ್ಲಿರಬೇಕಾದ ಸಮದೃಷ್ಟಿಯೆ? ಇದು ಪಕ್ಷಪಾತವಲ್ಲವೆ? ಎಂಬ ಪ್ರಶ್ನೆಹುಟ್ಟಬಹುದು. ಈ ಪ್ರಶ್ನೆಗೆ ಉತ್ತರವಿದು- ಮೊದಲನೆಯದಾಗಿ ಚಾತುರ್ವರ್ಣ್ಯ ವ್ಯವಸ್ಥೆಯನ್ನು ಆಚಾರ್ಯರು ಸ್ಥಾಪಿಸಲಿಲ್ಲ. ಈ ದೇಶದಲ್ಲಿ ವೇದಸಂಮತವಾದ ಅನಾದಿಪದ್ಧತಿ ಇದು. ಸಕಲ ಧರ್ಮಶಾಸ್ತ್ರಗಳೂ ಪುರಾಣಗಳೂ ಈ ಪದ್ಧತಿಯನ್ನು ಪುರಸ್ಕರಿಸಿವೆ. ಆ ಕಾಲದ ಸಮಾಜವು ಇದನ್ನು ಅಂಗೀಕರಿಸಿತ್ತು. ಭಾರತದೇಶದಲ್ಲಿ ಆಳಿದ ಸಮಸ್ತರಾಜರೂ ಈ ವ್ಯವಸ್ಥೆಯನ್ನು ಸಮಾಜದ ಒಳಿತಿಗಾಗಿ ಪಾಲಿಸಿಕೊಂಡು ಬಂದಿದ್ದಾರೆ. ಬ್ರಾಹ್ಮಣನೊಬ್ಬನಿಗೇ ವೇದಾಧಿಕಾರವಿರಲಿಲ್ಲ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯರಿಗೂ ವೇದಾಧಿಕಾರವಿದೆ. ಶಾರೀರಕಮೀಮಾಂಸೆಯ ಅಪಶೂದ್ರಾಧಿಕರಣದಲ್ಲಿ (೧ ನೆಯ ಅಧ್ಯಾಯ ೩೪-೩೮ ನೆಯ ಸೂತ್ರಗಳು) ಸೂತ್ರಕಾರರೇ ಈ ವಿಚಾರವನ್ನು ಮಾಡಿದ್ದಾರೆ. ಆಚಾರ್ಯರು ಸೂತ್ರಗಳ ಅರ್ಥವನ್ನು ಯಥಾವತ್ತಾಗಿ ವಿವರಿಸಿದ್ದಾರೆ. ಶ್ರೀಶಂಕರಚಾರ್ಯರೊಬ್ಬರೇ ಅಲ್ಲ. ಶ್ರೀರಾಮಾನುಜಾಚಾರ್ಯರೂ ಶ್ರೀಮಧ್ವಾಚಾರ್ಯರೂ -ಇತರ ಎಲ್ಲ ಆಚಾರ್ಯರೂ ಸಹ ಶೂದ್ರನಿಗೆ ವೇದಾಧಿಕಾರವಿಲ್ಲವೆಂದೇ ಬರೆದಿದ್ದಾರೆ. ಭಾಷ್ಯಕಾರರು ಸೂತ್ರಗಳನ್ನು ಖಂಡಿಸಬೇಕಾಗಿತ್ತೆ? ಉಪನಯನಾದಿ ಸಂಸ್ಕಾರವಿಲ್ಲದ್ದರಿಂದ ವೇದಾಧಿಕಾರವಿಲ್ಲವೇ ಹೊರತು, ಆತನು ಶೂದ್ರನೆಂಬ ಕಾರಣದಿಂದ ಅಲ್ಲ. ವೇದಾಧ್ಯಯನವು ಆತನಿಗೆ ನಿಷಿದ್ಧವೇ ಹೊರತು ಆತ್ಮಜ್ಞಾನವು ನಿಷಿದ್ಧವಲ್ಲ. ಆಚಾರ್ಯರೇ ಹೀಗೆ ಹೇಳಿದ್ದಾರೆ -

"ಶ್ರಾವಯೇಚ್ಚತುರೋ ವರ್ಣಾನ್" (ಮೋ.ಧ. ೩೨೭-೪೯). ಇತಿಚ ಇತಿಹಾಸ ಪುರಾಣಾಧಿಗಮೇ ಚಾತುರ್ವರ್ಣ್ಯಸ್ಯ ಅಧಿಕಾರಸ್ಮರಣಾತ್, ವೇದಪೂರ್ವಕಸ್ತು ನಾಸ್ತಿ ಅಧಿಕಾರಃ ಶೂದ್ರಾಣಾಮಿತಿ ಸ್ಥಿತಮ್" (ಬ್ರ.ಸೂ. ೧-೩-೩೮). ತಾತ್ಪರ್ಯವೇನೆಂದರೆ- ಇತಿಹಾಸ, ಪುರಾಣದಿಗಳಿಂದ ಶೂದ್ರನೂ ಸಹ ಆತ್ಮಜ್ಞಾನವನ್ನು ಪಡೆಯಲು ಅಧಿಕಾರಿಯಾಗಿದ್ದಾನೆ ಧರ್ಮವ್ಯಾಧ, ವಿದುರ -ಮೊದಲಾದವರಂತೆ ಅವನು ಆತ್ಮಜ್ಞಾನಿಯಾಗಿ ಮೋಕ್ಷವನ್ನು ಪಡೆಯಬಹುದು. ವೇದಪೂರ್ವಕವಾಗಿ ಮಾತ್ರ ಅಧಿಕಾರವಿಲ್ಲ.

"ಸಮಸ್ತಮಾನವರಿಗೂ ವಿದ್ಯೆಯಲ್ಲಿ ಅಧಿಕಾರ ಉಂಟು. ಅದನ್ನು ನಿಷೇಧಿಸುವುದು ಯುಕ್ತವಲ್ಲ. ಶಕ್ಯವೂ ಅಲ್ಲ"ಎಂಬುದೇ ಆಚಾರ್ಯರ ನಿಲುವು "ಸರ್ವೇಷಾಂ ಚಾಧಿಕಾರೋ ವಿದ್ಯಾಯಾಮ್"ಎಂದು ಘೋಷಿಸಿದವರು ಭಗವತ್ಪಾದರು(ತೈತ್ತಿರೀಯ ಭಾಷ್ಯ. ಶಿಕ್ಷಾ -೧೧).

"ಚಂಡಾಲೋಽಸ್ತುಸತು ದ್ವಿಜೋಽಸ್ತು ಗುರುರಿತ್ಯೇಷಾ ಮನೀಷಾ ಮಮ" ಬ್ರಹ್ಮಜ್ಞಾನಿಯು ಚಂಡಾಲಜಾತಿಯವನಾಗಿರಲಿ ದ್ವಿಜನಾಗಿರಲಿ, ಆತನು ನನ್ನ ಗುರುವೆಂಬುದು ನನ್ನ ದೃಢವಿಶ್ವಾಸ" ಎಂದು ಸ್ಪಷ್ಟವಾಗಿ ಉದ್ಗರಿಸಿದ ಆಚಾರ್ಯರು ಪಕ್ಷಪಾತಿಗಳೆ? ಈ ಯಾವ ವಿಚಾರವನ್ನೂ ಮಾಡದೆ ವಿಚಾರವಾದಿಗಳೆಂದು ಕೊಳ್ಳುವ ಕೆಲವರು,'ಶಂಕರಾಚಾರ್ಯರ ದಬ್ಬಾಳಿಕೆ' ಎಂದು ಮನಸ್ಸಿಗೆ ತೋಚಿದಂತೆ ಬರೆದು ಗುಲ್ಲೆಬ್ಬಿಸುವುದು ಅವಿವೇಕದ ಪರಮಾವಧಿಯಾಗಿದೆ.

ಭಗವದ್ಗೀತೆ -ಮುಂತಾದ ಆಧ್ಯಾತ್ಮಿಕಗ್ರಂಥಗಳಿಂದ ಇತರರೂ ಜ್ಞಾನಾರ್ಜನೆಮಾಡಿ ವಿದ್ಯಾವಂತರಾಗಲು ಯಾರು ಅಡ್ಡಿಪಡಿಸಿದ್ದಾರೆ? ವಿದ್ಯೆಯ ಹಂಬಲು ಇಲ್ಲದವರು ವಿದ್ಯಾವಂತರಾಗಲು ಎಂದಿಗೂ ಸಾಧ್ಯವಾಗದು. ಈಗ ಸಂಸ್ಕೃತಶಾಲೆಗಳಲ್ಲಿ ಸಂಸ್ಕೃತವನ್ನು ಸರ್ವರಿಗೂ ಹೇಳಿಕೊಡುತ್ತಿದ್ದಾರಷ್ಟೆ? ಈ ಜನರು ಈಗೇಕೆ ಕಲಿಯಬಾರದು? ಇವರಿಗೆ ಬೇಕಾದದ್ದು ಹಣ, ಸಂಸ್ಕೃತ ವಿದ್ಯೆಯಲ್ಲವೆಂಬುದೇ ಸತ್ಯಸಂಗತಿ.

**ಉಪಸಂಹಾರ**

ಅದ್ವೈತಸಿದ್ಧಾಂತವು ಪ್ರಚ್ಛನ್ನಬೌದ್ಧಮತವೆಂದು ಕೆಲವರು ನಿಂದಾವಚನವನ್ನಾಡಿದ್ದುಂಟು. ವಿದ್ವಾಂಸರು ಅವರಿಗೆ ಸಮಂಜಸವಾದ ಉತ್ತರವನ್ನಿತ್ತು ಅವೆರಡಕ್ಕೂ ಇರುವ ಭೇದಗಳನ್ನು ಸ್ಫುಟವಾಗಿ ತೋರಿಸಿಕೊಟ್ಟಿದ್ದಾರೆ. ಅದನ್ನಿಲ್ಲಿ ಬರೆಯುವುದರಿಂದ ಪ್ರಸ್ತಾವನೆ ಇನ್ನೂ ಬೆಳೆದೀತು. ಗೌಡಪಾದರೇ ಮಾಂಡೂಕ್ಯಕಾರಿಕೆಯಲ್ಲಿ 'ನೈತದ್ ಬುದ್ಧೇನ ಭಾಷಿತಂ = ಇದನ್ನು ಬುದ್ಧನು ಹೇಳಲಿಲ್ಲ' ಎಂದು ಮತ್ತೆ ಮತ್ತೆ ಹೇಳಿ ಈ ಸಿದ್ಧಾಂತಗಳಲ್ಲಿ ಭೇದವಿದೆಯೆಂದು ತೋರಿಸಿಕೊಟ್ಟಿರುವಾಗ ಈ ನಿಂದಾವಚನಕ್ಕೆ ಬುಡವೆಲ್ಲಿದೆ? ಯತ್ಕಿಂಚಿತ್ ಸಾಮ್ಯದಿಂದ ಆಚಾರ್ಯರದು ಬೌದ್ಧಮತವಾಗುವುದಾದರೆ, ಜಗತ್ತು ಸತ್ಯವೆಂದೂ ಜೀವಾತ್ಮರು ಅಸಂಖ್ಯಾತರಾಗಿದ್ದಾರೆಂದೂ ಜೈನರೂ ಹೇಳುವುದರಿಂದ ದ್ವೈತವಾದವು ಪ್ರಚ್ಛನ್ನಜೈನಮತವಾದೀತು. ವೈಕುಂಠಕ್ಕೆ ಹೋಗಿ ನೋಡಿಬಂದವರಂತೆ, ಮುಕ್ತರಿಗೆ ವೈಕುಂಠದಲ್ಲಿ ದೊರೆಯುವ ಸ್ವಾಗತದ ವೈಭವವನ್ನು ವರ್ಣಿಸತಕ್ಕವರಿಗೂ ಪುಣ್ಯಾತ್ಮರಿಗೆ ದೊರೆಯುವ ಸ್ವರ್ಗದ ವೈಭವವನ್ನು ಕಣ್ಣಲ್ಲಿ ಕಂಡಂತೆ ವರ್ಣಿಸುವ ಮುಸ್ಲಿಂಮತೀಯರಿಗೂ ಸಾಮ್ಯವಿರುವುದರಿಂದ ಮತ್ತೊಂದು ಮತವು

ಪ್ರಚ್ಛನ್ನಮಹಮ್ಮದೀಯ ಮತವಾದೀತು.

ಶ್ರೀಶಂಕರಭಗವತ್ಪಾದರು ಅದ್ಭುತವ್ಯಕ್ತಿತ್ವವಿದ್ದ ಒಬ್ಬ ಮಹಾಪುರುಷರಾಗಿದ್ದರು. ಅಗಾಧವಾದ ಪಾಂಡಿತ್ಯ, ದೂರದರ್ಶಿತ್ವ ಮತ್ತು ಅದಮ್ಯವಾದ ಉತ್ಸಾಹಶಕ್ತಿಗಳಿಗೆ ಅವರು ತವರುಮನೆಯಾಗಿದ್ದರು. ಅವರ ಸೂಕ್ಷ್ಮದೃಷ್ಟಿಗೆ ಎರಡು ಅಂಶಗಳು ಗೋಚರವಾಗಿರಬೇಕು. ವೈದಿಕಸಂಸ್ಕೃತಿಯ ಹ್ರಾಸ ಮತ್ತು ರಾಜಕೀಯದಿಂದ ತುಂಡುತುಂಡಾದ ಭಾರತರಾಷ್ಟ್ರ. ಇವೆರಡನ್ನೂ ಸರಿಪಡಿಸಿ ಈ ದೇಶದಲ್ಲಿ ವೈದಿಕಧರ್ಮವನ್ನು ನೆಲೆಗೊಳಿಸಿ ಭಾರತದೇಶದ ಏಕತೆ - ಸಮಗ್ರತೆಗಳನ್ನು ರಕ್ಷಿಸಿದ ಹೊರತು ಸಮಾಜದ ಅಭ್ಯುದಯವು ಸಾಧಿತವಾಗುವುದಿಲ್ಲ ವೆಂದು ಅವರು ನಿಶ್ಚಯಿಸಿದರು"ಬ್ರಹ್ಮಕ್ಷತ್ರೇಹಿ ಪರಿಪಾಲಿತೇ ಜಗತ್ ಪರಿಪಾಲಯಿತುಮಲಂ" (ಗೀತಾ. ೪ -೧)ಬ್ರಹ್ಮಕ್ಷತ್ರಧರ್ಮಗಳನ್ನು ಪರಿಪಾಲಿಸಿದರೆ ಅವೆರಡೂ ಸೇರಿ ಜಗತ್ತನ್ನೇ ಪರಿಪಾಲಿಸಬಲ್ಲವು - ಎಂಬುದು ಅವರ ನಿಶ್ಚಯವಾಗಿತ್ತು. ಕ್ಷತ್ರಿಯರ ರಾಜಕೀಯ ಕ್ಷೇತ್ರವನ್ನು ರಕ್ಷಿಸುವುದು ಸಂನ್ಯಾಸಿಯಿಂದ ಆಗತಕ್ಕದ್ದಲ್ಲ. ಆದ್ದರಿಂದ ಬ್ರಾಹ್ಮಕ್ಷೇತ್ರವನ್ನು ರಕ್ಷಿಸಿ ವೈದಿಕಸಂಸ್ಕೃತಿಯನ್ನು ಈ ದೇಶದ ಆದ್ಯಂತವಾಗಿ ಪ್ರಚುರಗೊಳಿಸಿದರೆ ಅದು ರಾಷ್ಟ್ರದ ಏಕತೆಯನ್ನು ಗಟ್ಟಿಯಾಗಿ ಹಿಡಿದಿಡಬಲ್ಲದು. "ಜೀವನ್ ಭದ್ರಾಣಿ ಪಶ್ಯತಿ" ಎಂದು ನಿಶ್ಚಯಿಸಿದರು. ಮರಳಿನಿಂದ ಸಂಮಿಶ್ರವಾದ ಸಿಮೆಂಟು, ಇಟ್ಟಿಗೆಗಳನ್ನು ಅಂಟಿಸಿ ಹೇಗೆ ಭದ್ರವಾಗಿ ನಿಲ್ಲಿಸಬಲ್ಲದೋ ಹಾಗೆ ಸಂಸ್ಕೃತಭಾಷಾ ಸಹಿತವಾದ ವೈದಿಕ ಸಂಸ್ಕೃತಿಯು ಈ ರಾಷ್ಟ್ರದ ಎಲ್ಲ ರಾಜ್ಯಗಳನ್ನೂ ಒಂದುಗೂಡಿಸಿ ರಾಷ್ಟ್ರವನ್ನು ಭದ್ರಗೊಳಿಸಬಲ್ಲದು. ಹೀಗೆ ನಿರ್ಮಿತವಾದ ಭವ್ಯಭವನದೊಳಗೆ ಸಮಾಜವು ತನ್ನ ಕ್ಷೇಮಾಭ್ಯುದಯಗಳನ್ನು ಸಾಧಿಸಿಕೊಳ್ಳಬಹುದು. ಈ ದೃಷ್ಟಿಯನ್ನವಲಂಬಿಸಿದ ಆಚಾರ್ಯರು ಬದ್ಧಕಂಕಣರಾಗಿ, ಭಾರತದ ಆದ್ಯಂತವೂ ಪಾದಯಾತ್ರೆಗಳನ್ನು ನಡೆಸಿ ಈ ಬೃಹತ್ಕಾರ್ಯವನ್ನು ಸಾಧಿಸಿದರು. ಒಬ್ಬ ಸಂನ್ಯಾಸಿಯು ಇಂತಹ ದುಷ್ಕರಕಾರ್ಯವನ್ನು ನಡೆಸಿ ಕೃತಕೃತ್ಯನಾದುದಕ್ಕೆ ಇತಿಹಾಸದಲ್ಲಿ ಇನ್ನೊಂದು ದೃಷ್ಟಾಂತವು ದೊರೆಯದು. ಭಗವತ್ಪಾದರು ಈ ಕಾರ್ಯವನ್ನು ಕೈಗೊಳ್ಳದೇ ಹೋಗಿದ್ದರೆ, ವೇದವಾಙ್ಮಯವು ಹೇಳಹೆಸರಿಲ್ಲದೆ ನಶಿಸಿಹೋಗುತ್ತಿತ್ತು. ರಾಷ್ಟ್ರವು ಎಂದೋ ವಿದೇಶೀಯರ ವಶವಾಗಿ ತುಂಡು ತುಂಡಾಗುತ್ತಿತ್ತು. ಆಗ ಏಕರಾಷ್ಟ್ರವೆಂಬ ಕಲ್ಪನೆಯೇ ಅಳಿಸಿಹೋಗಿ ಮತ್ತೆ ಸ್ವಾತಂತ್ರ್ಯವನ್ನು ಗಳಿಸಲು ಸಾಧ್ಯವಾಗುತ್ತಲೂ ಇರಲಿಲ್ಲ. ವಾಲ್ಮೀಕಿಮುನಿಗಳ ಕವಿತಾನೈಪುಣ್ಯ, ವ್ಯಾಸರ ಕರ್ತೃತ್ವಶಕ್ತಿ, ಶುಕರ ವೈರಾಗ್ಯ, ನಾರದರ ಭಕ್ತಿ, ಪತಂಜಲಿಮಹರ್ಷಿಗಳ ಪ್ರತಿಭೆ, ವಸಿಷ್ಠರ ತಪಸ್ಸು -ಇವೆಲ್ಲವೂ ಶ್ರೀಶಂಕರಾಚಾರ್ಯರೆಂಬ ಒಬ್ಬ ವ್ಯಕ್ತಿಯಲ್ಲಿ ನೆಲೆಸಿದ್ದವು. ಈ ವಿಭೂತಿ ಪುರುಷರನ್ನು ಭಾರತೀಯರು ಕೃತಜ್ಞತೆಯಿಂದ ಸದಾ ಸ್ಮರಿಸುತ್ತಿರಬೇಕು.

## ಅನುವಾದ

ಈ ದ್ವಿತೀಯಭಾಗದೊಂದಿಗೆ ಶ್ರೀಶಂಕರದಿಗ್ವಿಜಯದ ಅನುವಾದವು ಪೂರ್ಣವಾಗಿದೆ. ಪ್ರಥಮಭಾಗದಲ್ಲಿ ನಾನು ಅನುಸರಿಸಿದ ಕ್ರಮವನ್ನೇ ಇದರಲ್ಲಿಯೂ ಮುಂದುವರಿಸಿದ್ದೇನೆ. ಪ್ರಥಮಭಾಗವನ್ನೋದಿದ ವಿದ್ವಾಂಸರೂ ಇತರ ಆಸ್ತಿಕಮಹಾಜನರೂ ಅನುವಾದವನ್ನು ಪ್ರಶಂಸಿಸಿ ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಾರೆ. ಅವರಿಗೆ ನಾನು ಕೃತಜ್ಞನಾಗಿದ್ದೇನೆ.'ಶ್ರೀಶಂಕರಕೃಪಾ' ಮಾಸಪತ್ರಿಕೆಯ 1997ನೇ ಜನವರಿಯ ಸಂಚಿಕೆಯಲ್ಲಿ ಪ್ರಕಟವಾದ ಗ್ರಂಥವಿಮರ್ಶೆಯಲ್ಲಿ ಒಬ್ಬ ದೊಡ್ಡವಿದ್ವಾಂಸರು ಈ ಅನುವಾದಕ್ರಮವನ್ನು ಶ್ಲಾಘಿಸಿದ್ದಾರೆ. "ಗ್ರಂಥದ ಮೊದಲಲ್ಲಿ ವಿಷಯಸೂಚಿಕೆಯನ್ನು ನೀಡದಿರುವುದು ನಿಜವಾದ ಕೊರತೆ" ಎಂದುಸಹ ಹೇಳಿದ್ದಾರೆ. ಅದು ನಿಜ. ಪ್ರತಿಯೊಂದು ಸರ್ಗದ ಆರಂಭದಲ್ಲಿ ಪ್ರತಿಪಾದ್ಯವಿಷಯವನ್ನು ಸಂಕ್ಷೇಪವಾಗಿ ಬರೆದದ್ದರಿಂದ ಆಗ ಪ್ರತ್ಯೇಕವಾಗಿ ವಿಷಯಸೂಚಿಕೆ ಬೇಡವೆನಿಸಿತು. ವಿಷಯಸೂಚಿಕೆಯನ್ನು ಈ ದ್ವಿತೀಯಭಾಗದಲ್ಲಿ ಸೇರಿಸಿದ್ದೇನೆ.

ಈ ಗ್ರಂಥದ ಕಡೆಯಲ್ಲಿ ಕೆಲವು ಅನುಬಂಧಗಳನ್ನು ಸೇರಿಸಿದ್ದೇನೆ. ಪರಬ್ರಹ್ಮ, ಜೀವ, ಜಗತ್ತು, ಅವಿದ್ಯೆ, ಕರ್ಮ, ಭಕ್ತಿ, ಜ್ಞಾನ -ಇತ್ಯಾದಿವಿಷಯಗಳಲ್ಲಿ ಆಚಾರ್ಯರ ನಿಷ್ಕೃಷ್ಟವಾದ ನಿಲುವು, ಉಪದೇಶ ಗಳೇನೆಂಬುದನ್ನು ಸಂಕ್ಷಿಪ್ತವಾಗಿ ತಿಳಿಸುವ ಅವರ ವಾಕ್ಯಗಳನ್ನೇ ಆಯ್ದು ಉದಾಹರಿಸಿದ್ದೇನೆ. ಈ ವಾಕ್ಯಗಳು ಆಚಾರ್ಯರ ಭಾಷಾಶೈಲಿಯ ಮನೋಜ್ಞತೆಗೂ ನಿದರ್ಶನಗಳಾಗುತ್ತವೆ. ವಾಚಕರ ಉಪಯೋಗಕ್ಕಾಗಿ ಭೇದಾಭೇದವಾದ ಮತ್ತು ಬೌದ್ಧ ಜೈನಮತಗಳ ಸ್ಥೂಲಪರಿಚಯವನ್ನು ಮಾಡಿಕೊಟ್ಟಿದ್ದೇನೆ. ಶಂಕರವಿಜಯದಲ್ಲಿ ಪರಾಮೃಷ್ಟವಾದ ಆಚಾರ್ಯಕೃತಸ್ತೋತ್ರಗಳನ್ನೂ ಲಲಿತವಾದ ಇನ್ನೂ ಒಂದೆರಡು ಸ್ತುತಿ, ಉಪದೇಶಗಳನ್ನೂ ಬರೆಯಲಾಗಿದೆ. ಶ್ರೀಶಂಕರರ ವಿಷಯದಲ್ಲಿ ಕೆಲವು ಪ್ರಾಚ್ಯಪಾಶ್ಚಾತ್ಯವಿದ್ವಾಂಸರ ಮೆಚ್ಚುಗೆಯ ಮಾತುಗಳನ್ನೂ ಸೇರಿಸಲಾಗಿದೆ.

## ಕೃತಜ್ಞತಾಸಮರ್ಪಣೆ

ಶ್ರೀಶಂಕರಭಗವತ್ಪಾದರ ಪರಮಾನುಗ್ರಹದಿಂದ ಯಥಾಶಕ್ತಿಯಾಗಿ ಯಥಾಮತಿಯಾಗಿ ಅವರ ಸೇವಾ ಕಾರ್ಯವನ್ನು ನೆರವೇರಿಸಿದೆನೆಂದು ನನಗೆ ಹರ್ಷವಾಗಿದೆ. ಆ ವಿಭೂತಿಪುರುಷರ ಚರಣ ರಜಃಕಣಗಳಲ್ಲೊಂದು ಕಣವನ್ನು ನನ್ನ ಶಿರಸ್ಸಿನಲ್ಲಿ ಧರಿಸುವ ಯೋಗ್ಯತೆಯನ್ನು ಗಳಿಸಿದೆನೆಂದು ನನ್ನನ್ನು ನಾನೇ ಧನ್ಯನೆಂದುಕೊಳ್ಳುತ್ತೇನೆ: ಈ ಧನ್ಯತಾಭಾವಪ್ರಾಪ್ತಿಗೆ ಶ್ರೀ ಶೃಂಗೇರಿ ಜಗದ್ಗುರುಪೀಠದಲ್ಲಿ ವಿರಾಜಮಾನರಾಗಿರುವ ಪರಮಪೂಜ್ಯ ಶ್ರೀಭಾರತೀತೀರ್ಥ ಮಹಾಸ್ವಾಮಿಗಳವರ ಕಾರುಣ್ಯಪೂರ್ಣ ಆದೇಶಾನುಗ್ರಹಗಳೇ ಕಾರಣ. ನನ್ನ

ಅಪರವಯಸ್ಸಿನಲ್ಲಿ ಈ ಅನುವಾದ ಕಾರ್ಯವನ್ನು ನಡೆಸಲು ಸಾಧ್ಯವಾದದ್ದು ಅವರ ಆಶೀರ್ವಾದಬಲದಿಂದಲೇ ಸರಿ. ಶ್ರೀ ಭಾರತೀತೀರ್ಥಮಹಾಸ್ವಾಮಿಗಳವರ ದಿವ್ಯಚರಣಗಳಿಗೆ ಭಕ್ತಿಪೂರ್ವಕವಾಗಿ ಸಾಷ್ಟಾಂಗಪ್ರಣಾಮಗಳನ್ನರ್ಪಿಸುತ್ತೇನೆ.

ಶ್ರೀಶೃಂಗೇರಿಶಾರದಾ ಪೀಠದ ಆಡಳಿತಾಧಿಕಾರಿಗಳಾದ (Administrator) ಶ್ರೀಮಾನ್ ವಿ. ಆರ್. ಗೌರೀಶಂಕರ ಅವರು ನನಗೆ ಬೇಕಾದ ಎಲ್ಲ ಸೌಕರ್ಯಗಳನ್ನೂ ಸಂತೋಷದಿಂದ ಒದಗಿಸಿಕೊಟ್ಟುಪ್ರೋತ್ಸಾಹಿಸಿದ್ದಾರೆ. ಆ ಮಹನೀಯರಿಗೆ ಹೃದಯಪೂರ್ವಕವಾದ ವಂದನೆಗಳನ್ನು ಸಲ್ಲಿಸುತ್ತೇನೆ. ಪ್ರೊ||ಎಸ್. ರಾಮಚಂದ್ರಶಾಸ್ತ್ರಿಗಳು ನನಗೆ ಬೇಕಾದ ಕೆಲವು ಗ್ರಂಥಗಳನ್ನು ಒದಗಿಸಿಕೊಟ್ಟರಲ್ಲದೆ, ಮುದ್ರಣದ ಏರ್ಪಾಡನ್ನು ನೋಡಿಕೊಂಡು ಕರಡನ್ನು ತಿದ್ದುವುದರಲ್ಲಿ ವಿಶೇಷವಾಗಿ ಉಪಕರಿಸಿದ್ದಾರೆ. ಶ್ರೀಮತಿ ಸರೋಜ ಗಣಪತಿ ಎಂ.ಎ. ಅವರು ಅನುವಾದವನ್ನು ಬರೆದು ಕೊಳ್ಳುವ ಕಾರ್ಯದಲ್ಲಿ ನೆರವನ್ನು ನೀಡಿದ್ದಾರೆ. ವಿದ್ವಾನ್ ಎಂ.ಆರ್. ವೆಂಕಟೇಶಮೂರ್ತಿಗಳು ಗ್ರಂಥದ ಮೂಲಶ್ಲೋಕಗಳನ್ನು ಕನ್ನಡಲಿಪಿಯಲ್ಲಿ ಬರೆದು ಕೊಟ್ಟಿದ್ದಾರೆ. ಇವರೆಲ್ಲರಿಗೂ ನನ್ನ ಕೃತಜ್ಞತೆಯ ವಂದನೆಗಳು ಸಲ್ಲುತ್ತವೆ.

ಆಚಾರ್ಯರಿಗೂ ಭಟ್ಟಭಾಸ್ಕರನಿಗೂ ನಡೆದ ವಾದವು ಶಾಸ್ತ್ರೀಯ ಪ್ರಕ್ರಿಯಾಬಾಹುಲ್ಯದಿಂದ ಕ್ಲಿಷ್ಟವಾಗಿದೆ. ಇದನ್ನು ಅನುವಾದಿಸುವಾಗ ನನಗೆ ತಲೆದೋರಿದ ಕೆಲವು ಶಂಕೆಗಳನ್ನು ಸಮರ್ಪಕವಾಗಿ ಬಗೆಹರಿಸಿ ಉಪಕರಿಸಿದವರು ಈ ಇಬ್ಬರು ಪಂಡಿತೋತ್ತಮರು-

೧. ಬೆಂಗಳೂರು ಶ್ರೀಶಂಕರಮಠದ ಮಹಾವಿದ್ಯಾಲಯದಲ್ಲಿ ವೇದಾಂತ ಪ್ರಾಧ್ಯಾಪಕರಾಗಿದ್ದು ಈಗ ನಿವೃತ್ತರಾಗಿರುವ ವೇ.ಬ್ರ.ಶ್ರೀ. ವಿದ್ವಾನ್ ಕೆ. ಕೃಷ್ಣಜೋಯಿಸರು.

೨. ಮೈಸೂರು ಮಹಾರಾಜ ಸಂಸ್ಕೃತ ಮಹಾವಿದ್ಯಾಲಯದಲ್ಲಿ ವೇದಾಂತ ಪ್ರಾಧ್ಯಾಪಕರಾಗಿದ್ದು ಈಗ ಶೃಂಗೇರಿಯಲ್ಲಿ ಪೂಜ್ಯ ಶ್ರೀಜಗದ್ಗುರುಗಳ ಸಂನಿಧಿಯಲ್ಲಿರುವ ವೇ.ಬ್ರ.ಶ್ರೀ. ವಿದ್ವಾನ್ ನಾರಾಯಣಭಟ್ಟರು.

ಈ ಇಬ್ಬರು ಮಹಾವಿದ್ವಾಂಸರನ್ನೂ ಗೌರವಪೂರ್ವಕವಾಗಿ ಸ್ಮರಿಸುತ್ತಾ ಹಾರ್ದಿಕವಂದನೆಗಳನ್ನರ್ಪಿಸುತ್ತೇನೆ.

ಬೆಂಗಳೂರಿನ M&M Hi-Tech D.T.P.ಯವರು ತುಂಬಶ್ರಮವಹಿಸಿ ಸುಂದರವಾಗಿ ಕಂಪ್ಯೂಟರ್ ಸೆಟ್‌ಮಾಡಿಕೊಟ್ಟಿರುತ್ತಾರೆ. ಮುದ್ರಿಸಿದವರು ಶ್ರೀರಾಮಕೃಷ್ಣ ಪ್ರೆಸ್ಸಿನವರು. ಈ ಮಹನೀಯರಿಗೆ ನನ್ನ ವಂದನೆಗಳು ಸಲ್ಲುತ್ತವೆ.

ಇತ್ಥಂ ಶ್ರೀಶಂಕರಾರ್ಯಸ್ತುತಿಪರಚರಿತಂ ಪಾವನಂ ದೇವವಾಣ್ಯಾ
ಶ್ರೀವಿದ್ಯಾರಣ್ಯಪಾದೈರ್ವಿರಚಿತಮಖಿಲಂ ಪ್ರೌಢಯಾ ಕಾವ್ಯಶೈಲ್ಯಾ ।
ಸುಗ್ರಾಹ್ಯಂ ದೇಶ್ಯವಾಚಾ ವಿವೃತಮಥ ಸತಾಮಸ್ತ್ವಿತಿ ಬ್ರಹ್ಮವಿದ್ಭಿಃ
ಕಾರುಣ್ಯೇನಾನುಶಿಷ್ಟೋಽಸ್ಮ್ಯಮಿತಮಹಿಮಭಿರ್ಭಾರತೀತೀರ್ಥಪಾದೈಃ ॥

ಸೋಽಹಂ ಬುದ್ಧ್ವಾ ಗುರೂಣಾಂ ಕವಚಿತಮಧುನಾ ಮಾಂ ಕೃಪಾರ್ದ್ರೈಃ ಕಟಾಕ್ಷೈಃ
ಧೈರ್ಯಾತ್ ಕರ್ಣಾಟವಾಚಾ ಪರಮಗುರುಕಥಾವೈಭವಂ ವ್ಯಾವರೀತುಮ್ ।
ಪ್ರಾಯಸ್ಯಂ ತತ್ರ ದೋಷಃ ಕ್ವಚನ ಯದಿ ಭವೇತ್ ಕ್ಷಮ್ಯತಾಂ ತರ್ಹಿ ಸದ್ಭಿಃ
ಕೋ ವಾ ಧೀರಃ ಪ್ರಯಾಯಾತ್ ಪಥಿ ವಿಷಮತರೇಽಪ್ಯಸ್ಖಲನ್ನಧ್ವನೀನಃ ॥

ಸರ್ವಾತ್ಮತಾವಿಹಾರೀ
ಸರ್ವಜನೋದ್ಧರಣಪಥಚಾರೀ ।
ಸರ್ವಸಮನ್ವಯಕಾರೀ
ಶರ್ವಃ ಶ್ರೀಶಂಕರೋ ಗುರುರ್ಜಯತಿ ॥

ಜಯತು ಯತಿವರೇಣ್ಯಃ ಶಂಕರಾಚಾರ್ಯಪಾದೋ
ಜಯತು ತದುಪದಿಷ್ಟಂ ತತ್ತ್ವಮದ್ವೈತಮುರ್ವ್ಯಾಮ್ ।
ಜಯತು ಕಲುಷಭರ್ಗೋ ವೇದಮಾರ್ಗೋಽಪ್ಯನರ್ಘೋ
ಜಯತು ವಿಮಲವಾಣೀ ಸಂಸ್ಕೃತಾ ಸರ್ವಕಾಲಮ್ ॥

ಬೆಂಗಳೂರು
ತಾ. ೧೧-೫-೧೯೭೭
ಈಶ್ವರ ಸಂವತ್ಸರದ ವೈಶಾಖ ಶುದ್ಧ ಪಂಚಮೀ

ವಿದ್ವಜ್ಜನವಿಧೇಯಃ
ಎನ್. ರಂಗನಾಥಶರ್ಮಾ

# ವಿಷಯಾನುಕ್ರಮಣಿಕೆ

## ದ್ವಿತೀಯಭಾಗ



### ಅನುಬಂಧಗಳು

## ದಶಮಃ ಸರ್ಗಃ

### ದೇಹಾಂತರ ಪ್ರವೇಶಲೀಲಾ

ಆಚಾರ್ಯರು ಅಮರುಕರಾಜನ ದೇಹದಲ್ಲಿದ್ದು ಕಾಮಶಾಸ್ತ್ರವನ್ನುರಚಿಸಿ, ಪುನಃ ಸ್ವದೇಹವನ್ನು ಪ್ರವೇಶಿಸುವುದು. ಉಭಯ ಭಾರತಿಯಿಂದ ಆಚಾರ್ಯರ ಸ್ತುತಿ. ಅವಳ ಅಂತರ್ಧಾನ. ಶಿಷ್ಯನಾದ ಮಂಡನನಿಗೆ 'ತತ್ತ್ವಮಸಿ' ಮಹಾವಾಕ್ಯದ ಉಪದೇಶ. ಸುರೇಶ್ವರನೆಂದು ಆತನಿಗೆ ನಾಮಕರಣ. ಶಿಷ್ಯರೊಡನೆ ಮಹಾರಾಷ್ಟ್ರಾದಿದೇಶಗಳಲ್ಲಿ ಸಂಚರಿಸಿ ಶ್ರೀ ಶೈಲಕ್ಕೆ ಪ್ರಯಾಣ. ಪಾಶುಪತಾದಿಗಳ ಪರಾಜಯ.

ಅಥ ಪುರೋಹಿತ ಮಂತ್ರಿ ಪುರಸ್ಸರೈಃ
ನರಪತಿಃ ಕೃತಶಾಂತಿಕಕರ್ಮಭಿಃ|
ವಿಹಿತಮಾಂಗಲಿಕಃ ಸ ಯಥೋಚಿತಂ
ನಗರಮಾಸ್ಥಿತಭದ್ರಗಜೋ ಯಯೌ || ೧

ಹೀಗೆ ಪರಕಾಯಪ್ರವೇಶವಾದಮೇಲೆ ಅಮರುಕರಾಜನಿಗೆ ಮಂತ್ರಿಪುರೋಹಿತರು ಶಾಂತಿ ಕರ್ಮಗಳನ್ನು ಮಾಡಿಸಿದರು. ಅನಂತರ ಆ ರಾಜನು, ಮಂಗಳವಾದ್ಯವು ಮೊಳಗುತ್ತಿರಲು, ಪಟ್ಟದಾನೆಯನ್ನೇರಿ ತನ್ನ ರಾಜಧಾನಿಗೆ ಪ್ರಯಾಣಮಾಡಿದನು.

ಸಮಧಿಗಮ್ಯ ಪುರಂ ಪರಿಸಾಂತ್ವಿತ-
ಪ್ರಿಯಜನಃ ಸಚಿವೈಃ ಸಹ ಸಮ್ಮತೈಃ|
ಭುವಮಪಾಲಯದಾದೃತಶಾಸನೋ
ನೃಪತಿಭಿರ್ದಿವಮಿಂದ್ರ ಇವಾಧಿರಾಟ್ || ೨

ರಾಜಧಾನಿಗೆ ಹೋಗಿ ಬಂಧುಮಿತ್ರರನ್ನು ಸಂತೋಷಪಡಿಸಿ ಪ್ರಿಯರಾದ ಮಂತ್ರಿಗಳೊಡನೆ ಕೂಡಿ, ಆ ರಾಜನು ತನ್ನ ರಾಜ್ಯವನ್ನು, ಇಂದ್ರನು ಸ್ವರ್ಗವನ್ನು ಪಾಲಿಸುವಂತೆ, ನ್ಯಾಯಪುರಸ್ಸರವಾಗಿ ಪಾಲಿಸತೊಡಗಿದನು.

ಇತಿ ನೃಪತ್ವಮುಪೇತ್ಯ ವಸುಂಧರಾಂ
ಅವತಿ ಸಂಯಮಿಭೂಭೃತಿ ಮಂತ್ರಿಣಃ|
ತಮಧಿಕೃತ್ಯ ಪರಂ ಕೃತಸಂಶಯಾ
ಇತಿ ಜಜಲ್ಪುರನಲ್ಪಧಿಯೋ ಮಿಥಃ || ೩

ಯತೀಶ್ವರರಾದ ಆಚಾರ್ಯರು ಹೀಗೆ ರಾಜತ್ವವನ್ನು ಪಡೆದು ರಾಜ್ಯವನ್ನು ಪಾಲಿಸುತ್ತಿರುವಾಗ, ಬುದ್ಧಿಶಾಲಿಗಳಾದ ಮಂತ್ರಿಗಳಿಗೆ ಒಂದು ಸಂಶಯವು ತಲೆದೋರಿತು. ಅವರು ಒಂದುದಿನ ಒಟ್ಟುಸೇರಿ ತಮ್ಮೊಳಗೆ ಈ ರೀತಿ ಮಾತಾಡಿಕೊಂಡರು.

ಮೃತಿಮುಪೇತ್ಯ ಯಥಾ ಪುನರುತ್ಥಿತಃ
ಪ್ರಕೃತಿಭಾಗ್ಯವಶೇನ ತಥಾ ತ್ವಯಮ್।
ನರಪತಿಃ ಪ್ರತಿಭಾತಿ ನ ಪೂರ್ವವತ್
ಸಮುದಿತಾಖಿಲದಿವ್ಯಗುಣೋದಯಃ ॥ ೪

"ನಮ್ಮ ಈ ರಾಜನು ಮೃತನಾಗಿ ಪ್ರಜೆಗಳ ಭಾಗ್ಯವಶದಿಂದ ಮತ್ತೆ ಬದುಕಿದನೆಂಬುದೇನೋ ಸರಿ. ಆದರೆ ಈತನು ಹಿಂದೆ ಇದ್ದಂತೆ ಕಾಣಬರುವುದಿಲ್ಲ. ಕೆಲವು ದಿವ್ಯಗುಣಗಳು ಹೊಸದಾಗಿ ಬಂದಿರುವಂತೆ ತೋರುತ್ತದೆ.

ವಸು ದದಾತಿ ಯಯಾತಿವದರ್ಥಿನೇ
ವದತಿ ಗೀಷ್ಪತಿವದ್ಗಿರಮರ್ಥವಿತ್।
ಜಯತಿ ಫಾಲ್ಗುನವತ್ಪ್ರತಿಪಾರ್ಥಿವಾನ್
ಸಕಲಮಪ್ಯವಗಚ್ಛತಿ ಶರ್ವವತ್ ॥ ೫

"ಈ ರಾಜನು ಯಯಾತಿ ಚಕ್ರವರ್ತಿಯಂತೆ ಯಾಚಕರಿಗೆ ವಿಪುಲವಾಗಿ ಹಣವನ್ನು ಕೊಡುತ್ತಿದ್ದಾನೆ. ಸಾಕ್ಷಾತ್ ಬೃಹಸ್ಪತಿಯೋ ಎಂಬಂತೆ ಅರ್ಥವತ್ತಾಗಿ ಮಾತಾಡುತ್ತಿದ್ದಾನೆ. ಶತ್ರುರಾಜರ ವಿಷಯದಲ್ಲಿ ಅರ್ಜುನನೋ ಎಂಬಂತೆ ಪರಾಕ್ರಮಮನ್ನು ಮೆರೆಸಲು ಸಮರ್ಥನಾಗಿದ್ದಾನೆ. ಸರ್ವಜ್ಞನಾದ ಈಶ್ವರನಂತೆ ಎಲ್ಲ ವಿಷಯಗಳನ್ನೂ ಬಲ್ಲವನಾಗಿದ್ದಾನೆ!

ಅನುಸವನವಿಸ್ಪೃತ್ವರೈರಪೂರ್ವೈಃ
ವಿತರಣಪೌರುಷ ಶೌರ್ಯಧೈರ್ಯಪೂರ್ವೈಃ।
ಅನಿತರಸುಲಭೈರ್ಗುಣೈರ್ವಿಭಾತಿ
ಕ್ಷಿತಿಪತಿರೇಷ ಪರಃ ಪುಮಾನಿವಾದ್ಯಃ ॥ ೬

"ಪ್ರತಿದಿನವೂ ಹೆಚ್ಚುತ್ತಲೇ ಇರುವ ದಾನ, ಪೌರುಷ, ಶೌರ್ಯ, ಧೈರ್ಯಗಳು ಅಮರುಕರಾಜನಲ್ಲಿ ಕಂಡುಬರುತ್ತಿವೆ. ಇನ್ನೊಬ್ಬನಲ್ಲಿ ದುರ್ಲಭವಾದ ಅಸಾಧಾರಣ ಗುಣಗಳು ಇವನಲ್ಲಿವೆ. ರಾಜನು ಜಗದಾದಿಯಾದ ಪರಮಪುರುಷನಂತೆ ಕಾಣುತ್ತಿದ್ದಾನಲ್ಲ !

ಟಿಪ್ಪಣಿ :- ಅನುಸವನ = ಅನುದಿನವೂ - ಪ್ರತಿಕ್ಷಣವೂ ಎಂದರ್ಥ. ಆಪ್ಟೆಯವರ ಸಂಸ್ಕೃತ -ಇಂಗ್ಲಿಷ್ ನಿಘಂಟುವಿನಲ್ಲಿ ಇದಕ್ಕೆ Every moment ಎಂದು ಅರ್ಥವನ್ನು ಬರೆದಿದೆ. ಡಿಂಡಿಮ ವ್ಯಾಖ್ಯಾನದಲ್ಲಿ 'ಸರ್ವದಾ' ಎಂದು ಬರೆದಿದ್ದಾರೆ. ಇದೊಂದು ವಿಶಿಷ್ಟ ಪ್ರಯೋಗ.

ಅನೃತುಷು ತರವಃ ಸುಪುಷ್ಪಿತಾಗ್ರಾ
ಬಹುತರದುಗ್ಧದುಘಾಶ್ಚ ಗೋಮಹಿಷ್ಯಃ|
ಕ್ಷಿತಿರಭಿಮತವೃಷ್ಟಿರಾಢ್ಯಸಸ್ಯಾ
ಸ್ವವಿಹಿತಧರ್ಮರತಾಃ ಪ್ರಜಾಶ್ಚ ಸರ್ವಾಃ || ೭

"ಅಕಾಲವಾದರೂ ಈ ಋತುಗಳಲ್ಲಿ ಮರಗಳು ಹೂಗೊಂಚಲುಗಳಿಂದ ತುಂಬಿಹೋಗಿವೆ. ಹಸುಗಳೂ, ಎಮ್ಮೆಗಳೂ ಈಗ ಹೆಚ್ಚು ಹೆಚ್ಚಾಗಿ ಹಾಲನ್ನು ಕೊಡುತ್ತಿವೆ. ಯಥೇಷ್ಟವಾಗಿ ಮಳೆ ಸುರಿದು ಸಸ್ಯ ಸಂಪತ್ತು ಕಂಗೊಳಿಸುತ್ತಿದೆ. ಪ್ರಜೆಗಳೆಲ್ಲರೂ ತಮ್ಮ ತಮ್ಮ ಧರ್ಮವನ್ನು ತಪ್ಪದೆ ಪಾಲಿಸುತ್ತಿದ್ದಾರೆ.

ಕಾಲಸ್ತಿಷ್ಯಃ ಸರ್ವದೋಷಾಕರೋಽಪಿ
ತ್ರೇತಾಮತ್ಯೇತ್ಯದ್ಯ ರಾಜ್ಞಃ ಪ್ರಭಾವಾತ್|
ತಸ್ಮಾದಸ್ಮದ್ರಾಜವರ್ಷ್ಮ ಪ್ರವಿಶ್ಯ
ಪ್ರಾಪ್ತೈಶ್ವರ್ಯಃ ಶಾಸ್ತಿ ಕಶ್ಚಿದ್ಧರಿತ್ರೀಮ್ || ೮

"ಈಗಲಾದರೋ ಕಲಿಯುಗ. ಎಲ್ಲ ದೋಷಗಳೂ ತುಂಬಿರುವ ಕಾಲವಿದು. ಈ ಕಾಲವು ರಾಜನ ಮಹಿಮೆಯಿಂದ ಈಗ ತ್ರೇತಾಯುಗವನ್ನು ಮೀರಿಸಿ ಬಿಡುತ್ತದೆಯಲ್ಲಾ! ಇದೆಲ್ಲವನ್ನೂ ನೋಡಿದಾಗ ಅಣಿಮಾದಿಸಿದ್ಧಿಗಳನ್ನು ಪಡೆದ ಯಾವನೋ ಒಬ್ಬ ಮಹಾತ್ಮನು ನಮ್ಮ ದೊರೆಯ ದೇಹವನ್ನು ಪ್ರವೇಶಿಸಿ ಈ ರಾಜ್ಯವನ್ನು ಆಳುತ್ತಿರಬೇಕು.- ಎಂದು ತೋರುತ್ತದೆ!

ತದಯಂ ಗುಣವಾರಿಧಿರ್ಯಥಾ
ಪ್ರತಿಪದ್ಯೇತ ನ ಪೂರ್ವಕಂ ವಪುಃ|
ಕರವಾಮ ತಥೇತಿ ನಿಶ್ಚಯಂ
ಕೃತವಂತಃ ಸಚಿವಾಃ ಪರಸ್ಪರಮ್ || ೯

ಆದ್ದರಿಂದ, (ಅವನು ಯಾರೇ ಆಗಿರಲಿ) ತನ್ನ ಹಿಂದಿನ ದೇಹವನ್ನು ಪಡೆದು ಹೊರಟುಹೋಗದಂತೆ ನಾವು ಮಾಡಲೇಬೇಕು. "ಈ ಪ್ರಕಾರ ತಮ್ಮೊಳಗೆ ಸಮಾಲೋಚಿಸಿ ಹಾಗೆಯೇ ಮಾಡಬೇಕೆಂದು ಮಂತ್ರಿಗಳು ನಿಶ್ಚಯಿಸಿದರು.

ಅಥ ತೇ ಭುವಿ ಯಸ್ಯ ಕಸ್ಯಚಿತ್
ವಿಗತಾಸೋರ್ವಪುರಸ್ತಿ ದೇಹಿನಃ|
ಅವಿಚಾರ್ಯ ತದಾಶು ದಹ್ಯತಾಂ
ಇತಿ ಭೃತ್ಯಾನ್ ರಹಸಿ ನ್ಯಯೋಜಯನ್|| ೧೦

ಅನಂತರ ಆ ಸಚಿವರು ರಾಜಭೃತ್ಯರನ್ನು ಕರೆಸಿ ರಹಸ್ಯವಾಗಿ "ಈ ಪ್ರದೇಶದಲ್ಲಿ ಯಾರಾದರೊಬ್ಬ ಮನುಷ್ಯನು ದೇಹವನ್ನು ತ್ಯಜಿಸಿದಮೇಲೆ, ಆ ದೇಹವು ಹಾಗೆಯೇ ಉಳಿದಿದೆಯೇ-ಎಂಬುದನ್ನು ಶೋಧಿಸಿರಿ. ಹಾಗೆ ಯಾವುದಾದರೊಂದು ಪ್ರಾಣರಹಿತವಾದ ದೇಹವು ಕಂಡುಬಂದರೆ, ಕೂಡಲೆ ಹಿಂದೆಮುಂದೆ ನೋಡದೆ ಸುಟ್ಟುಹಾಕಿರಿ !" ಎಂದು ಆಜ್ಞಾಪಿಸಿದರು.

ಅಥ ರಾಜ್ಯಧುರಂ ಧರಾಧಿಪಃ
ಪರಮಾಪ್ತೇಷು ನಿವೇಶ್ಯ ಮಂತ್ರಿಷು|
ಬುಭುಜೇ ವಿಷಯಾನ್ ವಿಲಾಸಿನೀ-
ಸಚಿವೋಽನ್ಯಕ್ಷಿತಿಪಾಲದುರ್ಲಭಾನ್ || ೧೧

ಇತ್ತಲಾಗಿ ಅಮರುಕರಾಜನು ರಾಜ್ಯಭಾರದ ಕಾರ್ಯವನ್ನು ಮಂತ್ರಿಗಳಿಗೆ ವಹಿಸಿಕೊಟ್ಟು, ಅಂತಃಪುರದ ವಿಲಾಸಿನಿಯರೊಡನೆ, ಇನ್ನೊಬ್ಬ ರಾಜನಿಗೆ ದುರ್ಲಭವಾದ ವಿಷಯ ಭೋಗಗಳನ್ನು ಅನುಭವಿಸತೊಡಗಿದನು.

ಪುರೇವ ಭೋಗಾನ್ ಬುಭುಜೇ ಮಹೀಭೃತ್
ಸ ಭೋಗಿನೀಭಿಃ ಸಹಿತೋಽಪ್ಯರಂಸ್ತ|
ಕಂದರ್ಪಶಾಸ್ತ್ರಾನುಗತಃ ಪ್ರವೀಣೈಃ
ವಾತ್ಸ್ಯಾಯನೇ ತಚ್ಚ ನಿರೈಕ್ಷತಾದ್ಧಾ || ೧೨

ಆ ರಾಜನು ಹಿಂದಿನಂತೆಯೇ ಭೋಗಿನಿಯರಿಂದ ಸಹಿತನಾಗಿ ಎಲ್ಲ ವಿಷಯಭೋಗಗಳನ್ನೂ ಅನುಭವಿಸುತ್ತ ಆನಂದಿಸಿದನು. ವಾತ್ಸ್ಯಾಯನನ ಕಾಮಶಾಸ್ತ್ರದಲ್ಲಿ ಪ್ರವೀಣರಾದವರೊಡನೆ ಪರ್ಯಾಲೋಚಿಸಿದನಲ್ಲದೆ ಆ ಶಾಸ್ತ್ರವನ್ನು ತಾನೂ ವಿಶೇಷವಾಗಿ ಅವಲೋಕಿಸಿದನು.

ಟಿಪ್ಪಣಿ :- ಭೋಗಿನೀಭಿಃ ಸಹಿತೋಽಪಿ = ಇಲ್ಲೊಂದು ಚಮತ್ಕಾರ ಉಂಟು. ಭೋಗಿನಿಯರಾದ ರಮಣಿಯರೊಡನೆ ಎಂದು ಒಂದು ಅರ್ಥ. ಭೋಗಿನಿಯರೆಂದರೆ ಹೆಣ್ಣು ಸರ್ಪಗಳೆಂದು ಇನ್ನೊಂದು ಅರ್ಥ. ಆಚಾರ್ಯರ ದೃಷ್ಟಿಯಲ್ಲಿ ಆ ಹೆಂಗಸರು ಸರ್ಪಿಣಿಯರೇ! ಆರೋಪಿತವಾದ ಸುಖವನ್ನು ಅವರೊಡನೆ ಅನುಭವಿಸುತ್ತಿದ್ದರೆಂದು ಕವಿಹೃದಯ. ಆದ್ದರಿಂದಲೇ 'ಅಪಿ' ಶಬ್ದವು ಸಾರ್ಥಕವಾಗಿದೆ.

ವಾತ್ಸ್ಯಾಯನಪ್ರೋದಿತ ಸೂತ್ರಜಾತಂ
ತದೀಯ ಭಾಷ್ಯಂ ಚ ನಿರೀಕ್ಷ್ಯ ಸಮ್ಯಕ್|
ಸ್ವಯಂ ವ್ಯಧತ್ತಾಭಿನವಾರ್ಥಗರ್ಭಂ
ನಿಬಂಧಮೇಕಂ ನೃಪವೇಷಧಾರೀ ||
೧೩

ನೃಪವೇಷಧಾರಿಗಳಾದ ಆಚಾರ್ಯರು ವಾತ್ಸ್ಯಾಯನಸೂತ್ರಗಳನ್ನೂ ಅವುಗಳ ಭಾಷ್ಯವನ್ನೂ ಚೆನ್ನಾಗಿ ಪರಿಶೀಲಿಸಿ, ನೂತನಾರ್ಥಗರ್ಭಿತವಾದ ಒಂದು ಕಾಮಶಾಸ್ತ್ರಗ್ರಂಥವನ್ನು ಸ್ವತಃ ಬರೆದರು.

ಪಾರಾಶರ್ಯವನಿಭೃತಿ ಪ್ರವಿಶ್ಯ ರಾಜ್ಞೋ
ವರ್ಷ್ಮೈವಂ ವಿಹರತಿ ತದ್ವಿಲಾಸಿನೀಭಿಃ|
ದೃಷ್ಟ್ವಾ ತತ್ಸಮಯಮತೀತಮಸ್ಯ ಶಿಷ್ಯಾ
ರಕ್ಷಂತೋ ವಪುರಿತರೇತರಂ ಜಜಲ್ಪುಃ ||
೧೪

ಯತೀಶ್ವರರಾದ ಶ್ರೀಶಂಕರಾಚಾರ್ಯರು ಅಮರಕರಾಜನ ದೇಹವನ್ನು ಪ್ರವೇಶಿಸಿ ರಾಜನ ವಿಲಾಸಿನಿಯರೊಡನೆ ಈ ಪ್ರಕಾರವಾಗಿ ವಿಹರಿಸುತ್ತಿದ್ದರು. ಇತ್ತಲಾಗಿ ಅವರು ಶಿಷ್ಯರಿಗೆ ತಿಳಿಸಿ ಹೋಗಿದ್ದ ಗಡುವು ಕಳೆದು ಹೋದ್ದರಿಂದ ಅವರ ದೇಹವನ್ನು ಕಾಪಾಡುತ್ತಿದ್ದ ಶಿಷ್ಯರು ಪರಸ್ಪರವಾಗಿ ಹೀಗೆ ಮಾತಾಡಿಕೊಳ್ಳಲಾರಂಭಿಸಿದರು.

ಟಿಪ್ಪಣಿ :- ಪಾರಾಶರ್ಯವನಿಭೃತ್ =ಯತೀಶ್ವರ. ಪಾರಾಶರೀ =ಯತಿ.

ಆಚಾರ್ಯೈರವಧಿರಕಾರಿ ಮಾಸಮಾತ್ರಂ
ಸೋಽತೀತಃ ಪುನರಪಿ ಪಂಚಷಾಶ್ಚ ಘಸ್ರಾಃ|
ಅದ್ಯಾಪಿ ಸ್ವಕರಣಮೇತ್ಯ ನಃ ಸನಾಥಾನ್
ಕರ್ತುಂ ತನ್ಮನಸಿ ನ ಜಾಯತೇಽನುಕಂಪಾ ||
೧೫

"ನಮ್ಮ ಆಚಾರ್ಯರು ಒಂದು ತಿಂಗಳು ಮಾತ್ರ ಅವಧಿಯನ್ನು ಹೇಳಿಹೋಗಿದ್ದರು. ಈಗಲಾದರೋ ತಿಂಗಳ ಮೇಲೆ ಐದಾರು ದಿನಗಳೂ ಕಳೆದುಹೋದವು. ಆದರೂ ತಮ್ಮ ಈ ಶರೀರದೊಳಗೆ ಮತ್ತೆ ಪ್ರವೇಶಿಸಿ ನಮ್ಮನ್ನು ಸನಾಥರನ್ನಾಗಿ -ಧನ್ಯರನ್ನಾಗಿ ಮಾಡಲು ಅವರಿಗೆ ಕರುಣೆಯೇ ಬರಲಿಲ್ಲವಲ್ಲ!

ಕಿಂ ಕುರ್ಮಃ ಕ್ವ ನು ಮೃಗಯಾಮಹೇ ಕ್ವ ಯಾಮಃ
ಕೋ ಜಾನನ್ನಿಹ ವಸತೀತಿ ನೋಽಭಿದಧ್ಯಾತ್ |
ವಿಜ್ಞಾತುಂ ಕಥಮಿಮಮೀಶ್ಮಹೇ ವಿಚಿಂತ್ಯಾ-
ಪ್ಯಾಸಿಂಧು ಕ್ಷಿತಿತಲಮನ್ಯಗಾತ್ರಗೂಢಮ್ || ೧೬

"ಈಗೇನು ಮಾಡುವುದು? ಎಲ್ಲಿ ಹುಡುಕೋಣ? ಎಲ್ಲಿಗೆ ಹೋಗೋಣ? ಇಂತಹ ಸ್ಥಳದಲ್ಲಿ ಇದ್ದಾರೆಂದು ತಿಳಿದು ಯಾವನು ನಮಗೆ ಹೇಳಿಯಾನು? ಅನ್ಯದೇಹದಲ್ಲಿ ಗೂಢವಾಗಿರುವ ಅವರನ್ನು ಗೊತ್ತುಮಾಡುವುದು ಹೇಗೆ? ಸಮುದ್ರ ಪರ್ಯಂತವಾಗಿ ಈ ಭೂಮಿಯಲ್ಲಿ ಹುಡುಕಿದರೂ ಅವರನ್ನು ಗೊತ್ತುಮಾಡಲು ನಮಗೆ ಸಾಧ್ಯವಾದೀತೆ?

ಗುರುಣಾ ಕರುಣಾನಿಧಿನಾ ಹ್ಯಧುನಾ
ಯದಿ ನೋ ನಿಹಿತಾ ವಿಹಿತಾಃ ಸ್ಮ ಜಿತಾಃ |
ಜಗತಿ ಕ್ವ ಗತಿರ್ಭಜತಾಂ ತ್ಯಜತಾಂ
ಸ್ವಪದಂ ವಿಪದಂತಕರಂ ತದಿದಮ್ || ೧೭

"ಕರುಣಾನಿಧಿಗಳಾದ ಗುರುಗಳು ಈಗ ಬಂದು ನಮ್ಮನ್ನು ರಕ್ಷಿಸಿದೆ ಹೋದರೆ, ನಾವು ಪರಾಜಿತರಾಗಿ ಕೆಟ್ಟುಹೋದಂತೆಯೇ ಸರಿ. ಸರ್ವವಿಪತ್ತುಗಳನ್ನೂ ಪರಿಹರಿಸತಕ್ಕ ಅವರ ಪಾದವನ್ನು ತ್ಯಜಿಸಿದ ಭಕ್ತರಿಗೆ ಈ ಜಗತ್ತಿನಲ್ಲಿ ಯಾವ ಗತಿ ಇದ್ದೀತು ?

ಟಿಪ್ಪಣಿ :- ನಿಹಿತಾಃ =ಸರಿಯಾದ ಸ್ಥಾನದಲ್ಲಿಟ್ಟು ರಕ್ಷಿತರಾದವರು. ಡಿಂಡಿಮ ವ್ಯಾಖ್ಯಾನದಲ್ಲಿ ಎರಡನೆಯ ಪಾದದ ಕಡೆಯಲ್ಲಿ 'ವಿಹಿತಾಸ್ತ್ಯಜಿತಾಃ' ಎಂಬ ಪಾಠವನ್ನಾದರಿಸಿ, ತ್ಯಜಿತಾಃ =ತ್ಯಕ್ತಾಃ ಎಂದು ಅರ್ಥವನ್ನು ಬರೆದಿದ್ದಾರೆ. ತ್ಯಜಿತಶಬ್ದವು ಅಸಾಧುವಾದ್ದರಿಂದ 'ವಿಹಿತಾಃ ಸ್ಮಜಿತಾಃ' ಎಂಬ ಪಾಠವನ್ನು ಇಲ್ಲಿ ಸ್ವೀಕರಿಸಲಾಗಿದೆ.

ನಿಃಶೇಷೇಂದ್ರಿಯಜಾಡ್ಯಹೃನ್ನವನವಾಹ್ಲಾದಂ ಮುಹುಸ್ತನ್ವತೀ
ನಿತ್ಯಾಶ್ಲಿಷ್ಟರಜೋಯತೀಶಚರಣಾಂಭೋಜಾಶ್ರಯಾ ಶ್ರೇಯಸೀ |
ನಿಷ್ಪ್ರತ್ಯೂಹವಿಜೃಂಭಮಾಣವೃಜಿನಸ್ತ್ಯೋದ್ವಾಸನಾ ವಾಸನಾ
ನಿಃಸೀಮಾ ಹೃದಯೇನ ಕಲ್ಪಿತಪರೀರಂಭಾ ಚಿರಂ ಭಾವ್ಯತೇ || ೧೮

"ನಮಗೀಗ ರಜೋಗುಣಸ್ಪರ್ಶವೂ ಇಲ್ಲದ ಆ ಯತೀಶ್ವರರ ಚರಣಕಮಲದ ಚಿಂತನದಿಂದಾದ ಸಂಸ್ಕಾರ ಒಂದೇ ಹೃದಯದಲ್ಲಿ ಗಟ್ಟಿಯಾಗಿ ನೆಲೆಸಿದೆ. ಅದೊಂದೇ ನಮಗೀಗ ಶ್ರೇಯಸ್ಕರವಾಗಿ ಉಳಿಯಿತು. ಅದೇ ನಮ್ಮ ಸಕಲೇಂದ್ರಿಯಗಳ ಜಡತ್ವವನ್ನು ಹೋಗಲಾಡಿಸಿ ನಿತ್ಯನವೀನವಾದ ಆನಂದವನ್ನುಂಟುಮಾಡುತ್ತಿದೆ. ನಮ್ಮ ಪಾಪವನ್ನು

ತಡೆಯಿಲ್ಲದೆ ಧ್ವಂಸಮಾಡತಕ್ಕದ್ದು ಗುರುಗಳ ಪಾದಚಿಂತನವೇ. ಅಪಾರಮಹಿಮೆಯುಳ್ಳದ್ದು ಅದು. (ನಮಗೆ ಅದೊಂದೇ ಗತಿ)"ಎಂದು ಕೊಳ್ಳುತ್ತಿದ್ದರು.

(ಅವರಲ್ಲೊಬ್ಬ ಶಿಷ್ಯನು ಎರಡು ಶ್ಲೋಕಗಳನ್ನು ಹೇಳುತ್ತಾನೆ. ಇದು ಯಮಕ)

ಫಲಿತೈರಿವ ಸತ್ತ್ವಪಾದಪೈಃ
ಪರಿಣಾಮೈರಿವ ಯೋಗಸಂಪದಾಮ್ |
ಸಮಯೈರಿವ ವೈದಿಕಶ್ರಿಯಾಂ
ಸಶರೀರೈರಿವ ತತ್ತ್ವನಿರ್ಣಯೈಃ || ೧೯

"ತೇಜಃಪುಂಜವೇ ಆಗಿರುವ ನಮ್ಮ ಗುರುಗಳು ಹಣ್ಣುಬಿಟ್ಟಿರುವ ಸತ್ತ್ವಗುಣದ ಕಲ್ಪವೃಕ್ಷವೋ ಎಂಬಂತೆ ಇದ್ದಾರೆ. ಯೋಗಸಂಪತ್ತುಗಳೇ ಮೂರ್ತಿಮತ್ತಾದ ಆಕೃತಿಯೋ, ವೇದಗಳ ವಾಕ್ಯಸಂಪತ್ತುಗಳೇ ರೂಪವನ್ನು ಧರಿಸಿನಿಂತ ಸಿದ್ಧಾಂತವೋ, ಎಲ್ಲ ತತ್ತ್ವನಿರ್ಣಯಗಳೂ ಒಂದು ಶರೀರವನ್ನು ಧರಿಸಿ ನಿಂತಿವೆಯೋ ಎಂಬಂತೆ ಕಾಣುತ್ತಾರೆ.

ಟಿಪ್ಪಣಿ :- ಸಮಯ = ಸಿದ್ಧಾಂತ.

ಸಧನೈರ್ನಿಜಲಾಭವೈಭವಾತ್
ಸಕುಟುಂಬೈರುಪಶಾಂತಿಕಾಂತಯಾ |
ಅತದನ್ಯತಯಾಽಖಿಲಾತ್ಮಕೈ-
ರನುಗೃಹ್ಯೇಯ ಕದಾ ನು ಧಾಮಭಿಃ || ೨೦

ಆತ್ಮಲಾಭವೆಂಬ ಸಂಪತ್ತಿನಿಂದ ನಮ್ಮ ಆಚಾರ್ಯರು ಶ್ರೀಮಂತರೋ ಎಂಬಂತೆಯೂ ಉಪಶಾಂತಿಯೆಂಬ ಕಾಂತಿಯಿಂದ ಗೃಹಸ್ಥರೋ ಎಂಬಂತೆಯೂ ಕಾಣುತ್ತಾರೆ. ಸರ್ವತ್ರ ಅಭೇದಬುದ್ಧಿಯನ್ನಿಟ್ಟಿರುವ ಅವರು ಸರ್ವಾತ್ಮಕರೇ ಆಗಿದ್ದಾರೆ. ಆ ಮಹಾತ್ಮರ ತೇಜೋರಾಶಿಗಳಿಂದ ನಾನು ಯಾವಾಗ ಅನುಗೃಹೀತನಾದೇನು !" ಎಂದನು.

ಅವಿನಯಂ ವಿನಯನ್ನಸತಾಂ ಸತಾ-
ಮತಿರಯಂ ತಿರಯನ್ ಭವಪಾವಕಮ್ |
ಜಯತಿ ಯೋ ಯತಿಯೋಗಭೃತಾಂ ವರೋ
ಜಗತಿ ಮೇ ಗತಿಮೇಷ ವಿಧಾಸ್ಯತಿ || ೨೧

ಇನ್ನೊಬ್ಬ ಶಿಷ್ಯನು "ಯತಿಗಳಲ್ಲಿಯೂ ಯೋಗಿಗಳಲ್ಲಿಯೂ ನಮ್ಮ ಗುರುಗಳು ಶ್ರೇಷ್ಠರು. ದುರ್ಜನರ ಔದ್ಧತ್ಯವನ್ನಿಳಿಸಿ, ಸಜ್ಜನರ ತೀವ್ರವಾದ ಸಂಸಾರಾಗ್ನಿಯನ್ನು

ಶಮನಗೊಳಿಸತಕ್ಕವರು. ಜಗತ್ತಿನಲ್ಲಿಯೇ ವಿಜಯಶಾಲಿಗಳಾದ ಅವರು ನನಗೊಂದು ಗತಿಯನ್ನು ಕಲ್ಪಿಸುವರು"ಎಂದನು.

ವಿಗತಮೋಹತಮೋಹತಿಮಾಪ್ಯ ಯಂ
ವಿಧುತಮಾಯತಮಾ ಯತಯೋಽಭವನ್ ।
ಅಮೃತದಸ್ಯ ತದಸ್ಯ ದೃಶಃ ಸ್ಪತಾ-
ವವತರೇಮ ತರೇಮ ಶುಗರ್ಣವಮ್ ॥ ೨೨

ಕೆಲವು ಶಿಷ್ಯರು "ಮೋಹವೆಂಬ ಕತ್ತಲೆಯನ್ನು ಧ್ವಂಸಮಾಡಿದವರು ನಮ್ಮಗುರುಗಳು. ಅವರನ್ನಾಶ್ರಯಿಸಿದ ಎಷ್ಟೋ ಸಂನ್ಯಾಸಿಗಳು ಮಾಯೆಯನ್ನು ಗೆದ್ದವರಲ್ಲಿ ಅಗ್ರಗಣ್ಯರೆನಿಸಿದ್ದಾರೆ. ಮೋಕ್ಷವನ್ನು ಕರುಣಿಸತಕ್ಕ ಆ ಮಹಾತ್ಮರ ದೃಷ್ಟಿಗೆ ನಾವು ಯಾವಾಗ ಗೋಚರರಾದೇವು ?ಯಾವಾಗ ಈ ಶೋಕಸಾಗರವನ್ನು ದಾಟಿಯೇವು ?" ಎಂದು ಕೊಂಡರು.

ಟಿಪ್ಪಣಿ :- ಅತಿಶಯೇನ ವಿಧುತಮಾಯಾಃ ವಿಧುತಮಾಯತಮಾಃ. ಅಮೃತ = ಮೋಕ್ಷ.

ಶುಭಾಶುಭವಿಭಾಜಕಸ್ಫುರಣ ದೃಷ್ಟಿಮುಷ್ಟಿಂಧಯಃ
ಕ್ಷಪಾಂಧಮತಪಾಂಥದುಷ್ಕಥಕದಂಭಕುಕ್ಷಿಂಭರಿಃ ।
ಕದಾ ಭವಸಿ ಮೇ ಪುನಃ ಪುನರನಾದ್ಯವಿದ್ಯಾತಮಃ
ಪ್ರಮೃದ್ಯ ಗಲಿತದ್ವಯಂ ಪದಮುದಂಚಯನ್ನದ್ವಯಮ್ ॥ ೨೩

ಇನ್ನೊಬ್ಬ ಶಿಷ್ಯನು "ಓ ಗುರುಗಳೆ, ಶುಭಾಶುಭಗಳೆಂದು ವಿಭಾಗಿಸುವ ದ್ವೈತದೃಷ್ಟಿಯನ್ನು ಧ್ವಂಸಮಾಡತಕ್ಕವರು ನೀವು. ರಾತ್ರಿಯ ಕಗ್ಗತ್ತಲಂತಿರುವ ಅನ್ಯಮತಗಳಲ್ಲಿ ಪಥಿಕರಾಗಿ ಅಬದ್ಧವಚನಗಳನ್ನಾಡುವ ಜನರ ಜಂಬವನ್ನು ಕೊಚ್ಚಿಹಾಕತಕ್ಕವರು ನೀವು. ನನಗೆ ಅನಾದಿಯಾಗಿ ಅಂಟಿರುವ ಅವಿದ್ಯೆಯೆಂಬ ಕತ್ತಲೆಯನ್ನು ಹೋಗಲಾಡಿಸಿ, ದ್ವೈತಬುದ್ಧಿಯ ಸುಳಿವಿಲ್ಲದ ಅದ್ವಯಸ್ಥಿತಿಯನ್ನು ಯಾವಾಗ ದೊರಕಿಸುವಿರಿ ?"- ಎಂದನು.

ಟಿಪ್ಪಣಿ :- ಮುಷ್ಟಿಂಧಯಃ = 'ನಾಡೀ ಮುಷ್ಟ್ಯೋಶ್ಚ' ಎಂಬ ಸೂತ್ರದಿಂದ ಖಶ್‌ಪ್ರತ್ಯಯ. ಮುಮಾಗಮ. ಕುಕ್ಷಿಂಭರಿಃ='ಫಲೇಗ್ರಹಿರಾತ್ಮಂಭರಿಶ್ಚ' ಎಂಬ ಸೂತ್ರದಲ್ಲಿರುವ ಚಕಾರದ ಬಲದಿಂದ ಈ ರೂಪವು ಸಿದ್ಧಿಸುತ್ತದೆ. (ಸಿ. ಕೌಮುದೀ)

ಮರ್ತ್ಯಾನಾಂ ನಿಜಪಾದಪಂಕಜಜುಷಾಮಾಚಾರ್ಯ ವಾಚಾ ಯಯಾ
ರುಂಧಾನೋ ಮತಿಕಲ್ಮಷಂ ತ್ವಮಿಹ ಕಿಂಕುರ್ವಾಣನಿರ್ವಾಣಯಾ ।
ದ್ರಾಙ್ ನಾಯಾಸ್ಯಸಿ ಚೇತ್ಸುಧೀಕೃತಪರೀಹಾಸಸ್ಯ ದಾಸಸ್ಯ ತೇ।
ದುಃಖಾಂತೋ ನ ಭವೇದಿತೀಡ್ಯ ಸ ಪುನರ್ಜಾನೀಹಿ ಮೀನೀಹಿ ಮಾ ॥

ಮತ್ತೊಬ್ಬ ಶಿಷ್ಯನು "ಆಚಾರ್ಯರೆ, ನಿಮ್ಮ ಪಾದಪದ್ಮಗಳನ್ನು ಸೇವಿಸುವ ಮಾನವರ ಬುದ್ಧಿಕಲ್ಮಷವನ್ನು ನಿಮ್ಮ ಉಪದೇಶವಾಣಿಯು ತೊಡೆದುಹಾಕುತ್ತದೆ. ಮೋಕ್ಷವು ನಿಮ್ಮ ವಾಣಿಗೆ ಕಿಂಕರನಂತೆ ಅಧೀನವಾಗಿದೆ. ನನ್ನ ಪರಿಸ್ಥಿತಿಯನ್ನು ನೋಡಿ ಬುದ್ಧಿವಂತರು ಹಾಸ್ಯಮಾಡುತ್ತಿದ್ದಾರೆ. ನೀವು ಶೀಘ್ರವಾಗಿ ಬರದಿದ್ದರೆ ನನ್ನ ಶೋಕವು ಕೊನೆಗಾಣುವುದಿಲ್ಲ. ಪೂಜ್ಯರೆ, ನನ್ನ ಅವಸ್ಥೆಯನ್ನು ಗಮನಿಸಿರಿ. ನನ್ನನ್ನು ಇನ್ನೂ ಕಷ್ಟಕ್ಕೆ ಗುರಿಮಾಡಬೇಡಿರಿ" ಎಂದು ಕೊಳ್ಳುತ್ತಿದ್ದನು.

ಟಿಪ್ಪಣಿ :- ಕಿಂಕುರ್ವಾಣ = ಕಿಂಕರ. ಕಿಂಕುರ್ವಾಣಂ ನಿರ್ವಾಣಂ ಯಸ್ಯಾಃ ಸಾ ಕಿಂಕುರ್ವಾಣನಿರ್ವಾಣ ವಾಕ್. ಮೀನೀಹಿ = ಮೀಞ್-ಹಿಂಸಾಯಾಮ್. ಕ್ರ್ಯಾದಿ. ಲೋಟ್, ಮಧ್ಯಮಪುರುಷ.

ಇತಿ ಖೇದಮುಪೇಯುಷಿ ಮಿತ್ರಜನೇ
ಪ್ರತಿಪನ್ನಯತಿಕ್ಷಿತಿಭೃನ್ಮಹಿಮಾ |
ಶುಚಮರ್ಥವತಾ ಶಮಯನ್ವಚಸಾ
ನಿಜಗಾದ ಸರೋರುಹಪಾದ ಇದಮ್ || ೨೫

ಪದ್ಮಪಾದರು ಯತೀಶ್ವರರಾದ ಶ್ರೀಶಂಕರಾಚಾರ್ಯರ ಮಹಿಮೆಯನ್ನು ಬಲ್ಲವರು. ತಮ್ಮ ಸಂನ್ಯಾಸಿಮಿತ್ರರು ಈ ಪರಿಯಲ್ಲಿ ಖಿನ್ನರಾಗಿರಲು, ಅವರ ಶೋಕವನ್ನು ಅರ್ಥವತ್ತಾದ ಮಾತಿನಿಂದ ಶಮನಗೊಳಿಸುತ್ತ ಹೀಗೆಂದರು -

ಪರ್ಯಾಪ್ತಂ ನಃ ಕ್ಲೈಬ್ಯಮುಪೇತ್ಯಾತ್ರ ಸಖಾಯಃ
ಕೃತ್ವೋತ್ಸಾಹಂ ಭೂಮಿಮಶೇಷಾಮಪಿಧಾನಾತ್ |
ಅನ್ವೇಷ್ಯಾಮೋ ಭೂವಿವರಾಣ್ಯಪ್ಯಥ ಚ ದ್ಯಾಂ
ಯದ್ವದ್ದೇವಂ ದೇವಮನುಷ್ಯಾದಿಷು ಗೂಢಮ್ || ೨೬

"ಮಿತ್ರರೆ, ನಮ್ಮ ಹೇಡಿತನವು ಇಷ್ಟುಸಾಕು, ನಾವು ಒಟ್ಟಾಗಿ ಉತ್ಸಾಹವನ್ನುತಂದುಕೊಂಡು ಗುರುಗಳಿಗಾಗಿ ಸಮಸ್ತಭೂಮಂಡಲವನ್ನು ಹುಡುಕಿಬಿಡೋಣ. ವೇಷವನ್ನು ಮರೆಸಿಕೊಂಡು ಅನ್ವೇಷಿಸಿ, ಇಲ್ಲಿಲ್ಲದಿದ್ದರೆ ಪಾತಾಳಕ್ಕೆ ಹೋಗೋಣ! ಅಲ್ಲಿಯೂ ಕಾಣದಿದ್ದರೆ ಸ್ವರ್ಗಲೋಕಕ್ಕೆ ಹೋಗಿ ನೋಡೋಣ! ದೇವಮನುಷ್ಯಾದಿಗಳಲ್ಲಿ ಗೂಢನಾಗಿರುವ ಪರಮಾತ್ಮನನ್ನು ಅನ್ವೇಷಿಸುವಂತೆ ನಮ್ಮ ಗುರುಗಳನ್ನು ಹುಡುಕೋಣ.

ಟಿಪ್ಪಣಿ :- ಅನ್ವೇಷ್ಯಾಮಃ = ಇಷ-ಗತೌ ದಿವಾದಿ. ಅನು+ಆ+ಇಷ್ಯಾಮಃ ಎಂದು ವಿಭಾಗ. ಅನ್ವಿಷ್ಯಾಮಃ ಎಂದಿದ್ದರೆ ಉತ್ತಮ. ಅಥವಾ ಅನುಪೂರ್ವಕ ಇಣ್-ಗತೌ ಧಾತು, ಲೃಟ್.ಮತ್ತಮಯೂರವೃತ್ತ.

ಅನಿರ್ವಿಣ್ಣಚೇತಾಃ ಸಮಾಸ್ಥಾಯ ಯತ್ನಂ
ಸುದುಷ್ಪ್ರಾಪಮಪ್ಯರ್ಥಮಾಪ್ನೋತ್ಯವಶ್ಯಮ್ |
ಮುಹುರ್ವಿಘ್ನಜಾಲೈಃ ಸುರಾ ಹನ್ಯಮಾನಾಃ
ಸುಧಾಮಪ್ಯವಾಪುರ್ಹ್ಯನಿರ್ವಿಣ್ಣಚಿತ್ತಾಃ || ೨೭

"ಮನುಷ್ಯನು ಬೇಸರಪಡದೆ ಉತ್ಸಾಹಚಿತ್ತನಾಗಿ ಪ್ರಯತ್ನಿಸಿದರೆ ಎಂತಹ ದುರ್ಲಭವಾದ ವಸ್ತುವನ್ನಾದರೂ ಪಡೆಯುವುದು ನಿಶ್ಚಯ. ಎಷ್ಟೋ ವಿಘ್ನಗಳು ಮತ್ತೆಮತ್ತೆ ಒದಗಿ ಅಡ್ಡಿಪಡಿಸಿದರೂ ದೇವತೆಗಳು ಉತ್ಸಾಹಿತಮನಸ್ಕರಾಗಿ ಅಮೃತವನ್ನೇ ಪಡೆದುಕೊಂಡ ರಲ್ಲವೆ?

ಯದಪ್ಯನ್ಯಗಾತ್ರಪ್ರತಿಚ್ಛನ್ನರೂಪೋ
ದುರನ್ವೇಷಣಃ ಸ್ಯಾದ್ಗುರುರ್ನಸ್ತಥಾಪಿ |
ಸ್ವಭಾನೂದರಸ್ಥಃ ಶಶೀವ ಪ್ರಕಾಶೈಃ
ತದೀಯೈರ್ಗುಣೈರೇವ ವೇತ್ತುಂ ಸ ಶಕ್ಯಃ || ೨೮

"ನಮ್ಮಗುರುಗಳು ಅನ್ಯದೇಹವನ್ನು ಪ್ರವೇಶಿಸಿ ತಮ್ಮರೂಪವನ್ನು ಮರೆಮಾಚಿ ಕೊಂಡಿರುವುದರಿಂದ ಅನ್ವೇಷಣವು ಕಷ್ಟಕರವಾದ್ದೇನೋ ಹೌದು. ಆದರೆ, ಪೂರ್ಣಚಂದ್ರನು ರಾಹುವಿನ ಬಾಯಿಯಲ್ಲಿದ್ದರೂ ತನ್ನ ಪ್ರಕಾಶಗುಣಗಳಿಂದ 'ಇಲ್ಲಿ ಚಂದ್ರನಿದ್ದಾನೆ' ಎಂದು ಗುರುತಿಸಲು ಸಾಧ್ಯವಿದೆ.

ಟಿಪ್ಪಣಿ :- ರಾಹುವು ಕೇವಲ ಶಿರೋರೂಪನಾದ್ದರಿಂದ ಶ್ಲೋಕದಲ್ಲಿ ಉದರ ಎಂದರೆ ಒಳಭಾಗ -ಬಾಯಿ ಎಂದರ್ಥ.

ಇಕ್ಷುಚಾಪಾಗಮಾಪೇಕ್ಷಯಾ ನಿರ್ಗತೋ
ವರ್ಷ್ಮ ತಸ್ಯೋಚಿತಂ ಕೃಷ್ಣವರ್ತ್ಮದ್ಯುತಿಃ |
ವಿಭ್ರಮಾಣಾಂ ಪದಂ ಸುಭ್ರುವಾಂ ಭೂಪತೇಃ
ಪ್ರಾಪ್ತುಮರ್ಹತ್ಯಕಾಮಾಗ್ರಣೀಃ ಸಂಯಮೀ || ೨೯

" ಯತಿಗಳೂ ನಿಷ್ಕಾಮರಲ್ಲಿ ಶ್ರೇಷ್ಠರೂ ಆದ ನಮ್ಮ ಆಚಾರ್ಯರು ಕಾಮಶಾಸ್ತ್ರವನ್ನು ಅಭ್ಯಾಸಮಾಡುವುದಕ್ಕಾಗಿ ಹೋಗಿದ್ದಾರೆ. ಅದಕ್ಕೆಉಚಿತವಾದ ದೇಹವೆಂದರೆ, ಸುಂದರಿಯರ ಹಾವಭಾವಗಳಿಗೆ ಆಸ್ಪದವಾದ ರಾಜನ ದೇಹವೇ. ಅಲ್ಲಿಯೂ ಅವರು ಅಗ್ನಿಯಂತೆ ತೇಜಸ್ವಿಯಾಗಿರುತ್ತಾರೆ.(ಆದ್ದರಿಂದ ಅವರನ್ನು ಗುರುತಿಸಲು ಸಾಧ್ಯ)

ಟಿಪ್ಪಣಿ :- ಕೃಷ್ಣವರ್ತ್ಮ=ಅಗ್ನಿ. ಬೆಂಕಿಯು ತನ್ನ ದಾರಿಯನ್ನು ಸುಟ್ಟು ಕಪ್ಪುಮಾಡುತ್ತ ಹೋಗುವುದರಿಂದಲೂ, ಕಪ್ಪಾದ ಹೊಗೆಯಿಂದ ಇಲ್ಲಿ ಬೆಂಕಿ ಇದೆಯೆಂದು ಅನುಮಾನಿಸಲು

ಶಕ್ಯವಾದ್ದರಿಂದಲೂ ಈ ಹೆಸರು ಬಂದಿದೆ. ಮಲಿನವಾದ ಕಾಮಶಾಸ್ತ್ರಮಾರ್ಗದಲ್ಲಿ ತೊಡಗಿದ್ದರೂ ಆಚಾರ್ಯರು ಅಗ್ನಿಯಂತೆ ಪ್ರಜ್ವಲಿಸುತ್ತಲೇ ಇರುತ್ತಾರೆಂಬ ಅರ್ಥವು ಇಲ್ಲಿ ಸೂಚ್ಯವಾಗಿದೆ.

ನಿತ್ಯತೃಪ್ತಾಗ್ರ್ಯಯಾಯ್ಯಾಶ್ರಿತೇ ನಿರ್ವೃತಾಃ
ಪ್ರಾಣಿನೋ ರೋಗಶೋಕಾದಿನಾ ನೇಕ್ಷಿತಾಃ |
ದಸ್ಯುಪೀಡೋಜ್ಝಿತಾಃ ಸ್ವಸ್ವಧರ್ಮೇ ರತಾಃ
ಕಾಲವರ್ಷೀ ಸ್ವರಾಣ್ಮೇದಿನೀ ಕಾಮಸೂಃ || ೩೦

"ನಿತ್ಯತೃಪ್ತರಲ್ಲಿ ಅಗ್ರೇಸರರಾದ ನಮ್ಮ ಗುರುಗಳು ಯಾವ ದೇಶದಲ್ಲಿರುತ್ತಾರೋ ಅಲ್ಲಿಯ ಪ್ರಜೆಗಳು ಸುಖಿಗಳಾಗಿರುತ್ತಾರೆ. ರೋಗಗಳೂ ಇತರ ಶೋಕಪ್ರಸಂಗಗಳೂ ಜನರನ್ನು ಕಣ್ಣೆತ್ತಿಯೂ ನೋಡುವುದಿಲ್ಲ. ಅವರಿಗೆ ಕಳ್ಳಕಾರರ ಪೀಡೆ ಇರುವುದಿಲ್ಲ. ಎಲ್ಲರೂ ತಮ್ಮ ತಮ್ಮ ಧರ್ಮಗಳಲ್ಲಿ ತೊಡಗಿರುತ್ತಾರೆ. ಆ ದೇಶದಲ್ಲಿ ದೇವೇಂದ್ರನು ಕಾಲಕ್ಕೆ ಸರಿಯಾಗಿ ಮಳೆಸುರಿಸುತ್ತಾನೆ. ಭೂಮಿಯು ಬೇಕಾದ ಸಸ್ಯಸಂಪತ್ತನ್ನು ಕೊಡುತ್ತದೆ!

ತದಿಹಾಽಽಲಸ್ಯಮಪಾಸ್ಯ ವಿಚೇತುಂ
ನಿರವಧಿಸಂಸೃತಿಜಲಧೇಃ ಸೇತುಮ್ |
ದೇಶಿಕವರಪದಕಮಲಂ ಯಾಮೋ
ನ ವೃಥಾಽನೇಹಸಮತ್ರ ನಯಾಮಃ || ೩೧

ಆದ್ದರಿಂದ ಈಗ ಆಲಸ್ಯವನ್ನು ತೊರೆದು, ಅಪಾರವಾದ ಸಂಸಾರಸಾಗರವನ್ನು ದಾಟಿಸುವುದಕ್ಕೆ ಸೇತುವೆಯಾಗಿರುವ, ಆಚಾರ್ಯೋತ್ತಮರ ಪಾದಕಮಲದ ಬಳಿಗೆ ಹೋಗೋಣ. ವ್ಯರ್ಥವಾಗಿ ಇಲ್ಲಿ ನಾವು ಕಾಲಕಳೆಯುವುದು ಬೇಡ" ಎಂದರು.

ಇತಿ ಜಲರುಹಪದವಚನಂ ಸರ್ವೇ
ಮನಸಿ ನಿಧಾಯ ನಿರಾಕೃತಗರ್ವೇ |
ಕಾಂಶ್ಚಿತ್ತತ್ರ ನಿವೇಶ್ಯ ಶರೀರಂ
ರಕ್ಷಿತುಮನ್ಯೇ ನಿರಗುರುದಾರಮ್ || ೩೨

ಅದನ್ನು ಕೇಳಿ ಶಿಷ್ಯರೆಲ್ಲರೂ ಗರ್ವವನ್ನು ತೊರೆದು, ಪದ್ಮಪಾದರು ಹೇಳಿದ್ದು ಸರಿಯೆಂದು ಅವರ ಮಾತನ್ನು ಮನಸ್ಸಿಗೆ ತಂದುಕೊಂಡರು. ಪೂಜ್ಯವಾದ ಆಚಾರ್ಯಶರೀರವನ್ನು ನೋಡಿಕೊಳ್ಳಲು ಕೆಲವರನ್ನು ಅಲ್ಲಿಯೇ ಬಿಟ್ಟು ಉಳಿದವರು ಹೊರಟರು.

ತೇ ಚಿನ್ವಂತಃ ಶೈಲಾಚ್ಛೈಲಂ
ವಿಷಯಾದ್ವಿಷಯಂ ಭುವಮನುವೇಲಮ್ |
ಪ್ರಾಪುರ್ಧಿಕ್ಕೃತವಿಬುಧನಿವೇಶಾನ್
ಸ್ಫೀತಾನಮರುಕನೃಪತೇರ್ದೇಶಾನ್ || ೩೩

ಅವರು ಒಂದೇಸಮನೆ (ಆಚಾರ್ಯರನ್ನೇ ಹುಡುಕುತ್ತ) ಬೆಟ್ಟದಿಂದ ಬೆಟ್ಟಕ್ಕೆ ದೇಶದಿಂದ ದೇಶಕ್ಕೆ ಹೋಗಿ ಅಲೆಯುತ್ತ, ಕಡೆಗೆ ಅಮರುಕರಾಜನ ಸಮೃದ್ಧವಾದ ರಾಜ್ಯಕ್ಕೆ ಬಂದರು. ಅದಾದರೋ ದೇವತೆಗಳ ಸ್ವರ್ಗವನ್ನು ಮೀರಿಸುವಂತೆ ಇತ್ತು.

ಮೃತ್ವಾ ಪುನರಪ್ಯುತ್ಥಿತಮೇನಂ
ಶ್ರುತ್ವಾ ವೈನ್ಯದಿಲೀಪಸಮಾನಮ್ |
ತ್ಯಕ್ತ್ವಾ ವಿರಹಜದೈನ್ಯಮಮಂದಂ
ಮತ್ವಾऽऽಚಾರ್ಯಂ ಧೈರ್ಯಮವಿಂದನ್ || ೩೪

ಅಲ್ಲಿಯ ರಾಜನು ಒಮ್ಮೆ ಸತ್ತು ಬದುಕಿದವನೆಂಬದನ್ನೂ ಪೃಥುರಾಜನಿಗೂ ದಿಲೀಪನಿಗೂ ಸಮಾನನಾಗಿದ್ದಾನೆಂಬುದನ್ನೂ ಕೇಳಿದಾಗ ಆ ಶಿಷ್ಯರಿಗೆ ಧೈರ್ಯ ಬಂದಿತು. ಆತನೇ ತಮ್ಮ ಆಚಾರ್ಯರೆಂದು ನಿಶ್ಚಯಿಸಿ, ಅವರ ವಿರಹದಿಂದಾದ ಮಹತ್ತರವಾದ ದೀನತೆಯನ್ನು ತೊರೆದರು.

ತೇ ಚ ಜ್ಞಾತ್ವಾ ಗಾನವಿಲೋಲಂ
ತರುಣೀಸಕ್ತಂ ಧರಣೀಪಾಲಮ್ |
ವಿವಿಶುಃ ಸ್ವೀಕೃತಗಾಯಕವೇಷಾ
ನಗರಂ ವಿದಿತಸಮಸ್ತವಿಶೇಷಾಃ || ೩೫

ಅಲ್ಲದೆ ಆ ಭೂಪಾಲನು ಸಂಗೀತಪ್ರಿಯನೆಂದೂ ತರುಣಿಯರಲ್ಲಿ ಆಸಕ್ತನೆಂದು ಅವರಿಗೆ ತಿಳಿಯಿತು. ಈ ಬಗೆಯ ಅನೇಕವಿಶೇಷಗಳುನ್ನುಕೇಳಿ ಆ ಶಿಷ್ಯರು ಸಂಗೀತಗಾರರ ವೇಷವನ್ನು ತಳೆದು ರಾಜಧಾನಿಯನ್ನು ಪ್ರವೇಶಿಸಿದರು.

ರಾಜ್ಞೇ ಜ್ಞಾಪಿತವಿದ್ಯಾತಿಶಯಾಸ್ತೇ
ತತ್ಸಂಗ್ರಹವಿಧೃತಾತಿಶಯಾಃ |
ರಮಣೀಶತಮಧ್ಯಗಮವನೀಂದ್ರಂ
ದದೃಶುಸ್ತಾರಾವೃತಮಿವ ಚಂದ್ರಮ್ || ೩೬

ಅಮರುಕರಾಜನನ್ನು ವಶಪಡಿಸಿಕೊಳ್ಳಬೇಕೆಂಬ ಆಶಯದಿಂದ, ತಮ್ಮ ಸಂಗೀತವಿದ್ಯಾನೈಪುಣ್ಯವು ರಾಜನಿಗೆ ಗೊತ್ತಾಗುವಂತೆ ಏರ್ಪಡಿಸಿದರು. (ಅನಂತರ ಆ ಶಿಷ್ಯರು ರಾಜನ ಅನುಮತಿಯಿಂದ ಅವನ ಅಂತಃಪುರಕ್ಕೆ ಹೋಗಿ) ನೂರಾರು ಸುಂದರಿಯರ ನಡುವೆ, ತಾರೆಯರಿಂದ ಪರಿವೃತನಾದ ಚಂದ್ರನಂತೆ ಒಪ್ಪುವ ರಾಜನನ್ನು ಕಂಡರು!

ಟಿಪ್ಪಣಿ :- ಇಲ್ಲಿ ನಿಯತವಾದ ಲಕ್ಷಣವಿಲ್ಲದವು ಗಾಥಾವೃತ್ತಗಳು.

ವರಚಾಮರಕರತರುಣೀಕಂಕಣ-
ರಂಜಿತಮನೋಹರಪಶ್ಚಾದ್ಭಾಗಮ್ ।
ಗೀತಿಗತಿಜ್ಞೋದ್ಗೀತಶ್ರುತಿಸುಖ-
ತಾನಸಮುಲ್ಲಸದಗ್ರಿಮದೇಶಮ್ ॥ ೩೭

ರಾಜನ ಹಿಂಭಾಗದಲ್ಲಿ ಅನೇಕ ಯುವತಿಯರು ಉತ್ತಮ ಚಾಮರಗಳನ್ನು ಹಿಡಿದು ಗಾಳಿಬೀಸುತ್ತಿದ್ದರು. ಅವರು ತೊಟ್ಟಿದ್ದ ಬಳೆಗಳು ಜಣಜಣ ಎಂದು ಮಂಜುಳನಾದ ಮಾಡುತ್ತಿದ್ದವು. ಆತನ ಎದುರಿಗೆ ಸಂಗೀತಗಾರರು ಷಡ್ಜಮಧ್ಯಮಾದಿಸ್ವರಗಳನ್ನವಲಂಬಿಸಿ ಏಕತಾನದಿಂದ ಶ್ರವಣ ಮನೋಹರವಾಗಿ ಹಾಡುತ್ತಿದ್ದರು!

ಧೃತಚಾಮೀಕರದಂಡಸಿತಾತಪ-
ವಾರಣರಂಜಿತರತ್ನಕಿರೀಟಮ್ ।
ಶ್ರಿತವಿಗ್ರಹಮಿವ ರತಿಪತಿಮಾಶ್ರಿತ-
ಭುವಮಿವ ಸಾಂತಃಪುರಮಮರೇಶಮ್ ॥ ೩೮

ಅಮರುಕರಾಜನು ಧರಿಸಿದ್ದ ಚಿನ್ನದ ಕಿರೀಟದಮೇಲೆ ಚಿನ್ನದ ಹಿಡಿಯುಳ್ಳ ಶ್ವೇತಚ್ಛತ್ರವು ವಿರಾಜಿಸುತ್ತಿತ್ತು. ದೇಹಧಾರಿಯಾದ ಮನ್ಮಥನೋ ಅಥವಾ ಅಂತಃಪುರಸಹಿತನಾಗಿ ಭೂಮಿಗೆ ಇಳಿದುಬಂದ ದೇವೇಂದ್ರನೋ ಎಂಬಂತೆ ಆ ನೃಪತಿಯು ಶೋಭಿಸುತ್ತಿದ್ದನು!

ರುಚಿರವೇಷಾಃ ಸಮಾಸಾದ್ಯ ತಾಂ ಸಂಸದಂ
ನಯನಸಂಜ್ಞಾವಿತೀರ್ಣಾಸನಾ ಭೂಭುಜಾ ।
ಸಮತಿಸೃಷ್ಟಾಸ್ತತಃ ಸುಸ್ವರಂ ಮೂರ್ಛನಾ-
ಪದವಿದಸ್ತೇ ಜಗುರ್ಮೋಹಯಂತಃ ಸಭಾಮ್ ॥ ೩೯

ಯೋಗ್ಯವಾದ ಸುಂದರವೇಷವನ್ನು ಧರಿಸಿದ್ದ ಆ ಸಂನ್ಯಾಸಿ ಶಿಷ್ಯರು ಆ ಸಭೆಗೆ ಹೋಗಿ, ರಾಜನು ಕಣ್ಣುಸನ್ನೆಯಿಂದ ತೋರಿಸಿದ ಆಸನದಲ್ಲಿ ಕುಳಿತರು. ಹಾಡುವಂತೆ ಅವರಿಗೆ ರಾಜಾಜ್ಞೆಯಾಯಿತು. ಮೂರ್ಛನಾಸ್ಥಾನವನ್ನರಿತಿದ್ದ ಈ ಸಂಗೀತಗಾರರು, ಸಭೆಯು ತಲ್ಲೀನವಾಗಿ ಆಲಿಸುವಂತೆ ಸುಸ್ವರವಾಗಿ ಹಾಡಲಾರಂಭಿಸಿದರು.

ಟಿಪ್ಪಣಿ :- ಮೂರ್ಛನಾ = ಹಾಡುವ ಧ್ವನಿಯಲ್ಲಿ ಏರಿಳಿತ. (ಹಾಡಿನ ನೆಪದಲ್ಲಿ ತಮ್ಮ ಗುರುಗಳಿಗೆ ಪೂರ್ವವೃತ್ತಾಂತವನ್ನು ನೆನಪಿಸುವುದು ಅವರ ಉದ್ದೇಶವಾಗಿತ್ತು)

ಭೃಂಗ ತವ ಸಂಗತಿಮಪಾಸ್ಯ ಗಿರಿಶೃಂಗೇ
ತುಂಗವಿಟಪಿನಿ ಸಂಗಮಜುಷಿ ತ್ವದಂಗೇ |
ಸ್ವಾಂಗರಚಿತಾಃ ಸಕಲುಷಾಂತರಂಗಾಃ
ಸಂಗಮಕೃತೇ ಭಂಗಮುಪಯಂತಿ ಭೃಂಗಾಃ || ೪೦

"ಓ ದುಂಬಿಯೆ, ಎಲ್ಲರ ಸಂಗವನ್ನೂ ತೊರೆದು ಹೋದ ನಿನ್ನ ಅಂಶವು (ಶರೀರವು) ಉನ್ನತ ವೃಕ್ಷಗಳಿಂದ ಶೋಭಿಸುವ ಪರ್ವತಶಿಖರದಲ್ಲಿ ಸೇರಿತಷ್ಟೆ! ನಿನ್ನ ಅಂಗರಕ್ಷಣೆಗಾಗಿ ನಿಯುಕ್ತರಾದ ದುಂಬಿಗಳು ಈಗ ವಿಷಣ್ಣಚಿತ್ತರಾಗಿದ್ದಾರೆ. ನಿನ್ನ ಸಂಗಮಕ್ಕೋಸ್ಕರ ನಾನಾಭಂಗಗಳಿಗೆ ಒಳಗಾಗಿದ್ದಾರೆ.

ಟಿಪ್ಪಣಿ :- ಇವೆಲ್ಲವೂ ಅನ್ಯೋಕ್ತಿಗಳು. ದುಂಬಿ = ದುಂಬಿಯಂತೆ ಭಿಕ್ಷಾವೃತ್ತಿಯಿಂದ ಜೀವಿಸುವ ಯತಿಯೆಂದು ಆಚಾರ್ಯರ ಪರವಾದ ಅರ್ಥ. ದುಂಬಿಯೂ ಮಕರಂದಕ್ಕಾಗಿ ಹೂವಿನಿಂದ ಹೂವಿಗೆ ಅಲೆಯುತ್ತ ಭಿಕ್ಷೆಯಂತೆ ಮಕರಂದವನ್ನು ಸಂಗ್ರಹಿಸುತ್ತದೆ. ಸ್ವಾಂಗರಚಿತಾಃ =ದೇಹರಕ್ಷಣೆಗೆ ನಿಯುಕ್ತರಾದವರು. ದುಂಬಿಯ ಪಕ್ಷದಲ್ಲಿ ನಿನ್ನ ದೇಹದಿಂದ ಜನಿಸಿದ ಇತರ ದುಂಬಿಗಳು.

ಮುಂದಿನ ಎಂಟು ಶ್ಲೋಕಗಳು ಕಠಿಣವಾಗಿರುವುದರಿಂದ ಪ್ರತಿಪದಾರ್ಥವನ್ನು ಕೊಟ್ಟು, ತಾತ್ಪರ್ಯವನ್ನು ಕೊಡಲಾಗುವುದು.

ಪಂಚಶರಸಮಯಸಂಚಯಕೃತೇ ಪ್ರಾಂಚಂ
ಮುಂಚನ್ನಿವೇಹ ಸಂಚರಸಿ ಪ್ರಪಂಚಮ್ |
ಪಂಚಜನಮುಖ ಪಂಚಮುಖಮಪ್ಯನಞ್ಚನ್ -
ಸ್ತ್ವಂ ಚ ಗತಿರಿತಿ ಕಿಂ ಚ ಕಿಲ ವಂಚಿತೋಽಸೌ || ೪೧

"ಪಂಚಶರಸಮಯ = ಕಾಮಶಾಸ್ತ್ರವನ್ನು, ಸಂಚಯಕೃತೇ = ಸಂಗ್ರಹಿಸುವುದಕ್ಕಾಗಿ, ಪ್ರಾಂಚಂ ಪ್ರಪಂಚಂ = ಹಿಂದಿನ ಪ್ರಾಪಂಚಿಕಶರೀರವನ್ನು, ಮುಂಚನ್ನಿವ= ತ್ಯಜಿಸಿ ಬಿಟ್ಟೆಯೋ ಏನಂತೆ, ಇಹ = ಇಲ್ಲಿ, ಸಂಚರಸಿ =ಸಂಚರಿಸುತ್ತಿದ್ದೀಯೆ. ಹೇ ಪಂಚಜನಮುಖ = ಹೇ ನರೋತ್ತಮ, ಅಸೌ = ಈ ಶಿಷ್ಯಸಂಘವು, ಪಂಚಮುಖಮಪಿ = ಪರಮೇಶ್ವರನನ್ನೂ, ಅನಂಚನ್ = ಪೂಜಿಸದೆ, ತ್ವಂ ಚ ಗತಿರಿತಿ = ನೀನೇ ಗತಿಯೆಂದು ನಂಬಿಕೊಂಡು, ಕಿಂ ಚ ಕಿಲ ವಂಚಿತಃ =ವಂಚನೆಗೆ ಒಳಗಾಯಿತೋ ಹೇಗೆ?

"ಕಾಮಶಾಸ್ತ್ರವನ್ನು ಅಭ್ಯಾಸಮಾಡುವುದಕ್ಕಾಗಿ ಪೂರ್ವದೇಹವನ್ನು ಬಿಟ್ಟು ಈ ರಾಜಶರೀರದಲ್ಲಿ ಸಂಚರಿಸುತ್ತಿರುವೆ. ನೀನೇ ಗತಿಯೆಂದು ನಂಬಿದ್ದ ಶಿಷ್ಯಸಂಘವು ಅತ್ತ ಶಿವನನ್ನು ಅರ್ಚಿಸುತ್ತಿರುವುದನ್ನೂ ಬಿಟ್ಟು ನಿನ್ನೊಡನೆ ಬಂದು ಇತ್ತ ನಿನ್ನನ್ನೂ ಅಗಲಿ ವಂಚಿತವಾಗಿ ಬಿಟ್ಟಿತೋ ಹೇಗೆ?

ಟಿಪ್ಪಣಿ :- ಪಂಚಜನ = ಮನುಷ್ಯ, ಮುಖ = ಮುಖ್ಯ.

ಪರ್ವಶಶಿಮುಖ ಸರ್ವಮಪಹಾಯ ಪೂರ್ವಂ
ಕುರ್ವದಿಹ ಗರ್ವಮನುಸೃತ್ಯ ಹೃದಪೂರ್ವಮ್ |
ನ ಸ್ಮರಸಿ ವಸ್ತ್ವಸ್ಮದೀಯಮಿತಿ
ಕಸ್ಮಾತ್ಸಂಸ್ಮರ ತದಸ್ಮರ ಪರಮಸ್ಮದುಕ್ತ್ಯಾ || ೪೨

"ಹೇ ಪರ್ವಶಶಿಮುಖ = ಹೇ ಪೂರ್ಣಚಂದ್ರನಂತೆ ಮುಖವುಳ್ಳವನೆ, ಪೂರ್ವಂ= ಹಿಂದೆ ಇದ್ದ, ಸರ್ವಂ = ಶಮದಮಾದಿಗುಣಗಳೆಲ್ಲವನ್ನೂ, ಅಪಹಾಯ= ತ್ಯಜಿಸಿ, ಇಹ = ಇಲ್ಲಿ, ಅಪೂರ್ವಂ = ಹಿಂದೆ ಇಲ್ಲದಿದ್ದ, ಗರ್ವಂ= ಅಭಿಮಾನವನ್ನು,ಕುರ್ವತ್ = ಮಾಡುತ್ತಿರುವ, ಹೃತ್ = ಹೃದಯವನ್ನು, ಅನುಸೃತ್ಯ = ಅನುಸರಿಸಿಕೊಂಡಿದ್ದು, ಅಸ್ಮದೀಯಂ ವಸ್ತು ಇತಿ = ಇದು ನಮ್ಮ ವಸ್ತುವೆಂದು (ಈ ಶಿಷ್ಯಸಂಘವನ್ನು) ಕಸ್ಮಾತ್ = ಏತಕ್ಕೆ, ನ ಸ್ಮರಸಿ= ಸ್ಮರಿಸದೆ ಇದ್ದೀಯೆ? ತತ್ = ಆ ನಿನ್ನ ವಸ್ತುವನ್ನು, ಸಂಸ್ಮರ= ಸ್ಮರಿಸಿಕೊ. ಅಸ್ಮದುಕ್ತ್ಯಾ = ನಮ್ಮನುಡಿಯಂತೆ, ಪರಂ = ಉಳಿದ ಈ ಭೋಗವಸ್ತು, ಅಸ್ಮರ = ಕುತ್ಸಿತವೆಂಬುದನ್ನು ಸ್ಮರಿಸಿಕೊ.

"ಹೇ ಚಂದ್ರಾನನ, ಹಿಂದಿನದೆಲ್ಲವನ್ನೂ ಮರೆತು ಇಲ್ಲಿ ಗರ್ವಪಡುತ್ತಿದ್ದೀಯೆ. ಇಂತಹ ಗರ್ವವು ನಿನಗೆ ಹಿಂದೆ ಇರಲಿಲ್ಲ. ಶಿಷ್ಯರಾದ ನಮ್ಮಲ್ಲಿ 'ನಮ್ಮ ವಸ್ತು' ಎಂಬ ಭಾವನೆಯನ್ನೇ ತೊರೆದು ಬಿಟ್ಟಿದ್ದೀಯಲ್ಲ. ಇದೇಕೆ? ನಿನ್ನದು ಯಾವುದೆಂಬುದನ್ನು ಸ್ಮರಿಸಿಕೊ. ನಮ್ಮ ಈ ನುಡಿಯನ್ನು ಕೇಳಿದಮೇಲೆ ವಿಷಯಭೋಗದ ಸ್ಮರಣೆಯೇ ಕೆಟ್ಟದೆಂದು ತಿಳಿ.

ಟಿಪ್ಪಣಿ :- ನ ಸ್ಮರ = ಅ ಸ್ಮರ. 'ನಞೋ ನಲೋಪಸ್ತಿಙಿ ಕ್ಷೇಪೇ'
ಎಂಬ ವಾರ್ತಿಕದಿಂದ ನ ಶಬ್ದದ ನಕಾರಕ್ಕೆ ಲೋಪಬಂದಿದೆ. ನಿಂದೆಯನ್ನು ಸೂಚಿಸುತ್ತದೆ. ಡಿಂಡಿಮ ವ್ಯಾಖ್ಯಾನದಲ್ಲಿ ಅಸ್ಮರ = ಹೇ ಅಕಾಮ ಎಂದು ಅರ್ಥವನ್ನು ಬರೆದಿದ್ದಾರೆ .

ನೇತಿ ನೇತ್ಯಾದಿನಿಗಮವಚನೇನ
ನಿಪುಣಂ ನಿಷಿಧ್ಯ ಮೂರ್ತಾಮೂರ್ತರಾಶಿಮ್ |
ಯದಶಕ್ಯನಿಹ್ನವಂ ಸ್ವಾತ್ಮರೂಪತಯಾ
ಜಾನಂತಿ ಕೋವಿದಾಸ್ತತ್ತ್ವಮಸಿ ತತ್ತ್ವಮ್ || ೪೩

"ನೇತಿ ನೇತ್ಯಾದಿನಿಗಮವಚನೇನ = 'ಅಥಾತ ಆದೇಶೋ ನೇತಿ ನೇತಿ'ಇತ್ಯಾದಿ ಶ್ರುತಿವಾಕ್ಯದಿಂದ, ಮೂರ್ತಾಮೂರ್ತ ರಾಶಿಂ = ಸಾಕಾರವೂ ನಿರಾಕಾರವೂ ಆದ ಪದಾರ್ಥರಾಶಿಯನ್ನೆಲ್ಲ, ನಿಪುಣಂ = ಚೆನ್ನಾಗಿ, ನಿಷಿಧ್ಯ = ಬ್ರಹ್ಮವಲ್ಲವೆಂದು ನಿರಾಕರಿಸಿದಮೇಲೆ, ಅಶಕ್ಯನಿಹ್ನವಂ = ನಿಷೇಧಿಸುವುದಕ್ಕೆ ಸಾಧ್ಯವೇ ಇಲ್ಲದ, ಯತ್ = 'ನಾನು' ಎಂಬ ಯಾವ ವಸ್ತುವನ್ನು, ಕೋವಿದಾಃ = ಜ್ಞಾನಿಗಳು, ಸ್ವಾತ್ಮರೂಪತಯಾ = ತಮ್ಮ ಆತ್ಮಸ್ವರೂಪವೆಂದು, ಜಾನಂತಿ = ತಿಳಿಯುತ್ತಾರೋ, ತತ್ = ಆ, ತತ್ತ್ವಂ = ಪರಮಾರ್ಥವಸ್ತುವೇ, ತ್ವಂ= ನೀನು, ಅಸಿ = ಆಗಿದ್ದೀಯೆ.

"ನೇತಿ ನೇತಿ ಇತ್ಯಾದಿ ಶ್ರುತಿಗಳು 'ಇದು ಆತ್ಮವಲ್ಲ, ಆತ್ಮವು ಹೀಗಿಲ್ಲ'ಎಂದು ಸಕಲ ಮೂರ್ತಾಮೂರ್ತವಸ್ತುಗಳನ್ನು ನಿಷೇಧಮುಖದಿಂದ ನಿರಾಕರಿಸುತ್ತವೆ. ಕಡೆಯಲ್ಲಿ 'ಅಹಂ' ಎಂಬುದನ್ನು ಮಾತ್ರ ನಿಷೇಧಿಸುವುದಕ್ಕೆ ಶಕ್ಯವಾಗುವುದೇ ಇಲ್ಲ. ಅದೇ ನನ್ನ ಆತ್ಮಸ್ವರೂಪವೆಂದು ಜ್ಞಾನಿಗಳು ನಿರ್ಣಯಿಸಿಕೊಂಡಿದ್ದಾರೆ. ಅಂತಹ ಪರಮಾರ್ಥವಸ್ತುವೇ ನೀನು.

ವಿವರಣೆ :- ಬ್ರಹ್ಮವು ಹೀಗಿದೆಯೆಂದು ವರ್ಣಿಸುವುದಕ್ಕೆ ಸಾಧ್ಯವಾಗುವುದಿಲ್ಲ. ಆದ್ದರಿಂದ ಶ್ರುತಿಯು 'ಅಸ್ಥೂಲಂ, ಅನಣು, ಅಹ್ರಸ್ವಂ, ಅದೀರ್ಘಂ, ಅಶಬ್ದಂ, ಅಸ್ಪರ್ಶಂ, ಅರೂಪಂ, ಅರಸಂ, ಅಗಂಧಂ-ಈ ಪ್ರಕಾರವಾಗಿ ನಿಷೇಧಮುಖದಿಂದ ಬ್ರಹ್ಮವನ್ನು ತಿಳಿಸಲು ಪ್ರಯತ್ನಿಸುತ್ತದೆ.

ಖಾದ್ಯಮುತ್ಪಾದ್ಯ ವಿಶ್ವಮನುಪ್ರವಿಶ್ಯ
ಗೂಢಮನ್ನಮಯಾದಿಕೋಶತುಷಜಾಲೇ |
ಕವಯೋ ವಿವಿಚ್ಯ ಯುಕ್ತ್ಯವಘಾತತೋ
ಯತ್ತಂಡುಲವದಾದದತಿ ತತ್ತ್ವಮಸಿ ತತ್ತ್ವಮ್ || ೪೪

"ಖಾದ್ಯಂ = (ಖ+ಆದ್ಯಂ) ಆಕಾಶವೇ ಮೊದಲಾದ, ವಿಶ್ವಂ= ಜಗತ್ತನ್ನು, ಉತ್ಪಾದ್ಯ = ಸೃಷ್ಟಿಸಿ, ಅನ್ನಮಯಾದಿಕೋಶತುಷಜಾಲೇ,= ಅನ್ನಮಯವೇ ಮೊದಲಾದ ಪಂಚಕೋಶಗಳೆಂಬ ಹೊಟ್ಟಿನ ರಾಶಿಯಲ್ಲಿ, ಗೂಢಂ= ಗುಪ್ತವಾಗಿ ಅಡಗಿರುವ, ಯತ್ = ಯಾವ ಪರಬ್ರಹ್ಮವನ್ನು, ಕವಯಃ =ಜ್ಞಾನಿಗಳು, ಯುಕ್ತ್ಯವಘಾತತಃ = ಯುಕ್ತಿಯೆಂಬ ಕುಟ್ಟುವಿಕೆಯಿಂದ, ವಿವಿಚ್ಯ =ಬೇರ್ಪಡಿಸಿ, ತಂಡುಲವತ್ = ಅಕ್ಕಿಯ ಕಾಳನ್ನು ಹೇಗೋ ಹಾಗೆ, ಆದದತಿ =ಶುದ್ಧಗೊಳಿಸಿ ಸ್ವೀಕರಿಸುತ್ತಾರೋ, ತತ್ = ಆ, ತತ್ತ್ವಂ = ಪರಮಾರ್ಥವಸ್ತು, ತ್ವಮಸಿ = ನೀನು ಆಗಿದ್ದೀಯೆ.

'ತತ್ ಸೃಷ್ಟ್ವಾ ತದೇವಾನುಪ್ರಾವಿಶತ್' ಇತ್ಯಾದಿ ಶ್ರುತಿವಚನಗಳಿಂದ ತಿಳಿದುಬರುವಂತೆ, ಬ್ರಹ್ಮವು ಪಂಚಭೂತಾತ್ಮಕವಾದ ಜಗತ್ತನ್ನು ಸೃಷ್ಟಿಸಿ ಅನ್ನಮಯಾದಿ ಕೋಶಗಳಲ್ಲಿ ಗುಪ್ತವಾಗಿ ಸೇರಿಕೊಂಡಿದೆ. ಜ್ಞಾನಿಗಳು ತಪೋಬಲದಿಂದ ಕೂಡಿದ ಯುಕ್ತಿಯಿಂದ, ಈ ಕೋಶಗಳು ಆತ್ಮವಲ್ಲವೆಂದು ನಿರ್ಧರಿಸಿದ್ದಾರೆ. ಬತ್ತವನ್ನು ಕುಟ್ಟಿ ಅಕ್ಕಿಯನ್ನು ಹೊರಗೆ ತರುವಂತೆ ಕೋಶಗಳನ್ನು ತಿರಸ್ಕರಿಸಿ ಸಾರಭೂತವಾದ ಆತ್ಮವು ಯಾವುದೆಂಬುದನ್ನು ಗೊತ್ತುಮಾಡಿದ್ದಾರೆ. ಆ ಆತ್ಮವಸ್ತುವೇ ನೀನು.

ವಿವರಣೆ :- ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ- ಎಂದು ಪಂಚಕೋಶಗಳಿವೆ. ಇವು ಯಾವವೂ ಆತ್ಮವಲ್ಲ, ಇವುಗಳಿಗೆ ಅತಿರಿಕ್ತನಾದವನು ಆತ್ಮ.

ವಿಷಮ ವಿಷಯೇಷು ಸಂಚಾರಿಣೋ
ಅಕ್ಷಾಶ್ವಾನ್ ದೋಷದರ್ಶನಕಶಾಭಿಘಾತತಃ |
ಸ್ವೈರಂ ಸಂನಿವರ್ತ್ಯ ಸ್ವಾಂತರಶ್ಮಿಭಿರ್ಧೀರಾ
ಬಧ್ನಂತಿ ಯತ್ರ ತತ್ತ್ವಮಸಿ ತತ್ತ್ವಮ್ || ೪೫

"ವಿಷಮವಿಷಯೇಷು = ವಿಪತ್ಕಾರಿಗಳಾದ ಶಬ್ದಾದಿಭೋಗ್ಯವಸ್ತುಗಳಲ್ಲಿ ಮತ್ತು ಏರುತಗ್ಗುಗಳಿರುವ ಕೊರಕಲು ಸ್ಥಳಗಳಲ್ಲಿ, ಸಂಚಾರಿಣಃ = ಹೋಗುತ್ತಿರುವ, ಅಕ್ಷಾಶ್ವಾನ್= ಇಂದ್ರಿಯಗಳೆಂಬ ಕುದುರೆಗಳನ್ನು, ದೋಷದರ್ಶನಕಶಾಭಿಘಾತತಃ = ಕೇಡಿನ ತಿಳಿವಳಿಕೆಯೆಂಬ ಚಾಟಿಗಳ ಹೊಡೆತಗಳಿಂದ, ಸ್ವೈರಂ = ಸ್ವತಂತ್ರೇಚ್ಛೆಯಿಂದ, ಸಂನಿವರ್ತ್ಯ= ಹಿಂದಕ್ಕೆ ತಿರುಗಿಸಿ, ಧೀರಾಃ = ವಿವೇಕಿಗಳಾದ ಧೀಮಂತರು, ಯತ್ರ =ಯಾವ ಪರಮಾರ್ಥದಲ್ಲಿ, ಬಧ್ನಂತಿ = ಕಟ್ಟಿಹಾಕುತ್ತಾರೋ, ತತ್ ತತ್ತ್ವಂ = ಆ ಪರಮಾರ್ಥವಸ್ತುವೇ, ತ್ವಮಸಿ = ನೀನಾಗಿದ್ದೀಯೆ.

"ಕೊರಕಲು ಜಾಗಗಳಲ್ಲಿ ಕುದುರೆಗಳು ಓಡತೊಡಗಿದರೆ ಸಾರಥಿಯು ಚಾಟಿಗಳಿಂದ ಕುದುರೆಗಳನ್ನು ಹೊಡೆದು ಹಿಂದಿರುಗಿಸಿ ಸಮಸ್ಥಳಕ್ಕೆ ತಂದು ನಿಲ್ಲಿಸುತ್ತಾನೆ. ಹಾಗೆ ಇಂದ್ರಿಯಗಳು ಭೋಗವಿಷಯಗಳ ಕಡಗೆ ಮನುಷ್ಯನನ್ನು ಎಳೆದುಕೊಂಡುಹೋಗಿ ಪ್ರಪಾತಕ್ಕೆ ತಳ್ಳಿಬಿಡುತ್ತವೆ. ಆಗ ವಿವೇಕಿಯಾದವನು ವಿಷಯ ಭೋಗಗಳಲ್ಲಿ ಕೆಡುಕಿದೆಯೆಂದು ತಿಳಿದು ಇಂದ್ರಿಯಗಳನ್ನು ನಿಗ್ರಹಿಸಿ ಆತ್ಮತತ್ತ್ವದಲ್ಲಿ ಮನಸ್ಸನ್ನು ಕೇಂದ್ರೀಕರಿಸುತ್ತಾನೆ. ಪರಮಾರ್ಥವಾದ ಆತ್ಮತತ್ತ್ವವೇ ನೀನೆಂದು ತಿಳಿದುಕೊ.

ಟಿಪ್ಪಣಿ :- ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವ ತು |
ಬುದ್ಧಿಂ ತು ಸಾರಥಿಂ ವಿದ್ಧಿ ಮನಃ ಪ್ರಗ್ರಹಮೇವ ಚ ||
ಇಂದ್ರಿಯಾಣಿ ಹಯಾನಾಹುರ್ವಿಷಯಾಂಸ್ತೇಷು ಗೋಚರಾನ್ ||

(ಕಠ. ೧ -೩) ಇತ್ಯಾದಿವಾಕ್ಯಗಳನ್ನು ಇಲ್ಲಿ ಸ್ಮರಿಸಿಕೊಳ್ಳಬೇಕು.

ವ್ಯಾವೃತ್ತಜಾಗ್ರದಾದಿಷ್ವನುಸ್ಯೂತಂ
ತೇಭ್ಯೋಽನ್ಯದಿವ ಪುಷ್ಪೇಭ್ಯ ಇವ ಸೂತ್ರಮ್ |
ಇತಿ ಯದೌಪಾಧಿಕತ್ರಯಪೃಥಕ್ತ್ವೇನ
ವಿದಂತಿ ಸೂರಯಸ್ತತ್ತ್ವಮಸಿ ತತ್ತ್ವಮ್ || ೪೬

"ವ್ಯಾವೃತ್ತ = ತನಗಿಂತ ಬೇರೆಯಾದ, ಜಾಗ್ರದಾದಿಷು =ಜಾಗ್ರದಾದ್ಯವಸ್ಥೆಗಳಲ್ಲಿ, ಅನುಸ್ಯೂತಂ = ಏಕಪ್ರಕಾರವಾಗಿ ಸೇರಿಕೊಂಡು, ಪುಷ್ಪೇಭ್ಯ ಇವ ಸೂತ್ರಂ = ಹೂಗಳಿಗಿಂತ ಬೇರೆಯಾಗಿ ದಾರವಿರುವಂತೆ, ತೇಭ್ಯಃ =ಅವುಗಳಿಗಿಂತ, ಅನ್ಯದಿವ =ಬೇರೆ ಹೇಗೋಹಾಗೆ, ಇತಿ =ಈ ಪ್ರಕಾರವಾಗಿ, ಸೂರಯಃ =ಜ್ಞಾನಿಗಳು, ಅವಸ್ಥಾತ್ರಯ ಪೃಥಕ್ತ್ವೇನ = ಮೂರು ಅವಸ್ಥೆಗಳಿಗಿಂತ ಬೇರೆಯಾಗಿ, ಯತ್= ಯಾವ ಆತ್ಮವಸ್ತುವನ್ನು, ವಿದಂತಿ = ತಿಳಿದಿದ್ದಾರೋ, ತತ್ ತತ್ತ್ವಂ =ಆ ಬ್ರಹ್ಮವು, ತ್ವಮಸಿ = ನೀನಾಗಿದ್ದೀಯೆ.

ಟಿಪ್ಪಣಿ :- ಈ ಶ್ಲೋಕದಲ್ಲಿ 'ಇವ' ಎಂದು ಎರಡು ಶಬ್ದಗಳಿವೆ. ಒಂದು ಶಬ್ದವು ಸಾಕಾಗಿತ್ತು.

"ಜಾಗ್ರತ್, ಸ್ವಪ್ನ, ಸುಷುಪ್ತಿ- ಎಂಬ ಅವಸ್ಥಾತ್ರಯವು ಆತ್ಮನಿಗೆ ಇದ್ದಂತೆ ತೋರುತ್ತದೆ. ಇವು ಮೂರು ಕೇವಲ ಆತ್ಮನ ಉಪಾಧಿಗಳು. ಹೂಮಾಲೆಯಲ್ಲಿ ಹೂಗಳಿಗಿಂತ ದಾರವು ಹೇಗೆ ಪ್ರತ್ಯೇಕವಾಗಿದೆಯೋ ಹಾಗೆ ಈ ಅವಸ್ಥಾತ್ರಯವಿಲ್ಲದೆ ಪ್ರತ್ಯೇಕವಾಗಿರತಕ್ಕವನು ಆತ್ಮನೆಂದು ಜ್ಞಾನಿಗಳು ಅರಿತುಕೊಂಡಿದ್ದಾರೆ. ಆ ಶುದ್ಧಾತ್ಮನೇ ನೀನು.

ಪುರುಷ ಏವೇದಮಿತ್ಯಾದಿವೇದೇಷು
ಸರ್ವಕಾರಣತಯಾ ಯಸ್ಯ ಸಾರ್ವಾತ್ಮ್ಯಮ್ |
ಹಾಟಕಸ್ಯೇವ ಮುಕುಟಾದಿತಾದಾತ್ಮ್ಯಂ
ಸರಸಮಾಮ್ನಾಯತೇ ತತ್ತ್ವಮಸಿ ತತ್ತ್ವಮ್ || ೪೭

"ಹಾಟಕಸ್ಯ =ಚಿನ್ನಕ್ಕೆ, ಮುಕುಟಾದಿತಾದಾತ್ಮ್ಯಮಿವ = ಕಿರೀಟ ಮುಂತಾದ ಒಡವೆಗಳೊಡನೆ ತಾದಾತ್ಮ್ಯವಿರುವಂತೆ, ಯಸ್ಯ = ಯಾವ ಆತ್ಮನಿಗೆ, ಸರ್ವಕಾರಣತಯಾ= ಆತನು ಸಮಸ್ತಪದಾರ್ಥಗಳಿಗೂ ಕಾರಣನಾದ್ದರಿಂದ, ಪುರುಷ ಏವೇದಮಿತ್ಯಾದಿ ವೇದೇಷು = ಪುರುಷ ಏವೇದಂ ಸರ್ವಂ, ಸರ್ವಂ ಖಲ್ವಿದಂ ಬ್ರಹ್ಮ - ಇತ್ಯಾದಿ ವೇದವಾಕ್ಯಗಳಲ್ಲಿ, (ಯಾವುದಕ್ಕೆ)ಸರ್ವತಾದಾತ್ಮ್ಯಂ =ಸರ್ವಪದಾರ್ಥಗಳೊಡನೆ ತಾದಾತ್ಮ್ಯವು, ಸ್ವರಸಂ = ಅರ್ಥವತ್ತಾದ್ದರಿಂದ ಸ್ವಭಾವಿಕವಾಗಿ, ಆಮ್ನಾಯತೇ = ಮತ್ತೆ ಮತ್ತೆ ಹೇಳಲ್ಪಡುತ್ತಿದೆಯೋ, ತತ್ = ಆ, ತತ್ತ್ವಂ = ಪರಮಾರ್ಥಬ್ರಹ್ಮವು, ತ್ವಮಸಿ = ನೀನಾಗಿದ್ದೀಯೆ.

"ಪುರುಷ ಏವೇದಂ ಸರ್ವಂ, ಸರ್ವಂ ಖಲ್ವಿದಂ ಬ್ರಹ್ಮ, ಐತದಾತ್ಮ್ಯ ಮಿದಂ ಸರ್ವಂ-ಮುಂತಾದ ಶ್ರುತಿ ವಚನಗಳು ಜಗತ್ತಿನಲ್ಲಿರುವ ಸರ್ವಪದಾರ್ಥಗಳೂ ಆತ್ಮನೇ ಎಂದು ಅನೇಕ ಸಲ ಹೇಳಿರುತ್ತವೆ. ಕಿರೀಟ, ಬಳೆ, ಉಂಗುರ ಮೊದಲಾದವುಗಳಿಗೆ ಚಿನ್ನವು ಉಪಾದಾನಕಾರಣವಾದ್ದರಿಂದ ಇದೆಲ್ಲವೂ ಚಿನ್ನವೇ ಎಂದು ಹೇಳುತ್ತಾರೆ. ಹಾಗೆಯೇ ಸರ್ವಪದಾರ್ಥಗಳಿಗೂ ಆತ್ಮನು ಕಾರಣನಾದ್ದರಿಂದ ಆತ್ಮನಿಗೂ ಈ ಪದಾರ್ಥಗಳಿಗೂ ತಾದಾತ್ಮ್ಯವನ್ನು ಶ್ರುತಿಗಳು ಹೇಳಿವೆ. ಅಂತಹ ಸರ್ವಕಾರಣನಾದ ಆತ್ಮನು ನೀನಾಗಿದ್ದೀಯೆ.

ಟಿಪ್ಪಣಿ :-ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ-ಇತ್ಯಾದಿ ಶ್ರುತಿವಾಕ್ಯಗಳನ್ನಿಲ್ಲಿ ಸ್ಮರಿಸಿಕೊಳ್ಳಬೇಕು.

ಯಶ್ಚಾಹಮತ್ರ ವರ್ಷ್ಮಣಿ ಭಾಮಿ ಸೋಽಸೌ
ಯೋಽಸೌ ವಿಭಾತಿ ರವಿಮಂಡಲೇ ಸೋಽಹಮಿತಿ |
ವೇದವಾದಿನೋ ವ್ಯತಿಹಾರತೋ ಯದ್-
ಅಧ್ಯಾಪಯಂತಿ ಯತ್ನತಸ್ತತ್ತ್ವಮಸಿ ತತ್ತ್ವಮ್ || ೪೮

"ಯಶ್ಚಾಹಂ = ಯಾವ ನಾನು, ಅತ್ರ = ಈ, ವರ್ಷ್ಮಣಿ =ದೇಹದಲ್ಲಿ, ಭಾಮಿ = ಪ್ರಕಾಶಿಸುತ್ತಿದ್ದೇನೋ, ಸೋಽಸೌ = ಆ ಈತನೇ, ರವಿಮಂಡಲೇ = ಸೂರ್ಯಮಂಡಲದಲ್ಲಿ, ವಿಭಾತಿ = ಬೆಳಗುತ್ತಿದ್ದಾನೆ. ಯೋಽಸೌ= ಯಾವ ಆತನು, ರವಿಮಂಡಲೇ ವಿಭಾತಿ = ಸೂರ್ಯಮಂಡಲದಲ್ಲಿ ಬೆಳಗುತ್ತಿದ್ದಾನೋ, ಸಃ = ಆತನೇ, ಅಹಂ = ನಾನು, ಇತಿ = ಈ ರೀತಿಯಾಗಿ, ವೇದವಾದಿನಃ = ವೇದರ್ಷಿಗಳು, ವ್ಯತಿಹಾರತಃ = ಅನ್ಯೋನ್ಯವಿನಿಮಯದಿಂದ, ಯತ್ನತಃ = ಪ್ರಯತ್ನಪೂರ್ವಕವಾಗಿ, ಯತ್ = ಯಾವ ಅದ್ವೈತ ತತ್ತ್ವವನ್ನು, ಅಧ್ಯಾಪಯಂತಿ = ಬೋಧಿಸುತ್ತಾರೋ, ತತ್ ತತ್ತ್ವಂ= ಆ ತತ್ತ್ವವೇ, ತ್ವಮಸಿ = ನೀನಾಗಿದ್ದೀಯೆ.

"ಸ ಯಶ್ಚಾಯಂ ಪುರುಷೇ, ಯಶ್ಚಾಸಾವಾದಿತ್ಯೇ, ಸ ಏಕಃ - ಇತ್ಯಾದಿ ಶ್ರುತಿವಾಕ್ಯಗಳು ಅನ್ಯೋನ್ಯ ಅಭೇದವನ್ನು ತೋರಿಸಿ ಬಹುಶ್ರಮದಿಂದ ಅದ್ವಯಾತ್ಮವನ್ನು ತಿಳಿಸಿಕೊಡುತ್ತವೆ. ಅಂತಹ ಅದ್ವಯಾತ್ಮನೇ ನೀನು.

ವೇದಾನುವಚನಸದ್ಧಾನಮುಖಧರ್ಮೈಃ
ಶ್ರದ್ಧಯಾಽನುಷ್ಠಿತೈರ್ವಿದ್ಯಯಾ ಯುಕ್ತೈಃ |
ವಿವಿದಿಷಂತ್ಯತ್ಯಂತವಿಮಲಸ್ವಾಂತಾ
ಬ್ರಾಹ್ಮಣಾ ಯದ್ಬ್ರಹ್ಮ ತತ್ತ್ವಮಸಿ ತತ್ತ್ವಮ್ || ೪೯

"ಶ್ರದ್ಧೆಯಿಂದ ಆಚರಿಸಲ್ಪಡುವ ಮತ್ತು ವಿದ್ಯೆಯಿಂದ (ಸರಿಯಾದ ಜ್ಞಾನದಿಂದ) ಕೂಡಿದ ವೇದಪಾರಾಯಣ, ಸತ್ಪಾತ್ರದಾನ ಮುಂತಾದ ಧರ್ಮಗಳಿಂದ ಪರಿಶುದ್ಧಚಿತ್ತರಾದ ಬ್ರಾಹ್ಮಣರು ಯಾವ ಬ್ರಹ್ಮವನ್ನು ತಿಳಿಯಲು ಬಯಸುವರೋ ತತ್ತ್ವಸ್ವರೂಪವಾದ ಆ ಬ್ರಹ್ಮವೇ ನೀನಾಗಿದ್ದೀಯೆ.

ವಿವರಣೆ :- 'ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷಂತಿ ಯಜ್ಞೇನ ದಾನೇನ ತಪಸಾಽನಾಶಕೇನ' 'ಯದ್ವಿದ್ಯಯೋಪನಿಷದಾ ಕರೋತಿ ತದ್ವೀರ್ಯವತ್ತರಂ ಭವತಿ' ಎಂಬ ಉಪನಿಷದ್ವಾಕ್ಯಗಳ ವಿವರಣೆ ಇದು. ವೇದಪಾರಾಯಣಾದಿಗಳು ಬ್ರಹ್ಮವನ್ನರಿಯಲು ಉತ್ಕಟವಾದ ಇಚ್ಛೆಯನ್ನುಂಟುಮಾಡುತ್ತವೆ. ಬ್ರಹ್ಮಜ್ಞಾನಕ್ಕೆ ಇವು ಕಾರಣವೆಂದು ಹೇಳಬಹುದು.

ಶಮದಮೋಪರಮಾದಿಸಾಧನೈರ್ಧೀರಾಃ
ಸ್ವಾತ್ಮನಾಽಽತ್ಮನಿ ಯದನ್ವಿಷ್ಯ ಕೃತಕೃತ್ಯಾಃ |
ಅಧಿಗತಾಮಿತಸಚ್ಚಿದಾನಂದರೂಪಾ
ನ ಪುನರಿಹ ಖಿದ್ಯಂತೇ ತತ್ತ್ವಮಸಿ ತತ್ತ್ವಮ್ || ೫೦

ಧೀರರಾದ ಯೋಗಿಗಳು ಶಮ ದಮ ಉಪರತಿ-ಮುಂತಾದ ಸಾಧನಗಳಿಂದ ಇದು ತಮ್ಮ ಆತ್ಮಸ್ವರೂಪವೆಂದು ಯಾವುದನ್ನು ಬುದ್ಧಿಯಲ್ಲಿ ಅನ್ವೇಷಿಸಿ ಕೃತಕೃತ್ಯರಾಗಿ, ಅನಂತಸಚ್ಚಿದಾನಂದಸ್ವರೂಪರೇ ತಾವೆಂದು ಕಂಡುಕೊಂಡು ಮತ್ತೆ ಈ ಸಂಸಾರದಲ್ಲಿ ಕಷ್ಟದಿಂದ ತೊಳಲುವುದಿಲ್ಲವೋ ಆ ಪರಬ್ರಹ್ಮವೇ ನೀನಾಗಿದ್ದೀಯೆ."

ವಿವರಣೆ :- ಶಮ, ದಮ, ಉಪರತಿ, ತಿತಿಕ್ಷೆ, ಶ್ರದ್ಧೆ, ಸಮಾಧಿ-ಇವು ಆರು ಸಾಧನಗಳು. ಸತ್ಯಂ ಜ್ಞಾನಮನಂತಂ ಬ್ರಹ್ಮ, ವಿಜ್ಞಾನಮಾನಂದಂ ಬ್ರಹ್ಮ-ಇತ್ಯಾದಿ ಶ್ರುತಿವಾಕ್ಯಗಳನ್ನು ಇಲ್ಲಿ ಅನುಸಂಧಾನಮಾಡಿಕೊಳ್ಳಬೇಕು.

ಟಿಪ್ಪಣಿ :- ಆಚಾರ್ಯಶಿಷ್ಯರು ಹಾಡಿದ ಈ ಶ್ಲೋಕಗಳು ಅದ್ವೈತಸಿದ್ಧಾಂತವನ್ನು ಬಹುಸುಂದರವಾಗಿ ಪ್ರತಿಪಾದಿಸುತ್ತವೆ. ಇವು ಮನನೀಯವಾದವು. ಈ ಶ್ಲೋಕಗಳ ವೃತ್ತಲಕ್ಷಣವು ವೃತ್ತರತ್ನಾಕರದಲ್ಲಿಲ್ಲ. ಅನುಗತವಾದಛಂದೋ ಲಕ್ಷಣವು ಈ ಶ್ಲೋಕಗಳಲ್ಲಿಲ್ಲ. ಇವು ಗಾಥಾ ಭೇದಗಳಲ್ಲಿ ಸೇರುತ್ತವೆ.

ಅವಿಗೀತಮೇವಂ ನರಪತಿರಾಕರ್ಣ್ಯ ವರ್ಣಿತಾತ್ಮಾರ್ಥಮ್ |
ವಿಸಸರ್ಜ ಪೂರಿತಾಶಾನೇತಾನ್ನಿರ್ಜ್ಞಾತಕರ್ತವ್ಯಃ || ೫೧

ಈರೀತಿಯಲ್ಲಿ ಶಾಸ್ತ್ರೀಯವಾಗಿ ವರ್ಣಿತವಾದ ಆತ್ಮ ತತ್ತ್ವವನ್ನು ಕೇಳಿ ರಾಜನು ತನ್ನ ಕರ್ತವ್ಯವೇನೆಂಬುದನ್ನು ನಿಶ್ಚಯಿಸಿಕೊಂಡನು. ಆ ಗಾಯಕರ ಅಭಿಲಾಷೆಗಳನ್ನು ಪೂರೈಸಿ ಕಳಿಸಿಕೊಟ್ಟನು.

ಉದ್ಬೋಧಿತಃ ಸದಸಿ ತೈರವಲಂಬ್ಯ ಮೂರ್ಛಾಂ
ನಿರ್ಗತ್ಯ ರಾಜತನುತೋ ನಿಜಮಾವಿವೇಶ |
ಗಾತ್ರಂ ಪುರೋದಿತನಯೇನ ಸ ದೇಶಿಕೇಂದ್ರಃ
ಸಂಜ್ಞಾಮವಾಪ್ಯ ಚ ಪುರೇವ ಸಮುತ್ಥಿತೋಽಭೂತ್ || ೫೨

ಆ ದೇಶಿಕೇಂದ್ರರು ಸಭೆಯಲ್ಲಿ ಆ ಸಂನ್ಯಾಸಿಶಿಷ್ಯರಿಂದ ತಾವು ಯಾರೆಂಬುದನ್ನು ನೆನಪುಮಾಡಿಕೊಂಡರು. ಅನಂತರ ಮೂರ್ಛೆಹೊಂದಿ ಪ್ರಜ್ಞಾಹೀನಸ್ಥಿತಿಯನ್ನು ಪಡೆದು, ರಾಜಶರೀರದಿಂದ ನಿರ್ಗಮಿಸಿ, ಹಿಂದೆ ಹೇಳಿದ ಯೋಗಮಾರ್ಗದಿಂದ ತಮ್ಮ ನಿಜವಾದ ಶರೀರವನ್ನು ಪ್ರವೇಶಿಸಿದರು. ಆ ದೇಹದಲ್ಲಿ ಚೈತನ್ಯವನ್ನು ಪಡೆದು ಹಿಂದಿನಂತೆ ಎಚ್ಚೆತ್ತರು.

ತದನು ಕುಹರಮೇತ್ಯ ಪೂರ್ವದೃಷ್ಟಂ
ನರಪತಿಭೃತ್ಯವಿಸೃಷ್ಟಪಾವಕೇನ |
ನಿಜವಪುರವಲೋಕ್ಯ ದಹ್ಯಮಾನಂ
ಝುಟಿತಿ ಸ ಯೋಗಧುರಂಧರೋ ವಿವೇಶ || ೫೩

ಅದು ಹೇಗಾಯಿತೆಂದರೆ, ಮೊದಲು ತಾವು ನೋಡಿದ್ದ ಗುಹಾರಂಧ್ರದ ಬಳಿಗೆ ಬಂದರು. ಅಷ್ಟರಲ್ಲಿ ರಾಜಭೃತ್ಯರು ಆ ದೇಹಕ್ಕೆ ಬೆಂಕಿಯನ್ನು ಹತ್ತಿಸಿದ್ದರು. ಹೀಗೆ ಸುಟ್ಟುಹೋಗುತ್ತಿರುವ ತಮ್ಮ ದೇಹವನ್ನು ನೋಡಿ ಒಡನೆಯೇ ಆ ಯೋಗೀಶ್ವರರು ಆ ದೇಹವನ್ನು ಪ್ರವೇಶಿಸಿದರು.

ಟಿಪ್ಪಣಿ:- ಆ ಸಮಯದಲ್ಲಿ ಕಾವಲಿಗಿದ್ದ ಸಂನ್ಯಾಸಿ ಶಿಷ್ಯರು ಬಹುಶಃ ಸ್ನಾನಾದಿ ಕಾರ್ಯಕ್ಕೆ ಹೊರಗೆ ಹೋಗಿರಬಹುದು. ಅಥವಾ ಅವರ ಮಾತನ್ನು ಕೇಳದೆ ರಾಜಭೃತ್ಯರು ಬಲಾತ್ಕಾರವಾಗಿ ಬೆಂಕಿಯನ್ನು ಹತ್ತಿಸಿರಬಹುದು.

ಸಪದಿ ದಹನಶಾಂತಯೇ ಮಹಾಂತಂ
ನರಮೃಗರೂಪಮಧೋಕ್ಷಜಂ ಶರಣ್ಯಮ್ |
ಸ್ತುತಿಭಿರಥ ಕಲಾಲಸತ್ಪದಾಭಿ -
ಸ್ತ್ವರಿತ ಮತೋಷಯದಾತ್ಮವಿತ್ಪ್ರಧಾನಃ || ೫೪

ಒಡನೆಯೇ ಅಗ್ನಿಯು ಶಾಂತವಾಗುವುದಕ್ಕಾಗಿ ಶರಣ್ಯನೂ ನರಸಿಂಹರೂಪಧಾರಿಯೂ ಮಹಾಪುರುಷನೂ ಆದ ಶ್ರೀಮನ್ನಾರಾಯಣನನ್ನು, ಭಕ್ತಿಕಲೆಯಿಂದ ಶೋಭಿಸುವ ಪದಗಳಿರುವ ಸ್ತುತಿಗಳಿಂದ ಮಹಾಜ್ಞಾನಿಗಳಾದ ಆಚಾರ್ಯರು ಸಂತೋಷಪಡಿಸಿದರು.

ನರಹರಿಕೃಪಯಾ ತತಃ ಪ್ರಶಾಂತೇ
ಪ್ರಬಲತರೇ ಸ ಹುತಾಶನೇ ಪ್ರವಿಷ್ಟಃ ।
ನಿರಗಮದಚಲೇಂದ್ರಕಂದರಾಂತಾತ್
ವಿಧುರಿವ ವಕ್ತ್ರಬಿಲಾದ್ವಿಧುಂತುದಸ್ಯ ॥ ೫೫

ಅನಂತರ ನರಸಿಂಹದೇವನ ಕೃಪೆಯಿಂದ ಅಗ್ನಿಯು ಪ್ರಬಲವಾಗಿ ಉರಿಯುತ್ತಿದ್ದರೂ ಶಾಂತವಾಯಿತು. ಆಮೇಲೆ ದೇಹದಲ್ಲಿ ಪ್ರವೇಶಿಸಿದ ಶ್ರೀಶಂಕರಾಚಾರ್ಯರು, ರಾಹುವಿನ ಮುಖಬಿಲದಿಂದ ಹೊರಬರುವ ಚಂದ್ರನಂತೆ ಆ ಬೆಟ್ಟದ ಗುಹೆಯಿಂದ ಹೊರಗೆ ಬಂದರು.

ತದನು ಶಮಧನಾಧಿಪೋ ವಿನೇಯೈಃ
ಚಿರವಿರಹಾದತಿವರ್ಧಮಾನಹಾರ್ದೈಃ ।
ಸನಕ ಇವ ವೃತಃ ಸನಂದನಾದ್ಯೈಃ
ಜಿಗಮಿಷುರಾಜನಿ ಮಂಡನಸ್ಯ ಗೇಹಮ್ ॥ ೫೬

ಅನಂತರ ಆ ಯತೀಶ್ವರರು, ಚಿರಕಾಲ ವಿರಹವಾದ ಪ್ರಯುಕ್ತ ಅಧಿಕ ಸೌಹಾರ್ದವನ್ನು ಪ್ರಕಟಿಸುತ್ತಿದ್ದ ಶಿಷ್ಯರೊಡಗೂಡಿ ಹೊರಟರು. ಸನಂದನನೇ ಮೊದಲಾದವರಿಂದ ಸಮೇತನಾದ ಸನಕಋಷಿಯಂತೆ ಮಂಡನಮಿಶ್ರನ ಮನೆಗೆ ಹೋಗುವ ಇಚ್ಛೆಯುಳ್ಳವರಾದರು.

ಟಿಪ್ಪಣಿ :- ಆಜನಿ = ಜನೀ ಪ್ರಾದುರ್ಭಾವೇ ಎಂಬ ಧಾತುವಿನ ಮೇಲೆ ಕರ್ತರಿ ಲುಙ್. ಆಙ್‌ಉಪಸರ್ಗ 'ದೀಪಜನ....'ಇತ್ಯಾದಿ ಸೂತ್ರದಿಂದ ಚಿಣ್‌ಪ್ರತ್ಯಯ.

ತದನು ಸದನಮೇತ್ಯ ಪೂರ್ವದೃಷ್ಟಂ
ಗಗನಪಥಾದ್ಗಲಿತಕ್ರಿಯಾಭಿಮಾನಮ್ ।
ವಿಷಯವಿಷನಿವೃತ್ತತರ್ಷಮುಚ್ಚೈ -
ರತನುತ ಮಂಡನಮಿಶ್ರಮಕ್ಷಿಪಾತ್ರಮ್ ॥ ೫೭

ಆಮೇಲೆ ನೇರವಾಗಿ ಹಿಂದೆನೋಡಿದ್ದ ಮಂಡನಮಿಶ್ರನ ಮನೆಗೆ ಆಕಾಶಮಾರ್ಗದಿಂದ ಬಂದರು. ಅಲ್ಲಿ ಕರ್ಮಾಭಿಮಾನವನ್ನು ಕಳೆದುಕೊಂಡು, ವಿಷಯಸುಖಗಳ ಆಸೆಯನ್ನೆಲ್ಲಾ ತೊರೆದಿದ್ದ ಮಂಡನಮಿಶ್ರನನ್ನು ಕಂಡರು.

ತಂ ಸಮೀಕ್ಷ್ಯ ನಭಶ್ಚ್ಯುತಂ ಸ ಚ
ಪ್ರಾಂಜಲಿಃ ಪ್ರಣತಪೂರ್ವವಿಗ್ರಹಃ |
ಅರ್ಹಣಾಭಿರಭಿಪೂಜ್ಯ ತಸ್ಥಿವಾನ್
ಈಕ್ಷಣೈರನಿಮಿಷೈಃ ಪಿಬನ್ನಿವ || ೫೮

ಮಂಡನಮಿಶ್ರನು ಆಕಾಶದಿಂದಿಳಿದು ಬಂದ ಆಚಾರ್ಯರನ್ನು ಕಂಡೊಡನೆ ಬದ್ಧಾಂಜಲಿಯಾಗಿ ದೇಹವನ್ನು ಬಗ್ಗಿಸಿ ನಮಸ್ಕರಿಸಿದನು. ಆಚಾರ್ಯರಿಗೆ ಯೋಗ್ಯವಾದ ಪೂಜಾಸತ್ಕಾರಗಳಿಂದ ಉಪಚರಿಸಿ, ಕುಡಿದು ಬಿಡುವನೋ ಎಂಬಂತೆ ಪ್ರೇಮಾವೇಶದಿಂದ ಆಚಾರ್ಯರನ್ನು ನೋಡುತ್ತ ನಿಂತನು.

ಸ ವಿಶ್ವರೂಪೋ ಬತ ಸತ್ಯವಾದೀ
ಪಪಾತ ಪಾದಾಂಬುಜಯೋರ್ಯತೀಶಃ |
ಗೃಹಂ ಶರೀರಂ ಮಮ ಯಚ್ಚ ಸರ್ವಂ
ತವೇತಿ ವಾದೀ ಮುದಿತೋ ಮಹಾತ್ಮಾ || ೫೯

ಆಮೇಲೆ ಸತ್ಯವಾದಿಯಾದ ವಿಶ್ವರೂಪನು (ಮಂಡನಮಿಶ್ರ) ಯತೀಶ್ವರರ ಪಾದಕಮಲಗಳಿಗೆ ಸಾಷ್ಟಾಂಗ ನಮಸ್ಕಾರಮಾಡಿದನು. ಆ ಮಹಾತ್ಮನು "ಆಚಾರ್ಯರೆ, ಈ ಮನೆ ಈ ಶರೀರ - ನನ್ನದೆಂಬ ಸರ್ವವೂ ನಿಮ್ಮದು"ಎಂದು ಹರ್ಷದಿಂದ ನಿವೇದಿಸಿದನು.

ಟಿಪ್ಪಣಿ :-ಯತೀಶಃ =ಯತೀನಾಂ ಈಟ್ ಯತೀಟ್. ತಸ್ಯ ಯತೀಶಃ. ಇದು ಶಕಾರಾಂತ.

ಪ್ರೇಯಸಾ ಪ್ರಥಮಮರ್ಚಿತಂ ಮುನಿಂ
ಪ್ರಾಪ್ತವಿಷ್ಟರಮುಪಸ್ಥಿತಂ ಬುಧೈಃ |
ಪ್ರಶ್ರಯಾವನತಮೂರ್ತಿರಬ್ರವೀತ್
ಶಾರದಾಽಭಿವದನೇ ವಿಶಾರದಾ || ೬೦

ಈ ಪ್ರಕಾರವಾಗಿ ತನ್ನ ಪತಿಯಾದ ಮಂಡನಮಿಶ್ರನಿಂದ ಮೊದಲು ಪೂಜಿತರಾದ ಆಚಾರ್ಯರು ಪಂಡಿತಪರಿವಾರದೊಡನೆ ಪೀಠದಲ್ಲಿ ಕುಳಿತಿರುವುದನ್ನು ಕಂಡು, ವಾಗ್ವಿಶಾರದೆಯಾದ ಉಭಯಭಾರತಿಯು ಆಚಾರ್ಯರಿಗೆ ವಿನಯದಿಂದ ನಮಸ್ಕರಿಸಿ ಸ್ತುತಿಸಿದಳು.

ಈಶಾನಃ ಸರ್ವವಿದ್ಯಾನಾಮೀಶ್ವರಃ ಸರ್ವದೇಹಿನಾಮ್ |
ಬ್ರಹ್ಮಣೋಽಧಿಪತಿರ್ಬ್ರಹ್ಮನ್ ಭವಾನ್ ಸಾಕ್ಷಾತ್ಸದಾಶಿವಃ || ೬೧

"ಹೇ ಬ್ರಾಹ್ಮಣೋತ್ತಮರೇ, ನೀವು ಸರ್ವವಿದ್ಯೆಗಳಿಗೆ ಒಡೆಯರು. ಸರ್ವಪ್ರಾಣಿಗಳಿಗೆ ನಿಯಾಮಕರು, ಬ್ರಹ್ಮದೇವನಿಗೂ ಪ್ರಭುವಾದ ಸಾಕ್ಷಾತ್ ಸದಾಶಿವನಾಗಿದ್ದೀರಿ.

ಸದಸಿ ಮಾಮವಿಜಿತ್ಯ ತಥೈವ ಯತ್
ಮದನಶಾಸನಕಾಮಕಲಾಸ್ವಪಿ |
ತದವಬೋಧಕೃತೇ ಕೃತಿಮಾಚರಃ
ತದಿಹ ಮರ್ತ್ಯಚರಿತ್ರವಿಡಂಬನಮ್ || ೬೨

"ಹಿಂದೆ ಸಭೆಯಲ್ಲಿ ನನ್ನನ್ನು ಗೆಲ್ಲಲಾರೆನೆಂದು ಕಾಮಕಲೆಗಳಲ್ಲಿ ಜ್ಞಾನವನ್ನು ಪಡೆಯುವುದಕ್ಕಾಗಿ ಯಾವ ಕಾರ್ಯವನ್ನು ಮಾಡಿದಿರೋ, ಹೇ ಕಾಮಧ್ವಂಸಿಯೇ, ಅದು ಮಾನವಚಾರಿತ್ರ್ಯದ ಅನುಕರಣೆಯೇ ಸರಿ.

ತ್ವಯಾ ಯದಾವಾಂ ವಿಜಿತೌ ಪರಾತ್ಮನ್
ನ ತತ್ ತ್ರಪಾಮಾವಹತೀಡ್ಯ ಸರ್ವಥಾ |
ಕೃತಾಭಿಭೂತಿರ್ನ ಮಯೂಖಶಾಲಿನಾ
ನಿಶಾಕರಾದೇರಪಕೀರ್ತಯೇ ಖಲು || ೬೩

ಓ ಪರಮಾತ್ಮಸ್ವರೂಪರೇ, ನಮ್ಮಿರ್ವರನ್ನೂ ವಾದದಲ್ಲಿ ನೀವು ಸೋಲಿಸಿದಿರಷ್ಟೆ. ಅದು, ಹೇ ಸ್ವಾಮಿ, ನಮಗೆ ಎಂದಿಗೂ ಲಜ್ಜಾವಹವಾದ್ದಲ್ಲ. ಚಂದ್ರನೇ ಮೊದಲಾದವರು ಪ್ರಖರಕಿರಣನಾದ ಸೂರ್ಯನಿಂದ ಸೋತು ಮಾಸಿಹೋದರೆ ಅದೇನೂ ಅವರಿಗೆ ಅಪಕೀರ್ತಿಯನ್ನು ತರುವುದಿಲ್ಲವಷ್ಟೆ."

ಆದಾವಾತ್ಮ್ಯಂ ಧಾಮ ಕಾಮಂ ಪ್ರಯಾಸ್ಯಾ -
ಮ್ಯರ್ಹಸ್ಯಚ್ಛಂ ಮಾಮನುಜ್ಞಾತುಮರ್ಹನ್ |
ಇತ್ಯಾಮಂತ್ರ್ಯಾಂತರ್ಹಿತಾಂ ಯೋಗಶಕ್ತ್ಯಾ
ಪಶ್ಯನ್ ದೇವೀಂ ಭಾಷ್ಯಕರ್ತಾ ಬಭಾಷೇ || ೬೪

ಹೀಗೆ ಸ್ತುತಿಸಿದ ಶಾರದೆಯು "ಪೂಜ್ಯರೆ, ಮೊದಲು ನಾನು ಪರಿಶುದ್ಧವಾದ ನನ್ನ ಸ್ಥಾನಕ್ಕೆ ಯಥೇಚ್ಛವಾಗಿ ಹೋಗಬೇಕೆಂದಿದ್ದೇನೆ. ನನಗೆ ಅನುಜ್ಞೆಯನ್ನು ಕೊಡಿರಿ", ಎಂದು ಹೇಳಿ ಒಡನೆಯೇ ಅಂತರ್ಧಾನ ಹೊಂದಿದಳು. ಹೀಗೆ ಅಂತರ್ಧಾನ ಹೊಂದಿದ ಶಾರದಾದೇವಿಯನ್ನು ಯೋಗಶಕ್ತಿಯಿಂದ ನೋಡುತ್ತ ಭಾಷ್ಯಕರ್ತರಾದ ಶ್ರೀ ಶಂಕರರು ಹೀಗೆ ನುಡಿದರು.

ಜಾನಾಮಿ ತ್ವಾಂ ದೇವಿ ದೇವಸ್ಯ ಧಾತುಃ
ಭಾರ್ಯಾಮಿಷ್ಟಾಮಷ್ಟಮೂರ್ತೇಃ ಸಗರ್ಭ್ಯಾಮ್ |
ವಾಚಾಮಾದ್ಯಾಂ ದೇವತಾಂ ವಿಶ್ವಗುಪ್ತ್ಯೈ
ಚಿನ್ಮಾತ್ರಾಮಪ್ಯಾತ್ತಲಕ್ಷ್ಮ್ಯಾದಿರೂಪಾಮ್ || ೬೫

"ಹೇ ದೇವಿ, ನೀನು ಬ್ರಹ್ಮದೇವನಿಗೆ ಪ್ರಿಯಳಾದ ಸರಸ್ವತೀದೇವಿ ಎಂಬುದನ್ನು ನಾನು ಬಲ್ಲೆ. ಅಷ್ಟಮೂರ್ತಿಯಾದ ಪರಮೇಶ್ವರನಿಗೆ ಸಹೋದರಿಯೂ ವಾಕ್ಕುಗಳಿಗೆ ಅಧಿದೇವತೆಯೂ ಆಗಿದ್ದೀಯೆ. ಕೇವಲಚಿತ್‌ಸ್ವರೂಪಳಾದರೂ ಜಗದ್ರಕ್ಷಣೆಗಾಗಿ ಲಕ್ಷ್ಮೀ ಮೊದಲಾದ ದೇವತಾರೂಪವನ್ನು ಧರಿಸುತ್ತೀಯೆ -ಎಂಬುದನ್ನೂ ಬಲ್ಲೆನು.

ತಸ್ಮಾದಸ್ಮತ್ಕಲ್ಪಿತೇಷ್ವರ್ಚ್ಯಮಾನಾ
ಸ್ಥಾನೇಷು ತ್ವಂ ಶಾರದಾಖ್ಯಾ ದಿಶಂತೀ |
ಇಷ್ಟಾನರ್ಥಾನೃಷ್ಯಶೃಂಗಾದಿಕೇಷು
ಕ್ಷೇತ್ರೇಷ್ವಾಸ್ಸ್ವ ಪ್ರಾಪ್ತಸತ್ಸಂನಿಧಾನಾ || ೬೬

ಆದ್ದರಿಂದ ನಾವು ಸ್ಥಾಪಿಸಲಿರುವ ಋಷ್ಯಶೃಂಗ (ಶೃಂಗೇರಿ) ಮೊದಲಾದ ಕ್ಷೇತ್ರಗಳಲ್ಲಿರುವ ಪ್ರತಿಮಾ ಸ್ಥಾನಗಳಲ್ಲಿ ಶಾರದಾ ಎಂಬ ಹೆಸರಿನಿಂದ ಸಾಂನಿಧ್ಯವನ್ನು ಅನುಗ್ರಹಿಸು. ಭಕ್ತರ ಇಷ್ಟಾರ್ಥಗಳನ್ನು ಸಲ್ಲಿಸುತ್ತಿರು" ಎಂದರು.

ತಥೇತಿ ಸಂಶ್ರುತ್ಯ ಸರಸ್ವತೀ ಸಾ
ಪ್ರಾಯಾತ್ಪ್ರಿಯಂ ಧಾಮ ಪಿತಾಮಹಸ್ಯ |
ಅದರ್ಶನಂ ತತ್ರ ಸಮೀಕ್ಷ್ಯ ಸರ್ವೇ
ಆಕಸ್ಮಿಕಂ ವಿಸ್ಮಯಮೀಯುರುಚ್ಚೈಃ || ೬೭

ಆಗ ಸರಸ್ವತೀದೇವಿಯು ಹಾಗೆಯೇ ಆಗಲೆಂದು ಮಾತುಕೊಟ್ಟು ತನಗೆ ಇಷ್ಟವಾದ ಬ್ರಹ್ಮಲೋಕಕ್ಕೆ ಹೊರಟು ಹೋದಳು. ಆ ಸಭೆಯಲ್ಲಿದ್ದ ಸರ್ವರೂ ಇದ್ದಕ್ಕಿದ್ದಂತೆ ಉಭಯಭಾರತಿಯು ಕಾಣಿಸದೇ ಹೋದದ್ದನ್ನು ಗಮನಿಸಿ ಅತ್ಯಾಶ್ಚರ್ಯದಲ್ಲಿ ಮುಳುಗಿಹೋದರು.

ತಸ್ಯಾ ಯತೀಶಜಿತಭರ್ತೃಯತಿತ್ವಜಾತ -
ವೈಧವ್ಯಸಂಭವಶುಚಾ ಭುವಮಸ್ಪೃಶಂತ್ಯಾಃ |
ಅಂತರ್ಧಿಮೀಕ್ಷ್ಯ ಮುದಿತೋಽಜನಿ ಮಂಡನೋಽಪಿ
ತತ್ಸಾಧು ವೀಕ್ಷ್ಯ ಮುಮುದೇ ಯತಿಶೇಖರಶ್ಚ || ೬೮

"ತನ್ನ ಪತಿಯಾದ ಮಂಡನಮಿಶ್ರನು ಆಚಾರ್ಯರಿಂದ ಪರಾಜಿತನಾದ್ದರಿಂದ ಸಂನ್ಯಾಸವನ್ನು ಸ್ವೀಕರಿಸುವನು. ಆದರಿಂದ ತನಗೆ ವೈಧವ್ಯದುಃಖವು ಸಂಭವಿಸೀತೆಂದು" ಭೂಮಿಯನ್ನು ಮುಟ್ಟದೆ ಮೇಲಕ್ಕೆ ಏರಿ ಅವಳು ಅಂತರ್ಹಿತಳಾದ್ದನ್ನು ಕಂಡು ಮಂಡನ ಮಿಶ್ರನಿಗೆ ಸಂತೋಷವಾಯಿತು. ಅವಳು ಸರಿಯಾಗಿಯೇ ಮಾಡಿದಳೆಂದು ಯತೀಶ್ವರರೂ ಸಂತುಷ್ಟರಾದರು.

ಟಿಪ್ಪಣಿ : ಏಕ್ಷ್ಯ = ಆ + ಈಕ್ಷ್ಯ ಎಂದು ವಿಭಾಗ

ಮಂಡನಮಿಶ್ರೋಽಪ್ಯಥವಿಧಿಪೂರ್ವಂ ದತ್ತ್ವಾ ವಿತ್ತಂ ಯಾಗೇ ಸರ್ವಮ್ |
ಆತ್ಮಾರೋಪಿತಶೋಚಿಷ್ಕೇಶೋ ಭೇಜೇ ಶಂಕರಮಸ್ತಮಿತಾಶಃ || ೬೯

ಆಮೇಲೆ ಮಂಡನಮಿಶ್ರನು ವಿಧಿಪೂರ್ವಕವಾಗಿ ಪ್ರಾಜಾಪತ್ಯವೆಂಬ ಇಷ್ಟಿಯನ್ನು ಮಾಡಿ ತನ್ನ ಸರ್ವಸ್ವವನ್ನೂ ದಾನಮಾಡಿದನು. ಎಲ್ಲ ಅಗ್ನಿಗಳನ್ನೂ ಆತ್ಮ ಸಮಾರೋಪ ಮಾಡಿಕೊಂಡು ಸರ್ವಕಾಮನೆಗಳನ್ನೂ ತೊರೆದು ಶ್ರೀ ಶಂಕರರ ಸಮೀಪಕ್ಕೆ ಆಗಮಿಸಿದನು.

ಸಂನ್ಯಾಸಗೃಹ್ಯವಿಧಿನಾ ಸಕಲಾನಿ ಕರ್ಮಾ-
ಣ್ಯಾಹ್ನಾಯ ಶಂಕರಗುರುರ್ವಿದುಷೋಽಸ್ಯ ಕುರ್ವನ್ |
ಕರ್ಣೇ ಜಗೌ ಕಿಮಪಿ ತತ್ತ್ವಮಸೀತಿ ವಾಕ್ಯಂ
ಕರ್ಣೇಜಪಂ ನಿಖಿಲಸಂಸೃತಿದುಃಖಹಾನೇಃ || ೭೦

ಅನಂತರ ಆಚಾರ್ಯರು ಸಂನ್ಯಾಸವಿಧಾನವನ್ನು ಬೋಧಿಸುವ ಗೃಹ್ಯಸೂತ್ರವಿಧಿಯಂತೆ ಶೀಘ್ರವಾಗಿ ಆ ವಿದ್ವಾಂಸನಿಂದ ಎಲ್ಲ ಕರ್ಮಗಳನ್ನೂ ಮಾಡಿಸಿದರು. ಆಗ ಸಮಸ್ತ ಸಂಸಾರ ದುಃಖದ ನಾಶಕ್ಕೆ ಕಾರಣವಾದ 'ತತ್ತ್ವಮಸಿ' ಎಂಬ ಮಹಾವಾಕ್ಯವನ್ನು ಆ ಪಂಡಿತನ ಕಿವಿಯಲ್ಲಿ ಜಪಿಸಿ ಉಪದೇಶಿಸಿದರು.

ಟಿಪ್ಪಣಿ :- ಕರ್ಣೇಜಪ ಎಂದರೆ ಚಾಡಿಖೋರನೆಂದರ್ಥ. ಪ್ರಕೃತದಲ್ಲಿ 'ನಾಶಕ್ಕೆಕಾರಣವಾದ' ಎಂದು ಲಾಕ್ಷಣಿಕಾರ್ಥ.

ಸಂನ್ಯಾಸಪೂರ್ವಂ ವಿಧಿವದ್ವಿಭಿಕ್ಷೇ
ಪಶ್ಚಾದುಪಾದಿಕ್ಷದಥಾಽಽತ್ಮತತ್ತ್ವಮ್ |
ಆಚಾರ್ಯವರ್ಯಾಃ ಶ್ರುತಿಮಸ್ತಕಸ್ಥಂ
ತದಾದಿವಾಕ್ಯಂ ಪುನರಾಬಭಾಷೇ || ೭೧

ಹೀಗೆ ಮಂಡನಮಿಶ್ರನು ಸಂನ್ಯಾಸವನ್ನು ಸ್ವೀಕರಿಸಿ ವಿಧಿಗೆ ಅನುಗುಣವಾಗಿ ಭಿಕ್ಷೆಬೇಡಿದನು. ಆಮೇಲೆ ಆಚಾರ್ಯವರ್ಯರು ಉಪನಿಷತ್ತಿನಲ್ಲಿರುವ 'ತತ್ತ್ವಮಸಿ' ಎಂಬ ಮಹಾವಾಕ್ಯವನ್ನು ಅರ್ಥಸಹಿತವಾಗಿ ಮತ್ತೆ ಈ ಪ್ರಕಾರವಾಗಿ ಬೋಧಿಸಿದರು.

ತ್ವಂ ನಾಸಿ ದೇಹೋ ಘಟವದ್ಧ್ಯನಾತ್ಮಾ
ರೂಪಾದಿಮತ್ತ್ವಾದಿಹ ಜಾತಿಮತ್ತ್ವಾತ್ ।
ಮಮೇತಿ ಭೇದಪ್ರಥನಾದಭೇದ-
ಸಂಪ್ರತ್ಯಯಂ ವಿದ್ಧಿ ವಿಪರ್ಯಯೋತ್ಥಮ್ ॥ ೭೨

"ನೀನು ದೇಹವಲ್ಲ. ಏಕೆಂದರೆ, ದೇಹವು ಗಡಿಗೆಯಂತೆ ಅನಾತ್ಮವಾಗಿದೆ. ಇದು ರೂಪವೇ ಮೊದಲಾದ ಗುಣವುಳ್ಳದ್ದಾದ್ದರಿಂದಲೂ ಮನುಷ್ಯತ್ವಾದಿ ಜಾತಿಯುಕ್ತವಾದ್ದರಿಂದಲೂ ನನ್ನ ದೇಹವೆಂಬ ಭೇದವು ಪ್ರಖ್ಯಾತವಾದ್ದರಿಂದಲೂ ಆತ್ಮವಲ್ಲ. ನಾನು ಸ್ಥೂಲನಾಗಿದ್ದೇನೆ, ನಾನು ಕೃಶನಾಗಿದ್ದೇನೆ ಎಂಬಲ್ಲಿ ನಾನು ದೇಹವೆಂದು ತೋರುವ ಅಭೇದಜ್ಞಾನವು ತಾದಾತ್ಮ್ಯದ ಅಧ್ಯಾಸದಿಂದ ಬಂದದ್ದೆಂದು ತಿಳಿ.

ಟಿಪ್ಪಣಿ :-'ಅಶಬ್ದ ಮಸ್ಪರ್ಶ ಮರೂಪ ಮವ್ಯಯಂ' ಇತ್ಯಾದಿ ಶ್ರುತಿವಚನಗಳಿಂದ ಆತ್ಮನಲ್ಲಿ ಯಾವ ಗುಣವೂ ಜಾತಿಧರ್ಮವೂ ಇಲ್ಲವೆಂದು ತಿಳಿದು ಬರುತ್ತದೆ. ನನ್ನ ದೇಹ -ಎಂಬಲ್ಲಿ ದೇಹಕ್ಕಿಂತ ನಾನು ಬೇರೆ ಎಂಬ ಅರ್ಥವು ಸ್ಫುಟವಾಗಿದೆ. ಅಧ್ಯಾಸವೆಂದರೆ ಅದಲ್ಲದ್ದನ್ನು ಅದು ಎಂದು ತಿಳಿಯುವ ಅಜ್ಞಾನ - ಭ್ರಮೆ-ಅವಿದ್ಯೆ. ಹಗ್ಗವನ್ನು ಹಾವೆಂದು ತಿಳಿಯುವುದು ಅಧ್ಯಾಸ.

ಲೋಪ್ಯೋ ಹಿ ಲೋಪ್ಯವ್ಯತಿರಿಕ್ತ ಲೋಪಕೋ
ದೃಷ್ಟೋ ಘಟಾದಿಃ ಖಲು ತಾದೃಶೀ ತನುಃ ।
ದೃಶ್ಯತ್ವಹೇತೋರ್ವ್ಯತಿರೇಕಸಾಧನೇ
ತ್ವತ್ತಃ ಶರೀರೇ ಕಥಮಾತ್ಮತಾಗತಿಃ ॥ ೭೩

"ನಾಶವಾಗತಕ್ಕ ಗಡಿಗೆಯೇ ಮೊದಲಾದವಸ್ತು ನಾಶವಾಗುವ ಆ ಗಡಿಗೆಗಿಂತ ಭಿನ್ನವಾದ ದಂಡ ಮೊದಲಾದ್ದರಿಂದ ಆಗುತ್ತದೆ-ಎಂಬುದು ಲೋಕದಲ್ಲಿ ಕಂಡುಬಂದಿದೆ. ಹಾಗೆಯೇ ಈ ದೇಹವೂ ಸಹ. ಇದು ದೃಶ್ಯವಾದ್ದರಿಂದ ದ್ರಷ್ಟೃವಾದ ಇನ್ನೊಬ್ಬನಿದ್ದಾನೆಂದು ಸಾಧಿಸಬಹುದು. ದೇಹವೆಂದುಕೊಳ್ಳುವ ನಿನಗಿಂತ ಈ ದ್ರಷ್ಟೃವು ಬೇರೆಯಾಗಿರುವಾಗ ದೇಹವು ಆತ್ಮವೆಂದು ಕೊಳ್ಳುವುದು ಹೇಗಾದೀತು ?

ಟಿಪ್ಪಣಿ :- ದೃಶ್ಯವೆಂದರೆ ನೋಡಲ್ಪಡತಕ್ಕದ್ದು - ತಿಳಿಯಲ್ಪಡತಕ್ಕದ್ದು. ಒಂದು ವಸ್ತು ದೃಶ್ಯವಾದಾಗ ದ್ರಷ್ಟಾರನಾದ ಇನ್ನೊಬ್ಬನಿರಲೇಬೇಕು. ಆತ್ಮವು ಎಂದಿಗೂ ದೃಶ್ಯವಲ್ಲ. ದೇಹವಾದರೋ ದೃಶ್ಯವಾದ್ದರಿಂದ ಇದು ಆತ್ಮವಲ್ಲ - ಎಂದು ಅಭಿಪ್ರಾಯ. ಲೋಪ್ಯ= ನಾಶವಾಗತಕ್ಕದ್ದು. ಲೋಪ್ಯವ್ಯತಿರಿಕ್ತಃ ಲೋಪಕಃ ಯಸ್ಯಸಃ - ಎಂದು ಬಹುವ್ರೀಹಿ ಸಮಾಸ.

ನಾಪೀಂದ್ರಿಯಾಣಿ ಖಲು ತಾನಿ ಚ ಸಾಧನಾನಿ
ದಾತ್ರಾದಿವತ್ಕಥಮಮೀಷು ತವಾಽಽತ್ಮಭಾವಃ |
ಚಕ್ಷುರ್ಮದೀಯಮಿತಿ ಭೇದಗತೇರಮೀಷಾಂ
ಸ್ವಪ್ನಾದಿ ಭಾವವಿರಹಾಚ್ಚ ಘಟಾದಿಸಾಮ್ಯಮ್ || ೭೪

"ಇಂದ್ರಿಯಗಳೂ ಸಹ ಆತ್ಮವಲ್ಲ. ಅವು ಕರಣಗಳು (Instruments). ಕುಡುಗೋಲಿನಂತೆ ಕರಣವಾಗಿರುವ ಇಂದ್ರಿಯಗಳಲ್ಲಿ ನಿನಗೆ ಆತ್ಮಭಾವವು ಹೇಗೆಬಂದೀತು? ಅಲ್ಲದೆ, ನನ್ನ ಕಣ್ಣು -ಇತ್ಯಾದಿ ರೀತಿಯಲ್ಲಿ ನನಗೂ ಕಣ್ಣಿಗೂ ಭೇದವಿರುವಾಗ ಇಂದ್ರಿಯಗಳು ಆತ್ಮವಾಗಲಾರವು. ಮತ್ತು ಸ್ವಪ್ನ ಸುಷುಪ್ತಿಗಳಲ್ಲಿ ಇವು ಇಲ್ಲದ್ದರಿಂದಲೂ ಘಟಾದಿವಸ್ತುಗಳಂತೆ ಅನಾತ್ಮವೇ ಸರಿ.

ಟಿಪ್ಪಣಿ:- ಕರಣಕ್ಕಿಂತ ಕರ್ತೃವಾದವನು ಬೇರೆ ಎಂಬುದು ಲೋಕಪ್ರಸಿದ್ಧ. ಸ್ವಪ್ನದಲ್ಲಿ ನೋಡುತ್ತೇವೆ, ಕೇಳುತ್ತೇವೆ, ಓಡುತ್ತೇವೆ. ಅಲ್ಲಿ ಈ ಯಾವ ಸಾಧನವೂ ಇರುವುದಿಲ್ಲ. ನೋಡುವುದು ಕೇಳುವುದು ಮೊದಲಾದದ್ದಕ್ಕೆ ಕರ್ತೃವಾದ ಬೇರೊಬ್ಬನಿದ್ದಾನೆ ಎಂಬುದು ಸ್ಪಷ್ಟವಾಗಿದೆ. ನಾನು ಎಂದರೆ ಪರಮಾರ್ಥದಲ್ಲಿಯಾರೋ ಆತನೇ ಆತ್ಮನಾಗುತ್ತಾನೆ.

ಯದ್ಯಾತ್ಮತೈಷಾಂ ಸಮುದಾಯಗಾ ಸ್ಯಾತ್
ಏಕವ್ಯಯೇನಾಪಿ ಭವೇನ್ನ ತದ್ಧೀಃ |
ಪ್ರತ್ಯೇಕಮಾತ್ಮತ್ವಮುದೀರ್ಯತೇ ಚೇತ್
ನಶ್ಯೇಚ್ಛರೀರಂ ಬಹುನಾಯಕತ್ವಾತ್ || ೭೫

"ಇಂದ್ರಿಯಗಳೆಲ್ಲವೂ ಸೇರಿದ ಸಮುದಾಯವು ಆತ್ಮವಾಗಲಿ -ಎನ್ನುವುದೂ ಸರಿಯಲ್ಲ. ಆಗ ಯಾವುದಾದರೊಂದು ಇಂದ್ರಿಯವು ನಾಶವಾದರೂ ಸಮುದಾಯವಿಲ್ಲವೆಂದೇ ಆಗುವುದರಿಂದ, ಆತನಿಗೆ 'ನಾನು' ಎಂಬ ಆತ್ಮಬುದ್ಧಿಯೇ ಹುಟ್ಟದೇ ಹೋಗುತ್ತದೆ. ಇನ್ನು ಪ್ರತಿಯೊಂದು ಇಂದ್ರಿಯವೂ ಆತ್ಮನೆಂದು ಒಪ್ಪಿದರೆ, ಈ ದೇಹಕ್ಕೆ ಬಹುಮಂದಿ ಪ್ರಭುಗಳಾಗಿಬಿಡುತ್ತಾರೆ. ಆಗ (ವಿರುದ್ಧಕ್ರಿಯೆಗಳುಂಟಾಗಿ ಬಹುನಾಯಕವಾದ ರಾಜ್ಯದಂತೆ)ದೇಹವೇ ನಾಶವಾದೀತು.

ಆತ್ಮತ್ವಮನ್ಯತಮಗಂ ಯದಿ ಚಕ್ಷುರಾದೇಃ
ಚಕ್ಷುರ್ವಿನಾಶಸಮಯೇ ಸ್ಮರಣಂ ನ ಹಿ ಸ್ಯಾತ್ |
ಏಕಾಶ್ರಯತ್ವನಿಯಮಾತ್ಸ್ಮರಣಾನುಭೂತ್ಯೋಃ
ದೃಷ್ಟ ಶ್ರುತಾರ್ಥವಿಷಯಾವಗತಿಶ್ಚ ನ ಸ್ಯಾತ್ || ೭೬

"ಇಂದ್ರಿಯಗಳಲ್ಲಿ ಯಾವುದೊಂದು ಆತ್ಮವೆಂದರೂ ಇನ್ನೊಂದು ದೋಷ ಬರುತ್ತದೆ ಒಬ್ಬರಿಗೆ ಕಣ್ಣು ಹೋಗಿಬಿಟ್ಟರೆ ಅವರು ಮೊದಲು ನೋಡಿದ್ದು ಸ್ಮರಣೆಗೆ ಬರದೆ ಹೋದೀತು.

ಮತ್ತು 'ಯಾವುದನ್ನು ನಾನು ನೋಡಿದ್ದೆನೋ ಅದನ್ನೇ ಈಗ ನಾನು ಕೇಳುತ್ತಿದ್ದೇನೆ' ಎಂಬ ಪ್ರತ್ಯಭಿಜ್ಞೆಯೂ ಬರದೇ ಹೋಗುತ್ತದೆ. ಏಕೆಂದರೆ, 'ಯಾರಿಗೆ ಅನುಭವವಾಗಿದೆಯೋ ಅವರಿಗೇ ಸ್ಮರಣೆ ಬರುತ್ತದೆ' ಎಂದು ಅನುಭವ ಸ್ಮರಣಗಳಿಗೆ ಏಕಾಶ್ರಯತ್ವವೆಂಬ ನಿಯಮವಿದೆ.

ವಿವರಣೆ : ಒಂದು ಇಂದ್ರಿಯವು ಆತ್ಮವಾಗಲಿ ಅಥವಾ ಇಂದ್ರಿಯ ಸಮುದಾಯವು ಆತ್ಮವಾಗಲಿ, ಉಭಯ ಪಕ್ಷಗಳಲ್ಲಿಯೂ ಈ ದೋಷಗಳನ್ನು ಆಪಾದಿಸಬಹುದು. ಪ್ರತ್ಯಭಿಜ್ಞೆಯೂ ಸ್ಮರಣೆಯೇ.

ಮನೋಽಪಿ ನಾಽಽತ್ಮಾ ಕರಣತ್ವ ಹೇತೋಃ
ಮನೋ ಮದೀಯಂ ಗತಮನ್ಯತೋಽಭೂತ್ |
ಇತಿ ಪ್ರತೀತೇರ್ವ್ಯಭಿಚಾರಿತಾಯಾಃ
ಸುಪ್ತೌ ಚ ತಚ್ಚಿನ್ಮನಸೋರ್ವಿವಿಕ್ತತಾ || ೭೭

"ಹಾಗಾದರೆ ಮನಸ್ಸು ಆತ್ಮವಾಗಲಿ - ಎನ್ನುವುದೂ ಯುಕ್ತವಲ್ಲ. (ನಾನು ಮನಸ್ಸಿನಿಂದ ಅರಿಯುತ್ತೇನೆ, ಮನಸ್ಸಿನಿಂದ ಚಿಂತಿಸುತ್ತೇನೆ) ಎಂಬ ಅನುಭವವಿರುವುದರಿಂದ ಕರ್ತೃವಾದ ಆತ್ಮನಿಗೆ ಮನಸ್ಸು ಕರಣವಾಗಿದೆ. 'ನನ್ನ ಮನಸ್ಸು ಆಗ ಎತ್ತಲೋಹೋಗಿತ್ತು' ಎಂದು ಪ್ರತೀತಿಯಾಗುವುದರಿಂದಲೂ ಮನಸ್ಸು ಆತ್ಮನಿಗಿಂತ ಭಿನ್ನವೆಂದು ಗೊತ್ತಾಗುತ್ತದೆ. ಸುಷುಪ್ತಿಕಾಲದಲ್ಲಿ ಮನಸ್ಸು ಇರುವುದಿಲ್ಲವಾದ್ದರಿಂದಲೂ ಅದು ಆತ್ಮವಾಗದು.

ವಿವರಣೆ : ಸುಷುಪ್ತಿಯಲ್ಲಿ ಮನಸ್ಸು ಚಿದಾತ್ಮನಲ್ಲಿ ವಿಲೀನವಾಗುವುದರಿಂದ ವ್ಯಭಿಚರಿತವೆಂದು ಅಭಿಪ್ರಾಯ. ನಾನು ನಿದ್ರಿಸಿದೆನೆಂಬ ಅನುಭವವೂ ಬರದೆ ಹೋದೀತು.

ಅನಯೈವ ದಿಶಾ ನಿರಾಕೃತಾ
ನ ಚ ಬುದ್ಧೇರಪಿ ಚಾಽಽತ್ಮತಾ ಸ್ಫುಟಮ್ |
ಅಪಿ ಭೇದಗತೇರನನ್ವಯಾತ್
ಕರಣಾದಾವಿವ ಬುದ್ಧಿಮುಝ್ಝ ಭೋಃ || ೭೮

"ಇದೇ ರೀತಿಯಲ್ಲಿ ಬುದ್ಧಿಯು ಆತ್ಮವೆಂಬುದೂ ನಿರಾಕೃತವಾಗುತ್ತದೆ. ಇಂದ್ರಿಯಾದಿಗಳಲ್ಲಿ ಹೇಳಿದ ದೋಷವು ಬುದ್ಧಿಗೂ ಅಂಟಿಕೊಳ್ಳುತ್ತದೆ. ನನ್ನ ಬುದ್ಧಿ, ನನ್ನ ಬುದ್ಧಿ ಎಲ್ಲಿಯೋ ಆಗ ಹೋಗಿತ್ತು -ಇತ್ಯಾದ್ಯನುಭವಗಳಿರುವುದರಿಂದ, ಎಲೈ ಶಿಷ್ಯನೆ, ಬುದ್ಧಿಯು ಆತ್ಮವೆಂಬ ಬುದ್ಧಿಯನ್ನು ತ್ಯಜಿಸು !

ನಾಹಂಕೃತಿಶ್ಚರಮಧಾತುಪದಪ್ರಯೋಗಾತ್
ಪ್ರಾಣಾ ಮದೀಯಾ ಇತಿ ಲೋಕವಾದಾತ್ |
ಪ್ರಾಣೋಽಪಿ ನಾಽಽತ್ಮಾ ಭವಿತುಂ ಪ್ರಗಲ್ಭಃ
ಸರ್ವೋಪಸಂಹಾರಿಣಿ ಸನ್‌ಸುಷುಪ್ತೇ || ೭೯

"ನಾನು ಎಂಬ ಅಹಂಪ್ರತ್ಯಯಕ್ಕೆ ಗೋಚರವಾಗುವ ಅಹಂಕಾರವು ಆತ್ಮವಲ್ಲ. ಈ ಶಬ್ದದ ಕಡೆಯಲ್ಲಿ ಕ್ರಿಯಾವಾಚಕವಾದ ಕೃಧಾತುವಿರುವದರಿಂದ ಅಹಂಕಾರವೆಂಬುದು ಒಂದು ಕ್ರಿಯೆಯೇ ಹೊರತು ಆತ್ಮವಲ್ಲ. ಇನ್ನು ಸರ್ವಜ್ಞಾನವನ್ನೂ ಲಯಗೊಳಿಸುವ ಸುಷುಪ್ತಿಯಲ್ಲಿ ಪ್ರಾಣವಿದ್ದರೂ'ನನ್ನ ಪ್ರಾಣ' ಎಂಬ ಭೇದ ಜ್ಞಾನವಿರುವುದರಿಂದ ಅದೂ ಆತ್ಮವಲ್ಲ.

ಏವಂ ಶರೀರಾದ್ಯವಿವಿಕ್ತ ಆತ್ಮಾ
  ತ್ವಂ ಶಬ್ದವಾಚ್ಯೋಽಭಿಹಿತೋಽತ್ರ ವಾಕ್ಯೇ |
ತದೋದಿತಂ ಬ್ರಹ್ಮ ಜಗನ್ನಿದಾನಂ
  ತಥಾ ತಥೈಕ್ಯಂ ಪದಯುಗ್ಮಬೋಧ್ಯಮ್ || ೮೦

"ಈ ಪ್ರಕಾರ ದೇಹೇಂದ್ರಿಯ ಮನೋಬುದ್ಧಿಗಳಿಗಿಂತ ಅತಿರಿಕ್ತನಾದ ಆತ್ಮನು, ತತ್ತ್ವಮಸಿ ಎಂಬ ವಾಕ್ಯದಲ್ಲಿರುವ ತ್ವಂ ಶಬ್ದದ ಅರ್ಥ. ಆ ವಾಕ್ಯದಲ್ಲಿರುವ 'ತತ್' ಎಂಬ ಪದದಿಂದ ಜಗತ್ತಿಗೆ ಮೂಲಕಾರಣವಾದ ಬ್ರಹ್ಮವು ಉಕ್ತವಾಗಿದೆ. ಈ ವಾಕ್ಯದಲ್ಲಿರುವ ಈ ಪದದ್ವಯದಿಂದ ಜೀವಾತ್ಮ ಪರಮಾತ್ಮರಿಗೆ ಐಕ್ಯವು ಬೋಧಿತವಾಗಿದೆ.

ಟಿಪ್ಪಣಿ :-ತದೋದಿತಂ = ತದಾ ಉದಿತಂ ಎಂದು ಪದವಿಭಾಗ. ತದಾ =ಇದು 'ತತ್' ಶಬ್ದದ ತೃತೀಯೈಕವಚನ. ತತ್ ಶಬ್ದದಿಂದ ಎಂದರ್ಥ. ಇದು ಶಬ್ದಪರವಾದ್ದರಿಂದ ಸರ್ವನಾಮಕಾರ್ಯವು ಬಂದಿಲ್ಲ.

ಕಥಂ ತದೈಕ್ಯಂ ಪ್ರತಿಪಾದಯೇದ್ವಚಃ
  ಸರ್ವಜ್ಞ ಸಂಮೂಢ ಪದಾಭಿಷಿಕ್ತಯೋಃ |
ನ ಹ್ಯೇಕತಾ ಸಂತಮಸಪ್ರಕಾಶಯೋಃ
  ಸಂದೃಷ್ಟಪೂರ್ವಾ ನ ಚ ದೃಶ್ಯತೇಽಧುನಾ || ೮೧

(ಈಗ ಒಂದು ಪ್ರಶ್ನೆ ಹುಟ್ಟುತ್ತದೆ.) "ಈ ಉಪನಿಷದ್ವಾಕ್ಯವು ಅವರಿಬ್ಬರ ಐಕ್ಯವನ್ನು ಹೇಗೆ ತಾನೇ ಪ್ರತಿಪಾದಿಸೀತು? ಜೀವಾತ್ಮನು ಮೂಢ. ಪರಮಾತ್ಮನು ಸರ್ವಜ್ಞ. ಇವರಿಗೆ ಏಕತ್ವ ಹೇಗೆ ಬರುತ್ತದೆ ? ಕತ್ತಲಿಗೂ ಬೆಳಕಿಗೂ ಏಕತ್ವವೆಂಬುದನ್ನು ಎಂದೂ ಯಾರೂ ಕಂಡಿಲ್ಲ. ಈಗ ಕಾಣುತ್ತಲೂ ಇಲ್ಲ.

ಸತ್ಯಂ ನಿರೋಧಗತಿರಸ್ತಿ ತು ವಾಚ್ಯಗೇಯಂ
  ಸೋಽಯಂ ಪುಮಾನಿತಿವದತ್ರ ವಿರೋಧಹಾನೇಃ |
ಆದಾಯ ವಾಚ್ಯಮವಿರೋಧಿ ಪದದ್ವಯಂ ತತ್
  ಲಕ್ಷ್ಯೈಕ್ಯಬೋಧನಪರಂ ನನು ಕೋ ವಿರೋಧಃ || ೮೨

ಇದಕ್ಕೆ ಸಮಾಧಾನ - "ನಿಜ; ವಾಚ್ಯಾರ್ಥಗಳನ್ನು ತೆಗೆದುಕೊಂಡರೆ ವಿರೋಧವೇನೋ ಕಾಣಿಸುತ್ತದೆ. ಆದರೆ (ಹಿಂದೆ ನಾನು ಕಾಶಿಯಲ್ಲಿ) ನೋಡಿದವನೇ ಈ ಮನುಷ್ಯ- ಎಂಬ ಪ್ರತ್ಯಭಿಜ್ಞಾಸ್ಥಳದಲ್ಲಿ ಹೇಗೋ ಹಾಗೇ ಇಲ್ಲಿಯೂ ವಿರೋಧವು ಹೋಗಿಬಿಡುತ್ತದೆ. ವಾಚ್ಯಾರ್ಥದ ಒಂದಂಶವನ್ನು ತೆಗೆದುಕೊಂಡು ಈ ಪದದ್ವಯವು ಲಕ್ಷ್ಯಾರ್ಥವನ್ನು ಬೋಧಿಸುತ್ತದೆಯಾದ್ದರಿಂದ ಇವುಗಳಿಗೆ ವಿರೋಧವಿಲ್ಲ. ಹೀಗಿರುವಾಗ ವಿರೋಧವೆಲ್ಲಿ ಬರುತ್ತದೆ?

ವಿವರಣೆ : 'ನಾನು ಕಾಶಿಯಲ್ಲಿ ನೋಡಿದವನೇ ಬೆಂಗಳೂರಲ್ಲಿ ಕಾಣಿಸುತ್ತಿರುವ ಈತನು' -ಎಂಬ ಸ್ಮರಣೆಗೆ ಪ್ರತ್ಯಭಿಜ್ಞೆ ಎಂದು ಹೆಸರು. ಕಾಶಿಯಲ್ಲಿ ಹಿಂದೆ ನೋಡಿದಾಗ ಅವನು ಬೇರೆ ಉಡುಪನ್ನು ತೊಟ್ಟಿರಬಹುದು. ಈಗ ಮತ್ತೊಂದು ಉಡುಪನ್ನು ತೊಟ್ಟಿರುತ್ತಾನೆ. ಭೂತಕಾಲ, ಕಾಶಿ, ಆ ಉಡುಪು - ಇವು ಈಗ ಇಲ್ಲ. ವರ್ತಮಾನ ಕಾಲ, ಬೆಂಗಳೂರು, ಬೇರೊಂದು ಉಡುಪು- ಇವು ಈಗ ಇವೆ. ಆದರೂ ಮನುಷ್ಯನು ಒಬ್ಬನೇ ಆದ್ದರಿಂದ ಪ್ರತ್ಯಭಿಜ್ಞೆಯಲ್ಲಿ ವಿರೋಧವಿಲ್ಲ. ಅಂತೆಯೇ ಪ್ರಕೃತದಲ್ಲಿಯೂ ಮೂಢತ್ವ, ಸರ್ವಜ್ಞತ್ವ ಎಂಬ ವಾಚ್ಯಾರ್ಥಧರ್ಮಗಳನ್ನು ಬಿಟ್ಟು 'ಚಿತ್' ಎಂಬ ಲಕ್ಷ್ಯಾರ್ಥವನ್ನು ತೆಗೆದುಕೊಂಡಾಗ ಇವೆರಡೂ ಒಂದೇ ಚಿದ್‌ವಸ್ತು ಎಂದಾಗುತ್ತದೆ. ಏವಂ ಚ ಲಕ್ಷ್ಯಾರ್ಥಗಳನ್ನು ಮಾತ್ರ ಇಲ್ಲಿ ಗ್ರಹಿಸಬೇಕೆಂದು ಅಭಿಪ್ರಾಯ.

ಜಹೀಹಿ ದೇಹಾದಿಗತಾಮಹಂಧಿಯಂ
ಚಿರಾರ್ಜಿತಾಂ ಕರ್ಮಶತೈಃ ಸುದುಸ್ತ್ಯಜಾಮ್ |
ವಿವೇಕಬುದ್ಧ್ಯಾ ಪರಮೇವ ಸಂತತಂ
ಧ್ಯಾಯಾಽಽತ್ಮಭಾವೇನ ಯತೋ ವಿಮುಕ್ತತಾ || ೮೩

"ಯಜ್ಞ ಯಾಗಾದಿ ಕರ್ಮಗಳಲ್ಲಿ ತೊಡಗಿರುವ ಕರ್ಮನಿಷ್ಠರಿಗೆ ದೇಹವೇ ಮೊದಲಾದ್ದರಲ್ಲಿ ಆತ್ಮವೆಂಬ ಬುದ್ಧಿಯು ಚಿರಕಾಲದಿಂದ ಬಂದಿರುತ್ತದೆ. ಈ ಬುದ್ಧಿಯನ್ನು ತ್ಯಜಿಸುವುದು ಕಷ್ಟ. ಆದರೂ ನೀನು ಇದನ್ನು ತ್ಯಜಿಸಿಬಿಡು. ಹಿಂದೆ ಹೇಳಿದ ವಿವೇಚನಾ ದೃಷ್ಟಿಯಿಂದ ಪರಮಾತ್ಮನೇ ನೀನೆಂದು ಸಂತತವಾಗಿ ಧ್ಯಾನಿಸುತ್ತಿರು. ಇದರಿಂದಲೇ ನಿನಗೆ ಮೋಕ್ಷವು ದೊರೆಯುವುದು.

ಸಾಧಾರಣೇ ವಪುಷಿ ಕಾಕಶೃಗಾಲವಹ್ನಿ -
ಮಾತ್ರಾದಿಕಸ್ಯ ಮಮತಾಂ ತ್ಯಜ ದುಃಖಹೇತುಮ್ |
ತದ್ವಜ್ಜಹೀಹಿ ಬಹಿರರ್ಥಗತಾಂ ಚ ವಿದ್ವಂ-
ಶ್ಚಿತ್ತಂ ಬಧಾನ ಪರಮಾತ್ಮನಿ ನಿರ್ವಿಶಂಕಮ್ || ೮೪

"ಕಾಗೆ, ನರಿ, ಬೆಂಕಿ ಮೊದಲಾದವುಗಳಿಗೆ ಸೇರಿಹೋಗುವ ಈ ದೇಹದಲ್ಲಿ ಮಮತೆಯನ್ನು ತ್ಯಜಿಸು. ಈ ಮಮತೆಯೇ ದುಃಖಕ್ಕೆ ಕಾರಣವಾದದ್ದು. ಹಾಗೆಯೇ ಬಾಹ್ಯವಸ್ತುಗಳಲ್ಲಿ ಇರುವ ಮಮತ್ವಬುದ್ಧಿಯನ್ನು ಬಿಟ್ಟುಬಿಡು. ಎಲೈ ವಿದ್ವಾಂಸನೇ, ಎಲ್ಲ ಶಂಕೆಗಳನ್ನೂ ತೊರೆದು ಪರಮಾತ್ಮನಲ್ಲಿ ಚಿತ್ತವನ್ನು ನಿಲ್ಲಿಸು.

ಟಿಪ್ಪಣಿ :-ವಹ್ನಿಮಾತ್ರಾದಿಕಸ್ಯ ಎಂಬಲ್ಲಿ ವಹ್ನಿಮಾತ್ರಾದಿತಸ್ಯ ಎಂಬ ಪಾಠವಿದ್ದರೆ ಉತ್ತಮ. ಆದಿತ = ಕಾಗೆ ಮೊದಲಾದ್ದರಿಂದ ತಿನ್ನಿಸಲ್ಪಟ್ಟ.

ತೀರಾತ್ತೀರಂ ಸಂಚರನ್ ದೀರ್ಘಮತ್ಸ್ಯಃ
ತೀರಾದ್ಭಿನ್ನೋ ಲಿಪ್ಯತೇ ನಾಪಿ ತೇನ |
ಏವಂ ದೇಹೀ ಸಂಚರನ್ ಜಾಗ್ರದಾದೌ
ತಸ್ಮಾದ್ಭಿನ್ನೋ ನಾಪಿ ತದ್ಧರ್ಮಕೋ ವಾ || ೮೫

"ಉದ್ದಬಾಲವಿರುವ ಮೀನು ತೀರದಿಂದ ತೀರಕ್ಕೆ ಸಂಚರಿಸುತ್ತಿದ್ದರೂ ತೀರಕ್ಕಿಂತ ಭಿನ್ನವೇ ಆಗಿರುತ್ತದೆ. ತೀರದ ಯಾವ ಲೇಪವೂ ಅದಕ್ಕಿಲ್ಲ. ಹಾಗೆ ಆತ್ಮನು ಜಾಗ್ರತ್, ಸ್ವಪ್ನ, ಸುಷುಪ್ತಿಗಳಲ್ಲಿ ಸಂಚರಿಸುತ್ತಿದ್ದರೂ ಅವುಗಳಿಗಿಂತ ಭಿನ್ನನೇ. ಜಾಗ್ರದಾದ್ಯವಸ್ಥೆಗಳು ಅವನಿಗಿರುವುದಿಲ್ಲ.

ಜಾಗ್ರತ್ಸ್ವಪ್ನ ಸುಷುಪ್ತಿ ಲಕ್ಷಣಮದೋಽವಸ್ಥಾತ್ರಯಂ ಚಿತ್ತನೌ
ತ್ವಯ್ಯೇವಾನುಗತೇ ಮಿಥೋ ವ್ಯಭಿಚರದ್ಧೀಸಂಜ್ಞಮಜ್ಞಾನತಃ |
ಕ್ಲೃಪ್ತಂ ರಜ್ಜ್ವಿದಮಂಶಕೇ ವಸುಮತೀಚ್ಛಿದ್ರಾಹಿದಂಡಾದಿವತ್
ತದ್ಬ್ರಹ್ಮಾಸಿ ತುರೀಯಮುಜ್ಝಿತ ಭಯಂ ಮಾ ತ್ವಂ ಪುರೇವ ಭ್ರಮೀಃ ||

"ಜಾಗ್ರತ್, ಸ್ವಪ್ನ, ಸುಷುಪ್ತಿಗಳೆಂಬ ಅವಸ್ಥಾತ್ರಯವು ಚಿದ್ರೂಪನಾದ ನಿನ್ನಲ್ಲಿ ಅಜ್ಞಾನದಿಂದ ಕಲ್ಪಿತವಾಗಿದೆ. ಸರ್ವತ್ರ ಅನುಗತನಾದ ನಿನ್ನಲ್ಲಿ ವ್ಯಾವೃತ್ತವಾದ ಅವಸ್ಥಾತ್ರಯವುಳ್ಳ ಬುದ್ಧಿಯು ಕಲ್ಪಿತವಾಗಿದೆ. ಹೇಗೆಂದರೆ (ಹಗ್ಗವನ್ನು ನೋಡಿ ಭ್ರಮೆಯುಂಟಾದಾಗ) ಇದು ಭೂಮಿ, ಕೊರಕಲು, ಹಾವು, ದಂಡ-ಎಂಬ ಬುದ್ಧಿ ಯುಂಟಾಗುವುದಷ್ಟೆ. ಅಲ್ಲಿ ಇದು ಎಂಬುದು ಎಲ್ಲೆಡೆಯೂ ಅನುವೃತ್ತವಾಗಿದೆ. ಕೊರಕಲು ಮುಂತಾದವು ವ್ಯಾವೃತ್ತವಾಗಿವೆ. ಈ ವ್ಯಾವೃತ್ತವು ಅನುವೃತ್ತವಾದ್ದರಲ್ಲಿ ಹೇಗೆ ಕಲ್ಪಿತವೋ ಹಾಗೆ ಅವಸ್ಥಾತ್ರಯವುಳ್ಳ ಚಿತ್ತವು ಆತ್ಮನಲ್ಲಿ ಕಲ್ಪಿತ. ಆದ್ದರಿಂದ ನೀನು ಬ್ರಹ್ಮವೇ ಆಗಿದ್ದೀಯೆ. ತುರೀಯಾತೀತನಾದವನು ನೀನು. ಅಭಯನು. ಹಿಂದಿನಂತೆ ಭ್ರಮೆಗೆ ಒಳಗಾಗಬೇಡ.

ಪ್ರತ್ಯಕ್ತಮಂ ಪರಪದಂ ವಿದುಷೋಽಂತಿಕಸ್ಥಂ
ದೂರಂ ತದೇವ ಪರಿಮೂಢಮತೇರ್ಜನಸ್ಯ |
ಅಂತರ್ಬಹಿಶ್ಚ ಚಿತಿರಸ್ತಿ ನ ವೇತ್ತಿ ಕಶ್ಚಿತ್
ಚಿನ್ವನ್ ಬಹಿರ್ಬಹಿರಹೋ ಮಹಿಮಾತ್ಮಶಕ್ತೇಃ || ೮೭

"ಪ್ರತ್ಯಗ್ರೂಪವಾದ ಪರಬ್ರಹ್ಮವು ವಿದ್ವಾಂಸನಿಗೆ ನಿಕಟವಾಗಿಯೇ ಇರುತ್ತದೆ. ಮೂಢಬುದ್ಧಿಯ ಮನುಷ್ಯನಿಗೆ ಅದೇ ದೂರದಲ್ಲಿದ್ದಂತೆ ಕಾಣುತ್ತದೆ. ಈ ಚೈತನ್ಯವು ಒಳಗೂ ಇದೆ. ಹೊರಗೂ ಇದೆ. ಎಲ್ಲೆಲ್ಲಿಯೂ ಇದೆ. ಅಜ್ಞಾನಿಯು ಹೊರಗಿದೆ ಹೊರಗಿದೆ ಎಂದು ಬಾಹ್ಯದಲ್ಲಿಯೇ ಆತ್ಮವನ್ನು ಹುಡುಕುತ್ತ ಇರುತ್ತಾನೆ. ಅವನಿಗೇನೂ ತಿಳಿಯದು. ಆಹಾ, ಆತ್ಮನ ಮಾಯಾ ಶಕ್ತಿಯು ಎಷ್ಟು ದೊಡ್ಡದು!

ಯಥಾ ಪ್ರಪಾಯಾಂ ಬಹವೋ ಮಿಲಂತೇ
ಕ್ಷಣೇ ದ್ವಿತೀಯೇ ಬತ ಭಿನ್ನಮಾರ್ಗಾಃ |
ಪ್ರಯಾಂತಿ ತದ್ವದ್ಬಹುನಾಮಭಾಜೋ
ಗೃಹೇ ಭವಂತ್ಯತ್ರ ನ ಕಶ್ಚಿದಂತೇ || ೮೮

"ಬಹಳಮಂದಿ ಪಥಿಕರು ಅರವಟ್ಟಿಗೆಯಲ್ಲಿ ಒಂದು ಕ್ಷಣ ಒಟ್ಟಿಗೆ ಸೇರುತ್ತಾರೆ. ಎರಡನೆಯ ಕ್ಷಣದಲ್ಲಿ ಬೇರೆ ದಾರಿಹಿಡಿದು ಹೋಗಿಬಿಡುತ್ತಾರಲ್ಲವೆ? ಹಾಗೆ ಒಂದು ಮನೆಯಲ್ಲಿ (ತಂದೆ, ತಾಯಿ, ಗಂಡ, ಹೆಂಡತಿ, ಮಕ್ಕಳು) ಮೊದಲಾದವರು ಬೇರೆ ಬೇರೆ ಹೆಸರಿನಿಂದ ಒಟ್ಟಿಗೆ ಸೇರುತ್ತಾರೆ. ಕಡೆಯಲ್ಲಿ ಯಾರೂ ಇರುವುದಿಲ್ಲ !

ಸುಖಾಯ ಯದ್ಯತ್ ಕ್ರಿಯತೇ ದಿವಾನಿಶಂ
ಸುಖಂ ನ ಕಿಂಚಿದ್ಬಹುದುಃಖಮೇವ ತತ್ |
ವಿನಾ ನ ಹೇತುಂ ಸುಖಜನ್ಮ ದೃಶ್ಯತೇ
ಹೇತುಶ್ಚ ಹೇತ್ವಂತರಸನ್ನಿಧೌ ಭವೇತ್ || ೮೯

"ಹಗಲು ರಾತ್ರಿಯೂ ಸುಖಕ್ಕಾಗಿ ಮನುಷ್ಯನು ಏನೇನು ಮಾಡುತ್ತಾನೋ ಅದೇನೂ ಸುಖಕರವಲ್ಲ. ಸುಖವೇನೂ ಇಲ್ಲ. ಆ ಕೆಲಸವೆಲ್ಲವೂ ಬಹಳ ದುಃಖವನ್ನು ಕೊಡತಕ್ಕದ್ದೇ ಸರಿ. ಸರಿಯಾದ ಕಾರಣವಿಲ್ಲದೆ ಸುಖವು ಹುಟ್ಟಲಾರದು. ಕಾರಣಕ್ಕೆ ಜನ್ಮಾಂತರೀಯವಾದ ಇನ್ನೊಂದು ಕಾರಣವಿರಬೇಕು.

ವಿವರಣೆ : ಕರ್ಮವೆಲ್ಲವೂ ದುಃಖಕರವಾದದ್ದು. ಪುಣ್ಯಕರ್ಮದಿಂದ ಸುಖವು ಒಂದುವೇಳೆ ಬಂದೀತು. ಅಂತಹ ಪುಣ್ಯಕರ್ಮವನ್ನುಮಾಡಲು ಜನ್ಮಾಂತರದಲ್ಲಿ ಪುಣ್ಯವನ್ನು ಮಾಡಿದ್ದರೆ ಮಾತ್ರ ಸಾಧ್ಯ. ಹೀಗೆ ಸಂಸಾರಸುಖವು ಒಂದಕ್ಕೊಂದು ಅಂಟಿಕೊಂಡಿರುತ್ತದೆ. ಇಂತಹ ಸಾಪೇಕ್ಷವಾದ ಸುಖವುಳ್ಳ ಸಂಸಾರವು ತ್ಯಾಜ್ಯವೆಂದು ಅಭಿಪ್ರಾಯ.

ಪರಿಪಕ್ವಮತೇಃ ಸಕೃತ್ ಶ್ರುತಂ
ಜನಯೇದಾತ್ಮಧಿಯಂ ಶ್ರುತೇರ್ವಚಃ |
ಪರಿಮಂದಮತೇಃ ಶನೈಃ ಶನೈಃ
ಗುರುಪಾದಾಬ್ಜನಿಷೇವಣಾದಿನಾ || ೯೦

"ಪರಿಶುದ್ಧ ಚಿತ್ತನಾದವನಿಗೆ ತತ್ತ್ವಮಸಿ ಮುಂತಾದ ಶ್ರುತಿವಾಕ್ಯವನ್ನು ಒಮ್ಮೆ ಕೇಳಿದರೂ ಆತ್ಮಜ್ಞಾನವುಂಟಾಗಿ ಬಿಡುತ್ತದೆ. ಕಲುಷಿತ ಚಿತ್ತನಾದ ಮಂದ ಬುದ್ಧಿಗಾದರೋ ಗುರುವಿನ ಚರಣಕಮಲಗಳ ಸೇವೆ ಮೊದಲಾದ್ದರಿಂದ ಮೆಲ್ಲಮೆಲ್ಲನೆ ಆತ್ಮಜ್ಞಾನವಾಗುವುದು.

ಪ್ರಣವಾಭ್ಯಸನೋಕ್ತಕರ್ಮಣೋಃ
  ಕರಣೇನಾಪಿ ಗುರೋರ್ನಿಷೇವಣಾತ್ |
ಅಪಗಚ್ಛತಿ ಮಾನಸಂ ಮಲಂ
  ಕ್ಷಮತೇ ತತ್ತ್ವಮುದೀರಿತಂ ತತಃ || ೯೧

"ಪ್ರಣವವನ್ನು ಜಪಿಸುವುದು, ವಿಹಿತವಾದ ಶಾಸ್ತ್ರೀಯ ಕರ್ಮವನ್ನು ಆಚರಿಸುವುದು, ಗುರುವನ್ನು ಸೇವಿಸುವುದು ಮೊದಲಾದ್ದರಿಂದ ಮನಸ್ಸಿನಲ್ಲಿರುವ ಕಶ್ಮಲವು ದೂರವಾಗುತ್ತದೆ. ಅನಂತರ ಉಪದಿಷ್ಟವಾದ ತತ್ತ್ವವನ್ನು ಗ್ರಹಿಸಲು ಮನಸ್ಸು ಸಮರ್ಥವಾಗುತ್ತದೆ.

ಮನೋಽನುವರ್ತೇತ ದಿವಾನಿಶಂ ಗುರೌ
  ಗುರುರ್ಹಿ ಸಾಕ್ಷಾಚ್ಛಿವ ಏವ ತತ್ತ್ವವಿತ್ |
ನಿಜಾನುವೃತ್ತ್ಯಾ ಪರಿತೋಷಿತೋ ಗುರುಃ
  ವಿನೇಯವಕ್ತ್ರಂ ಕೃಪಯಾ ಹಿ ವೀಕ್ಷತೇ || ೯೨

"ಹಗಲುರಾತ್ರಿಯೂ ಮನಸ್ಸು ಗುರುಭಕ್ತಿಯಲ್ಲಿ ತೊಡಗಿರಬೇಕು. ತತ್ತ್ವಜ್ಞನಾದ ಗುರುವು ಸಾಕ್ಷಾತ್ ಪರಶಿವನೇ ಸರಿ. ತನ್ನ ಸೇವೆಯಿಂದ ಸಂತುಷ್ಟನಾದ ಗುರುವು ಕಾರುಣ್ಯದಿಂದ ಶಿಷ್ಯನ ಮುಖವನ್ನು ನೋಡುವನು.

ಸಾ ಕಲ್ಪವಲ್ಲೀವ ನಿಜೇಷ್ಟಮರ್ಥಂ
  ಫಲತ್ಯವಶ್ಯಂ ಕಿಮಕಾರ್ಯಮಸ್ಯಾಃ |
ಆಜ್ಞಾ ಗುರೋಸ್ತತ್ಪರಿಪಾಲನೀಯಾ
  ಸಾ ಮೋದಮಾನೀಯ ವಿಧಾತುಮಿಷ್ಟಾ || ೯೩

"ಗುರುವಿನ ಆಜ್ಞೆಯು ಕಲ್ಪಲತೆಯಂತೆ ಶಿಷ್ಯನ ಇಷ್ಟಾರ್ಥವನ್ನು ಸಂಪಾದಿಸಿ ಕೊಡುತ್ತದೆ. ಅದಕ್ಕೆ ಅಸಾಧ್ಯವಾದದ್ದು ಯಾವುದಿದೆ ? ಗುರ್ವಾಜ್ಞೆಯನ್ನು ಸದಾ ಪರಿಪಾಲಿಸಬೇಕು. ಅದನ್ನು ಸಂತೋಷದಿಂದ ನೆರವೇರಿಸಬೇಕು.

ಗುರೂಪದಿಷ್ಟಾ ನಿಜದೇವತಾ ಚೇತ್
ಕುಪ್ಯೇತ್ತದಾ ಪಾಲಯಿತಾ ಗುರುಃ ಸ್ಯಾತ್ |
ರುಷ್ಟೇ ಗುರೌ ಪಾಲಯಿತಾ ನ ಕಶ್ಚಿತ್
ಗುರೌ ನ ತಸ್ಮಾಜ್ಜನಯೇತ ಕೋಪಮ್ || ೯೪

"ಗುರುವು ಯಾವ ಇಷ್ಟದೇವತೆಯ ಉಪಾಸನೆಯನ್ನು ಹೇಳುತ್ತಾನೋ ಆ ದೇವತೆಯು ಒಂದುವೇಳೆಕೋಪಿಸಿಕೊಂಡರೆಗುರುವುರಕ್ಷಿಸುತ್ತಾನೆ. ಗುರುವೇಕೋಪಿಸಿಕೊಂಡಾಗಮಾತ್ರ ರಕ್ಷಿಸತಕ್ಕವರು ಯಾರೂ ಇಲ್ಲ. ಆದ್ದರಿಂದ ಗುರುವಿಗೆ ಎಂದೂ ಕೋಪವನ್ನುಂಟು ಮಾಡಬಾರದು.

ಪುಮಾನ್ ಪುಮರ್ಥಂ ಲಭತೇಽಪಿ ಚೋದಿತಂ
ಭಜನ್ನಿವೃತ್ತಃ ಪ್ರತಿಷಿದ್ಧಸೇವನಾತ್ |
ವಿಧಿಂ ನಿಷೇಧಂ ಚ ನಿವೇದಯತ್ಯಸೌ
ಗುರೋರನಿಷ್ಟಚ್ಯುತಿರಿಷ್ಟಸಂಭವಃ || ೯೫

"ಮನುಷ್ಯನು ವಿಹಿತವಾದ್ದನ್ನು ಆಚರಿಸುವುದರಿಂದಲೂ ಪ್ರತಿಷಿದ್ಧವಾದ್ದನ್ನು ತ್ಯಜಿಸುವುದರಿಂದಲೂ ತನಗೆ ಬೇಕಾದ ಪುರಷಾರ್ಥವನ್ನು ಪಡೆಯುತ್ತಾನೆಂಬುದು ನಿಜ. ಆದರೆ ವಿಧಿನಿಷೇಧಗಳನ್ನು ತಿಳಿಸಿಕೊಡತಕ್ಕವನು ಗುರುವೇ. ಆದ್ದರಿಂದ ಇಷ್ಟಪ್ರಾಪ್ತಿಯೂ ಅನಿಷ್ಟ ನಿವೃತ್ತಿಯೂ ಗುರುವಿನಿಂದಲೇ ಆಗಬೇಕಾಗಿದೆ.

ಆರಾಧಿತಂ ದೈವತಮಿಷ್ಟಮರ್ಥಂ
ದದಾತಿ ತಸ್ಯಾಧಿಗಮೋ ಗುರೋಃ ಸ್ಯಾತ್ |
ನೋ ಚೇತ್ಕಥಂ ವೇದಿತುಮೀಶ್ವರೋಽಯಂ
ಅತೀಂದ್ರಿಯಂ ದೈವತಮಿಷ್ಟದಂ ನಃ || ೯೬

"ದೇವತೆಯನ್ನು ಆರಾಧಿಸಿದರೆ ಇಷ್ಟಾರ್ಥವನ್ನು ಆ ದೇವತೆ ಕರುಣಿಸುತ್ತದೆ. ಆದರೆ ದೇವತೆ ಯಾವುದೆಂಬುದು ಗುರುವಿನಿಂದಲೇ ಗೊತ್ತಾಗುತ್ತದೆ. ಹಾಗಿಲ್ಲದಿದ್ದರೆ ದೇವತೆಯು ಇಂದ್ರಿಯಗೋಚರವಲ್ಲದ್ದರಿಂದ ನಮಗೆ ಇಷ್ಟಾರ್ಥವನ್ನು ಸಲ್ಲಿಸುವ ದೇವತೆಯನ್ನು ತಿಳಿದುಕೊಳ್ಳಲು ಮನುಷ್ಯನು ಹೇಗೆ ಸಮರ್ಥನಾದಾನು ?

ತುಷ್ಟೇ ಗುರೌ ತುಷ್ಯತಿ ದೇವತಾಗಣೋ
ರುಷ್ಟೇ ಗುರೌ ರುಷ್ಯತಿ ದೇವತಾಗಣಃ |
ಸದಾಽಽತ್ಮಭಾವೇನ ಸದಾತ್ಮದೇವತಾಃ
ಪಶ್ಯನ್ನಸೌ ವಿಶ್ವಮಯೋ ಹಿ ದೇಶಿಕಃ || ೯೭

ಗುರುವು ಸಂತುಷ್ಟನಾದರೆ ದೇವತಾಸಮೂಹವೇ ಸಂತುಷ್ಟವಾಗುತ್ತದೆ. ಅವನು ಕುಪಿತನಾದರೆ ದೇವತೆಗಳೂ ಸಹ ಕುಪಿತರಾಗುತ್ತಾರೆ. ತನ್ನ ಸದ್ರೂಪವಾದ ಆತ್ಮನು ದೇವತೆಗಳೆಂದು ಅವರೆಲ್ಲರನ್ನೂ ಆತ್ಮಭಾವದಿಂದ ಅರಿತಿರುವ ಆಚಾರ್ಯನು ವಿಶ್ವರೂಪನೇ ಆಗಿರುತ್ತಾನೆ" ಎಂದು ಬೋಧಿಸಿದರು.

ಏವಂ ಪುರಾಣಗುರುಣಾ ಪರಮಾತ್ಮತತ್ತ್ವಂ
ಶಿಷ್ಯೋ ಗುರೋಶ್ಚರಣಯೋರ್ನಿಪಪಾತ ತಸ್ಯ |
ಧನ್ಯೋಽಸ್ಮ್ಯಹಂ ತವ ಗುರೋ ಕರುಣಾಕಟಾಕ್ಷ-
ಪಾತೇನ ಪಾತಿತತಮಾ ಇತಿ ಭಾಷಮಾಣಃ || ೯೮

ಈ ಪ್ರಕಾರವಾಗಿ ಪರಮೇಶ್ವರಸ್ವರೂಪರಾದ ಶ್ರೀ ಶಂಕರಾಚಾರ್ಯರಿಂದ ಆತ್ಮತತ್ತ್ವದ ಉಪದೇಶವನ್ನು ಪಡೆದ ಮಂಡನ ಮಿಶ್ರನು ಗುರುಚರಣಗಳಿಗೆ ಸಾಷ್ಟಾಂಗವೆರಗಿದನು. "ಓ ಗುರುಗಳೆ, ನಿಮ್ಮ ಕರುಣಾಕಟಾಕ್ಷದಿಂದ ನಾನು ಧನ್ಯನಾಗಿದ್ದೇನೆ. ಅಜ್ಞಾನವೆಂಬ ಕತ್ತಲೆಯು ತೊಲಗಿತು" ಎಂದು ಹೇಳುತ್ತ ನಮಸ್ಕರಿಸಿದನು.

ವಿವರಣೆ :ಪುರಾಣಾನಾಂ ಗುರುಃ ಪುರಾಣಗುರುಃ ಎಂದು ಷಷ್ಠೀ ತತ್ಪುರುಷ ಸಮಾಸ. ಪ್ರಾಚೀನರಾದ ಋಷಿಗಳಿಗೂ ಗುರುವಾದ ಪರಮೇಶ್ವರನೆಂದು ಅರ್ಥ. 'ಪೂರ್ವೇಷಾಮಪಿ ಗುರುಃ ಕಾಲೇನಾನವಚ್ಛೇದಾತ್' - ಯೋಗಸೂತ್ರ ೧-೨೬.

ತತಃ ಸಮಾದಿಶ್ಯ ಸುರೇಶ್ವರಾಖ್ಯಾಂ
ದಿಗಂಗನಾಭಿಃ ಕ್ರಿಯಮಾಣ ಸಖ್ಯಾಮ್ |
ಸಚ್ಛಿಷ್ಯತಾಂ ಭಾಷ್ಯಕೃತಶ್ಚ ಮುಖ್ಯಾಂ
ಅವಾಪ ತುಚ್ಛೀಕೃತಧಾತೃಸೌಖ್ಯಾಮ್ || ೯೯

ಅನಂತರ ಆಚಾರ್ಯರು ಆತನಿಗೆ 'ಸುರೇಶ್ವರ' ಎಂದು ನಾಮಕರಣ ಮಾಡಿದರು. ಈ ನಾಮವಾದರೋ ದಿಗಂಗನೆಯರೊಡನೆ ಸ್ನೇಹವನ್ನು ಬೆಳೆಸಿತು. (ಸುರೇಶ್ವರಾಚಾರ್ಯರ ಕೀರ್ತಿಯು ದಶದಿಕ್ಕುಗಳಲ್ಲಿಯೂ ಹರಡಿತು ಎಂದರ್ಥ.) ಸುರೇಶ್ವರರು ಭಾಷ್ಯಕಾರರಿಗೆ ಮುಖ್ಯರಾದ ಸಚ್ಛಿಷ್ಯರೆನಿಸಿಕೊಂಡರು. ಅವರ ಪಾಲಿಗೆ ಈ ಶಿಷ್ಯವೃತ್ತಿಯು ಬ್ರಹ್ಮನ ಸೌಖ್ಯವನ್ನೂ ಮೀರಿಸಿತು.

ಟಿಪ್ಪಣಿ :- ಸಮಾದಿಶ್ಯ = 'ಸಮಾದಿಷ್ಟ' ಎಂದು ಶುದ್ಧಪಾಠವಿರಬಹುದು.

ನಿಖಿಲನಿಗಮಚೂಡಾಚಿಂತಯಾ ಹಂತ ಯಾವತ್
ಸ್ವಮನವಧಿಕಸೌಖ್ಯಂ ನಿರ್ವಿಶನ್ನಿರ್ವಿಶಂಕಮ್ |
ಬಹುತಿಥಮಭಿತೋಽಸೌ ನರ್ಮದಾಂ ನರ್ಮದಾಂ ತಾಂ
ಮಗಧಭುವಿ ನಿವಾಸಂ ನಿರ್ಮಮೇ ನಿರ್ಮಮೇಂದ್ರಃ || ೧೦೦

ಮಮತ್ವರಹಿತರಾದ ಯತಿಗಳಿಗೆ ಈಶ್ವರರಾದ ಶ್ರೀಶಂಕರರು ಸಮಸ್ತ ಉಪನಿಷತ್ತುಗಳ ಚಿಂತನೆಯನ್ನು ಮಾಡುತ್ತ, ಅಮಿತಾನಂದವನ್ನು ಕೊಡುವ ಸ್ವಾತ್ಮಸ್ವರೂಪವನ್ನು ನಿರಾತಂಕವಾಗಿ ಅನುಭವಿಸುತ್ತ, ಮಗಧದೇಶದಲ್ಲಿದ್ದ ನರ್ಮದಾನದಿಯ ತೀರದಲ್ಲಿ ಬಹಳ ದಿನಗಳವರೆಗೆ ಇದ್ದರು.

ಟಿಪ್ಪಣಿ :-ನಿರ್ಮಮೇಂದ್ರಃ ಎಂಬುದಕ್ಕೆ ಸುರೇಶ್ವರಾಚಾರ್ಯರು ಎಂದು ಡಿಂಡಿಮದಲ್ಲಿ ಇದೆ.

ಇತಿ ವಶೀಕೃತ ಮಂಡನಪಂಡಿತಃ
ಪ್ರಣತಸತ್ಕರಣತ್ರಯದಂಡಿತಃ |
ಸಕಲಸದ್ಗುಣಮಂಡಲಮಂಡಿತಃ
ಸ ನಿರಗಾತ್ಕೃತದುರ್ಮತಖಂಡಿತಃ || ೧೦೧

ಈ ಪ್ರಕಾರವಾಗಿ ಆಚಾರ್ಯರು ಮಂಡನ ಪಂಡಿತನನ್ನು ಜಯಿಸಿ ಭಕ್ತರಾದ ಸಜ್ಜನರು(ವಾಕ್ಕಾಯಮನುಸ್ಸುಗಳೆಂಬ) ಕರಣತ್ರಯವನ್ನು ಜಯಿಸುವಂತೆ ಬೋಧಿಸಿದರು. ಸಮಸ್ತ ಸದ್ಗುಣಗಳಿಂದಲೂ ಮಂಡಿತರಾದ ಆಚಾರ್ಯರು ದುರ್ಮತಗಳನ್ನು ಖಂಡಿಸಿ ಅಲ್ಲಿಂದ ನಿರ್ಗಮಿಸಿದರು.

ಟಿಪ್ಪಣಿ :-ದಂಡಿತ, ಖಂಡಿತ -ಎಂಬಲ್ಲಿ ಭಾವೇ ಕ್ತಪ್ರತ್ಯಯ.

ಕುಸುಮಿತವಿವಿಧಪಲಾಶಭ್ರಮ-
ದಲಿಕುಲಗೀತಮಧುರಸ್ವನಮ್ |
ಪಶ್ಯನ್ ವಿಪಿನಮಯಾಸೀತ್
ಆಶಾಂ ಕೀನಾಶಪಾಲಿತಾಮೇಷಃ || ೧೦೨

ಹೂಅರಳಿದ ನಾನಾ ಬಗೆಯ ಮುತ್ತುಗದ ಮರಗಳಲ್ಲಿ ಅಲೆದಾಡುವ ದುಂಬಿಗಳು ಮಧುರಧ್ವನಿಯಿಂದ ಹಾಡುತ್ತಿದ್ದವು. ಅಂತಹ ಅರಣ್ಯವನ್ನು ನೋಡುತ್ತ ಆಚಾರ್ಯರು ಯಮನಿಂದ ಪಾಲಿತವಾದ ದಕ್ಷಿಣದಿಕ್ಕಿಗೆ ಪ್ರಯಾಣಮಾಡಿದರು.

ತತ್ರ ಮಹಾರಾಷ್ಟ್ರಮುಖೇ ದೇಶೇ
ಗ್ರಂಥಾನ್ ಪ್ರಚಾರಯನ್ ಪ್ರಾಜ್ಞತಮಃ |
ಶಮಿತಮತಾಂತರಮಾನಃ ಶನಕೈಃ
ಸನಕೋಪಮೋಽಗಮಚ್ಛ್ರೀಶೈಲಮ್ || ೧೦೩

ದಕ್ಷಿಣ ದಿಕ್ಕಿನಲ್ಲಿದ್ದ ಮಹಾರಾಷ್ಟ್ರ ಮೊದಲಾದ ದೇಶಗಳಲ್ಲಿ ಆಚಾರ್ಯರು ತಮ್ಮ ಭಾಷ್ಯಾದಿಗ್ರಂಥಗಳನ್ನು ಪ್ರಚಾರಮಾಡಿದರು. ಅನ್ಯಮತೀಯರ ದುರಭಿಮಾನವನ್ನು

ಹೋಗಲಾಡಿಸಿ ಸನಕಯೋಗಿಗಳಿಗೆ ಸದೃಶರಾದ ಶ್ರೀಶಂಕರರು ಮೆಲ್ಲಗೆ ಶ್ರೀಶೈಲದ ಕಡೆಗೆ ಹೋದರು.

ಪ್ರಫುಲ್ಲಮಲ್ಲಿಕಾವನಪ್ರಸಂಗಸಂಗತಾಮಿತ -
ಪ್ರಕಾಂಡಗಂಧಬಂಧುರಪ್ರವಾತಧೂತಪಾದಪಮ್ |
ಸದಾಮದದ್ವಿಪಾಧಿಪಪ್ರಹಾರಶೂರಕೇಸರಿ
ವ್ರಜಂ ಭುಜಂಗಭೂಷಣಪ್ರಿಯಂ ಸ್ವಯಂಭುಕೌಶಲಮ್ || ೧೦೪

ಶ್ರೀಶೈಲದಲ್ಲಾದರೋ ಅರಳಿದ ಮಲ್ಲಿಗೆ ಬಳ್ಳಿಗಳ ಸಂಬಂಧದಿಂದ ಸುಗಂಧಿಯಾದ ಮರದ ಕೊಂಬೆಗಳ ಮೇಲೆ ಬೀಸುವಗಾಳಿಯು ಮರಗಳನ್ನು ಅಲ್ಲಾಡಿಸುತ್ತಿತ್ತು. ಯಾವಾಗಲೂ ಮದಿಸಿದ ಆನೆಗಳನ್ನು ಮರ್ದಿಸುವ ಸಿಂಹಗಳು ಅಲ್ಲಿದ್ದವು. ಶ್ರೀಶೈಲವು ಸಹಜವಾದ ಪ್ರಕೃತಿ ಸೌಂದರ್ಯದಿಂದ ರಂಜಿತವಾಗಿ ಸರ್ಪಭೂಷಣನಾದ ಶಿವನಿಗೆ ಪ್ರಿಯವಾದದ್ದು.

ಟಿಪ್ಪಣಿ :- ಸ್ವಯಂಭು ಕೌಶಲಂ = ಬ್ರಹ್ಮನ ಕೌಶಲ ಉಳ್ಳದ್ದು ಎಂದು ಡಿಂಡಿಮದಲ್ಲಿ ಬರೆದಿದೆ. ಆಗ ಸ್ವಯಂಭೂ ಎಂದು ದೀರ್ಘವಾದ'ಊ'ಕಾರವಿರಬೇಕಾಗುತ್ತದೆ. ಆದ್ದರಿಂದ ಸ್ವಯಂಭು ಎಂದರೆ ಸ್ವಯಂಸಿದ್ಧವಾದ-ಪ್ರಕೃತಿಸಹಜವಾದ ಎಂಬ ಅರ್ಥವನ್ನು ಇಲ್ಲಿ ಗ್ರಹಿಸಿದೆ. ಪಂಚಚಾಮರವೃತ್ತ.

ಕಲಿಕಲ್ಮಷ ಭಂಗಾಯಾಂ ಸೋಽದ್ರೇ -
ರಾರಾಚ್ಚಲತ್ತರಂಗಾಯಾಮ್ |
ಅಧರೀಕೃತತುಂಗಾಯಾಂ
ಸಸ್ನೌ ಪಾತಾಲಗಾಮಿಗಂಗಾಯಾಮ್ || ೧೦೫

ಆ ಶ್ರೀಶೈಲದ ಬಳಿಯಲ್ಲಿ ಪಾತಾಳಗಾಮಿಯಾದ ಗಂಗೆಯೆಂದು ಹೆಸರು ಪಡೆದ ಜಲಾಶಯದಲ್ಲಿ ಆಚಾರ್ಯರು ಸ್ನಾನಮಾಡಿದರು. ಅದು ಕಲಿಕಲ್ಮಷವನ್ನು ಭಗ್ನಗೊಳಿಸತಕ್ಕ ಪವಿತ್ರವಾದ ತೀರ್ಥ. ಅದರಲ್ಲಿ ನೀರಿನ ಅಲೆಗಳು ಎದ್ದೆದ್ದು ಬರುತ್ತಿದ್ದವು. ಆ ಪರ್ವತಕ್ಕಿಂತಲೂ ಅದು ಪಾವನತರವಾದ ತೀರ್ಥ.

ಟಿಪ್ಪಣಿ :- ತುಂಗ = ಪರ್ವತ. 'ತುಂಗಃ ಪುಂನಾಗನಗಯೋಸ್ತುಂಗಃ ಸ್ಯಾದುನ್ನತೇಽನ್ಯವತ್'.

ನಮನ್ಮೋಹಭಂಗಂ ನಭೋಲೇಹಿಶೃಂಗಂ
ತ್ರುಟತ್ಪಾಪಸಂಗಂ ರಟತ್ಪಕ್ಷಿಭೃಂಗಮ್ |
ಸಮಾಶ್ಲಿಷ್ಟಗಂಗಂ ಪ್ರಹೃಷ್ಟಾಂತರಂಗಂ
ತಮಾರುಹ್ಯ ತುಂಗಂ ದದರ್ಶೇಶಲಿಂಗಮ್ || ೧೦೬

ಆ ಶೈಲವಾದರೋ ಭಕ್ತರ ಅಜ್ಞಾನವನ್ನು ಹೋಗಲಾಡಿಸಿ ಅವರ ಪಾಪಲೇಶವನ್ನು ತೊಡೆದು ಹಾಕುವಂತಹುದು. ಗಗನಗಾಮಿಯಾದ ಶಿಖರದಿಂದ ಶೋಭಿಸುತ್ತ ಹಕ್ಕಿಗಳ ಕಲಕಲರವದಿಂದಲೂ ದುಂಬಿಗಳ ಜೇಂಕಾರದಿಂದಲೂ ರಮ್ಯವಾಗಿತ್ತು. ಆಚಾರ್ಯರು ಸಂತುಷ್ಟಚಿತ್ತರಾಗಿ ಮೇಲೆ ಹತ್ತಿ ಹೋಗಿ ಗಂಗಾಧಾರಿಯಾದ ಈಶ್ವರಲಿಂಗವನ್ನು ಸಂದರ್ಶಿಸಿದರು.

ಪ್ರಣಮದ್ಭವಬೀಜಭರ್ಜನಂ
ಪ್ರಣೆಪತ್ಯಾಮೃತ ಸಂಪದಾರ್ಜನಮ್ ।
ಪ್ರಮುಮೋದ ಸ ಮಲ್ಲಿಕಾರ್ಜುನಂ
ಭ್ರಮರಾಂಬಾಸಚಿವಂ ನತಾರ್ಜುನಮ್ ॥ ೧೦೭

ನಮಿಸುವ ಭಕ್ತರ ಸಂಸಾರಬೀಜವನ್ನೇ ಹುರಿದು ಹಾಕತಕ್ಕವನೂ ಮೋಕ್ಷಸಂಪತ್ತನ್ನು ಅನುಗ್ರಹಿಸತಕ್ಕವನೂ ಅರ್ಜುನನಿಂದ ನಮಸ್ಕೃತನೂ ಭ್ರಮರಾಂಬಾಸಮೇತನೂ ಆದ ಶ್ರೀಮಲ್ಲಿಕಾರ್ಜುನನಿಗೆ ಸಾಷ್ಟಾಂಗವಂದನೆಗಳನ್ನರ್ಪಿಸಿ ಆಚಾರ್ಯರು ಪರಮಾನಂದ ವನ್ನೈದಿದರು.

ತೀರರುಹೈಃ ಕೃಷ್ಣಾಯಾಸ್ತೀರೇಽವಾತ್ಸೀತ್ತಿರೋಹಿತೋಷ್ಣಾಯಾಃ ।
ಆವರ್ಜಿತತೃಷ್ಣಾಯಾ ಆಚಾರ್ಯೇಂದ್ರೋ ನಿರಸ್ತಕಾಷ್ಣ್ಯಾಯಾಃ ॥೧೦೮

ಅನಂತರ ತೀರದಲ್ಲಿ ಬೆಳೆದ ಮರಗಳಿಂದ ಉಷ್ಣತೆಯನ್ನು ಹೋಗಲಾಡಿಸತಕ್ಕದ್ದೂ ತನ್ನ ಸೊಬಗಿನಿಂದ ನೋಡಬೇಕೆಂಬ ಆಸೆಯನ್ನು ಹೆಚ್ಚಿಸತಕ್ಕದ್ದೂ ಪಾಪವನ್ನು ತೊಡೆದು ಹಾಕತಕ್ಕದ್ದೂ ಆದ ಕೃಷ್ಣಾನದಿಯ ತೀರದಲ್ಲಿ ಆಚಾರ್ಯರು ಕೆಲವು ದಿನ ತಂಗಿದರು.

ತತ್ರಾತಿಚಿತ್ರಪದಮತ್ರಭವಾನ್ ಪವಿತ್ರ
ಕೀರ್ತಿರ್ವಿಚಿತ್ರಸುಚರಿತ್ರನಿಧಿಃ ಸುಧೀಂದ್ರಾನ್ ।
ಅಗ್ರಾಹಯತ್ಕೃತಮಸದ್ಗ್ರಹನಿಗ್ರಹಾರ್ಥಂ
ಅಗ್ರ್ಯಾನ್ ಸಮಗ್ರಸುಗುಣಾನ್ ಮಹದಗ್ರಯಾಯೀ ॥ ೧೦೯

ಪವಿತ್ರಕೀರ್ತಿಶಾಲಿಗಳೂ ವಿಚಿತ್ರ ಸಚ್ಚಾರಿತ್ರನಿಧಿಗಳೂ ಮಹಾಪುರುಷರಲ್ಲಿ ಅಗ್ರಗಣ್ಯರೂ ಆದ ಪೂಜ್ಯಭಗವತ್ಪಾದರು ಅಲ್ಲಿ ಗುಣಶಾಲಿಗಳೂ ಶ್ರೇಷ್ಠರೂ ಆದ ವಿದ್ವಾಂಸರಿಗೆ ತಾವು ಬರೆದ ಭಾಷ್ಯಾದಿಗ್ರಂಥಗಳನ್ನು ಬೋಧಿಸುತ್ತಿದ್ದರು. ಆ ಗ್ರಂಥಗಳು ತಪ್ಪು ತಿಳಿವಳಿಕೆಯಿಂದ ದುರಭಿಮಾನಿಗಳಾದವರನ್ನು ನಿಗ್ರಹಿಸುವುದಕ್ಕೋಸ್ಕರ ರಚಿತವಾದವುಗಳು.

ಅಧ್ಯಾಪಯಂತಮಸದರ್ಥ ನಿರಾಸಪೂರ್ವಂ
ಕಿಂತ್ವನ್ಯತೀರ್ಥಯಶಸಂ ಶ್ರುತಿಭಾಷ್ಯಜಾತಮ್ |
ಆಕ್ಷಿಪ್ಯ ಪಾಶುಪತವೈಷ್ಣವ ವೀರಶೈವ-
ಮಾಹೇಶ್ವರಾಶ್ಚ ವಿಜಿತಾ ಹಿ ಸುರೇಶ್ವರಾದ್ಯೈಃ || ೧೧೦

ಅಲ್ಲಿ ಆಚಾರ್ಯರು ತಮ್ಮ ಉಪನಿಷದ್ಭಾಷ್ಯಗಳನ್ನು ಶಿಷ್ಯರಿಗೆ ಬೋಧಿಸುತ್ತಿದ್ದರು. ಆಗ ಅನ್ಯಮತದವರು ಉಪನಿಷತ್ತುಗಳಿಗೆ ಹೇಳುವ ತಪ್ಪುತಪ್ಪಾದ ಅರ್ಥಗಳನ್ನು ನಿರಾಕರಿಸುತ್ತಿದ್ದರು.(ಸಾಂಖ್ಯಾದಿದ್ವೈತ ಮತಗಳಿಗಿಂತ) ಬೇರೆಯಾದ ಅದ್ವೈತಶಾಸ್ತ್ರವನ್ನು ಬೋಧಿಸುತ್ತಾರೆಂದು ಅವರ ಕೀರ್ತಿಯು ಎಲ್ಲೆಡೆಯೂ ಹರಡಿತು. ಆಗ ಪಾಶುಪತರೂ ವೈಷ್ಣವರೂ ವೀರಶೈವರೂ ಮಾಹೇಶ್ವರರೂ ಆಚಾರ್ಯರನ್ನು ಆಕ್ಷೇಪಿಸಿದರು. ಶ್ರೀಸುರೇಶ್ವರರೇ ಮೊದಲಾದ ಶಿಷ್ಯರಿಂದಲೇ ಅವರೆಲ್ಲರೂ ಪರಾಜಿತರಾದರು.

ಕೇಚಿದ್ವಿಸೃಜ್ಯ ಮತಮಾತ್ಮ್ಯಮಮುಷ್ಯ ಶಿಷ್ಯ -
ಭಾವಂ ಗತಾ ವಿಗತಮತ್ಸರ ಮಾನದೋಷಾಃ |
ಅನ್ಯೇ ತು ಮನ್ಯುವಶಮೇತ್ಯ ಜಘನ್ಯಚಿತ್ತಾ
ನಿನ್ಯುಃ ಕ್ಷಣಂ ನಿಧನಮಸ್ಯ ನಿರೀಕ್ಷಮಾಣಾಃ || ೧೧೧

ಪರಾಜಿತರಾದ ಅವರಲ್ಲಿ ಕೆಲವರಿಗೆ ಮಾತ್ಸರ್ಯ, ದುರಭಿಮಾನ - ಮುಂತಾದ ದೋಷಗಳಿರಲಿಲ್ಲ. ಅವರು ತಮ್ಮ ಮತವನ್ನು ತ್ಯಜಿಸಿ ಶ್ರೀಶಂಕರರ ಶಿಷ್ಯರಾದರು. ಇನ್ನು ಕೆಲವರು ಕ್ಷುದ್ರಬುದ್ಧಿಯವರಾಗಿದ್ದರಿಂದ ಕ್ರುದ್ಧರಾಗಿ, ಶ್ರೀಶಂಕರರ ನಾಶವು ಯಾವಾಗ ಆದೀತೆಂದು ಹಾರೈಸುತ್ತ ಪ್ರತಿಕ್ಷಣವನ್ನೂ ಕಳೆಯುತ್ತಿದ್ದರು.

ವೇದಾಂತೀಕೃತನೀಚಶೂದ್ರವಚಸೋ ವೇದಾಃ ಸ್ವಯಂ ಕಲ್ಪನಾಃ
ಪಾಪಿಷ್ಠಾಃ ಸ್ವಮಪಿ ತ್ರಯೀಪಥಮಪಿ ಪ್ರಾಯೋ ದಹಂತಃ ಖಲಾಃ |
ಸಾಕ್ಷಾದ್‌ಬ್ರಹ್ಮಣಿ ಶಂಕರೇ ವಿದಧತಿ ಸ್ಪರ್ಧಾನಿಬದ್ಧಾಂ ಮತಿಂ
ಕೃಷ್ಣೇ ಪೌಂಡ್ರಕವತ್ತಥಾ ನ ಚರಮಾಂ ಕಿಂ ತೇ ಲಭಂತೇ ಗತಿಮ್ ||

ಆ ಪಾಪಿಷ್ಠರು ಕೆಲವು ಶೂದ್ರವಾಕ್ಯಗಳನ್ನೇ ವೇದಾಂತವೆಂದು ನಂಬಿ ವೇದವು ಯಾರಿಂದಲೋ ಸ್ವಯಂಕಲ್ಪಿತವೆಂದು ಹೇಳುತ್ತಿದ್ದರು. ಆ ದುಷ್ಟರು ಆತ್ಮಸ್ವರೂಪವನ್ನೂ ವೈದಿಕಮಾರ್ಗವನ್ನೂ ನಿಂದಿಸಿ ಸುಟ್ಟುಹಾಳುಮಾಡುತ್ತಿದ್ದರು. ಆ ಜನರು ಸಾಕ್ಷಾತ್ ಪರಮಾತ್ಮಸ್ವರೂಪರಾದ ಶ್ರೀಶಂಕರರನ್ನೂ ಆಕ್ಷೇಪಿಸುವ ಸ್ಪರ್ಧಾಬುದ್ಧಿಯನ್ನು ತಳೆದರಲ್ಲ!ಪೌಂಡ್ರಕನು ಶ್ರೀಕೃಷ್ಣನೊಡನೆ ಸ್ಪರ್ಧಿಸಿದಂತೆ ಅವರಿಗೆ ಅಂತ್ಯಾವಸ್ಥೆಯು ಬರದೆ ಇದ್ದೀತೆ ?

ಟಿಪ್ಪಣಿ :- 'ವೇದಃ ಸ್ವಯಂಕಲ್ಪನಾಃ, ವೇದಾಃ ಸ್ವಂಯಂಕಲ್ಪನಾಃ ' ಎಂದು ಎರಡು ವಿಧವಾಗಿ ಶ್ಲೋಕದಲ್ಲಿ ಮುದ್ರಿತ ಪಾಠವಿದೆ. ಉಭಯಪಾಠಗಳಲ್ಲಿಯೂ 'ಇತಿ ವದಂತಃ' ಎಂದು ಅಧ್ಯಾಹಾರ ಮಾಡಿಕೊಳ್ಳಬೇಕು. ತಾನೇ ಶ್ರೀಕೃಷ್ಣನೆಂದು ನಟಿಸುತ್ತಿದ್ದ ಪೌಂಡ್ರಕನು ಶ್ರೀಕೃಷ್ಣನಿಂದ ಹತನಾದನು.

ವಾಣೀ ಕಾಣಭುಜೀ ಚ ನೈವ ಗಣಿತಾ ಲೀನಾ ಕ್ವಚಿತ್ಕಾಪಿಲೀ
ಶೈವಂ ಚಾಶಿವಭಾವಮೇತಿ ಭಜತೇ ಗರ್ಹಾಪದಂ ಚಾರ್ಹತಮ್ |
ದೌರ್ಗಂ ದುರ್ಗತಿಮಶ್ನುತೇ ಭುವಿ ಜನಃ ಪುಷ್ಣಾತಿ ಕೋ ವೈಷ್ಣವಂ
ನಿಷ್ಣಾತೇಷು ಯತೀಶಸೂಕ್ತಿಷು ಕಥಾಕೇಲೀಕೃತಾಸೂಕ್ತಿಷು || ೧೧೩

ಈ ಯತೀಂದ್ರರ ಸೂಕ್ತಿಗಳಲ್ಲಿ ನಿಷ್ಣಾತರಾದ ಪದ್ಮಪಾದಾದಿ ಶಿಷ್ಯರು ಇರುವಾಗ ಅನ್ಯಶಾಸ್ತ್ರೋಕ್ತಿಗಳು ಲೀಲಾಕಥೆಗಳಂತೆ ಅಗಣ್ಯಗಳಾದವು. ಕಣಾದರ ವಾಣಿಯು ಗಣನೆಗೇ ಬರಲಿಲ್ಲ. ಕಪಿಲರ ಸಾಂಖ್ಯವಾದವು ಎಲ್ಲಿಯೋ ಅಡಗಿತು. ಶೈವಮತವು ಅಶುಭವೆನಿಸಿತು. ಜೈನಶಾಸ್ತ್ರವು ನಿಂದಾಸ್ಪದವಾಯಿತು. ದುರ್ಗಾಭಕ್ತರ ಶಾಕ್ತಮತವು ದುರ್ಗತಿಗೆ ಈಡಾಯಿತು. ಇನ್ನು ಯಾವನು ತಾನೇ ವೈಷ್ಣವಮತವನ್ನು ಅವಲಂಬಿಸಿ ಅದನ್ನು ಬೆಳೆಸಿಯಾನು ?

ತಥಾಗತಕಥಾ ಗತಾ ತದನುಯಾಯಿ ನೈಯಾಯಿಕಂ
ವಚೋಽಜನಿ ನ ಚೋದಿತೋ ವದತಿ ಜಾತು ತೌತಾತಿತಃ |
ವಿದಗ್ಧತಿ ನ ದಗ್ಧಧೀರ್ವಿದಿತಚಾಪಲಂ ಕಾಪಿಲಂ
ವಿನಿರ್ದಯ ವಿನಿರ್ದಲದ್ವಿಮತಸಂಕರೇ ಶಂಕರೇ || ೧೧೪

ಶ್ರೀಶಂಕರರು ಪರರ ದುರ್ಮತ ಸಾಂಕರ್ಯವನ್ನು ನಿರ್ದಯವಾಗಿ ಮರ್ದಿಸುತ್ತಿರಲಾಗಿ ಬೌದ್ಧರ ಕಥೆಯು ಎಲ್ಲಿಗೋ ಓಡಿಹೋಯಿತು. ನೈಯಾಯಿಕ ಮತವು ಬೌದ್ಧಮತವನ್ನು ಹಿಂಬಾಲಿಸಿತು. ಕೌಮಾರಿಲ ಮತಸ್ಥನನ್ನು ಕೇಳಿದರೂ ಅವನು ಎಂದಿಗೂ ಮಾತಾಡುವುದೇ ಇಲ್ಲ ! ಅಪ್ರತಿಭನಾದ ಸಾಂಖ್ಯನು ಕಪಿಲ ಮತವನ್ನು ಚಾಪಲ್ಯಕ್ಕಾಗಿಯೂ ಹೇಳಲು ಪ್ರಯತ್ನಿಸಲಾರ!

ಇತಿ ಶ್ರೀ ಮಾಧವೀಯೇ ತತ್ಕಲಾಜ್ಞತ್ವ ಪ್ರಪಂಚನಮ್ |
ಸಂಕ್ಷೇಪ ಶಂಕರಜಯೇ ಸರ್ಗೋಽಯಂ ದಶಮೋಽಭವತ್ ||

ಇಲ್ಲಿಗೆ ಶ್ರೀ ಮಾಧವೀಯ ಸಂಕ್ಷೇಪ ಶಂಕರವಿಜಯದಲ್ಲಿ ಆಚಾರ್ಯರ ಪಾಂಡಿತ್ಯವನ್ನು ಪ್ರದರ್ಶಿಸುವ ಹತ್ತನೆಯ ಸರ್ಗವು ಸಮಾಪ್ತ ವಾಯಿತು.

✤ ✤ ✤

## ಏಕಾದಶಃ ಸರ್ಗಃ

## ಉಗ್ರಭೈರವಪ್ರಸಂಗಃ

ಕಾಪಾಲಿಕನು ಶ್ರೀಶಂಕರರ ಶಿರಸ್ಸನ್ನು ಯಾಚಿಸುವುದು. ಆಚಾರ್ಯರ ಒಪ್ಪಿಗೆ. ಆತನು ಶಿರಸ್ಸನ್ನು ಕತ್ತರಿಸಲು ಉದ್ಯುಕ್ತನಾದಾಗ, ಪದ್ಮಪಾದರು ನರಸಿಂಹಾವತಾರವನ್ನು ತಾಳಿ ಕಾಪಾಲಿಕನನ್ನು ಸೀಳಿಹಾಕುವುದು. ಆಚಾರ್ಯರಿಂದ ನರಸಿಂಹಸ್ವಾಮಿಯ ಸ್ತುತಿ.

ತತ್ರೈಕದಾಚ್ಛಾದಿತ ನೈಜದೋಷಃ
ಪೌಲಸ್ತ್ಯವತ್ಕಲ್ಪಿತಸಾಧುವೇಷಃ |
ನಿರ್ಮಾನಮಾಯಂ ಸ್ಥಿತಕಾರ್ಯಶೇಷಃ
ಕಾಪಾಲಿಕಃ ಕಶ್ಚಿದನಲ್ಪದೋಷಃ || ೧

ಹೀಗಿರಲು ಆ ದೇಶದಲ್ಲಿ ಒಂದುಸಲ ಬಹುದುಷ್ಟನಾದ ಕಾಪಾಲಿಕನೊಬ್ಬನು ಶ್ರೀಶಂಕರರ ಬಳಿಗೆ ಬಂದನು. ಆತನು ರಾವಣ ಸಂನ್ಯಾಸಿಯಂತೆ ತನ್ನ ದುರುದ್ದೇಶವನ್ನು ಮರೆಮಾಡಿ, ಒಂದಾನೊಂದು ಕಾರ್ಯಶೇಷವನ್ನು ಸಾಧಿಸಿಕೊಳ್ಳುವುದಕ್ಕಾಗಿ, ಸಾಧುವಿನಂತೆ ನಟಿಸುತ್ತ ಬಂದು ಆಚಾರ್ಯರನ್ನು ಕಂಡನು. ಆಚಾರ್ಯರಾದರೋ ಅಭಿಮಾನವನ್ನು ತೊರೆದವರು. ಕಪಟವನ್ನರಿಯದವರು.

ಅಸಾವಪಶ್ಯನ್ಮದನಾದ್ಯವಶ್ಯಂ
ವಶ್ಯೇಂದ್ರಿಯಾಶ್ಚೈರ್ಮುನಿಭಿರ್ವಿಮೃಗ್ಯಮ್ |
ಆದಿಶ್ಯ ಭಾಷ್ಯಂ ಸಪದಿ ಪ್ರಶಸ್ಯಂ
ಆಸೀನಮಾಶ್ರಿತ್ಯ ಮುನಿಂ ರಹಸ್ಯಮ್ || ೨

ಜಿತೇಂದ್ರಿಯರಾದ ಮುನಿಗಳೂ ಸಹ ಹುಡುಕಿಕೊಂಡು ಬರಬೇಕಾದವರೂ ಕಾಮಕ್ರೋಧಾದಿಗಳನ್ನು ಜಯಿಸಿದವರೂ ಆದ ಶ್ರೀಶಂಕರರು ಪ್ರಶಂಸನೀಯವಾದ ತಮ್ಮ ಸೂತ್ರಭಾಷ್ಯವನ್ನು ಪ್ರವಚನಮಾಡಿ ಏಕಾಂತದಲ್ಲಿ ಕುಳಿತಿದ್ದರು. ಆ ಮುನಿಗಳನ್ನು ಕಾಪಾಲಿಕನು ನೋಡಿದನು.

ದೃಷ್ಟ್ವೈವ ಹೃಷ್ಟಃ ಸ ಚಿರಾದಭೀಷ್ಟಂ
ನಿರ್ಧಾರ್ಯ ಸಂಸಿದ್ಧಮಿವ ಸ್ವಮಿಷ್ಟಮ್ |
ಮಹದ್ವಿಶಿಷ್ಟಂ ನಿಜಲಾಭತುಷ್ಟಂ
ವಿಸ್ಪಷ್ಟಮಾಚಷ್ಟ ಚ ಕೃತ್ಯಶಿಷ್ಟಮ್ || ೩

ಮಹಾತ್ಮರಿಗೂ ಪೂಜ್ಯರಾದ ಭಗವತ್ಪಾದರು ನಿಜಾತ್ಮಲಾಭದಿಂದ ಸಂತುಷ್ಟರಾಗಿ ಒಬ್ಬರೇ ಕುಳಿತಿರುವುದನ್ನು ವೀಕ್ಷಿಸಿದ ಕಾಪಾಲಿಕನಿಗೆ ಹರ್ಷವಾಯಿತು. ಅವರನ್ನು ಕಾಣುವುದಕ್ಕಾಗಿ ಹವಣಿಸಿದ್ದ ಕಾಪಾಲಿಕನು ಬಹಳ ಕಾಲದಮೇಲೆ ಅಭೀಷ್ಟವಾದ ಸಂದರ್ಭವು ಒದಗಿತೆಂದು ಭಾವಿಸಿ, ತನ್ನ ಇಷ್ಟವು ನೆರವೇರಿಯೇ ಹೋಯಿತೆಂದು ನಿರ್ಧರಿಸಿ, ತನ್ನ ಕಾರ್ಯಶೇಷವನ್ನು ಸ್ಪಷ್ಟವಾಗಿ ಆಚಾರ್ಯರಿಗೆ ತಿಳಿಸಿದನು.

ಗುಣಾಂಸ್ತ್ವಾಕರ್ಣ್ಯ ಮುನೇಽನವದ್ಯಾನ್
ಸಾರ್ವಜ್ಞ್ಯಸೌಶೀಲ್ಯದಯಾಲುತಾದ್ಯಾನ್ |
ದ್ರಷ್ಟುಂ ಸಮುತ್ಕಂಠಿತ ಚಿತ್ತವೃತ್ತಿಃ
ಭವಂತಮಾಗಾಂ ವಿದಿತಪ್ರವೃತ್ತಿಃ || ೪

"ಓ ಮುನಿಗಳೆ, ತಮ್ಮಲ್ಲಿರುವ ಸರ್ವಜ್ಞತೆ, ಸೌಶೀಲ್ಯ, ಕಾರುಣ್ಯಾದಿ ಪ್ರಶಂಸನೀಯ ಸದ್ಗುಣಗಳನ್ನು ಕೇಳಿ, ತಮ್ಮನ್ನು ನೋಡಬೇಕೆಂಬ ಮಹತ್ತರವಾದ ಆಸೆ ನನ್ನ ಮನಸ್ಸಿನಲ್ಲಿ ಮೂಡಿತ್ತು! ಇಲ್ಲಿ ಕಾರ್ಯಪ್ರವೃತ್ತರಾಗಿ ಇದ್ದೀರೆಂಬುದನ್ನು ತಿಳಿದು ತಮ್ಮ ಬಳಿಗೆ ಬಂದೆನು.

ತ್ವಮೇಕ ಏವಾತ್ರ ನಿರಸ್ತಮೋಹಃ
ಪರಾಕೃತದ್ವೈತಿವಚಃ ಸಮೂಹಃ |
ಆಭಾಸಿ ದೂರೀಕೃತದೇಹಮಾನಃ
ಶುದ್ಧಾದ್ವಯೇ ಯೋಜಿತಸರ್ವಮಾನಃ || ೫

"ಸಮಸ್ತಮೋಹಗಳನ್ನೂ ನೀಗಿದವರೆಂದರೆ ನೀವು ಒಬ್ಬರೇ. ದ್ವೈತಿಗಳ ವಚನರಾಶಿಯನ್ನು ಖಂಡಿಸಿಬಿಟ್ಟಿದ್ದೀರಿ. ಸಕಲ ಪ್ರಮಾಣಗಳನ್ನೂ ಶುದ್ಧವಾದ ಅದ್ವೈತ ತತ್ತ್ವದಲ್ಲಿ ಸಮನ್ವಯಗೊಳಿಸಿ ಯೋಜಿಸಿದ್ದೀರಿ. ಆದ್ದರಿಂದ ದೇಹಾಭಿಮಾನವನ್ನು ತೊಡೆದುಹಾಕಿ ವಿರಾಜಿಸುತ್ತಿದ್ದೀರಿ.

ಪರೋಪಕೃತ್ಯೈ ಪ್ರಗೃಹೀತಮೂರ್ತಿಃ
ಅಮರ್ತ್ಯಲೋಕೇಷ್ವಪಿ ಗೀತಕೀರ್ತಿಃ |
ಕಟಾಕ್ಷಲೇಶಾರ್ದಿತ ಸಜ್ಜನಾರ್ತಿಃ
ಸದುಕ್ತಿಸಂಪಾದಿತ ವಿಶ್ವಪೂರ್ತಿಃ || ೬

"ಪರೋಪಕಾರಕ್ಕಾಗಿಯೇ ಈ ದೇಹವನ್ನು ಧರಿಸಿದ್ದೀರಿ. ಸ್ವರ್ಗಾದಿಲೋಕಗಳಲ್ಲಿಯೂ ನಿಮ್ಮ ಕೀರ್ತಿಯನ್ನು ಹಾಡುತ್ತಿದ್ದಾರೆ. ಬರಿಯ ಕಟಾಕ್ಷಪಾತದಿಂದಲೇ ಸಜ್ಜನರ ಕಷ್ಟವನ್ನು ನೀಗಿಸಬಲ್ಲಿರಿ. ನಿಮ್ಮ ಸೂಕ್ತಿಗಳಿಂದ ಸಮಸ್ತರ ಅಭೀಷ್ಟಗಳನ್ನು ಪೂರೈಸುತ್ತಿದ್ದೀರಿ.

ಗುಣಾಕರತ್ವಾದ್ಭುವನೈಕಮಾನ್ಯಃ
ಸಮಸ್ತವಿತ್ತ್ವಾದಭಿಮಾನಶೂನ್ಯಃ |
ವಿಜಿತ್ವರತ್ವಾದ್ಗಲಹಸ್ತಿತಾನ್ಯಃ
ಸ್ವಾತ್ಮಪ್ರದತ್ವಾಚ್ಚ ಮಹಾವದಾನ್ಯಃ || ೭

"ಮಹಾತ್ಮರೆ, ಗುಣನಿಧಿಗಳಾದ್ದರಿಂದ ಜಗನ್ಮಾನ್ಯರೂ ಸರ್ವಜ್ಞರಾದ್ದರಿಂದ ಅಭಿಮಾನಶೂನ್ಯರೂ ಆದವರು ನೀವು. ವಿಜಯಶಾಲಿಗಳಾಗಿ ಅನ್ಯಮತಗಳನ್ನು ದೂರಕ್ಕೆ ದೂಡಿದವರೂ ಆತ್ಮಾರ್ಪಣವನ್ನೇ ಮಾಡತಕ್ಕವರಾದ್ದರಿಂದ ಪರಮೋದಾರಿಗಳೂ ಆದವರು ನೀವು.

ಅಶೇಷಕಲ್ಯಾಣಗುಣಾಲಯೇಷು
ಪರಾವರಜ್ಞೇಷು ಭವಾದೃಶೇಷು |
ಕಾರ್ಯಾರ್ಥಿನಃ ಕ್ವಾಪ್ಯನವಾಪ್ಯ ಕಾಮಂ
ನ ಯಾಂತಿ ದುಷ್ಪ್ರಾಪಮಪಿ ಪ್ರಕಾಮಮ್ || ೮

"ಅಶೇಷಕಲ್ಯಾಣ ಗುಣಗಳಿಂದ ತುಂಬಿದವರೂ ಆತ್ಮಜ್ಞಾನಿಗಳೂ ಆದ ನಿಮ್ಮಂಥವರ ಬಳಿಗೆ ಕಾರ್ಯಾರ್ಥಿಗಳಾಗಿ ಬಂದವರು, ಎಷ್ಟು ದುರ್ಲಭವಾದ ಬಯಕೆಯನ್ನೂ ಸಹ ಯಥೇಷ್ಟವಾಗಿ ಪಡೆಯದೆ ಎಂದಿಗೂ ಹೋಗುವುದಿಲ್ಲ.

ತಸ್ಮಾನ್ಮಹತ್ಕಾರ್ಯಮಹಂ ಪ್ರಪದ್ಯ
ನಿರ್ವರ್ತಿತಂ ಸರ್ವವಿದಾ ತ್ವಯಾಽದ್ಯ |
ಕಪಾಲಿನಂ ಪ್ರೀಣಯಿತುಂ ಯತಿಷ್ಯೇ
ಕೃತಾರ್ಥಮಾತ್ಮಾನಮತಃ ಕರಿಷ್ಯೇ || ೯

"ಆದ್ದರಿಂದ, ಮುನಿಗಳೆ, ಒಂದಾನೊಂದು ಮಹಾಕಾರ್ಯವನ್ನು ಮಾಡಲು ತೊಡಗಿರುವೆನು. ಸರ್ವಜ್ಞರಾದ ನಿಮ್ಮಿಂದ ಅದು ಪೂರ್ತಿಯಾಗಿ ನೆರವೇರುವುದೆಂದು ನಂಬಿದ್ದೇನೆ. ಕಪಾಲಿಯಾದ ಭೈರವನನ್ನು ಪ್ರಸನ್ನಗೊಳಿಸಲು ಯತ್ನಿಸುವೆನು. ನಿಮ್ಮಿಂದ ನಾನು ಕೃತಾರ್ಥನಾಗುವೆನು!

ಅನೇನ ದೇಹೇನ ಸಹೈವ ಗಂತುಂ
ಕೈಲಾಸಮೀಶೇನ ಸಮಂ ಚ ರಂತುಮ್ |
ಅತೋಽಷಯಂ ತೀವ್ರತಪೋಭಿರುಗ್ರಂ
ಸುದುಷ್ಕರೈರಬ್ದಶತಂ ಸಮಗ್ರಮ್ || ೧೦

"ಈ ದೇಹದೊಡನೆಯೇ ಕೈಲಾಸಕ್ಕೆ ಹೋಗಬೇಕೆಂದೂ ಪರಮೇಶ್ವರನ ಜೊತೆಯಲ್ಲಿ ಆನಂದಿಸುತ್ತಿರಬೇಕೆಂದೂ ನಾನು ಸಂಕಲ್ಪಿಸಿದೆನು. ಆದ್ದರಿಂದ ದುಷ್ಕರವಾದ

ಕಠೋರತಪಸ್ಸುಗಳನ್ನು ನೂರುವರ್ಷದವರೆಗೆ ಆಚರಿಸಿ ಉಗ್ರಭೈರವನನ್ನು ಸಂತೋಷಗೊಳಿಸಿದೆನು.

ತುಷ್ಟೋಽಬ್ರವೀನ್ಮಾಂ ಗಿರಿಶಃ ಪುಮರ್ಥಂ
ಅಭೀಪ್ಸಿತಂ ಪ್ರಾಪ್ಸ್ಯಸಿ ಮತ್ಪ್ರಿಯಾರ್ಥಮ್ ।
ಜುಹೋಷಿ ಚೇತ್ಸರ್ವವಿದಃ ಶಿರೋ ವಾ
ಹುತಾಶನೇ ಭೂಮಿಪತೇಃ ಶಿರೋ ವಾ ॥ ೧೧

"ಸಂತುಷ್ಟನಾದ ರುದ್ರನು ಪ್ರತ್ಯಕ್ಷನಾಗಿ - ನೀನು ಅಭೀಪ್ಸಿತವಾದ ಪುರುಷಾರ್ಥವನ್ನು ಪಡೆಯುವೆ. ಆದರೆ ನನ್ನ ಸಂತುಷ್ಟಿಗಾಗಿ ನೀನು ಸರ್ವಜ್ಞನಾದವನೊಬ್ಬನ ಶಿರಸ್ಸನ್ನಾಗಲಿ, ಒಬ್ಬ ರಾಜನ ಶಿರಸ್ಸನ್ನಾಗಲಿ ಅಗ್ನಿಯಲ್ಲಿ ಹೋಮಮಾಡಿದರೆ ಮಾತ್ರ ಇಷ್ಟಾರ್ಥವು ಲಭಿಸುವುದು.

ಏತಾವದುಕ್ತ್ವಾಽಂತರಧಾನ್ಮಹೇಶಃ
ತದಾದಿ ತತ್ಸಂಗ್ರಹಣೇ ಧೃತಾಶಃ ।
ಚರಾಮ್ಯಥಾಪಿ ಕ್ಷಿತಿಪೋ ನ ಲಬ್ಧೋ
ನ ಸರ್ವವಿತ್ತತ್ರ ಮಯೋಪಲಬ್ಧಃ ॥ ೧೨

"ಇಷ್ಟನ್ನು ಹೇಳಿ ಮಹೇಶ್ವರನು ಅಂತರ್ಧಾನ ಹೊಂದಿದನು. ಅಲ್ಲಿಂದ ಮೊದಲು ಆಶಾಬದ್ಧನಾಗಿ ಅಂತಹ ಶಿರಸ್ಸನ್ನು ಪಡೆಯುವುದಕ್ಕಾಗಿ ತಿರುಗುತ್ತಲೇ ಇದ್ದೇನೆ. ಆದರೂ ಸಹ ರಾಜನೂ ದೊರಕಲಿಲ್ಲ. ಸರ್ವಜ್ಞನಾದವನೂ ನನಗೆ ದೊರಕಲಿಲ್ಲ.

ದಿಷ್ಟ್ಯಾದ್ಯ ಲೋಕಸ್ಯ ಹಿತೇ ಚರಂತಂ
ಸರ್ವಜ್ಞಮದ್ರಾಕ್ಷಮಹಂ ಭವಂತಮ್ ।
ಇತಃ ಪರಂ ಸೇತ್ಸ್ಯತಿ ಮೇಽನುಬಂಧಃ
ಸಂದರ್ಶನಾಂತೋ ಹಿ ಜನಸ್ಯ ಬಂಧಃ ॥ ೧೩

"ಈ ದಿನ ನನ್ನ ಪುಣ್ಯವಶದಿಂದ ಲೋಕಹಿತಕ್ಕಾಗಿ ಸಂಚರಿಸುತ್ತಿರುವ ಸರ್ವಜ್ಞರಾದ ನಿಮ್ಮನ್ನು ನಾನು ಕಂಡೆನು. ಇನ್ನು ನನ್ನ ಕಾರ್ಯಶೇಷವು ಸಿದ್ಧಿಸುವುದು. ಜನರ ಆಶಾಬಂಧವು ನಿಮ್ಮ ದರ್ಶನವಾದಮೇಲೆ ಮುಗಿದುಹೋಗುತ್ತದೆಯಲ್ಲವೆ?

ಮೂರ್ಧಾಭಿಷಿಕ್ತಸ್ಯ ಶಿರಃ ಕಪಾಲಂ
ಮುನೀಶಿತುರ್ವಾ ಮಮ ಸಿದ್ಧಿಹೇತುಃ ।
ಆದ್ಯಂ ಪುನರ್ಮೇ ಮನಸಾಪ್ಯಲಭ್ಯಂ
ತತಃ ಪರಂ ತತ್ರ ಭವಾನ್ ಪ್ರಮಾಣಮ್ ॥ ೧೪

"ಮೂರ್ಧಾಭಿಷಿಕ್ತನಾದ ರಾಜನ ಶಿರಸ್ಸಿನ ಕಪಾಲವಾಗಲಿ ಅಥವಾ ಒಬ್ಬ ಮುನೀಶ್ವರನ ಶಿರಸ್ಸಿನ ಕಪಾಲವಾಗಲಿ ನನ್ನ ಕಾರ್ಯಸಿದ್ಧಿಗೆ ಸಾಧನವಾಗಿರುತ್ತದೆ. ಮೊದಲನೆಯದಾದ ರಾಜಶಿರಸ್ಸು ನನ್ನ ಮನಸ್ಸಿಗೂ ನಿಲುಕತಕ್ಕದ್ದಲ್ಲ. ಇಷ್ಟಾದಮೇಲೆ ನೀವೇ ಮುಂದಿನ ವಿಷಯದಲ್ಲಿ ಪ್ರಮಾಣವಾಗಿದ್ದೀರಿ!

ಶಿರಃ ಪ್ರಧಾನೇಽದ್ಭುತ ಕೀರ್ತಿಲಾಭಃ
ತವಾಪಿ ಲೋಕೇ ಮಮ ಸಿದ್ಧಿಲಾಭಃ ।
ಆಲೋಚ್ಯ ದೇಹಸ್ಯ ಚ ನಶ್ವರತ್ವಂ
ಯದ್ರೋಚತೇ ಸತ್ತಮ ತತ್ಕುರು ತ್ವಮ್ ॥ ೧೫

"ಮಹಾತ್ಮರೆ, ನಿಮ್ಮ ಶಿರಸ್ಸನ್ನು ನನಗೆ ದಾನಮಾಡಿದರೆ ನಿಮಗೂ ಅದ್ಭುತವಾದ ಕೀರ್ತಿಯು ಲೋಕದಲ್ಲಿ ಲಭಿಸುತ್ತದೆ. ನನಗೂ ಸಹ ಕಾರ್ಯಸಿದ್ಧಿಯಾಗುತ್ತದೆ. ಈ ದೇಹವು ನಶ್ವರವಾದದ್ದೆಂಬುದನ್ನು ಪರ್ಯಾಲೋಚಿಸಿ, ನಿಮಗೆ ರುಚಿಸುವಂತೆ ಮಾಡಿರಿ.

ತದ್ಯಾಚಿತುಂ ನ ಕ್ಷಮತೇ ಮನೋ ಮೇ
ಕೋ ವೇಷ್ಟದಾಯಿ ಸ್ವಶರೀರಮುಜ್ಝತು ।
ಭವಾನ್ ವಿರಕ್ತೋ ನ ಶರೀರಮಾನೀ
ಪರೋಪಕಾರಾಯ ಧೃತಾತ್ಮದೇಹಃ ॥ ೧೬

"ಶಿರಸ್ಸನ್ನು ಬೇಡುವುದಕ್ಕೆ ನನ್ನ ಮನಸ್ಸು ಉತ್ಸಾಹಪಡುವುದಿಲ್ಲ! ಯಾವನು ತಾನೆ ಪ್ರಿಯವಾದ ತನ್ನ ದೇಹವನ್ನು ತ್ಯಜಿಸಿಯಾನು? ಆದರೆ ನೀವಾದರೋ ವಿರಕ್ತರೂ ದೇಹಾಭಿಮಾನವನ್ನು ತೊರೆದವರೂ, ಪರೋಪಕಾರಕ್ಕಾಗಿಯೇ ದೇಹವನ್ನು ಧರಿಸಿದವರೂ ಆಗಿದ್ದೀರಿ.

ಜನಾಃ ಪರಕ್ಲೇಶಕಥಾನಭಿಜ್ಞಾ
ನಕ್ತಂ ದಿವಾ ಸ್ವಾರ್ಥಕೃತಾತ್ಮಚಿತ್ತಾಃ ।
ರಿಪುಂ ನಿಹಂತುಂ ಕುಲಿಶಾಯ ವಜ್ರೀ
ದಾಧೀಚಮಾದಾತ್ಕಿಲ ವಾಂಛಿತಾಸ್ಥಿ ॥ ೧೭

"ನನ್ನಂತಹ ಜನರಾದರೋ ಪರರ ಕಷ್ಟದ ಕಥೆಯನ್ನೂ ಅರಿಯದವರು. ಹಗಲು ರಾತ್ರಿಯೂ ಸ್ವಾರ್ಥದಲ್ಲಿಯೇ ಚಿತ್ತವೃತ್ತಿಯನ್ನಿಟ್ಟವರು. ದೇವೇಂದ್ರನೂ ಸಹ ಶತ್ರುವನ್ನು ಕೊಲ್ಲುವುದಕ್ಕೋಸ್ಕರ ವಜ್ರಾಯುಧದ ಅಪೇಕ್ಷೆಯಿಂದ ಅದಕ್ಕೆ ಬೇಕಾದ ಧಧೀಚಿಮುನಿಯ ಅಸ್ಥಿಯನ್ನೇ ತೆಗೆದುಕೊಂಡನಲ್ಲವೆ?

ದಧೀಚಿಮುಖ್ಯಾಃ ಕ್ಷಣಿಕಂ ಶರೀರಂ
ತ್ಯಕ್ತ್ವಾ ಪರಾರ್ಥೇ ಸ್ಮ ಯಶಃ ಶರೀರಮ್ |
ಪ್ರಾಪ್ಯ ಸ್ಥಿರಂ ಸರ್ವಗತಂ ಜಗಂತಿ
ಗುಣೈರನರ್ಘ್ಯೈಃ ಕಿಲ ರಂಜಯಂತಿ || ೧೮

"ದಧೀಚಿಯೇ ಮೊದಲಾದವರು ಕ್ಷಣಿಕವಾದ ಶರೀರವನ್ನು ಪರೋಪಕಾರಕ್ಕಾಗಿ ತ್ಯಜಿಸಿ ಶಾಶ್ವತವೂ ಸರ್ವವ್ಯಾಪಿಯೂ ಆದ ಕೀರ್ತಿಯೆಂಬ ಶರೀರವನ್ನು ಪಡೆದಿದ್ದಾರೆ. ಅಂಥವರು ಅಮೂಲ್ಯವಾದ ಗುಣಗಳಿಂದ ಸಮಸ್ತ ಜಗತ್ತನ್ನೂ ಆನಂದ ಪಡಿಸುತ್ತಾರೆ.

ವಪುರ್ಧರಂತೇ ಪರತುಷ್ಟಿಹೇತೋಃ
ಕೇಚಿತ್ಪ್ರಶಾಂತಾ ದಯಯಾ ಪರೀತಾಃ |
ಅಸ್ಮಾದೃಶಾಃ ಕೇಚನ ಸಂತಿ ಲೋಕೇ
ಸ್ವಾರ್ಥೈಕನಿಷ್ಠಾ ದಯಯಾ ವಿಹೀನಾಃ || ೧೯

"ಶಾಂತಸ್ವಭಾವದ ಕೆಲವರು ದಯಾಳುಗಳಾಗಿ ಪರರ ಸಂತೋಷಕ್ಕಾಗಿಯೇ ದೇಹವನ್ನು ಧರಿಸುತ್ತಾರೆ. ಸ್ವಾರ್ಥೈಕನಿಷ್ಠರೂ ದಯಾಹೀನರೂ ಆದ ನಮ್ಮಂತಹ ಕೆಲವರೂ ಸಹ ಲೋಕದಲ್ಲಿದ್ದಾರೆ!

ಪರೋಪಕಾರಂ ಚ ವಿನಾಽಸ್ತಿ ಕಿಂಚಿತ್
ಪ್ರಯೋಜನಂ ತೇ ವಿಧುತೈಷಣಸ್ಯ |
ಅಸ್ಮಾದೃಶಾಃ ಕಾಮವಶಾಸ್ತು ಯುಕ್ತಾ -
ಯುಕ್ತೇ ವಿಜಾನಂತಿ ನ ಹಂತ ಯೋಗಿನ್ || ೨೦

"ಯೋಗೀಶ್ವರರೆ, ಈಷಣಾತ್ರಯವನ್ನು ತ್ಯಜಿಸಿದ ನಿಮಗೆ ಪರೋಪಕಾರವನ್ನು ಬಿಟ್ಟು ಇನ್ನಾವ ಉದ್ದೇಶವೂ ಲೇಶಮಾತ್ರವಾಗಿಯೂ ಇಲ್ಲ. ಅಯ್ಯೋ, ನಮ್ಮಂತಹ ಕೆಲವರು ಕಾಮವಶರಾಗಿ ಯುಕ್ತಾಯುಕ್ತಗಳನ್ನು ಅರಿತುಕೊಳ್ಳುವುದೇ ಇಲ್ಲ!

ಜೀಮೂತವಾಹೋ ನಿಜಜೀವದಾಯೀ
ದಧೀಚಿರಪ್ಯಸ್ಥಿ ಮುದಾ ದದಾನಃ |
ಆಚಂದ್ರತಾರಾರ್ಕಮಪಾಯ ಶೂನ್ಯಂ
ಪ್ರಾಪ್ತೌ ಯಶಃ ಕರ್ಣಪಥಂ ಗತೌ ಹಿ || ೨೧

"ಜೀಮೂತವಾಹನನು (ಪರೋಪಕಾರಕ್ಕಾಗಿ) ತನ್ನ ಜೀವವನ್ನೇ ಅರ್ಪಿಸಿದ್ದಾನೆ. ದಧೀಚಿಯು ತನ್ನ ಮೂಳೆಯನ್ನು ಸಂತೋಷದಿಂದ ದಾನಮಾಡಿದ್ದಾನೆ. ಅವರಿಬ್ಬರೂ ಚಂದ್ರ

ಸೂರ್ಯ ನಕ್ಷತ್ರಗಳಿರುವ ವರೆಗೆ ನಾಶವಿಲ್ಲದ ಯಶಸ್ಸನ್ನು ಪಡೆದರೆಂಬುದು ನಿಮ್ಮ ಕಿವಿಗೆ ಬಿದ್ದಿದೆಯಷ್ಟೆ?

ಯದ್ಯಪ್ಯದೇಯಂ ನನು ದೇಹವದ್ಭಿಃ
ಮಯಾಽರ್ಥಿತಂ ಗರ್ಹಿತಮೇವ ಸದ್ಭಿಃ ।
ತಥಾಽಪಿ ಸರ್ವತ್ರ ವಿರಾಗವದ್ಭಿಃ
ಕಿಮಸ್ತ್ಯದೇಯಂ ಪರಮಾರ್ಥವಿದ್ಭಿಃ ॥ ೨೨

"ಮುನಿಗಳೆ, ಮನುಷ್ಯರಾದವರು ಎಂದಿಗೂ ಕೊಡದಿರುವ ವಸ್ತುವನ್ನು ನಾನು ಬೇಡಿದ್ದೇನೆ. ಇದು ಸಜ್ಜನರು ನಿಂದಿಸತಕ್ಕ ಬೇಡಿಕೆಯೇ ಹೌದು. ಆದರೂ ಸರ್ವತ್ರ ರಾಗವರ್ಜಿತರೂ, ಪರಮಾರ್ಥ ಜ್ಞಾನಿಗಳೂ ಆದವರಿಗೆ ಕೊಡಲು ಬಾರದ ವಸ್ತುವಾದರೂ ಯಾವುದಿದೆ?

ಅಖಂಡಮೂರ್ಧನ್ಯಕಪಾಲಮಾಹುಃ
ಸಂಸಿದ್ಧಿದಂ ಸಾಧಕಪುಂಗವೇಭ್ಯಃ ।
ವಿನಾ ಭವಂತಂ ಬಹವೋ ನ ಸಂತಿ
ತದ್ವತ್ ಪುಮಾಂಸೋ ಭಗವನ್ ಪೃಥಿವ್ಯಾಮ್ ॥ ೨೩

"ಸಾಧಕಶ್ರೇಷ್ಠರಿಗೆ ಸಿದ್ಧಿಪ್ರದವಾದದ್ದು ಊರ್ಧ್ವರೇತಸ್ಕನಾದ ಮುನಿಯ ಶಿರಃ-ಕಪಾಲವೆಂದು ಹೇಳುತ್ತಾರೆ. ಹೇ ಭಗವನ್, ನಿಮ್ಮನ್ನು ಬಿಟ್ಟರೆ ಅಂತಹ ಪುರುಷರು ಈ ಪೃಥ್ವಿಯಲ್ಲಿ ಬಹಳ ಮಂದಿ ಇಲ್ಲ.

ಟಿಪ್ಪಣಿ:-ಅಖಂಡ = ಅಖಂಡಿತ ಬ್ರಹ್ಮಚರ್ಯವುಳ್ಳವನು.

ಪ್ರಯಚ್ಛ ಶೀರ್ಷಂ ಭಗವನ್ನಮಃ ಸ್ತಾತ್
ಇತೀರಯಿತ್ವಾ ಪತಿತಂ ಪುರಸ್ತಾತ್ ।
ತಮಬ್ರವೀದ್ವೀಕ್ಷ್ಯ ಸುಧೀರಧಸ್ತಾತ್
ಕೃಪಾಲುರಾವೃತ್ತಮನಾಃ ಸಮಸ್ತಾತ್ ॥ ೨೪

ಹೇ ಪೂಜ್ಯರೆ, ನಿಮ್ಮ ಶಿರಸ್ಸನ್ನು ನನಗೆ ದಾನವಾಡಿರಿ. ನಿಮಗೆ ನಮಸ್ಕಾರ" ಎಂದು ಹೇಳಿ ಆ ಕಾಪಾಲಿಕನು ಆಚಾರ್ಯರೆದುರಿಗೆ ಅಡ್ಡ ಬಿದ್ದು ನಮಸ್ಕರಿಸಿದನು. ಹೀಗೆ ಅಡ್ಡ ಬಿದ್ದು ನಮಸ್ಕರಿಸಿದ ಆತನನ್ನು ನೋಡಿ ವಿದ್ವನ್ಮಣಿಗಳೂ, ದಯಾಳುಗಳೂ, ಸಮಸ್ತ ವಸ್ತುಗಳಲ್ಲಿ ಮೋಹವನ್ನು ಕಳೆದುಹಾಕಿದ ಚಿತ್ತವೃತ್ತಿಯವರೂ ಆದ ಆಚಾರ್ಯರು ಅವನನ್ನು ಕುರಿತು ಹೀಗೆಂದರು.

ನೈವಾಭ್ಯಸೂಯಾಮಿ ವಚಸ್ತ್ವದೀಯಂ
ಪ್ರೀತ್ಯಾ ಪ್ರಯಚ್ಛಾಮಿ ಶಿರೋಽಸ್ಮದೀಯಮ್ |
ಕೋ ವಾಽರ್ಥಿಸಾತ್ಪ್ರಾಜ್ಞತಮೋ ನೃಕಾಯಂ
ಜಾನನ್ನ ಕುರ್ಯಾದಿಹ ಬಹ್ವಪಾಯಮ್ || ೨೫

"ಅಯ್ಯಾ, ನಿನ್ನ ಮಾತನ್ನು ಕೇಳಿ ನಾನೇನೂ ಕೋಪಗೊಳ್ಳುವುದಿಲ್ಲ. ನನ್ನ ಈ ಶಿರಸ್ಸನ್ನು ಪ್ರೀತಿಯಿಂದಲೇ ನಿನಗೆ ಕೊಡುತ್ತೇನೆ. ನಾನಾ ಕಷ್ಟಗಳಿಗೆ ಈಡಾಗುವ ಈ ದೇಹದ ಸ್ವರೂಪವನ್ನು ಅರಿತ ಯಾವ ಪ್ರಾಜ್ಞನು ತಾನೇ ಅದನ್ನು ಯಾಚಕರಿಗೆ ಕೊಡದೇ ಇದ್ದಾನು?

ಪತತ್ಯವಶ್ಯಂ ಹಿ ವಿಕೃಷ್ಯಮಾಣಂ
ಕಾಲೇನ ಯತ್ನಾದಪಿ ರಕ್ಷ್ಯಮಾಣಮ್ |
ವಪುರ್ಮಾಮುನಾ ಸಿಧ್ಯತಿ ಚೇತ್ಪರಾರ್ಥಃ
ಸ ಏವ ಮರ್ತ್ಯಸ್ಯ ಪರಃ ಪುಮರ್ಥಃ || ೨೬

"ಪ್ರಯತ್ನಪೂರ್ವಕವಾಗಿ ರಕ್ಷಿಸುತ್ತಿದ್ದರೂ ಈ ದೇಹವು ಕಾಲಕ್ಕೆ ವಶವಾಗಿ ನಿಶ್ಚಯವಾಗಿ ಬಿದ್ದುಹೋಗುತ್ತದೆಯಲ್ಲವೆ?ಅಂತಹ ದೇಹದಿಂದ ಪರಾರ್ಥವು ಸಿದ್ಧಿಸುವುದಾದರೆ ಅದೇ ಪರಮಪುರುಷಾರ್ಥವಾಗುವುದು.

ವರ್ತೇ ವಿವಿಕ್ತೇಽಧಿಸಮಾಧಿ ಸಿದ್ಧಿವಿನ್ -
ಮಿಥಃ ಸಮಾಯಾಹಿ ಕರೋಮಿ ತೇ ಮತಮ್ |
ನಾಹಂ ಪ್ರಕಾಶಂ ವಿತರೀತುಮುತ್ಸಹೇ
ಶಿರಃಕಪಾಲಂ ವಿಜನಂ ಸಮಾಶ್ರಯ || ೨೭

"ಸಿದ್ಧಿಯನ್ನು ಬಲ್ಲ ಯೋಗಿಯೆ,.ನಾನು ಏಕಾಂತದಲ್ಲಿ ಸಮಾಧಿ ಸ್ಥಿತಿಯಲ್ಲಿ ಇರುವೆನು. ಆಗ ನೀನು ಗುಟ್ಟಾಗಿ ಇಲ್ಲಿಗೆ ಬಾ. ನಿನ್ನ ಅಭಿಲಾಷೆಯನ್ನು ನೆರವೇರಿಸಿಕೊಡುವೆನು. ನಾನು ಹೀಗೆ ಬಹಿರಂಗವಾಗಿ ಅನ್ಯರಿಗೆ ತಿಳಿಯುವಂತೆ ಶಿರಸ್ಸನ್ನು ಕೊಡಲು ಬಯಸುವುದಿಲ್ಲ. ಜನರಿಲ್ಲದ ಸ್ಥಳಕ್ಕೆ ಬಾ.

ಶಿಷ್ಯಾ ವಿದಂತಿ ಯದಿ ಚಿಂತಿತಕಾರ್ಯಮೇತತ್
ಯೋಗಿನ್ ಮದೇಕಶರಣಾ ವಿಹತಿಂ ವಿದಧ್ಯುಃ |
ಕೋ ವಾ ಸಹೇತ ವಪುರೇತದಪೋಹಿತುಂ ಸ್ವಂ
ಕೋ ವಾ ಕ್ಷಮೇತ ನಿಜನಾಥಶರೀರಮೋಕ್ಷಮ್ || ೨೮

ಎಲೈ ಯೋಗಿಯೆ, ಹೀಗೆ ಆಲೋಚಿಸಿರುವ ಕಾರ್ಯವನ್ನು ನನ್ನ ಶಿಷ್ಯರೇನಾದರೂ ಅರಿತರೆ, ನನ್ನನ್ನೇ ನಂಬಿರುವ ಅವರು ಈ ಕಾರ್ಯಕ್ಕೆ ಅಡ್ಡಿಯನ್ನುಂಟು ಮಾಡುವರು. ತಮ್ಮ ದೇಹವೇ ಈ ನನ್ನ ದೇಹವೆಂದು ಭಾವಿಸಿರುವ ಯಾರು ತಾನೇ ಇದರ ತ್ಯಾಗವನ್ನು ಸಹಿಸಿಕೊಂಡಾರು? ಅಥವಾ ತಮ್ಮ ಗುರುವಿನ ಶರೀರ ನಾಶವನ್ನು ನೋಡಿ ಯಾವನು ಸುಮ್ಮನಿದ್ದಾನು?" ಎಂದು ತಿಳಿಸಿದರು.

ತೌ ಸಂವಿದಂ ವ್ಯತನುತಾಮಿತಿ ಸಂಪ್ರಹೃಷ್ಟೌ
ಯೋಗೀ ಜಗಾಮ ಮುದಿತೋ ನಿಲಯಂ ಮನಸ್ವೀ |
ಶ್ರೀ ಶಂಕರೋಽಪಿ ನಿಜಧಾಮನಿ ಜೋಷಮಾಸ
ಪ್ರೋಚೇ ನ ಕಿಂಚಿದಪಿ ಭಾವಮಸೌ ಮನೋಗಮ್ || ೨೯

ಈ ಪ್ರಕಾರವಾಗಿ ಶ್ರೀಶಂಕರರೂ ಕಾಪಾಲಿಕನೂ ಸಂತೋಷದಿಂದ ಸಂಕೇತವನ್ನು ಮಾಡಿಕೊಂಡರು. ಯೋಗಿಯಾದ ಕಾಪಾಲಿಕನು ಧೈರ್ಯವನ್ನು ತಳೆದು ಸಂತೋಷಪಡುತ್ತಾ ತನ್ನ ವಸತಿಗೆ ಹೊರಟುಹೋದನು. ಶ್ರೀಶಂಕರರು ತಾವಿದ್ದಸ್ಥಳದಲ್ಲಿ ಸುಮ್ಮನೆ ಇದ್ದುಬಿಟ್ಟರು. ತಮ್ಮ ಮನೋಗತವಾದದ್ದನ್ನು ಶಿಷ್ಯರಿಗೆ ಈಷನ್ಮಾತ್ರವೂ ಹೇಳಲಿಲ್ಲ.

ಶೂಲೀ ತ್ರಿಪುಂಡ್ರೀ ಪುರತೋಽವಲೋಕೀ
ಕಂಕಾಲಮಾಲಾಕೃತಗಾತ್ರಭೂಷಃ |
ಸಂರಕ್ತನೇತ್ರೋ ಮದಘೂರ್ಣಿತಾಕ್ಷೋ
ಯೋಗೀ ಯಯೌ ದೇಶಿಕವಾಸಭೂಮಿಮ್ || ೩೦

(ಸಂಕೇತ ಕಾಲವನ್ನು ಗೊತ್ತುಮಾಡಿಕೊಂಡಂತೆ) ಆ ಕಾಪಾಲಿಕನು ಶೂಲಧಾರಿಯಾಗಿ ಭಸ್ಮದ ತ್ರಿಪುಂಡ್ರವನ್ನು ಮೈಗೆ ಬಳಿದು ಕೊಂಡು, ಶವದ ಮೂಳೆಗಳನ್ನು ಮಾಲಾಕಾರವಾಗಿ ದೇಹಕ್ಕೆ ಅಲಂಕರಿಸಿ ಕೊಂಡು, ಯಾರಾದರೂ ಇದ್ದಾರೆಯೇ ಎಂದು ಅತ್ತಿತ್ತ ನೋಡುತ್ತ ಬಂದನು. ಅವನ ಕಣ್ಣು ಕೆಂಪಾಗಿತ್ತು. (ಮದ್ಯಪಾನದಿಂದ) ಕಣ್ಣಾಲಿಗಳು ತಿರುಗುತ್ತಿದ್ದವು. ಹೀಗಿದ್ದ ಆ ಭೈರವ ಯೋಗಿಯು ಆಚಾರ್ಯರು ಇದ್ದ ಸ್ಥಳಕ್ಕೆ ಆಗಮಿಸಿದನು.

ಶಿಷ್ಯೇಷು ಶಿಷ್ಟೇಷು ವಿದೂರಗೇಷು
ಸ್ನಾನಾದಿಕಾರ್ಯಾಯ ವಿವಿಕ್ತಭಾಜಿ |
ಶ್ರೀದೇಶಿಕೇಂದ್ರೇ ತು ಸನಂದನಾಖ್ಯ-
ಭೀತ್ಯಾ ಸ್ವದೇಹಂ ವ್ಯವಧಾಯ ಗೂಢೇ || ೩೧

ಉಳಿದ ಎಲ್ಲಾ ಶಿಷ್ಯರು ಸ್ನಾನಾದಿ ಕಾರ್ಯಕ್ಕಾಗಿ ದೂರ ಹೋಗಿರಲು ಸನಂದನ(ಪದ್ಮಪಾದ) ನೆಂಬ ಶಿಷ್ಯನು ಮಾತ್ರ ಹತ್ತಿರದಲ್ಲಿದ್ದನು. ಆತನು ನೋಡಿಯಾನೆಂಬ

ಹೆದರಿಕೆಯ ಸಂಕೋಚದಿಂದ ದೇಶಿಕೇಂದ್ರರು ತಮ್ಮ ದೇಹವು ಕಾಣದಂತೆ ಮರೆಮಾಡಿ ಏಕಾಂತದಲ್ಲಿ ಕುಳಿತಿದ್ದರು.

ತಂ ಭೈರವಾಕಾರಮುದೀಕ್ಷ್ಯ ದೇಶಿಕಃ
ತ್ಯಕ್ತುಂ ಶರೀರಂ ವ್ಯಧಿತ ಸ್ವಯಂ ಮನಃ ।
ಆತ್ಮಾನಮಾತ್ಮನ್ಯುದಯುಂಕ್ತ ಯೋಜಯನ್
ಸಮಾಹಿತಾತ್ಮಾ ಕರಣಾನಿ ಸಂಹರನ್ ॥ ೩೨

ಭೀಕರಾಕೃತಿಯಿಂದ ಬಂದ ಆ ಭೈರವನನ್ನು ನೋಡಿ ಆಚಾರ್ಯರು ತಮ್ಮ ದೇಹವನ್ನು ತ್ಯಜಿಸಬೇಕೆಂದು ತಾವೇ ಮನಸ್ಸು ಮಾಡಿದರು. ಸಕಲ ಇಂದ್ರಿಯಗಳನ್ನೂ ಉಪಸಂಹರಿಸಿ ಅಂತಃಕರಣವನ್ನು ಸ್ಥಿರಗೊಳಿಸಿ ತಮ್ಮ ಆತ್ಮವನ್ನು ಪರಮಾತ್ಮನಲ್ಲಿ ಅಭೇದ ದೃಷ್ಟಿಯಿಂದ ಯೋಜಿಸಿ, ಸಮಾಧಿನಿಷ್ಠರಾದರು.

ತಂ ಭೈರವೋಽಲೋಕತ ಲೋಕಪೂಜ್ಯಂ
ಸ್ವಸೌಖ್ಯತುಚ್ಛೀಕೃತದೇವರಾಜ್ಯಮ್ ।
ಯೋಗೀಶಮಾಸಾದಿತ ನಿರ್ವಿಕಲ್ಪಂ
ಸನತ್ಸುಜಾತ ಪ್ರಭೃತೇರನಲ್ಪಮ್ ॥ ೩೩

ಹೀಗೆ ಲೋಕಪೂಜ್ಯರೂ, ಆತ್ಮಾನಂದದಿಂದ ದೇವರಾಜ್ಯವನ್ನೂ ತುಚ್ಛೀಕರಿಸಿದವರೂ, ಸನತ್ಸುಜಾತ ಮೊದಲಾದ ಯೋಗಿಗಳಿಗೆ ಸದೃಶರೂ, ನಿರ್ವಿಕಲ್ಪ ಸಮಾಧಿ ನಿಷ್ಠರೂ ಆದ ಆ ಯೋಗೀಶ್ವರರನ್ನು ಕಾಪಾಲಿಕನು ವೀಕ್ಷಿಸಿದನು.

ಜತ್ರುಪ್ರದೇಶೇ ಚಿಬುಕಂ ನಿಧಾಯ
ವ್ಯಾತ್ತಾಸ್ಯಮುತ್ತಾನಕರೌ ನಿಧಾಯ ।
ಜಾನೂಪರಿ ಪ್ರೇಕ್ಷಿತನಾಸಿಕಾಂತಂ
ವಿಲೋಚನೇ ಸಾಮಿ ನಿಮೀಲ್ಯ ಕಾಂತಮ್ ॥ ೩೪

ತಮ್ಮ ಗಲ್ಲವನ್ನು ಜತ್ರು ಪ್ರದೇಶಕ್ಕೆ ತಾಗಿಸಿ, ಬಾಯ್ದೆರೆದು, ಎರಡು ಕೈಗಳನ್ನು ಮೊಳಕಾಲಮೇಲಿರಿಸಿಕೊಂಡು, ನಾಸಾಗ್ರದಲ್ಲಿ ದೃಷ್ಟಿಯನ್ನಿಟ್ಟು ಸುಂದರವಾದ ಕಣ್ಣುಗಳನ್ನು ಅರ್ಧಮುಚ್ಚಿ ಕುಳಿತಿದ್ದ ಆಚಾರ್ಯರನ್ನು ಅವನು ಕಂಡನು.

ಟಿಪ್ಪಣಿ:- ವ್ಯಾತ್ತಾಸ್ಯಂ = ವ್ಯಾತ್ತ - ತೆರೆದ, ಆಸ್ಯಂ - ಬಾಯಿಯುಳ್ಳವನು ಎಂದರ್ಥವಾಗುತ್ತದೆ. ಸಮಾಧಿ ಸ್ಥಿತಿಯಲ್ಲಿ ಬಾಯಿ ತೆರೆಯುವುದು ಶಾಸ್ತ್ರೀಯವೆ? ಎಂಬುದು ವಿಚಾರಣೀಯ. ಶಾಸ್ತ್ರೀಯವಲ್ಲದಿದ್ದರೆ ಅವ್ಯಾತ್ತಾಸ್ಯಂ ಎಂದು ಪದವಿಭಾಗ ಮಾಡಿಕೊಳ್ಳ ಬೇಕು. ನಿಧಾಯಾವ್ಯಾತ್ತಾಸ್ಯಂ = ಎಂದು ಪಾಠ. ಬಾಯನ್ನು ಮುಚ್ಚಿಕೊಂಡು ಎಂದರ್ಥ. ಜತ್ರು = ಎದೆಯ ಮೇಲ್ಗಡೆ ಗಲ್ಲವನ್ನು ತಾಗಿಸಬಹುದಾದ ಸ್ಥಳ.

ಆಸೀನಮುಚ್ಚೈಕೃತ ಪೂರ್ವಗಾತ್ರಂ
ಸಿದ್ಧಾಸನೇ ಶೇಷಿತ ಬೋಧಮಾತ್ರಮ್ |
ಚಿನ್ಮಾತ್ರವಿನ್ಯಸ್ತ ಹೃಷೀಕ ವರ್ಗಂ
ಸಮಾಧಿವಿಸ್ಮಾರಿತವಿಶ್ವಸರ್ಗಮ್ || ೩೫

ಆಚಾರ್ಯರು ದೇಹದ ಮೇಲ್ಭಾಗವನ್ನು ನೆಟ್ಟಗೆ ಇರಿಸಿಕೊಂಡು ಸಿದ್ಧಾಸನದಲ್ಲಿ ಕುಳಿತಿದ್ದರು. ಕೇವಲ ಜ್ಞಾನಸ್ವರೂಪರಾಗಿ ಇಂದ್ರಿಯವರ್ಗವನ್ನು ಚೈತನ್ಯಸ್ವರೂಪದಲ್ಲಿ ಅಡಗಿಸಿ ನಿರ್ವಿಕಲ್ಪಕ ಸಮಾಧಿಯಿಂದ ವಿಶ್ವಸೃಷ್ಟಿ ಪ್ರಕಾರವನ್ನೇ ಮರೆತಿದ್ದರು. ಅವರನ್ನು ಭೈರವನು ಕಂಡನು.

ವಿಲೋಕ್ಯ ತಂ ಹಂತುಮಪಾಸ್ತಶಂಕಃ
ಸ್ವಬುದ್ಧಿಪೂರ್ವಾರ್ಜಿತ ತೀವ್ರಪಂಕಃ |
ಪ್ರಾಪೋದ್ಯತಾಸಿಃ ಸವಿಧಂ ಸ ಯಾವತ್
ವಿಜ್ಞಾತವಾನ್ ಪದ್ಮಪದೋಽಪಿ ತಾವತ್ || ೩೬

ಕಾಪಾಲಿಕನು ಅವರನ್ನು ನೋಡಿ ಎಲ್ಲ ಶಂಕೆಯನ್ನು ತೊರೆದನು. ಬುದ್ಧಿಪೂರ್ವಕವಾಗಿ ಪಾಪ ಪಂಕವನ್ನು ಸಂಪಾದಿಸಿಕೊಂಡಿದ್ದ ಆ ಪಾಪಿಯು ಖಡ್ಗವನ್ನೆತ್ತಿ ಹಿಡಿದು ಸಮೀಪಕ್ಕೆ ಬಂದನು. ಅಷ್ಟರಲ್ಲಿ ಪದ್ಮಪಾದಾಚಾರ್ಯರಿಗೆ ಇದು ತಿಳಿಯಿತು.

ತ್ರಿಶೂಲಮುದ್ಯಮ್ಯ ನಿಹಂತುಕಾಮಂ
ಗುರುಂ ಯತಾತ್ಮಾ ಸಮುದೈಕ್ಷತಾಂತಃ |
ಸ್ಥಿತಶ್ಚುಕೋಪ ಜ್ವಲಿತಾಗ್ನಿಕಲ್ಪಃ
ಸ ಪದ್ಮಪಾದಃ ಸ್ವಗುರೋರ್ಹಿತೈಷೀ || ೩೭

ತಮ್ಮ ಗುರುವನ್ನು ಕೊಲ್ಲುವುದಕ್ಕಾಗಿ (ಇನ್ನೊಂದು) ಕೈಯಲ್ಲಿ ತ್ರಿಶೂಲವನ್ನು ಎತ್ತಿಹಿಡಿದು ಬಂದ ಕಾಪಾಲಿಕನನ್ನು ಜಿತೇಂದ್ರಿಯರಾದ ಪದ್ಮಪಾದರು ತಮ್ಮೊಳಗೆ ಜ್ಞಾನದೃಷ್ಟಿಯಿಂದ ಕಂಡರು. ತಮ್ಮ ಗುರುಗಳಿಗೆ ಹಿತೈಷಿಗಳಾಗಿದ್ದ ಅವರು ಬೆಂಕಿಯಂತೆ ಸಿಡಿದೆದ್ದು ಕ್ರೋಧಾವಿಷ್ಟರಾದರು.

ಸ್ಮರನ್ನಥೈಷ ಸ್ಮರದಾರ್ತಿಹಾರಿ
ಪ್ರಹ್ಲಾದವಶ್ಯಂ ಪರಮಂ ಮಹಸ್ತತ್ |
ಸ ಮಂತ್ರಸಿದ್ಧೋ ನೃಹರೇರ್ನೃಸಿಂಹೋ
ಭೂತ್ವಾ ದದರ್ಶೋಗ್ರದುರೀಹ ಚೇಷ್ಟಾಮ್ || ೩೮

ಮಂತ್ರಸಿದ್ಧರಾದ ಪದ್ಮಪಾದರು ಸ್ಮರಿಸಿದವರ ಕಷ್ಟವನ್ನು ಪರಿಹರಿಸತಕ್ಕದ್ದೂ, ಪ್ರಹ್ಲಾದನಿಗೆ ಪ್ರಸನ್ನವಾದದ್ದೂ ಆದ ನರಸಿಂಹಸ್ವಾಮಿಯ ಪರಮತೇಜಸ್ಸನ್ನು ಸ್ಮರಿಸಿಕೊಂಡು ಸ್ವಯಂ ನರಸಿಂಹನೇ ಆಗಿ, ಉಗ್ರನೂ ದುಷ್ಕೃತ್ಯಕಾರಿಯೂ ಆದ ಭೈರವನನ್ನು ಕಂಡರು.

ಸ ತತ್ಕ್ಷಣಕ್ಷುಬ್ಧನಿಜಸ್ವಭಾವಃ
ಪ್ರವೃದ್ಧರುಡ್ ವಿಸ್ಮೃತಮರ್ತ್ಯಭಾವಃ ।
ಆವಿಷ್ಕೃತಾತ್ಯುಗ್ರನೃಸಿಂಹಭಾವಃ
ಸಮುತ್ಪಪಾತಾತುಲಿತಪ್ರಭಾವಃ ॥ ೩೯

ಒಡನೆಯೇ ನೃಸಿಂಹನ ಉಗ್ರಸ್ವಭಾವವನ್ನು ಮೆರೆಸುತ್ತ ಕೋಪಾವಿಷ್ಟರಾಗಿ ಮನುಷ್ಯತ್ವವನ್ನು ಮರೆತು, ಅತ್ಯುಗ್ರವಾದ ನೃಸಿಂಹ ಸ್ವರೂಪವನ್ನೇ ತಳೆದು ಅಸಾಧಾರಣ ಮಹಿಮೆಯುಳ್ಳ ನೃಸಿಂಹನೇ ಆದರು. ಆ ನೃಸಿಂಹನು ಚಂಗನೆ ಮುಂದಕ್ಕೆ ಹಾರಿಬಂದನು.

ಸಟಾಚ್ಛಟಾಸ್ಫೋಟಿತ ಮೇಘಸಂಘಃ
ತೀವ್ರಾರವತ್ರಾಸಿತ ಭೂತಸಂಘಃ ।
ಸಂವೇಗ ಸಂಮೂರ್ಛಿತ ಲೋಕಸಂಘಃ
ಕಿಮೇತದಿತ್ಯಾಕುಲದೇವಸಂಘಃ ॥ ೪೦

ತನ್ನ ಕೇಸರಗಳ ರಾಶಿಯಿಂದ ಮೇಘಮಂಡಲವನ್ನು ಭೇದಿಸಿ ಘೋರವಾದ ಗರ್ಜನೆಯಿಂದ ಸಕಲ ಪ್ರಾಣಿಗಳನ್ನೂ ಹೆದರಿಸಿ ಉಗ್ರಸಂಭ್ರಮದಿಂದ ಲೋಕಗಳನ್ನೇ ಮೂರ್ಛೆಗೊಳಿಸಿದ ಆತನ ಆರ್ಭಟವನ್ನು ಕೇಳಿ ಇದೇನಿರಬಹುದೆಂದು ದೇವತೆಗಳು ವ್ಯಾಕುಲರಾದರು.

ಕ್ಷುಭ್ಯತ್ಸಮುದ್ರಂ ಸಮುದೂಢರೌದ್ರಂ
ರಟನ್ನಿಶಾಟಂ ಸ್ಫುಟದದ್ರಿಕೂಟಮ್ ।
ಜ್ವಲದ್ದಿಶಾಂತಂ ಪ್ರಚಲದ್ಧರಾಂತಂ
ಪ್ರಭ್ರಶ್ಯದಕ್ಷಂ ದಲದಂತರಿಕ್ಷಮ್ ॥ ೪೧

ಆ ಉಗ್ರನರಸಿಂಹನ ರಭಸಕ್ಕೆ ಸಮುದ್ರಗಳು ಉಕ್ಕೇರಿದವು. ಆತನ ಅತಿ ರೌದ್ರಸ್ವರೂಪದಿಂದ ಹೆದರಿದ ರಾಕ್ಷಸರು ಕಿರಿಚಿಕೊಂಡರು. ಗಿರಿಶೃಂಗವು ಒಡೆದುಬಿತ್ತು. ದಿಗಂತವು ಬೆಳಗಿತು. ಭೂಮಂಡಲದ ತುದಿಯು ನಡುಗಿತು. ಜನರ ಇಂದ್ರಿಯಗಳೇ ನಷ್ಟವಾದವು. ಅಂತರಿಕ್ಷವು ಸೀಳಿದಂತಾಯಿತು.

ಟಿಪ್ಪಣಿ:- ಈ ಶ್ಲೋಕದ ಎಲ್ಲ ಪದಗಳೂ ಕ್ರಿಯಾವಿಶೇಷಣಗಳು. ಮುಂದಿನ ಶ್ಲೋಕದಲ್ಲಿರುವ ಅಭಿದ್ರವಕ್ರಿಯೆಯಲ್ಲಿ ಅನ್ವಿತ.

ಜವಾದಭಿದ್ರುತ್ಯ ಶಿತಸ್ವರೂಗ್ರೈಃ
ದೈತ್ಯೇಶ್ವರಸ್ಯೇವ ಪುರಾ ನಖಾಗ್ರೈಃ |
ಕ್ಷಿಪತ್ತ್ರಿಶೂಲಸ್ಯ ಸ ತಸ್ಯ ವಕ್ಷೋ
ದದಾರ ವಿಕ್ಷಿಪ್ತಸುರಾರಿಪಕ್ಷಃ || ೪೨

ದೇವ ಶತ್ರುಗಳಾದ ದೈತ್ಯರನ್ನು ದೂರಕ್ಕೆ ತಳ್ಳಿ ಹಾಕಿದ ಆ ನೃಸಿಂಹನು ವೇಗದಿಂದ ನೆಗದು, ಹರಿತವಾದ ವಜ್ರಾಯುಧದಂತೆ ನಿಶಿತವಾದ ನಖಾಗ್ರಗಳಿಂದ, ಹಿಂದೆ ದೈತ್ಯೇಂದ್ರನಾದ ಹಿರಣ್ಯಕಶಿಪುವಿನ ವಕ್ಷಃಸ್ಥಳವನ್ನು ಸೀಳಿದಂತೆ, ತ್ರಿಶೂಲವನ್ನು ಬೀಸಬೇಕೆಂದಿದ್ದ ಆ ಕಾಪಾಲಿಕನ ವಕ್ಷಃಸ್ಥಳವನ್ನು ಸೀಳಿಹಾಕಿದನು!

ತತ್ತಾದೃಗತ್ಯುಗ್ರ ನಖಾಯುಧಾಗ್ರ್ಯೋ
ದಂಷ್ಟ್ರಾಂತರ ಪ್ರೋತದುರೀಹದೇಹಃ |
ನಿನ್ಯೇ ತದಾನೀಂ ನೃಹರಿರ್ವಿದೀರ್ಣ-
ದ್ಯುಪಟ್ಟನಾಟ್ಟಾಲಿಕಮಟ್ಟಹಾಸಮ್ || ೪೩

ಅನಂತರ ಆ ಬಗೆಯ ಅತ್ಯುಗ್ರವಾದ ನಖಾಯುಧಗಳನ್ನು ಧರಿಸಿದ ಆ ನೃಸಿಂಹನು ಆ ದುಷ್ಟನ ದೇಹವನ್ನು ಕೋರೆಹಲ್ಲುಗಳಲ್ಲಿ ಸಿಕ್ಕಿಸಿಕೊಂಡು ಅಮರಾವತಿಯ ಮಹಡಿಗಳು ಬಿರಿದು ಹೋಗುವಂತೆ ಅಟ್ಟಹಾಸವನ್ನು ಮಾಡಿದನು.

ಟಿಪ್ಪಣಿ:- ಅಟ್ಟಾಲಿಕಾ = ಮಹಡಿ.

ಆಕರ್ಣಯಂಸ್ತಂ ನಿನದಂ ಬಹಿರ್ಗತಾ
ಉಪಾಗಮನ್ನಾಕುಲಚಿತ್ತವೃತ್ತಯಃ |
ವ್ಯಲೋಕಯನ್ ಭೈರವಮಗ್ರತೋ ಮೃತಂ
ತತೋ ವಿಮುಕ್ತಂ ಚ ಗುರುಂ ಸುಖೋಷಿತಮ್ || ೪೪

ಹೊರಗೆ ಹೋದ ಶಿಷ್ಯರು ಆ ಗರ್ಜನೆಯನ್ನು ಕೇಳಿ ಮನಸ್ಸಿನಲ್ಲಿ ಗಾಬರಿಗೊಂಡು ಅಲ್ಲಿಗೆ ಓಡಿ ಬಂದರು. ಎದುರಿಗೆ ಉಗ್ರಭೈರವನು ಸತ್ತು ಬಿದ್ದುದನ್ನೂ ಅವನಿಂದ ಯಾವ ವಿಪತ್ತಿಗೂ ಒಳಗಾಗದೆ ಸುಖವಾಗಿ ಕುಳಿತಿದ್ದ ತಮ್ಮ ಗುರುಗಳನ್ನೂ ಕಂಡರು.

ಪ್ರಹ್ಲಾದವಶ್ಯೋ ಭಗವಾನ್ ಕಥಂ ವಾ
ಪ್ರಸಾದಿತೋಽಯಂ ನೃಹರಿಸ್ತ್ವಯೇತಿ |
ಸವಿಸ್ಮಯೈಃ ಸ್ನಿಗ್ಧಜನೈಃ ಸ ಪೃಷ್ಟಃ
ಸನಂದನಃ ಸಸ್ಮಿತಮಿತ್ಯವಾದೀತ್ || ೪೫

(ನರಸಿಂಹಸ್ವಾಮಿಯ ಆವೇಶವನ್ನು ಹೊಂದಿದ್ದ ಪದ್ಮಪಾದರು, ಆ ಶಿಷ್ಯರು ಭೀತರಾದಾರೆಂದು ಭಾವಿಸಿ ತಾನು ಪದ್ಮಪಾದರೆಂಬುದನ್ನು ತಿಳಿಸಿದರು. ಆಗ ಶಿಷ್ಯರು ಹೇಳುತ್ತಾರೆ.) "ಪದ್ಮಪಾದರೆ, ಪ್ರಹ್ಲಾದನಿಗೆ ಮಾತ್ರ ವಶನಾಗಿದ್ದ ಭಗವಾನ್ ನರಸಿಂಹಸ್ವಾಮಿಯನ್ನು ನೀವು ಹೇಗೆ ಒಲಿಸಿ ಕೊಂಡಿರಿ?" ಎಂದು ವಿಸ್ಮಿತರಾದ ಆ ಮಿತ್ರರು ಕೇಳಲಾಗಿ ಪದ್ಮಪಾದಾಚಾರ್ಯರು(ಸನಂದನ) ಮುಗುಳ್ನಗೆ ಬೀರುತ್ತ ಹೀಗೆಂದರು.

ಪುರಾ ಕಿಲಾಹೋಬಲಭೂಧರಾಗ್ರೇ
ಪುಣ್ಯಂ ಸಮಾಶ್ರಿತ್ಯ ಕಿಮಪ್ಯರಣ್ಯಮ್ |
ಭಕ್ತೈಕವಶ್ಯಂ ಭಗವಂತಮೇನಂ
ಧ್ಯಾಯನ್ನನೇಕಾನ್ ದಿವಸಾನನೈಷಮ್ || ೪೬

"ಹಿಂದೆ ಒಂದು ಸಲ ಅಹೋಬಲಪರ್ವತದಮೇಲೆ ಒಂದು ಪುಣ್ಯಾರಣ್ಯಕ್ಕೆ ಹೋಗಿ ಭಕ್ತರಿಗೆ ಮಾತ್ರ ಒಲಿಯತಕ್ಕವನಾದ ಈ ಭಗವಾನ್ ನರಸಿಂಹಸ್ವಾಮಿಯನ್ನು ಧ್ಯಾನಿಸುತ್ತಾ ಬಹಳ ದಿವಸಗಳನ್ನು ಕಳೆದೆನು.

ಕಿಮರ್ಥಮೇಕೋ ಗಿರಿಗಹ್ವರೇಽಸ್ಮಿನ್
ವಾಚಂಯಮ ತ್ವಂ ವಸಸೀತಿ ಶಶ್ವತ್ |
ಕೇನಾಪಿ ಪೃಷ್ಟೋಽತ್ರ ಕಿರಾತಯೂನಾ
ಪ್ರತ್ಯುತ್ತರಂ ಪ್ರಾಗಹಮಿತ್ಯವೋಚಮ್ || ೪೭

"ಹೀಗಿರಲು ಯಾವನೋ ಒಬ್ಬ ಯುವಕನಾದ ವ್ಯಾಧನು ಬಂದು ನನ್ನನ್ನು ಕುರಿತು"ಈ ಬೆಟ್ಟದ ಕಂದರದಲ್ಲಿ ಏನೂ ಮಾತಾಡದೆ ಒಂಟಿಯಾಗಿ ಇದ್ದೀಯಲ್ಲ, ಇದೇಕೆ?" ಎಂದು ಮತ್ತೆ ಮತ್ತೆ ನನ್ನನ್ನು ಕೇಳಿದನು. ಆಗ ನಾನು ಮೊದಲು ಹೀಗೆ ಉತ್ತರಿಸಿದೆನು.

ಟಿಪ್ಪಣಿ:- ವಾಚಂಯಮ = ವಾಚಂಯಮಪುರಂದರೌ ಚ - ಎಂಬ ಸೂತ್ರದಿಂದ ಈ ಶಬ್ದವು ನಿಪಾತಿತವಾಗಿದೆ.

ಆಕಂಠಮತ್ಯದ್ಭುತಮರ್ತ್ಯಮೂರ್ತಿಃ
ಕಂಠೀರವಾತ್ಮಾ ಪರತಶ್ಚ ಕಶ್ಚಿತ್ |
ಮೃಗೋ ವನೇಽಸ್ಮಿನ್ ಮೃಗಯೋ ವಸನ್ಮೇ
ಭವತ್ಯಹೋ ನಾಕ್ಷಿಪಥೇ ಕದಾಪಿ || ೪೮

"ಈ ವನದಲ್ಲಿ ಒಂದಾನೊಂದು ಮೃಗವು ಇದೆ. ಕತ್ತಿನವರೆಗೆ ಆಶ್ಚರ್ಯಕರವಾದ ಮನುಷ್ಯದೇಹವಿದೆ. ಮುಖವು ಸಿಂಹದ ಮುಖದಂತಿದೆ! ವ್ಯಾಧನೆ, ಅದು ನನ್ನ ಕಣ್ಣಿಗೆ ಕಾಣಿಸುವುದೇ ಇಲ್ಲವಲ್ಲ!" ಎಂದೆನು.

ಇತೀರಯತ್ಯೇವ ಮಯಿ ಕ್ಷಣೇನ
ವನೇಚರೋಽಯಂ ಪ್ರವಿಶನ್ ವನಾಂತಮ್ |
ನಿಬಧ್ಯ ಗಾಢಂ ನೃಹರಿಂ ಲತಾಭಿಃ
ಪುಣ್ಯೈರಗಣ್ಯೈಃ ಪುರತೋ ವ್ಯಧಾನ್ಮೇ || ೪೯

"ನಾನು ಹೀಗೆ ಹೇಳುತ್ತಿರುವಷ್ಟರಲ್ಲಿಯೇ ಆ ಬೇಡನು ಕಾಡಿನೊಳಗೆ ಹೋಗಿಬಿಟ್ಟನು. ಸ್ವಲ್ಪ ಹೊತ್ತಿನಲ್ಲಿಯೇ ನರಸಿಂಹಸ್ವಾಮಿಯನ್ನು ಬಳ್ಳಿಗಳಿಂದ ಬಿಗಿದು ಕಟ್ಟಿ ನನ್ನೆದುರಿಗೆ ತಂದು ನಿಲ್ಲಿಸಿದನು! ನನ್ನ ಮಹತ್ತರವಾದ ಪುಣ್ಯವಿಶೇಷದಿಂದ ಹೀಗಾಯಿತು.

ಮಹರ್ಷಿಭಿಸ್ತ್ವಂ ಮನಸಾಪ್ಯಗಮ್ಯೋ
ವನೇಚರಸ್ಯೈವ ಕಥಂ ವಶೇಽಭೂಃ |
ಇತ್ಯದ್ಭುತಾವಿಷ್ಟಹೃದಾ ಮಯಾಽಸೌ
ವಿಜ್ಞಾಪ್ಯಮಾನೋ ವಿಭುರಿತ್ಯವಾದೀತ್ || ೫೦

"ನಾನು ಆ ಸ್ವಾಮಿಯನ್ನು ಕುರಿತು "ಪ್ರಭು, ಮಹರ್ಷಿಗಳಿಗೆ ಸಹ ಮನಸ್ಸಿಗೂ ಅಗಮ್ಯನಾದವನು ನೀನು. ಒಬ್ಬ ಬೇಡನಿಗೆ ಹೇಗೆ ವಶನಾಗಿಬಿಟ್ಟೆ?" ಎಂದು ವಿಸ್ಮಯಾವಿಷ್ಟನಾಗಿ ಕೇಳಿದೆನು. ಆಗ ಸ್ವಾಮಿಯು ಇಂತೆಂದನು–

ಏಕಾಗ್ರಚಿತ್ತೇನ ಯಥಾಽಮುನಾಹಂ
ಧ್ಯಾತಸ್ತಥಾ ಧಾತೃಮುಖೈರ್ನ ಪೂರ್ವೈಃ |
ನೋಪಾಲಭೇಥಾಸ್ತ್ವಮಿತೀರಯನ್ಮೇ
ಕೃತ್ವಾ ಪ್ರಸಾದಂ ಕೃತವಾಂಸ್ತಿರೋಧಿಮ್ || ೫೧

ಈ ವ್ಯಾಧನು ಹೇಗೆ ಏಕಾಗ್ರಚಿತ್ತನಾಗಿ ನನ್ನನ್ನು ಧ್ಯಾನಿಸಿದನೋ ಹಾಗೆ ಪೂರ್ವದಲ್ಲಿ ಬ್ರಹ್ಮಾದಿಗಳೂ ಅಷ್ಟು ಏಕಾಗ್ರತೆಯಿಂದ ಧ್ಯಾನಮಾಡಲಿಲ್ಲ. (ಈತನು ಧ್ಯಾನ ಮಾಡದಿದ್ದರೆ) ನೀನೂ ನನ್ನನ್ನು ಪಡೆಯುತ್ತಿರಲಿಲ್ಲ– ಎಂದು ಹೇಳಿ ನನ್ನ ಇಷ್ಟಾರ್ಥವನ್ನಿತ್ತು ಪ್ರಸನ್ನನಾಗಿ ಅಂತರ್ಧಾನ ಹೊಂದಿದನು."

ಆಕರ್ಣ್ಯ ತಾಂ ಪದ್ಮಪದಸ್ಯ ವಾಣೀಂ
ಆನಂದಮಗ್ನೈರಖಿಲೈರಭಾವಿ |
ಜಗರ್ಜ ಚೋಚ್ಚೈರ್ಜಗದಂಡಭಾಂಡಂ
ಭೂಮ್ನಾ ಸ್ವಧಾಮ್ನಾ ದಲಯನ್ ನೃಸಿಂಹಃ || ೫೨

ಪದ್ಮಪಾದರ ಈ ವಾಣಿಯನ್ನು ಕೇಳಿ ಎಲ್ಲ ಶಿಷ್ಯಜನರೂ ಆನಂದಮಗ್ನರಾದರು. ನೃಸಿಂಹ ಸ್ವಾಮಿಯಾದರೋ ಅದ್ಭುತವಾದ ತೇಜೋಬಲದಿಂದ ಬ್ರಹ್ಮಾಂಡವೇ ಒಡೆದು ಹೋಗುವಂತೆ ಗಟ್ಟಿಯಾಗಿ ಗರ್ಜಿಸಿದನು.

ತತಸ್ತದಾರ್ಭಾಟ ಚಲತ್ಸಮಾಧಿಃ
ಸ್ವಾತ್ಮಪ್ರಬೋಧೋನ್ಮಥಿತತ್ರ್ಯುಪಾಧಿಃ ।
ಉನ್ಮೀಲ್ಯ ನೇತ್ರೇ ವಿಕರಾಲವಕ್ತ್ರಂ
ವ್ಯಲೋಕಯನ್ಮಾನವ ಪಂಚವಕ್ತ್ರಮ್ ॥ ೫೩

ಈ ಆರ್ಭಟದ ಗರ್ಜನೆಯಿಂದ ಆಚಾರ್ಯರ ಸಮಾಧಿಯು ವಿಚಲಿತವಾಯಿತು. ಆತ್ಮಜ್ಞಾನದಿಂದ ಸ್ಥೂಲ ಸೂಕ್ಷ್ಮ ಕಾರಣಶರೀರಗಳೆಂಬ ಉಪಾಧಿ ತ್ರಯದ ಅಭಿಮಾನವನ್ನು ತ್ಯಜಿಸಿದ್ದ ಆಚಾರ್ಯರು ಕಣ್ಣುಗಳನ್ನು ತೆರೆದು ಅತ್ಯಂತ ಕರಾಳಮುಖನಾದ ಆ ನರಸಿಂಹಸ್ವಾಮಿಯನ್ನು ಕಂಡರು.

ಚಂದ್ರಾಂಶುಸೋದರ್ಯ ಸಟಾಜಟಾಲಂ
ತಾರ್ತೀಯ ನೇತ್ರಾಬ್ಜಕನನ್ನಿಟಾಲಮ್ ।
ಸಹೋದ್ಯದುಷ್ಣಾಂಶು ಸಹಸ್ರಭಾಸಂ
ವಿಧ್ಯಂಡ ವಿಸ್ಫೋಟಕೃದಟ್ಟಹಾಸಮ್ ॥ ೫೪

ನೃಸಿಂಹಸ್ವಾಮಿಯಾದರೋ ಚಂದ್ರಕಿರಣಗಳಂತೆ ಶೋಭಿಸುವ ಶುಭ್ರ ಕೇಸರಗಳಿಂದ ವ್ಯಾಪ್ತನಾಗಿದ್ದನು. ತೃತೀಯ ನೇತ್ರಕಮಲವು ಹಣೆಯಲ್ಲಿ ಶೋಭಿಸುತ್ತಿತ್ತು. ಒಟ್ಟಿಗೆ ಉದಯಿಸಿದ ಸಹಸ್ರಸೂರ್ಯರಂತೆ ಆತನು ಬೆಳಗುತ್ತಿದ್ದನು. ಬ್ರಹ್ಮಾಂಡವು ಸ್ಫೋಟಿಸಿ ಹೋಗುವಂತೆ ಅಟ್ಟಹಾಸ ಗೈಯುತ್ತಿದ್ದನು.

ಟಿಪ್ಪಣಿ:- ನಿಟಾಲ = ಹಣೆ. ನಿಟಿಲ, ನಿಟಲ ಎಂಬ ರೂಪಾಂತರಗಳಿವೆ. ಕನತ್ = ಶೋಭಿಸುವ.

ನಖಾಗ್ರನಿರ್ಭಿನ್ನಕಪಾಲಿವಕ್ಷಃ -
ಸ್ಥಲೋಚ್ಚಲಚ್ಛೋಣಿತ ಪಂಕಿಲಾಂಗಮ್ ।
ಶ್ರೀವತ್ಸವತ್ಸಂ ಗಲವೈಜಯಂತೀ
ಶ್ರೀರತ್ನಸಂಸ್ಪರ್ಧಿತದಂತ್ರಮಾಲಮ್ ॥ ೫೫

ತನ್ನ ನಖಾಗ್ರಗಳಿಂದ ಸೀಳಿದ ಆ ಕಾಪಾಲಿಕನ ವಕ್ಷಃಸ್ಥಳದಿಂದ ಚಿಮ್ಮಿದ ರಕ್ತದಿಂದ ನರಸಿಂಹನ ದೇಹವು ಸಿಕ್ತವಾಗಿತ್ತು. ವಕ್ಷಃಸ್ಥಳದಲ್ಲಿ ಶ್ರೀವತ್ಸವೂ ಕೊರಳಲ್ಲಿ

ವೈಜಯಂತೀಮಾಲೆ ಮತ್ತು ಕೌಸ್ತುಭ ರತ್ನಗಳೊಡನೆ ಭೈರವನ ಕರುಳಿನಮಾಲೆಯಿತ್ತು! ಅಂತಹ ನರಸಿಂಹಸ್ವಾಮಿಯನ್ನು ಶ್ರೀಶಂಕರರು ನೋಡಿದರು.

ಟಿಪ್ಪಣಿ:- ಕಪಾಲಿ = ಕಪಾಲಧಾರಿಯಾದ ಕಾಪಾಲಿಕ.

ಸುರಾಸುರತ್ರಾಸಕರಾತಿಘೋರ-
ಸ್ವಾಕಾರಸಾರವ್ಯಥಿತಾಂಡಕೋಶಮ್ ।
ದಂಷ್ಟ್ರಾ ಕರಾಲಾನನನಿರ್ಯದಗ್ನಿ-
ಜ್ವಾಲಾಲಿಸಂಲೀಢನಭೋಽವಕಾಶಮ್ ॥ ೫೬

ಅಲ್ಲದೆ ಆ ಸ್ವಾಮಿಯು ದೇವಾಸುರರಿಗೂ ಭಯವನ್ನುಂಟುಮಾಡುವ ವಿಕಟಾಕಾರವುಳ್ಳ ಘೋರವಾದ ತನ್ನ ಆಕಾರದಿಂದ ಜಗತ್ತೆಲ್ಲವನ್ನೂ ಭೀತಿಗೊಳಿಸುತ್ತಿದ್ದನು. ಕೋರೆಹಲ್ಲುಗಳಿಂದ ಕ್ರೂರವಾಗಿ ಕಾಣುತ್ತಿದ್ದ ಮುಖದಿಂದ ಸಿಡಿಯುವ ಅಗ್ನಿ ಜ್ವಾಲೆಯು ಆಕಾಶವನ್ನು ಆಕ್ರಮಿಸಿತ್ತು.

ಸ್ವರೋಮಕೂಪೋದ್ಗತವಿಸ್ಫುಲಿಂಗ-
ಪ್ರಚಾರಸಂದೀಪಿತ ಸರ್ವಲೋಕಮ್ ।
ಜಂಭದ್ವಿಡುಜ್ಜೃಂಭಿತ ಶಂಭುದಂಭ-
ಸಂಸ್ತಂಭನಾರಂಭಕದಂತಪೇಷಮ್ ॥ ೫೭

ತನ್ನ ರೋಮ ಕೂಪಗಳಿಂದ ಚಟಚಟನೆ ಸಿಡಿಯುವ ಕಿಡಿಗಳಿಂದ ಸರ್ವಲೋಕವನ್ನೂ ಸುಟ್ಟು ಬಿಡುವನೋ ಎಂಬಂತೆ ಕಾಣುತ್ತಿದ್ದನು. ಜಂಭಾಸುರನನ್ನು ಸಂಹರಿಸಲು ಹೊರಟ ದೇವೇಂದ್ರನ ಮತ್ತು(ಪ್ರಳಯಕಾಲದ) ರುದ್ರನ ಜಂಭವನ್ನು ಅಡಗಿಸಲು ತೊಡಗಿದಂತೆ ಹಲ್ಲುಗಳನ್ನು ಕಟಕಟನೆ ಕಡಿಯುತ್ತಿದ್ದನು!

ಮಾ ಭೂದಕಾಂಡೇ ಪ್ರಲಯೋ ಮಹಾತ್ಮನ್
ಕೋಪಂ ನಿಯಚ್ಛೇತಿ ಗೃಣದ್ಭಿರಾರಾತ್ ।
ಸಸಾಧ್ವಸೈಃ ಪ್ರಾಂಜಲಿಭಿಃ ಸಗಾತ್ರ-
ಕಂಪೈರ್ವಿರಿಂಚ್ಯಾದಿಭಿರರ್ಥ್ಯಮಾನಮ್ ॥ ೫೮

"ಓ ಮಹಾತ್ಮನೇ, ಅಕಾಲದಲ್ಲಿ ಪ್ರಳಯವಾಗುವುದು ಬೇಡ. ಕೋಪವನ್ನು ನಿಗ್ರಹಿಸು" ಎಂದು ಭೀತರಾಗಿ ಕೈಮುಗಿದುಕೊಂಡು ದೂರದಲ್ಲಿ ನಿಂತ ಬ್ರಹ್ಮಾದಿ ದೇವತೆಗಳು ಆ ಸ್ವಾಮಿಯನ್ನು ಪ್ರಾರ್ಥಿಸುತ್ತಿದ್ದರು. ಅವರ ದೇಹಗಳು ಭಯದಿಂದ ನಡುಗುತ್ತಿದ್ದವು.

ವಿಲೋಕ್ಯ ವಿದ್ಯುಚ್ಚಪಲೋಗ್ರಜಿಹ್ವಂ
ಯತಿಕ್ಷಿತೀಶಃ ಪುರತೋ ನೃಸಿಂಹಮ್ ।
ಅಭೀತಿರೈಡಿಷ್ಟ ತದೋಪಕಂಠಂ
ಸ್ಥಿತೋಽಪಿ ಹರ್ಷಾಶ್ರುಪಿನದ್ಧಕಂಠಃ ॥ ೫೯

ಮಿಂಚಿನಂತೆ ಆತನ ಉಗ್ರವಾದ ನಾಲಗೆಯು ಅಲ್ಲಾಡುತ್ತಿತ್ತು. ಅಂತಹ ನೃಸಿಂಹಸ್ವಾಮಿಯನ್ನು ಎದುರಿಗೆ ನೋಡಿದ ಯತೀಂದ್ರರಾದ ಶ್ರೀಶಂಕರರು ಸಮೀಪದಲ್ಲಿ ಇದ್ದರೂ ಭಯಪಡದೆ ಆನಂದಬಾಷ್ಪಗಳನ್ನುಸುರಿಸಿ ಕಂಠದಲ್ಲಿ ಗದ್ಗದಿಸುತ್ತ ಈ ಪ್ರಕಾರವಾಗಿ ಸ್ತೋತ್ರಮಾಡಿದರು.

ನರಹರೇ ಹರ ಕೋಪಮನರ್ಥದಂ
ತವ ರಿಪುರ್ನಿಹತೋ ಭುವಿ ವರ್ತತೇ ।
ಕುರು ಕೃಪಾಂ ಮಯಿ ದೇವ ಸನಾತನೀಂ
ಜಗದಿದಂ ಭಯಮೇತಿ ಭವದ್‌ದೃಶಾ ॥ ೬೦

"ಹೇ ನರಸಿಂಹಸ್ವಾಮಿಯೇ, ವಿಪತ್ಕರವಾದ ಈ ಕೋಪವನ್ನು ಉಪಸಂಹರಿಸು. ನಿನ್ನ ವೈರಿಯು ಹತನಾಗಿ ನೆಲದಮೇಲೆ ಬಿದ್ದಿರುವನು. ನಿನಗೆ ಶಾಶ್ವತವಾಗಿರುವ ಕಾರುಣ್ಯವನ್ನು, ಹೇ ದೇವ, ನನ್ನಲ್ಲಿಡು. ನಿನ್ನ ನೋಟದಿಂದ ಈ ಜಗತ್ತು ಭಯಗೊಂಡು ತಲ್ಲಣಿಸುತ್ತಿದೆ.

ತವ ವಪುಃ ಕಿಲ ಸತ್ತ್ವಮುದಾಹೃತಂ
ತವ ಹಿ ಕೋಪನಮಣ್ವಪಿ ನೋಚಿತಮ್ ।
ತದಿಹ ಶಾಂತಿಮವಾಪ್ನುಹಿ ಶರ್ಮಣೇ
ಹರಗುಣಂ ಹರಿರಾಶ್ರಯಸೇ ಕಥಮ್ ॥ ೬೧

"ನಿನ್ನ ದೇಹವು ಸತ್ತ್ವಗುಣಯುಕ್ತವೆಂದು ಉಕ್ತವಾಗಿದೆಯಲ್ಲವೆ? ಕೋಪಿಸಿಕೊಳ್ಳುವುದು ಸ್ವಲ್ಪವೂ ನಿನಗೆ ಉಚಿತವಾದದ್ದಲ್ಲ. ಆದ್ದರಿಂದ ಈಗ ಲೋಕಹಿತಕ್ಕಾಗಿ ಶಾಂತನಾಗು. ಹರಿಯಾದ ನೀನು ಹರನ ತಮೋಗುಣವನ್ನು ಆಶ್ರಯಿಸುವುದು ಹೇಗೆ ಉಚಿತವಾದೀತು?

ಸಕಲಭೀತಿಷು ದೈವತಮ ಸ್ಮರನ್
ಸಕಲಭೀತಿಮಪೋಹ್ಯ ಸುಖೀ ಪುಮಾನ್ ।
ಭವತಿ ಕಿಂ ಪ್ರವದಾಮಿ ತವೇಕ್ಷಣೇ
ಪರಮದುರ್ಲಭಮೇವ ತವೇಕ್ಷಣಮ್ ॥ ೬೨

"ಹೇ ದೇವೋತ್ತಮ, ಎಲ್ಲಾ ಭಯಸಮಯಗಳಲ್ಲಿಯೂ ನಿನ್ನನ್ನು ಸ್ಮರಿಸಿಕೊಳ್ಳುವ ಮನುಷ್ಯನು ಸಕಲ ಭಯಗಳನ್ನೂ ನೀಗಿಕೊಂಡು ಸುಖಿಯಾಗುತ್ತಾನೆ. ಹೀಗಿರುವಾಗ ನಿನ್ನನ್ನೇ ಕಂಡಾಗ ಎಷ್ಟು ಸುಖಿಯಾಗುವನೆಂಬುದನ್ನು ಏನು ಹೇಳಲಿ ? ನಿನ್ನ ದರ್ಶನವು ಅತ್ಯಂತ ದುರ್ಲಭವಾದದ್ದೇ ಸರಿ.

ಸ್ಮೃತವತಸ್ತವ ಪಾದಸರೋರುಹಂ
ಮೃತವತಃ ಪುರುಷಸ್ಯ ವಿಮುಕ್ತತಾ ।
ತವ ಕರಾಭಿಹತೋಽಮೃತ ಭೈರವೋ
ನ ಹಿ ಸ ಏಷ ಪುನರ್ಭವಮೇಷ್ಯತಿ ॥ ೬೩

"ನಿನ್ನ ಪಾದಕಮಲವನ್ನು ಸ್ಮರಿಸುತ್ತ ಮೃತನಾದ ಮನುಷ್ಯನಿಗೆ ಮುಕ್ತಿ ದೊರೆಯುವುದು. ಉಗ್ರಭೈರವನು ನಿನ್ನ ಕೈಯಿಂದಲೇ ಹತನಾಗಿದ್ದಾನೆ. ಆತನು ಎಂದಿಗೂ ಪುನರ್ಜನ್ಮವನ್ನು ಪಡೆಯುವುದಿಲ್ಲ. (ಮುಕ್ತನಾಗುತ್ತಾನೆ ಎಂದು ಅಭಿಪ್ರಾಯ)

ಟಿಪ್ಪಣಿ :- ಈ ಶ್ಲೋಕದ ಮೊದಲನೆಯ ಸಾಲಿಗೆ "ನಿನ್ನನ್ನು ಸ್ಮರಿಸಿದವನಿಗೆ ನಿನ್ನ ಪಾದಕಮಲದ ಪ್ರಾಪ್ತಿಯಾಗುವುದು" ಎಂದು ಅರ್ಥವನ್ನೂ ಹೇಳಬಹುದು.

ದಿತಿಜಸೂನುಮಮುಂ ವ್ಯಸನಾರ್ದಿತಂ
ಸಕೃದರಕ್ಷದುದಾರಗುಣೋ ಭವಾನ್ ।
ಸಕಲಗತ್ವಮುದೀರಿತಮಸ್ಫುಟಂ
ಪ್ರಕಟಮೇವ ವಿಧಿತ್ಸುರಭೂತ್ಪುರಃ ॥ ೬೪

"ಉದಾರಗುಣಶಾಲಿಯಾದ ನೀನು ಕಷ್ಟದಲ್ಲಿ ಸಿಕ್ಕಿದ್ದ ದೈತ್ಯಪುತ್ರನಾದ ಪ್ರಹ್ಲಾದನನ್ನು ಒಮ್ಮೆ ರಕ್ಷಿಸಿದ್ದೀಯೆ. ನೀನು ಸರ್ವವ್ಯಾಪಿಯೆಂದು ಪ್ರಹ್ಲಾದನು ಹೇಳಿದ ವಿಷಯವು ಅಸ್ಫುಟವಾಗಿತ್ತು. ಅದನ್ನು ಸ್ಫುಟಗೊಳಿಸುವುದಕ್ಕಾಗಿ ನೀನು ಎದುರಿಗೆ ಆವಿರ್ಭವಿಸಿದೆ.

ಸೃಜಸಿ ವಿಶ್ವಮಿದಂ ರಜಸಾಽವೃತಃ
ಸ್ಥಿತಿವಿಧೌ ಶ್ರಿತಸತ್ತ್ವ ಉದಾಯುಧಃ ।
ಅವಸಿ ತದ್ಧರಣೇ ತಮಸಾಽಽವೃತೋ
ಹರಸಿ ದೇವ ತದಾ ಹರಸಂಜ್ಞಿತಃ ॥ ೬೫

"ಹೇ ಸ್ವಾಮಿ, ನೀನೇ ರಜೋಗುಣಯುಕ್ತನಾಗಿ ಈ ವಿಶ್ವವನ್ನು ಸೃಷ್ಟಿಸುತ್ತೀಯೆ. ಇದರ ಸ್ಥಿತಿಯನ್ನು ನೋಡಿಕೊಳ್ಳುವಾಗ ಸತ್ತ್ವಗುಣವನ್ನಾಶ್ರಯಿಸಿ ಆಯುಧಧಾರಿಯಾಗಿ ಜಗತ್ತನ್ನು

ರಕ್ಷಿಸುತ್ತೀಯೆ. ಹೇ ದೇವ, ಜಗತ್ತಿನ ಸಂಹಾರ ಕಾಲದಲ್ಲಿ, ಹರ ಎಂಬ ಸಂಜ್ಞೆಯನ್ನು ಧರಿಸಿ ಸಂಹರಿಸುತ್ತೀಯೆ.

ತವ ಜನಿರ್ನ ಗುಣಾಸ್ತ್ವ ತತ್ತ್ವತೋ
ಜಗದನುಗ್ರಹಣಾಯ ಭವಾದಿಕಮ್ |
ತವ ಪದಂ ಖಲು ವಾಙ್ಮನಸಾತಿಗಂ
ಶ್ರುತಿವಚಶ್ಚಕಿತಂ ತವ ಬೋಧಕಮ್ || ೬೬

"ನಿನಗೆ ಜನ್ಮವೆಂಬುದೇ ಇಲ್ಲ. ತತ್ತ್ವದೃಷ್ಟಿಯಿಂದ ನಿನ್ನಲ್ಲಿ ಯಾವ ಗುಣಗಳೂ ಇಲ್ಲ. ಜನ್ಮ ಮೊದಲಾದದ್ದೆಲ್ಲವೂ ಜಗತ್ತಿನ ಅನುಗ್ರಹಕ್ಕಾಗಿ. ನಿನ್ನ ಸ್ವರೂಪವು ವಾಕ್ಕಿಗೂ, ಮನಸ್ಸಿಗೂ ಸಹ ಎಂದಿಗೂ ನಿಲುಕತಕ್ಕದ್ದಲ್ಲ. ವೇದವಾಕ್ಯವಾದರೋ ಹೆದರುತ್ತಲೇ ನಿನ್ನ ಸ್ವರೂಪವನ್ನು ತಿಳಿಸುತ್ತದೆ.

ಟಿಪ್ಪಣಿ :- ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ - ಎಂದು ಶ್ರುತಿವಚನವಿದೆ. ಅಸ್ಥೂಲಮನಣು -ಇತ್ಯಾದಿ ವಾಕ್ಯದಿಂದ ಬ್ರಹ್ಮವು ಸ್ಥೂಲವಲ್ಲ, ಅಣುವಲ್ಲ ಎಂದು ನಿಷೇಧಮುಖದಿಂದ ಶ್ರುತಿಯು ತಿಳಿಸುತ್ತದೆ. ಆದ್ದರಿಂದ ಹೆದರುತ್ತ ತಿಳಿಸುತ್ತದೆ ಎಂದು ವರ್ಣಿಸಲಾಗಿದೆ. ವಾಙ್ಮನಸ = ಅಚತುರ ವಿಚತುರ ಸುಚತುರ - ಇತ್ಯಾದಿ ಸೂತ್ರದಿಂದ ಇದು ನಿಪಾತಿತವಾಗಿದೆ.

ನರಹರೇ ತವ ನಾಮಪರಿಶ್ರವಾತ್
ಪ್ರಮಥಗುಹ್ಯಕದುಷ್ಟಪಿಶಾಚಕಾಃ |
ಅಪಸರಂತಿ ವಿಭೋಽಸುರನಾಯಕಾ
ನ ಹಿ ಪುರಃಸ್ಥಿತಯೇ ಪ್ರಭವಂತ್ಯಪಿ || ೬೭

"ಹೇ ನರಹರಿ, ನಿನ್ನ ನಾಮಕೀರ್ತನೆಯನ್ನು ಕೇಳಿದೊಡನೆಯೇ ಪ್ರಮಥ - ಗುಹ್ಯಕ-ದುಷ್ಟಪಿಶಾಚಗಳು ಓಡಿ ಹೋಗುತ್ತವೆ. ಹೇ ವಿಭೋ, ಅಸುರ ನಾಯಕರು ನಿನ್ನೆದುರಿಗೆ ನಿಲ್ಲಲು ಸಮರ್ಥರಲ್ಲ.

ತ್ವಮೇವ ಸರ್ಗಸ್ಥಿತಿಹೇತುರಸ್ಯ
ತ್ವಮೇವ ನೇತಾ ನೃಹರೇಽಖಿಲಸ್ಯ |
ತ್ವಮೇವ ಚಿಂತ್ಯೋ ಹೃದಯೇಽನವದ್ಯೇ
ತ್ವಾಮೇವ ಚಿನ್ಮಾತ್ರಮಹಂ ಪ್ರಪದ್ಯೇ || ೬೮

"ಹೇ ನೃಸಿಂಹ ಸ್ವಾಮಿ, ನೀನೇ ಈ ವಿಶ್ವದ ಸೃಷ್ಟಿ ಸ್ಥಿತಿಗಳಿಗೆ ಕಾರಣನಾಗಿದ್ದೀಯೆ. ಸರ್ವಕ್ಕೂ ಪ್ರಭುವಾಗಿದ್ದೀಯೆ. ಶುದ್ಧವಾದ ಹೃದಯದಲ್ಲಿ ಧ್ಯಾನಿಸಲ್ಪಡಬೇಕಾದವನು ನೀನೇ. ಚಿನ್ಮಾತ್ರ ಸ್ವರೂಪನಾದ ನಿನ್ನನ್ನು ನಾನು ಶರಣುಹೊಂದಿದ್ದೇನೆ.

ಹತೋ ವರಾಕೋ ಹಿ ರುಷಂ ನಿಯಚ್ಛ
ವಿಶ್ವಸ್ಯ ಭೂಮನ್ನಭಯಂ ಪ್ರಯಚ್ಛ ।
ಏತೇ ಹಿ ದೇವಾಃ ಶಮಮರ್ಥಯಂತೇ
ನಿರೀಕ್ಷ್ಯ ಭೀತಾಃ ಪ್ರತಿಖೇದಯಂತೇ ॥ ೬೯

"ನೀಚನಾದ ಈ ಭೈರವನು ಹತನಾದನಲ್ಲವೆ? ಇನ್ನು ಕೋಪವನ್ನು ನಿಗ್ರಹಿಸು. ಹೇ ಭೂಮ, ಪ್ರಪಂಚಕ್ಕೆ ಅಭಯವನ್ನು ನೀಡು. ಈ ದೇವತೆಗಳು ನಿನ್ನನ್ನು ನೋಡಿ ಶಾಂತಿಗಾಗಿ ಪ್ರಾರ್ಥಿಸುತ್ತಿದ್ದಾರೆ. ಇವರು ಹೆದರಿ ಕಂಗಾಲಾಗಿದ್ದಾರೆ.

ದ್ರಷ್ಟುಂ ನ ಶಕ್ಯಾ ಹಿ ತವಾನುಕಂಪಾ-
ಹೀನೈರ್ಜನೈರ್ನಿಹ್ನುತಕೋಟಿಶಂಪಾಮ್ ।
ಮೂರ್ತಿಂ ತದಾತ್ಮನ್ನುಪಸಂಹರೇಮಾಂ
ಪಾಹಿ ತ್ರಿಲೋಕೀಂ ಸಮತೀತಸೀಮಾಮ್ ॥ ೭೦

"ನಿನ್ನ ಕಾರುಣ್ಯವನ್ನು ಪಡೆಯದ ಜನರಿಗೆ ಕೋಟಿ ಕೋಟಿ ಮಿಂಚುಗಳಿಗಿಂತ ಅಧಿಕವಾಗಿ ಬೆಳಗುವ ಈ ಮೂರ್ತಿಯನ್ನು ನೋಡಲು ಶಕ್ಯವಲ್ಲ. ಹೇ ಪರಮಾತ್ಮ, ಈ ರೂಪವನ್ನು ಉಪಸಂಹರಿಸು. ಕೊನೆಯಿಲ್ಲದ ಅಪಾರವಾದ ಈ ಲೋಕತ್ರಯವನ್ನು ಪಾಲಿಸು.

ಟಿಪ್ಪಣಿ :-ಸಮತೀತಸೀಮಾಂ =ಡಾಬುಭಾಭ್ಯಾಮನ್ಯತರಸ್ಯಾಂ- ಎಂಬ ಸೂತ್ರದಿಂದ ಬಹುವ್ರೀಹಿಯಲ್ಲಿ ಡಾಪ್ ಪ್ರತ್ಯಯ.

ಕಲ್ಪಾಂತೋಜ್ಜೃಂಭಮಾಣಪ್ರಮಥಪರಿವೃಢ ಪ್ರೌಢಲಾಲಾಟವಹ್ನಿ -
ಜ್ವಾಲಾಲೀಢ ತ್ರಿಲೋಕೀಜನಿತಚಟಚಟಾಧ್ವಾನಧಿಕ್ಕಾರಧುರ್ಯಃ ।
ಮಧ್ಯೇ ಬ್ರಹ್ಮಾಂಡ ಭಾಂಡೋದರಕುಹರಮನೈಕಾಂತ್ಯದುಃಸ್ಥಾಮವಸ್ಥಾಂ
ಸ್ಥಾನಸ್ಥಾನೋ ಮಮಾಯಂ ದಲಯತು ದುರಿತಂ
ಶ್ರೀನೃಸಿಂಹಾಟ್ಟಹಾಸಃ ॥ ೭೧

"ಬ್ರಹ್ಮಾಂಡವೆಂಬ ಭಾಂಡದ ಉದರಮಧ್ಯದಲ್ಲಿ ನಿಶ್ಚಯವಾಗಿಯೂ ಯಾರಿಗೂ ಇರಲಾಗದ ದುಃಖ ಪೂರ್ಣವಾದ ಈ ಅವಸ್ಥೆಯನ್ನೂ ಹಾಗೆಯೇ ನನ್ನ ದುರಿತವನ್ನೂ ಸಹ ಅಗ್ನಿಯಂತೆ ಘನಘೋರವಾದ ಶ್ರೀನೃಸಿಂಹನ ಅಟ್ಟಹಾಸವು ಹೋಗಲಾಡಿಸಲಿ. ಪ್ರಳಯಕಾಲದಲ್ಲಿ ವಿಜೃಂಭಿಸುವ ರುದ್ರನ ಭೀಕರವಾದ ಹಣೆಗಣ್ಣಿನ ಅಗ್ನಿಜ್ವಾಲೆಯಿಂದ ಆಕ್ರಾಂತವಾದ ತ್ರಿಲೋಕದಲ್ಲಿ ಉಂಟಾಗುವ ಚಟಚಟ ಶಬ್ದವನ್ನು ಧಿಕ್ಕರಿಸ ತಕ್ಕದ್ದು ಈ ನಿನ್ನ ಅಟ್ಟಹಾಸ.

ಟಿಪ್ಪಣಿ :- 'ಅವಸ್ಥಾಂ ದುರಿತಂ ಚ' ಎಂದು 'ಚ' ಶಬ್ದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಸ್ತ್ಯಾನಸ್ತ್ಯಾನ = ಅಗ್ನಿಯಂತೆ ಘನವಾದ. 'ಸ್ತ್ಯಾನಂ ಸ್ನಿಗ್ಧೇಽಪಿ ಚ ಘನೇ ತ್ವನಲಾಲಸ್ಯಯೋರಪಿ' ಮೇದಿನೀಕೋಶ.

ಮಧ್ಯೇ ವ್ಯಾನದ್ಧವಾತಂಧಯಗುಣವಲನಾಧಾನಮಂಥಾನಭೂಭೃತ್
ಮಂಥೇನೋತ್‌ಕ್ಷೋಭಿದುಗ್ಧೋದಧಿಲಹರಿಮಿಥಃ
ಸ್ಫಾಲನಾಚಾರಘೋರಃ |
ಕಲ್ಪಾಂತೋನ್ನಿದ್ರರುದ್ರೋಚ್ಚತರಡಮರುಕಧ್ವಾನಬದ್ಧಾಭ್ಯಸೂಯೋ
ಘೋಷೋಽಯಂ ಕರ್ಣಘೋರಃ ಕ್ಷಪಯತು ನೃಹರೇರಂಹಸಾಂ
ಸಂಹತಿಂ ನಃ || ೭೨

"ವಾಸುಕಿ ಸರ್ಪವೆಂಬ ಹಗ್ಗವನ್ನು ನಡುವಿಗೆ ಬಳಸಿ ಸುತ್ತಿಕೊಂಡು ಮಂದರ ಪರ್ವತದ ಮಂಥನದಿಂದ ಎದ್ದೆದ್ದು ಬೀಳುತ್ತಿದ್ದ ಕ್ಷೀರಸಮುದ್ರದ ಅಲೆಗಳು ಒಂದುಕ್ಕೊಂದು ಡಿಕ್ಕಿ ಹೊಡೆದಾಗ ಆಗುವ ಘೋರಶಬ್ದದಂತೆ ನೃಸಿಂಹ ಸ್ವಾಮಿಯ ಗರ್ಜನೆ ಇದೆ. ಇದು ಕಲ್ಪಾಂತದಲ್ಲಿ ಬಾರಿಸಲ್ಪಡುವ ರುದ್ರನ ಡಮರುಗದ ಭಾರೀ ಧ್ವನಿಗೆ ಸದೃಶವಾಗಿದೆ. ಇಂತಹ ಕರ್ಣಘೋರವಾದ ಅಟ್ಟಹಾಸದ ಘೋಷವು ನಮ್ಮ ಪಾಪರಾಶಿಯನ್ನು ದೂರಮಾಡಲಿ.

ಟಿಪ್ಪಣಿ :- ವಾತಂಧಯ = ಇದು ಪಾಣಿನಿಸೂತ್ರದಿಂದ ಸಿದ್ಧವಾಗುವುದಿಲ್ಲ. ಈ ಶಬ್ದಕ್ಕೆ ವಾತಾಹಾರಿಯಾದ ಸರ್ಪವೆಂದರ್ಥ. ಅದು ಪ್ರಕೃತದಲ್ಲಿ ವಾಸುಕಿ. ಗುಣ =ಹಗ್ಗ. ಅಂಹಸ್ =ಪಾಪ.

ಕ್ಷುಂದಾನೋ ಮಂಕ್ಷು ಕಲ್ಪಾವಧಿಸಮಯ
ಸಮುಜ್ಜೃಂಭದಂಭೋದಗುಂಭ -
ಸ್ಫೂರ್ಜದ್ದಂಭೋಲಿಸಂಘಸ್ಫುರದುರುರಟಿತಾಖರ್ವ
ಗರ್ವಪ್ರರೋಹಾನ್ |
ಕ್ರೀಡಾಕ್ರೋಡೇಂದ್ರ ಘೋಣಾಸರಭಸ ವಿಸರದ್ಘೋರಘೂ
ಘೂರ್ಣರವಶ್ರೀ-
ರ್ಗಂಭೀರಸ್ತೇಽಟ್ಟಹಾಸೋ ಹರ ಹರ ನೃಹರೇ ರಂಹಸಾತ್ವಂಹಾಂಸಿ
ಹನ್ಯಾತ್ || ೭೩

ಹರ ಹರ ನೃಹರಿಯೇ, ನಿನ್ನ ಈ ಅಟ್ಟಹಾಸವು ಕಲ್ಪಾಂತಕಾಲದಲ್ಲಿ ವಿಜೃಂಭಿಸುವ ಮೇಘರಾಶಿಗಳಿಂದ ಚಿಮ್ಮುವ ಸಿಡಿಲುಗಳ ಮಹತ್ತರವಾದ ಆರ್ಭಟಗಳ ಗರ್ವವನ್ನು ಕೂಡಲೇ ಮರ್ದಿಸತಕ್ಕದ್ದಾಗಿದೆ. ಲೀಲಾರ್ಥವಾಗಿ ಅವತರಿಸಿದ ವರಾಹಸ್ವಾಮಿಯ ಮೂಗಿನಿಂದ ರಭಸಪೂರ್ವಕವಾಗಿ ಹೊರಡುವ ಘುರ್ ಘುರ್ ಶಬ್ದದಂತೆ ಗಂಭೀರವಾಗಿದೆ. ಈ ಅಟ್ಟಹಾಸವು ಶೀಘ್ರವಾಗಿ ನಮ್ಮ ಪಾಪರಾಶಿಗಳನ್ನು ತೊಡೆದು ಹಾಕಲಿ."

ಏವಂ ವಿಶಿಷ್ಟನುತಿಭಿರ್ನೃಹರೌ ಪ್ರಶಾಂತೇ
ಸ್ವಂ ಭಾವಮೇತ್ಯ ಮುನಿರೇಷ ಬಭೂವ ಶಾಂತಃ |
ಸ್ವಪ್ನಾನುಭೂತಮಿವ ಶಾಂತಮನಾಃ ಸ್ಮರಂಸ್ತ -
ಮಾತ್ಮಾನ ಮಾತ್ಮಗುರವೇ ಪ್ರಣತಿಂ ಚಕಾರ || ೭೪

ಈ ಪ್ರಕಾರವಾದ ಸ್ತುತಿವಿಶೇಷಗಳಿಂದ ನೃಸಿಂಹಸ್ವಾಮಿಯು ಶಾಂತನಾಗಲು ತಮ್ಮ ಹಿಂದಿನ ಸ್ವಭಾವವನ್ನು ತ್ಯಜಿಸಿ ಆ ಪದ್ಮಪಾದ ಮುನಿಗಳು ಶಾಂತರಾದರು. ಅವರು ಶಾಂತ ಮನಸ್ಕರಾಗಿ ತಮ್ಮ ನೃಸಿಂಹಸ್ವರೂಪವನ್ನು ಸ್ವಪ್ನದಲ್ಲಿ ಅನುಭವಿಸಿದ್ದೋ ಎಂಬಂತೆ ಸ್ಮರಿಸಿಕೊಳ್ಳುತ್ತಾ ತಮ್ಮ ಗುರುಗಳಾದ ಶ್ರೀಶಂಕರಭಗವತ್ಪಾದರಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು.

ಚಾರಿತ್ರ್ಯಮೇತತ್ಪ್ರಯತಸ್ತ್ರಿಸಂಧ್ಯಂ
ಭಕ್ತ್ಯಾ ಪಠೇದ್ಯಃ ಶೃಣುಯಾದವಂಧ್ಯಮ್ |
ತೀರ್ತ್ವಾಽಪಮೃತ್ಯುಂ ಪ್ರತಿಪದ್ಯ ಭಕ್ತಿಂ
ಸ ಭುಕ್ತಭೋಗಃ ಸಮುಪೈತಿ ಮುಕ್ತಿಮ್ || ೭೫

ಸತ್ಫಲವನ್ನು ನೀಡತಕ್ಕ ಈ ಚರಿತೆಯನ್ನು ಯಾವಾತನು ಏಕಾಗ್ರಚಿತ್ತನಾಗಿ ತ್ರಿಕಾಲದಲ್ಲಿಯೂ ಪಠಿಸುವನೋ ಅಥವಾ ಕೇಳುವನೋ ಆತನು ಅಪಮೃತ್ಯುವನ್ನು ದಾಟುವನು. ದೈವಭಕ್ತಿಯುಳ್ಳವನಾಗಿ ಕರ್ಮಫಲವನ್ನು ಭೋಗಿಸಿದಮೇಲೆ ಮುಕ್ತಿಯನ್ನು ಪಡೆಯುವನು.

ಇತಿ ಶ್ರೀಮಾಧವೀಯೇ ತದುಗ್ರಭೈರವನಿರ್ಜಯಃ |
ಸಂಕ್ಷೇಪಶಂಕರಜಯೇ ಸರ್ಗ ಏಕಾದಶೋಽಭವತ್ ||

ಈ ಪ್ರಕಾರವಾಗಿ ಶ್ರೀ ಮಾಧವೀಯ ಸಂಕ್ಷೇಪ ಶಂಕರವಿಜಯದಲ್ಲಿ
ಉಗ್ರಭೈರವನಿರ್ಜಯವೆಂಬ ಹನ್ನೊಂದನೆಯ ಸರ್ಗವು
ಸಮಾಪ್ತವಾಯಿತು.

✣ ✣ ✣

## ದ್ವಾದಶಃ ಸರ್ಗಃ

### ಶಿಷ್ಯಪರಿಗ್ರಹಃ

ಆಚಾರ್ಯರು ತೀರ್ಥಕ್ಷೇತ್ರಗಳಲ್ಲಿ ಸಂಚರಿಸುತ್ತ ಗೋಕರ್ಣಕ್ಕೆ ಆಗಮಿಸುವುದು. ಹರಿಹರಸ್ತುತಿ. ಮೂಕಾಂಬಿಕಾಕ್ಷೇತ್ರವಾದ ಕೊಲ್ಲೂರಿಗೆ ಪ್ರಯಾಣ. ಮೃತಬಾಲಕನನ್ನು ಬದುಕಿಸುವುದು. ಮೂಕಾಂಬಿಕಾಸ್ತುತಿ. ಶ್ರೀಬಲಿ ಎಂಬ ಅಗ್ರಹಾರಕ್ಕೆ ಆಗಮನ. ಜಡನಂತಿದ್ದ ಬಾಲಕನು ಜ್ಞಾನಿಯೆಂದರಿತು ಹಸ್ತಾಮಲಕನೆಂದು ನಾಮಕರಣ ಮಾಡಿ ಶಿಷ್ಯನನ್ನಾಗಿ ಸ್ವೀಕರಿಸುವುದು. ಶೃಂಗೇರಿಗೆ ಆಗಮನ. ಆಚಾರ್ಯರು ಶೃಂಗೇರಿಯಲ್ಲಿ ಶಾರದಾದೇವಿಯನ್ನು ಪ್ರತಿಷ್ಠಾಪಿಸುವುದು. ಗಿರಿಯೆಂಬ ಶಿಷ್ಯನು ಜ್ಞಾನಿಯಾಗಿ ತೋಟಕಾಚಾರ್ಯನೆಂದು ಖ್ಯಾತನಾಗುವುದು.

ಅಥೈಕದಾऽಸೌ ಯತಿಸಾರ್ವಭೌಮ -
ಸ್ತೀರ್ಥಾನಿ ಸರ್ವಾಣಿ ಚರನ್ ಸತೀರ್ಥ್ಯೈಃ |
ಘೋರಾತ್ ಕಲೇರ್ಗೋಪಿತ ಧರ್ಮಮಾಗಾತ್
ಗೋಕರ್ಣಮಭ್ಯರ್ಣಚಲಾರ್ಣವೌಘಮ್ || ೧

ಆಮೇಲೆ ಯತಿಸಾರ್ವಭೌಮರು ಒಂದು ಸಲ ಸಹಾಧ್ಯಾಯಿಗಳಾದ ತಮ್ಮ ಶಿಷ್ಯರೊಡನೆ ಎಲ್ಲ ತೀರ್ಥಕ್ಷೇತ್ರಗಳನ್ನು ಸಂಚರಿಸುತ್ತ ಗೋಕರ್ಣಕ್ಷೇತ್ರಕ್ಕೆ ಬಂದರು. ಘೋರವಾದ ಕಲಿಯ ದೆಸೆಯಿಂದ ತಪ್ಪಿಸಿಕೊಂಡು ಧರ್ಮವು ಅಲ್ಲಿ ಸುರಕ್ಷಿತವಾಗಿತ್ತು! ಅದರ ಸಮೀಪದಲ್ಲಿಯೇ ಸಮುದ್ರದ ಅಲೆಗಳು ವೇಗದಿಂದ ಚಲಿಸುತ್ತಿದ್ದವು.

ವಿರಿಂಚನಾಂಭೋರುಹನಾಭವಂದ್ಯಂ
ಪ್ರಪಂಚನಾಟ್ಯಾದ್ಭುತ ಸೂತ್ರಧಾರಮ್ |
ತುಷ್ಟಾವ ವಾಮಾರ್ಧವಧೂಟಿಮಸ್ತ-
ದುಷ್ಟಾವಲೇಪಂ ಪ್ರಣಮನ್ ಮಹೇಶಮ್ || ೨

ಅಲ್ಲಿ ಬ್ರಹ್ಮ, ವಿಷ್ಣು - ಇವರಿಗೆ ವಂದ್ಯನೂ ಪ್ರಪಂಚವೆಂಬ ನಾಟ್ಯವನ್ನು ನಡೆಸುವ ಅದ್ಭುತಸೂತ್ರಧಾರನೂ ತನ್ನ ವಾಮಾರ್ಧದಲ್ಲಿ ಪತ್ನಿಯಾದ ಉಮಾದೇವಿಯಿಂದ ಸಹಿತನೂ, ದುಷ್ಟರ ದುರಹಂಕಾರವನ್ನು ದೂರಮಾಡತಕ್ಕವನೂ ಆದ ಪರಮೇಶ್ವರನನ್ನು ನಮಸ್ಕರಿಸಿ ಆಚಾರ್ಯರು ಹೀಗೆ ಸ್ತೋತ್ರಮಾಡಿದರು.

ಟಿಪ್ಪಣಿ:- ವಿರಂಚ, ವಿರಿಂಚ, ವಿರಿಂಚಿನ - ಎಂದು ರೂಪಭೇದವಿರುವ ಶಬ್ದಗಳು ಬ್ರಹ್ಮವಾಚಕಗಳು.

ವಪುಃ ಸ್ಮರಾಮಿ ಕ್ವಚನ ಸ್ಮರಾರೇಃ
ಬಲಾಹಕಾದ್ವೈತವದಾವದಶ್ರಿ |
ಸೌದಾಮಿನೀ ಸಾಧಿತ ಸಂಪ್ರದಾಯ-
ಸಮರ್ಥನಾದೇಶಿಕಮನ್ಯತಶ್ಚ || ೩

"ದಕ್ಷಿಣಭಾಗದಲ್ಲಿ ಮೇಘದೊಡನೆ ಅಭೇದವನ್ನು ಹೇಳತಕ್ಕ ಶೋಭೆಯುಳ್ಳದ್ದೂ, ಎಡಭಾಗದಲ್ಲಿ ಮಿಂಚು ಮೇಘದೊಡನಿರುತ್ತಿದೆಯೆಂಬ ಸಂಪ್ರದಾಯವನ್ನು ಸಮರ್ಥಿಸುವ ಗುರುವಾಗಿ ಇರತಕ್ಕದ್ದೂ ಆದ ಭಾಗದ್ವಯವುಳ್ಳ ಮದನಾಂತಕನಾದ ಮಹಾಬಲೇಶ್ವರನ ಆಕೃತಿಯನ್ನು ಸದಾ ಸ್ಮರಿಸುತ್ತೇನೆ.

ವಿವರಣೆ: ಈಶ್ವರನ ಬಲಭಾಗವು ಕಪ್ಪಾಗಿದೆಯೆಂದೂ ಎಡಭಾಗದಲ್ಲಿ ಮಿಂಚಿನಂತಿರುವ ಪಾರ್ವತಿಯು ಪ್ರಕಾಶಮಾನಳಾಗಿದ್ದಾಳೆಂದೂ ಭಾವಿಸಿ ಈ ಪ್ರಕಾರ ವರ್ಣಿಸಲಾಗಿದೆ. ಪಾರ್ವತಿಯು ಮಿಂಚಿನಂತೆ ಹೊಳೆಯತಕ್ಕವಳು. ಮಿಂಚು ಮೇಘದೊಡನೆ ಇರುವುದು ಸಹಜ. ಈಶ್ವರನಿಗೆ ನೀಲಲೋಹಿತನೆಂದು ಹೆಸರಿದೆ. ಅದರ ಸಮರ್ಥನೆ ಇದಾಗಿರಬಹುದು.

ವಾಮಾಂಗಸೀಮಾಂಕುರದಂಶುತೃಣ್ಯಾ-
ಚಂಚನ್ಮೃಗಾಂಚತ್ತರದಕ್ಷಪಾಣಿಃ |
ಸವ್ಯಾನ್ಯಶೋಭಾಕಲಮಾಗ್ರಭಕ್ಷ-
ಸಾಕಾಂಕ್ಷಕೀರಾನ್ಯಕರಂ ಮಹೋಽಸ್ಮಿ || ೪

"ಎಡಭಾಗದ ಕ್ಷೇತ್ರದಲ್ಲಿ ಅಂಕುರಿಸಿರುವ ಶುಭ್ರ ಕಿರಣವೆಂಬ ಎಳೆ ಹುಲ್ಲಿಗಾಗಿ ಚಲಿಸುತ್ತಿರುವ ಹರಿಣವುಳ್ಳ ದಕ್ಷಿಣಪಾಣಿಯುಳ್ಳದ್ದೂ ಮತ್ತು ಬಲಭಾಗದ (ಶ್ಯಾಮಲ) ಶೋಭೆಯೆಂಬ ಬತ್ತದ ಸಸಿಯನ್ನು ತಿನ್ನಲು ಬಯಸುವ ಗಿಣಿಯನ್ನು ಹಿಡಿದ ವಾಮಪಾಣಿಯುಳ್ಳದ್ದೂ ಆದ ಯಾವ ತೇಜಸ್ಸಿದೆಯೋ ಅದೇ ನಾನಾಗಿದ್ದೇನೆ.

ವಿವರಣೆ: ಈಶ್ವರನು ಬಲಗೈಯಲ್ಲಿ ಜಿಂಕೆಯನ್ನು ಹಿಡಿದಿದ್ದಾನೆ. ಎಡಭಾಗದಿಂದ ಹೊಮ್ಮುವ ಶುಭ್ರ ಕಿರಣಗಳು ಎಳೆ ಹುಲ್ಲೆಂದೂ ಅದನ್ನು ತಿನ್ನಲು ಜಿಂಕೆಯು ಹಾತೊರೆಯುತ್ತಿದೆ ಎಂದೂ ಕಲ್ಪನೆ. ಹಾಗೆಯೇ ಎಡಭಾಗದ ಪಾರ್ವತಿಯ ಕೈಯಲ್ಲಿ ಗಿಣಿ ಇದೆ. ಬಲಭಾಗದಿಂದ ಹೊಮ್ಮುವ ಶ್ಯಾಮಲ ಕಿರಣವು ಬತ್ತದ ಸಸಿಯೆಂದೂ ಅದರ ತೆನೆಯನ್ನು ತಿನ್ನುವುದಕ್ಕಾಗಿ ಬಲದಿಕ್ಕಿಗೆ ತನ್ನ ಕೊಕ್ಕನ್ನು ಚಾಚುತ್ತಿದೆ ಎಂದೂ ಕವಿಯ ಕಲ್ಪನೆ. ಇಂತಹ ಪರಮಾತ್ಮನ ಸ್ವರೂಪವೇ ನಾನು ಎಂದು ಆಚಾರ್ಯರು ಧ್ಯಾನಿಸಿದರು.

ಸವ್ಯ= ಎಡಭಾಗ, ಸವ್ಯಾನ್ಯ = ಬಲಭಾಗ, ಶಿವನು ನೀಲಲೋಹಿತ.

ಮಹೀಧ್ರ ಕನ್ಯಾಗಲಸಂಗತೋಽಪಿ
ಮಾಂಗಲ್ಯತಂತುಃ ಕಿಲ ಹಾಲಹಾಲಮ್ |
ಯತ್ಕಂಠದೇಶೇಽಕೃತ ಕುಂಠ ಶಕ್ತಿಂ
ಐಕ್ಯಾನುಭಾವಾದಹಮಸ್ಮಿ ಭೂಮಾ || ೫

ಹಿಮಾಚಲದ ಪುತ್ರಿಯಾದ ಪಾರ್ವತಿಯ ಕೊರಳಿನಲ್ಲಿ ಇರುವ ಮಂಗಳಸೂತ್ರವು ಯಾವ ಪರಮೇಶ್ವರನ ಕಂಠದಲ್ಲಿ ಇಳಿದ ಹಾಲಾಹಲವಿಷವನ್ನೂ ಸಹ ಶಕ್ತಿಹೀನವಾಗಿ ಮಾಡಿಬಿಟ್ಟಿತೋ, ಅಂತಹ ಭೂಮದೊಡನೆ ಐಕ್ಯವನ್ನು ಅನುಭವಿಸುತ್ತಿರುವ ನಾನೇ ಆ ಭೂಮವಾಗಿದ್ದೇನೆ."

ವಿವರಣೆ: ಕ್ಷೀರಸಾಗರದ ಮಂಥನಕಾಲದಲ್ಲಿ ಹುಟ್ಟಿದ ಹಾಲಾಹಲವನ್ನು ಈಶ್ವರನು ಸೇವಿಸಿದನು. ಅದು ಆತನ ಕಂಠದಲ್ಲಿಯೇ ಉಳಿದದ್ದರಿಂದ ಅವನು ನೀಲಕಂಠನೆನಿಸಿದನು. ವಿಷದಿಂದ ಯಾವ ಕೆಟ್ಟ ಪರಿಣಾಮವೂ ಆಗದಿರುವುದಕ್ಕೆ ಪಾರ್ವತಿಯ ಮಾಂಗಲ್ಯಸೂತ್ರವೇ ಕಾರಣ ಎಂದು ಕವಿಯ ಕಲ್ಪನೆ. ಇದನ್ನೇ ಸೌಂದರ್ಯಲಹರಿಯಲ್ಲಿ 'ತವ ಜನನಿ ತಾಟಂಕಮಹಿಮಾ'ಎಂದು ವರ್ಣಿಸಿದ್ದಾರೆ.

ಗುಣತ್ರಯಾತೀತ ವಿಭಾವ್ಯಮಿತ್ಥಂ
  ಗೋಕರ್ಣನಾಥಂ ವಚಸಾಽರ್ಚಯಿತ್ವಾ ।
ತಿಸ್ರಃ ಸ ರಾತ್ರೀಸ್ತ್ರಿಜಗತ್ಪವಿತ್ರೇ
  ಕ್ಷೇತ್ರೇ ಮುದೈಷ ಕ್ಷಪತಿ ಸ್ಮ ಕಾಲಮ್ ॥ ೬

ಗುಣತ್ರಯವನ್ನು ಗೆದ್ದವರಿಗೆ ಮಾತ್ರ ಗೋಚರಿಸತಕ್ಕ ಆ ಗೋಕರ್ಣೇಶ್ವರನನ್ನು ಈ ಪ್ರಕಾರವಾದ ಸ್ತುತಿವಾಕ್ಯದಿಂದ ಅರ್ಚಿಸಿ ಆಚಾರ್ಯರು ಜಗತ್ತ್ರಯದಲ್ಲಿಯೂ ಪವಿತ್ರವಾದ ಆ ಗೋಕರ್ಣ ಕ್ಷೇತ್ರದಲ್ಲಿ ಮೂರು ರಾತ್ರಿಗಳವರೆಗೆ ಸಂತೋಷದಿಂದ ಕಾಲವನ್ನು ಕಳೆದರು.

ವೈಕುಂಠಕೈಲಾಸವಿವರ್ತಭೂತಂ
  ಹರನ್ನತಾಘಂ ಹರಿಶಂಕರಾಖ್ಯಮ್ ।
ದಿವ್ಯಸ್ಥಲಂ ದೇಶಿಕಸಾರ್ವಭೌಮ -
  ಸ್ತೀರ್ಥಪ್ರವಾಸೀ ನಚಿರಾದಯಾಸೀತ್ ॥ ೭

ಅನಂತರ ಆ ದೇಶಿಕಸಾರ್ವಭೌಮರು ವಿಭಿನ್ನ ಪವಿತ್ರ ತೀರ್ಥಕ್ಷೇತ್ರಗಳಲ್ಲಿ ಸಂಚರಿಸುತ್ತಾ ಹರಿಶಂಕರ ವೆಂಬ ದಿವ್ಯಸ್ಥಳಕ್ಕೆ ಆಗಮಿಸಿದರು. ಅದು ವೈಕುಂಠ ಕೈಲಾಸಗಳ ಇನ್ನೊಂದು ರೂಪವೋ ಎಂಬಂತೆ ಭಕ್ತರ ಪಾಪವನ್ನು ಪರಿಹರಿಸುವ ಕ್ಷೇತ್ರ.

ಟಿಪ್ಪಣಿ:- ಹರಿಶಂಕರವೆಂದರೆ ಈಗ ದಕ್ಷಿಣ ಕನ್ನಡ ಜಿಲ್ಲೆಯಲ್ಲಿರುವ ಶಂಕರನಾರಾಯಣಕ್ಷೇತ್ರವೆಂದು ಐತಿಹಾಸಿಕರು ಹೇಳುತ್ತಾರೆ.

ಭ್ರಮಾಪನೋದಾಯ ಭಿದಾವದಾನಾಂ
  ಅದ್ವೈತಮುದ್ರಾಮಿಹ ದರ್ಶಯಂತೌ ।
ಆರಾಧ್ಯ ದೇವೌ ಹರಿಶಂಕರೌ ಸ
  ದ್ವ್ಯರ್ಥಾಭಿರತ್ಯರ್ಚಯತಿ ಸ್ಮ ವಾಗ್ಭಿಃ ॥ ೮

ಹರಿಹರರು ಬೇರೆ ಬೇರೆಯೆಂಬ ದ್ವೈತವಾದಿಗಳ ಭ್ರಮೆಯನ್ನು ಹೋಗಲಾಡಿಸುವುದಕ್ಕಾಗಿ ಅದ್ವೈತ ಮುದ್ರೆಯನ್ನು ತೋರಿಸುತ್ತಿರುವ ಹರಿಹರರನ್ನು ಆರಾಧಿಸಿ ಶ್ಲೇಷದಿಂದ ಎರಡು ಅರ್ಥಗಳನ್ನೀಯುವ ವಾಕ್ಕುಗಳಿಂದ ಶ್ರೀಶಂಕರಾಚಾರ್ಯರು ಆ ಇಬ್ಬರು ದೇವತೆಗಳನ್ನೂ ಸ್ತುತಿಸಿದರು.

ಕ್ರಮವಾಗಿ ವಿಷ್ಣುವಿನ ಮತ್ಸ್ಯಾದ್ಯವತಾರಗಳ ಮತ್ತು ಶಿವನ ಸ್ತೋತ್ರ.

ವಂದ್ಯಂ ಮಹಾಸೋಮಕಲಾವಿಲಾಸಂ
ಗಾಮಾದರೇಣಾಽಽಕಲಯನ್ನನಾದಿಮ್ |
ಮೈನಂ ಮಹಃ ಕಿಂಚನ ದಿವ್ಯಮಂಗೀ -
ಕುರ್ವನ್ ವಿಭುರ್ಮೇ ಕುಶಲಾನಿ ಕುರ್ಯಾತ್ || ೬

(ಮತ್ಸ್ಯಾವತಾರ)ಅನಾದಿಂ = ಆದಿಯಿಲ್ಲದ್ದರಿಂದ ನಿತ್ಯವಾದ, ಗಾಂ = ವೇದವಾಣಿಯನ್ನು, ಆದರೇಣ = ಆದರಪೂರ್ವಕ, ಆಕಲಯನ್ = ಉದ್ಧರಿಸಿ ತರುವುದಕ್ಕಾಗಿ, ವಂದ್ಯಂ= ವಂದನೀಯವೂ, ಮಹಾಸೋಮಕ = ಸೋಮಕನೆಂಬ ಮಹಾಸುರನನ್ನು, ಲಾವಿ= ಸೀಳಿಹಾಕತಕ್ಕ, ಲಾಸಂ = ಕ್ರೀಡೆಯುಳ್ಳದ್ದೂ ಆದ, ಕಿಮಪಿ ದಿವ್ಯಂ = ಒಂದಾನೊಂದು ದಿವ್ಯವಾದ, ಮೈನಂ = ಮೀನಿಗೆ ಸಂಬಂಧಿಸಿದ -ಮತ್ಸ್ಯಾವತಾರ ರೂಪವಾದ, ಮಹಃ = ತೇಜಸ್ಸನ್ನು, ಅಂಗೀಕುರ್ವನ್ = ಸ್ವೀಕರಿಸಿದ, ವಿಭುಃ= ವ್ಯಾಪಕನಾದ ಅಥವಾ ಸ್ವಾಮಿಯಾದ ವಿಷ್ಣುವು, ಮೇ = ನನಗೆ, ಕುಶಲಾನಿ= ಶುಭಗಳನ್ನು, ಕುರ್ಯಾತ್ = ಮಾಡಲಿ.

"ಸೋಮಕನೆಂಬ ರಾಕ್ಷಸನನ್ನು ಸಂಹರಿಸಿ, ಅನಾದಿಯಾದ ವೇದವನ್ನು ಉದ್ಧರಿಸುವುದಕ್ಕಾಗಿ, ದಿವ್ಯವೂ ವಂದನೀಯವೂ ಆದ ಮತ್ಸ್ಯಾವತಾರವನ್ನು ಮಾಡಿದ ಶ್ರೀಮಹಾವಿಷ್ಣುವು ನನಗೆ ಕಲ್ಯಾಣ ವನ್ನುಂಟುಮಾಡಲಿ.

(ಶಿವಪರ) ಮಹಾಸೋಮಕಲಾ = ಉತ್ತಮವಾದ ಚಂದ್ರಕಲೆಯ, ವಿಲಾಸಂ = ಶೋಭೆಯನ್ನೂ ( ಚ) = ಮತ್ತು, ಅನಾದಿಂ =ಅನಾದಿಯಾದ, ಗಾಂ = ವೇದವಾಗ್ರೂಪವಾದ ವೃಷಭವನ್ನೂ, ಆದರೇಣ = ಆದರದಿಂದ, ಆಕಲಯನ್ = ಸ್ವೀಕರಿಸಿದವನೂ, ಮೈನಂ = (ಹಿಮಾಲಯನ ಪತ್ನಿಯಾದ) ಮೇನೆಗೆ ಸಂಬಂಧಿಸಿದ, ಕಿಮಪಿದಿವ್ಯಂ ಮಹಃ = ಒಂದಾನೊಂದು ದಿವ್ಯ ವಾದ ಪಾರ್ವತೀರೂಪದ ತೇಜಸ್ಸನ್ನು, ಅಂಗೀಕುರ್ವನ್ = ಸ್ವೀಕರಿಸಿರುವ, ವಿಭುಃ =ಶಿವನು, ಮೇ ಕುಶಲಾನಿ ಕುರ್ಯಾತ್ = ನನಗೆ ಶುಭವನ್ನುಂಟುಮಾಡಲಿ.

"ಬಾಲಚಂದ್ರನ ಕಲೆಯನ್ನು ಶಿರಸ್ಸಿನಲ್ಲಿ ಧರಿಸಿ ವೇದರೂಪವಾದ ವೃಷಭವನ್ನು ಏರಿರತಕ್ಕವನೂ, ಮೇನಾಪುತ್ರಿಯೂ ಮಹಾ ತೇಜಸ್ವಿನಿಯೂ ಆದ ಪಾರ್ವತೀದೇವಿಯನ್ನು ವಾಮಭಾಗದಲ್ಲುಳ್ಳವನೂ ಆದ ಶಿವನು ನನಗೆ ಶುಭವನ್ನುಂಟುಮಾಡಲಿ.

ಟಿಪ್ಪಣಿ :- ಗೋಶಬ್ದಕ್ಕೆ ವಾಕ್, ವೃಷಭ-ಎಂದು ಎರಡು ಅರ್ಥಗಳಿವೆ, ಗೌರೇವ ಗೌಃ ಎಂದು ಅಭೇದಾಧ್ಯವಸಾನ. ಈಶ್ವರನ ವಾಹನವಾದ ವೃಷಭವೆಂದರೆ ವೇದವೆಂದೂ ವೃಷಭವಾಹನನೆಂದರೆ ವೇದಪ್ರತಿಪಾದ್ಯನೆಂದೂ ಅನ್ಯತ್ರ ವರ್ಣನೆ ಇದೆ.

ಯೋ ಮಂದರಾಗಂ ದಧದಾದಿತೇಯಾನ್
ಸುಧಾಭುಜಃ ಸ್ಮಾತನುತೇ ವಿಷಾದೀ ।
ಸ್ವಾಮದ್ರಿಲೀಲೋಚಿತ ಚಾರುಮೂರ್ತೇ
ಕೃಪಾಮಪಾರಾಂ ಸ ಭವಾನ್ ವಿಧತ್ತಾಮ್ ॥ ೧೦

(ಕೂರ್ಮಾವತಾರ) ಹೇ ಅದ್ರಿಲೀಲೋಚಿತ ಚಾರುಮೂರ್ತೇ =ಮಂದರಪರ್ವತದ ಲೀಲೆಯ ಭ್ರಮಣಕ್ಕೆ ಸಮರ್ಥವಾಗಿ ಅನುಕೂಲಿಸುವ ಸುಂದರ ಕೂರ್ಮಾಕೃತಿಯನ್ನು ಧರಿಸಿದವನೆ ಅಥವಾ ಗೋವರ್ಧನಗಿರಿಯನ್ನೆತ್ತುವ ಲೀಲೆಗೆ ಉಚಿತವಾದ ಸುಂದರಾಕೃತಿಯನ್ನು ಧರಿಸಿದ ಶ್ರೀಕೃಷ್ಣಮೂರ್ತಿಯೆ, ಯಃ = ಯಾವನು, ಅವಿಷಾದೀ = ಯಾವ ಖೇದವೂ ಇಲ್ಲದೆ. ಮಂದರಾಗಂ = ಮಂದರ ಪರ್ವತವನ್ನು ದಧತ್= ಧರಿಸಿದವನಾಗಿ, ಆದಿತೇಯಾನ್ = ದೇವತೆಗಳನ್ನು, ಸುಧಾಭುಜಃ = ಅಮೃತಪಾನಮಾಡಿದವರನ್ನಾಗಿ, ಆತನುತೇ ಸ್ಮ = ಮಾಡಿದನೋ, ಸಃ = ಆ, ಭವಾನ್ = ನೀನು, ಸ್ವಾಂ = ಸಹಜವಾಗಿ ನಿನ್ನಲ್ಲಿರುವ, ಅಪಾರಾಂ =ಅಪಾರವಾದ, ಕೃಪಾಂ = ದಯೆಯನ್ನು, ವಿಧತ್ತಾಮ್= ನನ್ನಲ್ಲಿ ಇಡು.

ಟಿಪ್ಪಣಿ :- ಇಲ್ಲಿ ಭವಚ್ಛಬ್ದವಿರುವುದರಿಂದ ಕ್ರಿಯಾಪದವು ಪ್ರಥಮ ಪುರುಷದಲ್ಲಿದೆ.

"ಹೇ ಸ್ವಾಮಿ, (ಸಮುದ್ರ ಮಂಥನಕಾಲದಲ್ಲಿ ಮಂದರ ಪರ್ವತವು ನೀರಿನಲ್ಲಿ ಮುಳುಗಿಹೋದೀತೆಂದು ಅದಕ್ಕೆ ಆಶ್ರಯವಾಗಿರಲು) ಕೂರ್ಮಾವತಾರನ್ನೆತ್ತಿ ಬೆನ್ನುಕೊಟ್ಟು ಮಂದರವನ್ನು ಧರಿಸಿದವನು ನೀನು. ಹೀಗೆ ಕಷ್ಟಪಟ್ಟು ದೇವತೆಗಳಿಗೆ ಅಮೃತವನ್ನು ದೊರಕಿಸಿ ಕೊಟ್ಟಿದ್ದೀಯೆ. ಸಹಜವಾದ ನಿನ್ನ ಕಾರುಣ್ಯವನ್ನು ನನ್ನಲ್ಲಿ ತೋರಿಸು.

(ಶಿವಪರ)ಹೇ ಅದ್ರಿಲೀಲೋಚಿತಚಾರುಮೂರ್ತೇ = ಕೈಲಾಸಾದ್ರಿಯಲ್ಲಿ ಲೀಲೆಯಿಂದ ವಿಹರಿಸುವುದಕ್ಕೆ ಯೋಗ್ಯವಾದ ಸುಂದರಾಕೃತಿಯನ್ನು ಧರಿಸಿದವನೆ, ಯಃ=ಯಾವನು, ಅಮಂದರಾಗಂ =ವಿಪುಲವಾದ ಅನುರಾಗವನ್ನು, ದಧತ್=ದೇವತೆಗಳ ವಿಷಯದಲ್ಲಿಟ್ಟು, ವಿಷಾದೀ =ಹಾಲಾಹಲ ವಿಷವನ್ನು ಭಕ್ಷಿಸಿದವನಾಗಿ, ಆದಿತೇಯಾನ್ =ದೇವತೆಗಳನ್ನು, ಸುಧಾಭುಜಃ =ಅಮೃತಪಾಯಿಗಳನ್ನಾಗಿ, ಆತನುತೇ ಸ್ಮ =ಮಾಡಿದನೋ, ಸಃ =ಆ, ಭವಾನ್= ನೀನು, ಸ್ವಾಂ=ನಿನ್ನ, ಅಪಾರಾಂ ಕೃಪಾಂ = ಅತಿಯಾದ ಕಾರುಣ್ಯವನ್ನು, ವಿಧತ್ತಾಂ =ನನ್ನಲ್ಲಿ ತೋರಿಸು.

ಟಿಪ್ಪಣಿ :- ಶಿವಪಕ್ಷದಲ್ಲಿ ಅಮಂದರಾಗಂ, ವಿಷಾದೀ ಎಂದು ಪದವಿಭಾಗ. ಡಿಂಡಿಮ ವ್ಯಾಖ್ಯಾನದಲ್ಲಿ ಮಂದರಾಗಂ ದಧತ್ =ಮಂದರವೃಕ್ಷವನ್ನು ಧರಿಸಿದ ಎಂದು ಅರ್ಥವನ್ನು ಬರೆದಿದ್ದಾರೆ. ಅಗ = ವೃಕ್ಷ, ಮಂದಾರಕ್ಕೆ ಮಂದರವೆಂಬ ರೂಪವೂ ಉಂಟು. ಶಿವನು ಮಂದಾರವೃಕ್ಷದ ಕೆಳಗೆ ಕುಳಿತು ತಪಸ್ಸುಮಾಡಿದನೆಂದು ಪುರಾಣ ಕಥೆ ಇದೆ.

"ಸುಂದರಾಕೃತಿಯನ್ನು ಧರಿಸಿ ಕೈಲಾಸದಲ್ಲಿ (ಪಾರ್ವತಿಯೊಡನೆ) ಕ್ರೀಡಿಸುತ್ತಿರುವ ಹೇ ಸ್ವಾಮಿ, ನೀನು ಅಪಾರವಾದ ಕೃಪೆಯನ್ನು ದೇವತೆಗಳಲ್ಲಿಟ್ಟು ಹಾಲಾಹಲವನ್ನು ಕುಡಿದು, ಆ ದೇವತೆಗಳಿಗೆ ಅಮೃತವನ್ನು ದೊರಕಿಸಿಕೊಟ್ಟಿದ್ದೀಯೆ. ಸಹಜವಾದ ಆ ಕೃಪೆಯನ್ನು ನನ್ನಲ್ಲಿಯೂ ಇರಿಸು.

ಉಲ್ಲಾಸಯನ್ಯೋ ಮಹಿಮಾನಮುಚ್ಚೈಃ
ಸ್ಫುರದ್ವರಾಹೀಶ ಕಲೇವರೋಽಭೂತ್ |
ತಸ್ಮೈ ವಿದಧ್ಮಃ ಕರಯೋರಜಸ್ರಂ
ಸಾಯಂತನಾಂಭೋರುಹ ಸಾಮರಸ್ಯಮ್ || ೧೧

(ವರಾಹಾವತಾರ) ಯಃ = ಯಾವಾತನು, ಮಹಿಮಾನಂ =ಮಹಿ-ಭೂದೇವಿಯ, ಮಾನಂ -ಚಿತ್ತೋನ್ನತಿಯನ್ನು, ಉಚ್ಚೈಃ = ಅತಿಶಯವಾಗಿ, ಉಲ್ಲಾಸಯನ್ =ಹಿಗ್ಗಿಸುತ್ತಾ, ಸ್ಫುರದ್ವರಾಹೀಶಕಲೇವರಃ=ಸ್ಫುರತ್ =ಶೋಭಿಸುವ, ವರಾಹೀ=ಹೆಣ್ಣುಹಂದಿಯ, ಈಶ=ಪತಿಯ ಎಂದರೆ, ವರಾಹದ, ಕಲೇವರಃ =ಶರೀರವನ್ನು ಧರಿಸಿದವನು, ಅಭೂತ್ = ಆದನೋ, ತಸ್ಮೈ = ಆತನಿಗೆ, ಅಜಸ್ರಂ = ಯಾವಾಗಲೂ, ಕರಯೋಃ =ಕೈಗಳಲ್ಲಿ, ಸಾಯಂತನಾಂಭೋರುಹಸಾಮರಸ್ಯಂ =ಸಾಯಂಕಾಲದ ಕಮಲದ ಸಾಮ್ಯವನ್ನು, ವಿದಧ್ಮಃ = ಮಾಡುತ್ತೇವೆ.

ವಿವರಣೆ: ಸಮುದ್ರದಲ್ಲಿ ಮುಳುಗಿ ಹೋಗಿದ್ದ ಭೂಮಿಯನ್ನು ವಿಷ್ಣುವು ವರಾಹಾವತಾರಮಾಡಿ ಮೇಲೆತ್ತಿದನು. ಇದರಿಂದ ಭೂದೇವಿಯ ಅಭಿಮಾನವು ಹಿಗ್ಗಿತು. ಸಂಜೆಯಲ್ಲಿ ಕಮಲವು ಮುಚ್ಚಿಕೊಂಡು ಮೊಗ್ಗಿನಂತಿರುತ್ತದೆ. ಅದರ ಸಾಮ್ಯವು ನಮ್ಮ ಕೈಗಳಿಗೆ ಬರುವುದೆಂದರೆ, ಕೈಮುಗಿಯುತ್ತೇವೆ - ಎಂದರ್ಥ. ಮಹೀ-ಮಹಿ ಎಂದು ಎರಡು ರೂಪಗಳೂ ಇವೆ. ಮಹಿಮಾನಂ= ಭೂವಿಸ್ತಾರವನ್ನು ಎಂದೂ ಪ್ರಮಾಣವೆಂದೂ ಅರ್ಥ ಹೇಳಬಹುದು. ಆಗ ಉಲ್ಲಾಸಯನ್= ಕೋರೆಹಲ್ಲುಗಳಿಂದ ವೃಥ್ವಿಯನ್ನು ಮೇಲಕ್ಕೆ ಎತ್ತಿ ಎಂದು ಅರ್ಥ ಹೇಳುವುದು ಉಚಿತ.

"ಭೂದೇವಿಯ ಚಿತ್ತಕ್ಕೆ ಆನಂದವನ್ನುಂಟುಮಾಡುವುದಕ್ಕಾಗಿ ಯಾವಾತನು ವರಾಹಾವತಾರಮಾಡಿ ಪೃಥ್ವಿಯನ್ನು ಮೇಲೆತ್ತಿದನೋ, ಆತನಿಗೆ ಸರ್ವದಾ ಕಮಲದ ಮೊಗ್ಗಿನಂತೆ ಕೈಗಳನ್ನು ಜೋಡಿಸಿ ನಮಸ್ಕರಿಸುತ್ತೇವೆ.

(ಶಿವಪರ) ಯಃ =ಯಾವಾತನು, ಮಹಿಮಾನಂ = ತನ್ನ ಮಹಿಮೆಯನ್ನು, ಉಚ್ಚೈಃ ಉಲ್ಲಾಸಯನ್ = ವಿಶೇಷವಾಗಿ ಪ್ರಕಟಿಸುತ್ತ, ವರಾಹೀಶಕಲೇವರಃ = ವರ-ಶ್ರೇಷ್ಠನಾದ, ಅಹೀಶ = ಸರ್ಪರಾಜನಾದ ಆದಿಶೇಷ ನನ್ನು ಧರಿಸಿದ, ಕಲೇವರಃ = ಶರೀರವುಳ್ಳವನೋ, ತಸ್ಮೈ = ಅವನಿಗೆ ಸದಾ ಕೈಮುಗಿಯುತ್ತೇವೆ ಎಂದು ಉಳಿದುದೆಲ್ಲವನ್ನೂ ಹಿಂದಿನಂತೆ ಅನ್ವಯಿಸಿಕೊಳ್ಳಬೇಕು, ಶಿವನು ಶೇಷವಿಭೂಷಣನೆಂಬುದು ಸುಪ್ರಸಿದ್ಧ.

ಸಮಾವಹನ್ ಕೇಸರಿತಾಂ ವರಾಂ ಯಃ
ಸುರದ್ವಿಷತ್ಕುಂಜರಮಾಜಘಾನ |
ಪ್ರಹ್ಲಾದಮುಲ್ಲಾಸಿತಮಾದಧಾನಂ
ಪಂಚಾನನಂ ತಂ ಪ್ರಣುಮಃ ಪುರಾಣಮ್ || ೧೨

(ನೃಸಿಂಹ) ಯಃ = ಯಾವಾತನು, ವರಾಂ= ಶ್ರೇಷ್ಠವಾದ, ಕೇಸರಿತಾಂ = ನೃಸಿಂಹತ್ವವನ್ನು, ಸಮಾವಹನ್ = ಧರಿಸಿ, ಸುರದ್ವಿಷತ್ಕುಂಜರಂ= ದೇವತೆಗಳ ವೈರಿಗಳಲ್ಲಿ ಅಗ್ರಗಣ್ಯನಾದ ಹಿರಣ್ಯಕಶಿಪುವನ್ನು, ಆಜಘಾನ =ವಧಿಸಿದನೋ, ಪ್ರಹ್ಲಾದಂ = (ಹಿರಣ್ಯಕಶಿಪುವಿನ ಮಗನಾದ) ಪ್ರಹ್ಲಾದನನ್ನು, ಉಲ್ಲಾಸಿತಂ = ಉಲ್ಲಾಸಗೊಂಡವನನ್ನಾಗಿ, ಆದಧಾನಂ = ಮಾಡಿದಂತಹ, ತಂ= ಆ, ಪುರಾಣಂ = ಪುರಾತನನಾದ, ಪಂಚಾನನಂ = ಸಿಂಹವಾದ ಶ್ರೀಹರಿಯನ್ನು, ಪ್ರಣುಮಃ = ಸ್ತುತಿಸುತ್ತೇವೆ.

ಟಿಪ್ಪಣಿ :- ಕುಂಜರ = ಆನೆ. ಇದು ಸಮಾಸದ ಕಡೆಯಲ್ಲಿದ್ದಾಗ ಅಗ್ರಗಣ್ಯ ಎಂಬ ಅರ್ಥವನ್ನು ಕೊಡುತ್ತದೆ. ದ್ವಿಷನ್ ಕುಂಜರ ಇವ = ದ್ವಿಷತ್ಕುಂಜರಃ.

"ನೃಸಿಂಹಾವತಾರವನ್ನು ತಾಳಿ ಹಿರಣ್ಯಕಶಿಪುವನ್ನು ಸಂಹರಿಸಿ, ಪ್ರಹ್ಲಾದನಿಗೆ ಆನಂದವನ್ನಿತ್ತ ಪುರಾಣಸಿಂಹನಾದ ಶ್ರೀಹರಿಯನ್ನು ಸ್ತೋತ್ರ ಮಾಡುತ್ತೇವೆ.

(ಶಿವಪರ) ಯಃ (ಯಾವಾತನು, ಸರಿತಾಂ ವರಾಂ = ನದಿಗಳಲ್ಲಿ ಶ್ರೇಷ್ಠಳಾದ ಗಂಗೆಯನ್ನು, ಕೇ = ಶಿರಸ್ಸಿನಲ್ಲಿ, ಸಮಾವಹನ್ = ಧರಿಸಿದ್ದಾನೋ, ಸುರದ್ವಿಷತ್ ಕುಂಜರಂ ಆಜಘಾನ = ದೇವವೈರಿಯಾದ ಗಜಾಸುರನನ್ನು ಸಂಹರಿಸಿದ್ದಾನೋ, ಉಲ್ಲಾಸಿತಂ = ಅತ್ಯುನ್ನತವಾದ, ಪ್ರಹ್ಲಾದಂ = ಪರಮಾನಂದವನ್ನು, ಆದಧಾನಂ= ಉಂಟುಮಾಡುವ, ತಂ = ಆ, ಪಂಚಾನನಂ = ಪಂಚಮುಖನಾದ ಶಿವನನ್ನು, ಪ್ರಣುಮಃ = ಸ್ತುತಿಸುತ್ತೇವೆ.

ಟಿಪ್ಪಣಿ :- ಶಿವನ ಪಂಚಮುಖಗಳು- ಸದ್ಯೋಜಾತ, ತತ್ಪುರುಷ, ವಾಮದೇವ, ಅಘೋರ ಮತ್ತು ಈಶಾನ.

"ಗಂಗಾನದಿಯನ್ನು ಶಿರಸ್ಸಿನಲ್ಲಿ ಧರಿಸಿದವನೂ, ಗಜಾಸುರನನ್ನು ಸಂಹರಿಸಿದವನೂ, ಪರಮೋತ್ತಮವಾದ ಬ್ರಹ್ಮಾನಂದವನ್ನು ಅನುಗ್ರಹಿಸತಕ್ಕವನೂ ಆದ, ಪಂಚಮುಖಪರಮೇಶ್ವರನನ್ನು ಸ್ತುತಿಸುತ್ತೇವೆ.

ಉದೈತ್ತು ಬಲ್ಯಾಹರಣಾಭಿಲಾಷೋ
ಯೋ ವಾಮನೋ ಹಾರ್ಯಜಿನಂ ವಸಾನಃ |
ತಪಾಂಸಿ ಕಾಂತಾರಹಿತೋ ವ್ಯತಾನೀತ್
ಆದ್ಯೋಽವತಾದಾಶ್ರಮಿಣಾಮಯಂ ನಃ || ೧೩

(ವಾಮನ) ಯಃ = ಯಾವಾತನು, ಬಲಿ = ಬಲಿಚಕ್ರವರ್ತಿಯಿಂದ, ಆಹರಣಾಭಿಲಾಷಃ = ತ್ರೈಲೋಕ್ಯವನ್ನು ಕಿತ್ತುಕೊಳ್ಳುವ ಅಭಿಲಾಷೆಯುಳ್ಳವನಾಗಿ, ಹಾರ್ಯಜಿನಂ = ಸುಂದರವಾದ (ಜಿಂಕೆಯ) ಚರ್ಮವನ್ನು, ವಸಾನಃ= ಧರಿಸಿ, ವಾಮನಃ = ವಾಮನನು (ಕುಳ್ಳನು) ಉದೈತ್= ಆದನೋ, ಕಾಂತಾರಹಿತಃ = ಪತ್ನಿಯನ್ನು ಪರಿಗ್ರಹಿಸದೆ, ತಪಾಂಸಿ =ತಪಸ್ಸನ್ನು, ವ್ಯತಾನೀತ್ = ಆಚರಿಸಿದನೋ, ಅಯಂ= ಇಂತಹ, ಆಶ್ರಮಿಣಾಮಾದ್ಯಃ = ಆಶ್ರಮಿಗಳಲ್ಲಿ ಮೊದಲನೆಯ ಬ್ರಹ್ಮಚಾರಿಯು, ನಃ =ನಮ್ಮನ್ನು, ಅವತಾತ್ = ಪಾಲಿಸಲಿ.

"ಯಾವಾತನು ಬಲಿಚಕ್ರವರ್ತಿಗೆ ಸೇರಿದ್ದ ಲೋಕತ್ರಯುವನ್ನು ಛಲದಿಂದ ವಶಪಡಿಸಿಕೊಳ್ಳುವುದಕ್ಕಾಗಿ, ಮೃಗಾಜಿನವನ್ನು ಧರಿಸಿ ವಾಮನ ಬ್ರಹ್ಮಚಾರಿಯಾಗಿ ಅವತರಿಸಿ

ಬಂದನೋ ಬ್ರಹ್ಮಚಾರಿಯಾಗಿಯೇ ಇದ್ದು ತಪಸ್ಸನ್ನಾಚರಿಸಿದನೋ ಆ ಮಹಾವಿಷ್ಣುವು ನಮ್ಮನ್ನು ಪಾಲಿಸಲಿ.

(ಶಿವಪರ ) ಯಃ = ಯಾವಾತನು, ಬಲಿ= (ದಕ್ಷಯಾಗದಲ್ಲಿ ತನಗೆ ಸಲ್ಲಬೇಕಾಗಿದ್ದ) ಹವಿರ್ಭಾಗವನ್ನು, ಆಹರಣಾಭಿಲಾಷಃ = ಕಿತ್ತುಕೊಳ್ಳುವ ಉದ್ದೇಶವುಳ್ಳವನಾದನೋ, ಮನೋಹಾರಿ= ಸುಂದರವಾದ, ಅಜಿನಂ =ವ್ಯಾಘ್ರಾಜಿನವನ್ನು, ವಸಾನಃ = ಧರಿಸಿ, ಕಾಂತಾರ = ಅರಣ್ಯವೇ, ಹಿತ =ತನಗೆ ಹಿತವೆಂದು ತಿಳಿದು ಅಥವಾ ಕಾಂತೆಯಾದ ಸತೀದೇವಿಯಿಂದ ರಹಿತನಾಗಿ, ತಪಾಂಸಿ ವ್ಯತಾನೀತ್= ತಪಸ್ಸನ್ನಾಚರಿಸಿದನೋ, ಅಯಂ = ಇಂತಹ, ಆಶ್ರಮಿಣಾಮಾದ್ಯಃ =ಎಲ್ಲ ಆಶ್ರಮಿಗಳಲ್ಲಿಯೂ ಶ್ರೇಷ್ಠನಾದ ಪರಶಿವನು, ನಃ ಅವತಾತ್ = ನಮ್ಮನ್ನು ಕಾಪಾಡಲಿ.

ಟಿಪ್ಪಣಿ :- ಆಶ್ರಮಿಣಾಮಾದ್ಯಃ = ಪರಮೇಶ್ವರನನ್ನು ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಸಂನ್ಯಾಸಿಯೆಂದು ನಾಲ್ಕುವಿಧದಲ್ಲಿಯೂ ವರ್ಣಿಸಲು ಸಾಧ್ಯವಿದೆ. ಎಲ್ಲ ವಿಧದಲ್ಲಿ ವರ್ಣಿಸಿದರೂ ಆತನಿಗೆ ಶ್ರೇಷ್ಠಸ್ಥಾನ ಸಲ್ಲುತ್ತದೆ. ಉದ್ಯೈತ್ = ಆದನು, ಮೇಲೆದ್ದನು, ಅವತರಿಸಿದನು.

"ದಕ್ಷಯಾಗದಲ್ಲಿ ತನಗೆ ಸಲ್ಲಬೇಕಾದ ಹವಿರ್ಭಾಗವನ್ನು ಪಡೆಯಲು ಶಿವನು ಉತ್ಸುಕನಾಗಿದ್ದನು. ಸತೀದೇವಿಯು ತಂದೆಯಿಂದ ಉಪೇಕ್ಷಿತಳಾದ್ದರಿಂದ ಯೋಗಾಗ್ನಿಯಲ್ಲಿ ದೇಹವನ್ನು ತ್ಯಜಿಸಿದಳು. ಆಗ ಶಿವನು ಏಕಾಕಿಯಾಗಿ ತಪಸ್ಸು ಮಾಡಿದನು. ಆಶ್ರಮಿಗಳಲ್ಲಿ ಶ್ರೇಷ್ಠನಾದ ಆತನು ನಮ್ಮನ್ನು ಪಾಲಿಸಲಿ.

ಯೇನಾಧಿಕೋದ್ಯತ್ತರವಾರಿಣಾಽಽಶು
ಜಿತೋಽರ್ಜುನಃ ಸಂಗರರಂಗಭೂಮೌ |
ನಕ್ಷತ್ರನಾಥಸ್ಫುರಿತೇನ ತೇನ
ನಾಥೇನ ಕೇನಾಪಿ ವಯಂ ಸನಾಥಾಃ || ೧೪

(ಪರಶುರಾಮ) ಅಧಿಕೋದ್ಯತ್ತರವಾರಿಣಾ = ಅಧಿಕ-ವಿಶೇಷವಾಗಿ, ಉದ್ಯತ್ -ಮೇಲೆತ್ತಿದ, ತರವಾರಿಣಾ -ಖಡ್ಗವುಳ್ಳ, ಯೇನ= ಯಾವ ಪರಶುರಾಮನಿಂದ, ಅರ್ಜುನಃ = ಕಾರ್ತವೀರ್ಯಾರ್ಜುನನು, ಸಂಗರರಂಗಭೂಮೌ =ಯುದ್ಧದ ರಂಗಭೂಮಿಯಲ್ಲಿ, ಆಶು = ಬೇಗನೆ, ಜಿತಃ=ಸೋಲಿಸಲ್ಪಟ್ಟನೋ (ಹತನಾದನೋ) ತೇನ = ಆ, ನಕ್ಷತ್ರನಾಥಸ್ಫುರಿತೇನ = ಚಂದ್ರನಂತೆ ಪ್ರಕಾಶಿಸುವ, ಕೇನಾಪಿ = (ವರ್ಣನಾತೀತನಾದ) ಒಬ್ಬಾನೊಬ್ಬ, ನಾಥೇನ = ಪ್ರಭುವಿನಿಂದ, ವಯಂ= ನಾವು, ಸನಾಥಾಃ = ನಾಥವಂತರಾಗಿದ್ದೇವೆ. (ಆತನೇ ನಮ್ಮ ಪ್ರಭು)

ವಿವರಣೆ : ತರವಾರಿ = ಖಡ್ಗ.

ಕರವಾಲ ಮಂಡಲಾಗ್ರ ಕಾಲೇಯಕಾಸಿರಿಷ್ಟಯಃ |
ಋಷ್ಟಿಃ ಖಡ್ಗಸ್ತರವಾರಿ ಕೌಕ್ಷೇಯಕೌ ಚ ನಂದಕಃ || ಎಂದು ರಭಸಕೋಶವನ್ನು ಅಮರಸುಧಾ ವ್ಯಾಖ್ಯಾನದಲ್ಲಿ ಉದಾಹರಿಸಿದ್ದಾರೆ (ರಿಷ್ಟಿ ಶಬ್ದದವ್ಯಾಖ್ಯೆಯನ್ನು ನೋಡಿ).ನಕ್ಷತ್ರನಾಥಶಬ್ದಕ್ಕೆ ನಕ್ಷತ್ರ =

ಕ್ಷತ್ರಿಯೇತರರಾದ ಬ್ರಾಹ್ಮಣಾದಿಗಳ, ನಾಥ = ರಕ್ಷಕನಾದ ಪರಶುರಾಮ ಎಂಬ ಅರ್ಥವನ್ನೂ ಹೇಳಬಹುದು. ಆತನ ಸ್ಫುರಿತ = ಹೊಮ್ಮಿದ ಸಾಮರ್ಥ್ಯ.

"ಯಾವಾತನು ರಣಭೂಮಿಯಲ್ಲಿ ಖಡ್ಗದಿಂದ ಕಾರ್ತವೀರ್ಯನನ್ನು ಸಂಹರಿಸಿದನೋ, ಅಂತಹ ಚಂದ್ರಕಾಂತಿಯುಳ್ಳ ಪ್ರಭುವಾದ ಪರಶುರಾಮನು ನಮಗೆ ಪ್ರಭುವಾಗಿದ್ದಾನೆ. (ಪರಶುರಾಮನ ಮುಖ್ಯ ಆಯುಧ ಪರಶು. ಯುದ್ಧದಲ್ಲಿ ಖಡ್ಗವನ್ನು ಬಳಸಿದನೆಂದರೆ ಬಾಧೆಯೇನೂ ಇಲ್ಲ )

(ಶಿವಪರ)ಅಧಿಕೋದ್ಯತ್ತರ = (ಶಿರಸ್ಸಿನಲ್ಲಿ) ವಿಶೇಷವಾಗಿ ಮೇಲೆ ಚಿಮ್ಮುತ್ತಿರುವ, ವಾರಿಣಾ = ಗಂಗಾಜಲವುಳ್ಳ, ಯೇನ = ಯಾರಿಂದ, ಸಂಗರರಂಗಭೂಮೌ =ಯುದ್ಧ ಭೂಮಿಯಲ್ಲಿ, ಅರ್ಜನಃ = ಪಾರ್ಥನು, ಆಶು= ಬೇಗನೆ, ಜಿತಃ = ಪರಾಜಿತನಾದನೋ, ತೇನ = ಆ, ನಕ್ಷತ್ರನಾಥ ಸ್ಫುರಿತೇನ = ಚಂದ್ರಕಾಂತಿಯಿಂದಕೂಡಿದ (ಚಂದ್ರಮೌಳಿಯಾದ), ಕೇನಾಪಿ ನಾಥೇನ =ಒಬ್ಬಾನೊಬ್ಬ ಪ್ರಭುವಿನಿಂದ, ವಯಂ = ನಾವು, ಸನಾಥಾಃ =ನಾಥವಂತರಾಗಿದ್ದೇವೆ.

"ಗಂಗಾಧರನೂ ಚಂದ್ರಮೌಳಿಯೂ ಆದ ಶಿವನು (ಕಿರಾತ ವೇಷಧಾರಿಯಾಗಿ) ಅರ್ಜುನನನ್ನು ಪರಾಜಯಗೊಳಿಸಿದನು. ಆ ಪ್ರಭುವು ನಮಗೆ ಒಡೆಯನಾಗಿದ್ದಾನೆ.

ವಿಲಾಸಿನಾಽಲೀಕಭವೇನ ಧಾಮ್ನಾ
ಕಾಮಂ ದ್ವಿಷಂತಂ ಸ ದಶಾಸ್ಯಮಸ್ಯನ್ |
ದೇವೋ ಧರಾಪತ್ಯಕುಚೋಷ್ಮಸಾಕ್ಷೀ
ದೇಯಾದಮಂದಾತ್ಮಸುಖಾನುಭೂತಿಮ್ || ೧೫

(ಶ್ರೀರಾಮ) ವಿಲಾಸಿನಾಲೀಕಭವೇನ = ವಿಲಾಸಿ - ವಿಶೇಷವಾಗಿ ಶೋಭಿಸುವ, ನಾಲೀಕಭವೇನ- ಕಮಲಜನ್ಮನಾದ ಬ್ರಹ್ಮನಿಂದ ಪಡೆದ, ಧಾಮ್ನಾ =ತೇಜೋಬಲದಿಂದ, ಕಾಮಂ = ಯಥೇಷ್ಟವಾಗಿ, ದ್ವಿಷಂತಂ = ಧರ್ಮವನ್ನು ಅಥವಾ ಶ್ರೀರಾಮನನ್ನು ದ್ವೇಷಿಸುತ್ತಿದ್ದ, ದಶಾಸ್ಯ = ದಶಮುಖನಾದ ರಾವಣನನ್ನು, ಅಸ್ಯನ್ = ನಾಶಮಾಡಿದ, ಮತ್ತು ಧರಾಪತ್ಯಕುಚೋಷ್ಮಸಾಕ್ಷೀ =ಭೂಜಾತೆಯಾದ ಸೀತಾದೇವಿಯ ಕುಚಗಳ ಉಷ್ಣತೆಗೆ ಸಾಕ್ಷಿಯಾದ, ಸ ದೇವಃ = ಆ ಶ್ರೀರಾಮದೇವನು, ಅಮಂದಾತ್ಮಸುಖಾನುಭೂತಿಂ = ಅಮಿತವಾದ ಬ್ರಹ್ಮಾನಂದಾನುಭವವನ್ನು, ದೇಯಾತ್ = ಅನುಗ್ರಹಿಸಲಿ.

ಟಿಪ್ಪಣಿ:- ಧರಾಪತ್ಯ = ಧರಾ-ಭೂದೇವಿಯ, ಅಪತ್ಯ-ಮಗಳು. ನಾಲೀಕ = ಕಮಲ.

"ಬ್ರಹ್ಮನ ವರಬಲದಿಂದ ಧರ್ಮವನ್ನು ಅಥವಾ ಶ್ರೀರಾಮನನ್ನು ದ್ವೇಷಿಸುತ್ತಿದ್ದ ರಾವಣನನ್ನು ಸಂಹರಿಸಿದವನೂ ಸೀತಾದೇವಿಯನ್ನು ಆಲಿಂಗಿಸಿಕೊಂಡಿರತಕ್ಕವನೂ ಆದ ಶ್ರೀರಾಮನು ನಮಗೆ ಬ್ರಹ್ಮಾನಂದದ ಅನುಭೂತಿಯನ್ನು ಅನುಗ್ರಹಿಸಲಿ.

(ಶಿವಪರ) ವಿಲಾಸಿನಾ = ವಿಲಾಸಪ್ರಿಯವಾದ, ಅಲೀಕಭವೇನ=ಮಿಥ್ಯಾಜ್ಞಾನದಿಂದುಂಟಾದ, ಧಾಮ್ನಾ = ಮೋಹಕ ಶಕ್ತಿಯಿಂದ, ದ್ವಿಷಂತಂ=ಮುಮುಕ್ಷುಗಳನ್ನು ಅಥವಾ ಶಿವನನ್ನು ದ್ವೇಷಿಸುವ, ದಶಾಸ್ಯಂ= ಹತ್ತು(ಅನಂಗಾವಸ್ಥೆಗಳೆಂಬ) ಮುಖಗಳಿಂದ ಮೆರೆಯುವ, ಕಾಮಂ = ಮನ್ಮಥನನ್ನು, ಅಸ್ಯನ್= ನಾಶಪಡಿಸತಕ್ಕ, ಮತ್ತು ಧರಾಪತ್ಯ ಕುಚೋಷ್ಮಸಾಕ್ಷೀ=ಪರ್ವತರಾಜಪುತ್ರಿಯಾದ ಪಾರ್ವತಿಯ ಕುಚೋಷ್ಮಕ್ಕೆ ಸಾಕ್ಷಿಯಾದ, ದೇವಃ = ದೇವನಾದ ಈಶ್ವರನು, ಅಮಂದಾತ್ಮಸುಖಾನುಭೂತಿಂ = ಅಮಿತವಾದ ಬ್ರಹ್ಮಾನಂದಾನುಭವವನ್ನು, ದೇಯಾತ್ = ಅನುಗ್ರಹಿಸಲಿ.

ಟಿಪ್ಪಣಿ:- ಧರ = ಪರ್ವತ-ಹಿಮಾಲಯ, ಪಾರ್ವತಿಯನ್ನು ಮದುವೆಯಾಗುವ ಬಯಕೆಯನ್ನು ಹುಟ್ಟಿಸುವುದಕ್ಕಾಗಿ ಮನ್ಮಥನು ಈಶ್ವರನಮೇಲೆ ಬಾಣ ಪ್ರಯೋಗವನ್ನು ಮಾಡಿದ. ಆಗ ಈಶ್ವರನ ತೃತೀಯನೇತ್ರದಿಂದ ಹುಟ್ಟಿದ ಅಗ್ನಿಯು ಮನ್ಮಥನನ್ನು ಸುಟ್ಟಿಹಾಕಿತೆಂದು ಪುರಾಣದಲ್ಲಿ ವರ್ಣಿಸಿದ್ದಾರೆ. ಶಿವಧ್ಯಾನದಿಂದ ಕಾಮವನ್ನು ಸಾಧಕನು ಗೆಲ್ಲುತ್ತಾನೆ.

"ಮಿಥ್ಯಾಜ್ಞಾನದಿಂದಾದ ಮೋಹಕಶಕ್ತಿಯಿಂದ ಮುಮುಕ್ಷುಗಳನ್ನು ಅಥವಾ ಶಿವನನ್ನು ದ್ವೇಷಿಸಿದ ಮನ್ಮಥನನ್ನು ಸುಟ್ಟುಬೂದಿ ಮಾಡಿದವನೂ ಪಾರ್ವತೀಪತಿಯೂ ಆದ ಈಶ್ವರನು ನಮಗೆ ಬ್ರಹ್ಮಾನಂದದ ಅನುಭೂತಿಯನ್ನು ಅನುಗ್ರಹಿಸಲಿ.

ವಿಶೇಷ:- 'ವಿಲಾಸಿನಾಲೀಕಭವೇನ ಧಾಮ್ನಾ' ಎಂಬುದಕ್ಕೆ ವ್ಯಾಖ್ಯಾನಕಾರರು ಬೇರೆ ಬೇರೆ ಅರ್ಥವನ್ನು ಬರೆದಿದ್ದಾರೆ-

"ಅಲೀಕಭವೇನ = ಅಸತ್ಯವಾದ ಸಂಸಾರವುಳ್ಳ, ವಿಲಾಸಿನಾ =ವಿಲಾಸಿಯಾದ, ಧಾಮ್ನಾ = ಸ್ವಜ್ಯೋತಿಯಿಂದ" - ಡಿಂಡಿಮವ್ಯಾಖ್ಯಾನ.

"ವಿಲಾಸಿ = ಅಮೋಘವಾಗಿ ಶೋಭಿಸುವ, ನಾಲೀಕ =ವಿಶ್ವಾಮಿತ್ರೋಪದಿಷ್ಟ ಮಂತ್ರಾಸ್ತ್ರಗಳಿಂದ, ಭವೇನ = ಉಂಟಾದ ಧಾಮದಿಂದ" - ಅದ್ವೈತಲಕ್ಷ್ಮೀವ್ಯಾಖ್ಯಾನ. ಶಿವಪರವಾದಾಗ 'ನಾಲೀಕ =ಬಾಣಗಳಿಂದ'ಎಂದು ಮಾತ್ರ ಅರ್ಥ. ಈ ಎರಡು ಅರ್ಥಗಳಲ್ಲಿಯೂ ಧಾಮವು ರಾಮಸಂಬಂಧಿ.

ನಾನು ಬರೆದ ಅರ್ಥದಲ್ಲಿ ನಾಲೀಕಭವ = ಬ್ರಹ್ಮ ಎಂದರ್ಥ. ಈ ಶಬ್ದದ ಮೇಲೆ ಹೇತ್ವರ್ಥೇ ತೃತೀಯಾ ವಿಭಕ್ತಿ. ಬ್ರಹ್ಮನಿಂದ ಪ್ರಾಪ್ತವಾದ ಧಾಮ = ಬಲ ಎಂದರ್ಥ. ಇಲ್ಲಿ ಧಾಮವು ರಾವಣಸಂಬಂಧಿ. ಮನ್ಮಥನ ದಶಮುಖಗಳು-ಪಂಚಜ್ಞಾನೇಂದ್ರಿಯಗಳು, ಪಂಚಕರ್ಮೇಂದ್ರಿಯಗಳು-ಎಂದು ಡಿಂಡಿಮ ವ್ಯಾಖ್ಯೆ.

ದೃಙ್‌ಮನಃಸಂಗ ಸಂಕಲ್ಪಾ ಜಾಗರಃ, ಕೃಶತಾ ರತಿಃ |
ಹ್ರೀತ್ಯಾಗೋನ್ಮಾದ ಮೂರ್ಛಾಂತಾ ಇತ್ಯನಂಗದಶಾ ದಶ || ಎಂಬ ಹತ್ತು ದಶೆಗಳೇ ದಶಮುಖಗಳೆಂದು ಅದ್ವೈತರಾಜ್ಯಲಕ್ಷ್ಮೀ ವ್ಯಾಖ್ಯಾನದಲ್ಲಿ ಹೇಳಿದ್ದಾರೆ.

ಉತ್ತಾಲಕೇತುಃ ಸ್ಥಿರಧರ್ಮಮೂರ್ತಿಃ
ಹಾಲಾಹಲಸ್ವೀಕರಣೋಗ್ರಕಂಠಃ |
ಸ ರೋಹಿಣೀಶಾನಿಶಚುಂಬ್ಯಮಾನ-
ನಿಜೋತ್ತಮಾಂಗೋಽವತು ಕೋಽಪಿ ಭೂಮಾ ||

(ಬಲರಾಮ) ಉತ್ತಾಲಕೇತುಃ = ಉನ್ನತವಾದ ತಾಳೆಯಮರವೇ ಧ್ವಜವಾಗಿಉಳ್ಳ, ಸ್ಥಿರಧರ್ಮಮೂರ್ತಿಃ = ಸ್ಥಿರವಾದ ಧರ್ಮಮಯಮೂರ್ತಿಯುಳ್ಳ, ಹಾಲಾಹಲಸ್ವೀಕರಣಃ = ಹಾಲಾ-ಮದ್ಯ, ಹಲ-ನೇಗಿಲು ಇವನ್ನು ಸ್ವೀಕರಿಸತಕ್ಕ, ಅಗ್ರಕಂಠ = ಉತ್ತಮವಾದ ಕಂಠವುಳ್ಳವನಾದ, ರೋಹಿಣೀಶಾನಿಶಚುಂಬ್ಯಮಾನ-ನಿಜೋತ್ತಮಾಂಗಃ = ರೋಹಿಣಿಯ ಪತಿಯಾದ ವಸುದೇವನಿಂದ ಸದಾ ಚುಂಬಿಸಲ್ಪಡುವ ಶಿರಸ್ಸುಳ್ಳ, ಸಃ=ಆ, ಕೋಽಪಿ ಭೂಮಾ = ವಾಙ್ಮನಸಗಳಿಗೆ ಅಗೋಚರನಾದ ಪರಮಾತ್ಮನು, ಅವತು = ಕಾಪಾಡಲಿ.

"ತಾಲಧ್ವಜನೂ ಧರ್ಮಮೂರ್ತಿಯೂ ಮದ್ಯ ಮತ್ತು ನೇಗಿಲುಗಳನ್ನು ಸ್ವೀಕರಿಸತಕ್ಕವನೂ ಸುಂದರಕಂಠನೂ ವಸುದೇವನ ಪ್ರೀತಿಗೆ ಪಾತ್ರನೂ ಆದ ಪರಮಾತ್ಮನು ನಮ್ಮನ್ನು ಕಾಪಾಡಲಿ.

ಟಿಪ್ಪಣಿ :- ಬಲರಾಮನೂ ವಿಷ್ಣುವಿನ ಅವತಾರವೆಂದು ವರ್ಣನೆ ಇದೆ.......'ರಾಮೋ ರಾಮಶ್ಚ ರಾಮಶ್ಚ ಬುದ್ಧಃ ಕಲ್ಕಿರ್ನಮೋಽಸ್ತುತೇ' ||

(ಶಿವಪರ) ಉತ್ತಾಲ= ಉನ್ನತವಾದ (ವೃಷಭವೇ) ಕೇತುಃ=ಧ್ವಜವಾಗಿ ಉಳ್ಳ, ಧರ್ಮಮೂರ್ತಿಯಾದ, ಹಾಲಾಹಲವಿಷವನ್ನು ಕುಡಿದು ಉಗ್ರಕಂಠನೆಂದು ವಿಖ್ಯಾತನಾದ, ರೋಹಿಣೀಶ = ಚಂದ್ರನಿಂದ ಸದಾ ಸ್ಪೃಷ್ಟವಾದ ಶಿರಸ್ಸುಳ್ಳ, ಆ ಪರಮಾತ್ಮನು ನಮ್ಮನ್ನು ಕಾಪಾಡಲಿ.

"ವೃಷಭಧ್ವಜನೂ, ಹಾಲಾಹಲವಿಷವನ್ನು ಪಾನಮಾಡಿದವನೂ, ಉಗ್ರಕಂಠನೂ, ಚಂದ್ರಮೌಳಿಯೂ ಆದ ಆ ಪರಶಿವನು ನಮ್ಮನ್ನು ಕಾಪಾಡಲಿ.

ಟಿಪ್ಪಣಿ :- ಶಿವಪರವಾದ ಅರ್ಥದಲ್ಲಿ 'ಉತ್ತಾಲಕೇತುಃ' ಎಂಬುದಕ್ಕೆ'ಉತ್ಕೃಷ್ಟತಾಲೇ ಗೀತಕಾಲೇ ಕೇತುಃ ರುಕ್ ಯಸ್ಯ'ಎಂದು ಡಿಂಡಿಮಕಾರರು ಬರೆದಿದ್ದಾರೆ. ಸಂಗೀತವು ಶಿವನಿಗೆ ಪ್ರಿಯವಾದದ್ದಲ್ಲವೆಂದು ಅವರ ಅಭಿಪ್ರಾಯವಾಗಿ ತೋರುತ್ತದೆ.

ವಿನಾಯಕೇನಾಽಽಕಲಿತಾಹಿತಾಪಂ
ನಿಷೇದುಷೋತ್ಸಂಗಭುವಿ ಪ್ರಹೃಷ್ಯನ್ |
ಯಃ ಪೂತನಾಮೋಹಕಚಿತ್ತವೃತ್ತಿಃ
ಅವ್ಯಾದಸೌ ಕೋಽಪಿ ಕಲಾಪಭೂಷಃ || ೧೭

(ಶ್ರೀಕೃಷ್ಣ) ಆಕಲಿತ = ಕಡೆಗಣಿಸಿದ, ಅಹಿತಾಪಂ = ಹಾವುಗಳ ಪೀಡೆಯುಳ್ಳದ್ದಾಗಿ (ಹಾವುಗಳ ಪೀಡೆಯಾದೀತೆಂಬುದನ್ನೇ ಕಡೆಗಣಿಸಿ; ಇದು ಕ್ರಿಯಾವಿಶೇಷಣ), ಉತ್ಸಂಗಭುವಿ = ಸಮೀಪದ ಸ್ಥಳದಲ್ಲಿ, ನಿಷೇದುಷಾ= ಕುಳಿತಿದ್ದ, ವಿನಾಯಕೇನ = ಪಕ್ಷಿರಾಜನಾದ ಗರುಡನಿಂದ, ಪ್ರಹೃಷ್ಯನ್ =ಸಂತೋಷಪಡುತ್ತ, ಯಃ = ಯಾವಾತನು, ಪೂತನಾ = ಪೂತನೆಯೆಂಬ ರಾಕ್ಷಸಿಗೆ, ಮೋಹಕ = ಭ್ರಮೆಯುಂಟುಮಾಡಬೇಕೆಂಬ, ಚಿತ್ತವೃತ್ತಿಃ =ಸಂಕಲ್ಪವುಳ್ಳವನಾಗಿದ್ದನೋ, ಅಸೌ = ಆ, ಕಲಾಪಭೂಷಃ = ನವಿಲುಗರಿಯ ಭೂಷಣವುಳ್ಳ, ಕೋಽಪಿ = ಅಚಿಂತ್ಯನಾದ ಶ್ರೀಕೃಷ್ಣನು, ಅವ್ಯಾತ್ = ಪಾಲಿಸಲಿ.

ಟಿಪ್ಪಣಿ :- ವಿ= ಪಕ್ಷಿಗಳ, ನಾಯಕ = ರಾಜ.

"ಹಾವುಗಳಿಂದ ತಾಪವಾದೀತೆಂಬುದನ್ನೇ ಕಡೆಗಣಿಸಿ ಸಮೀಪದಲ್ಲಿ ಕುಳಿತುಕೊಂಡಿದ್ದ ಗರುಡನನ್ನು ನೋಡಿ ಸಂತೋಷಪಡತಕ್ಕವನೂ ಪೂತನೆಯನ್ನು ಭ್ರಮೆಗೊಳಿಸಿ ಸಂಹರಿಸಬೇಕೆಂದು ಸಂಕಲ್ಪಿಸಿದವನೂ ನವಿಲುಗರಿಯಿಂದ ಭೂಷಿತನೂ ಆದ ಶ್ರೀಕೃಷ್ಣನು ನಮ್ಮನ್ನು ಪಾಲಿಸಲಿ.

ಟಿಪ್ಪಣಿ :- ಅಹಿತಾಪಂ = ಅಹಿ ಎಂದರೆ ಪ್ರಕೃತದಲ್ಲಿ ವಿಷ್ಣುವಿಗೆ ಶಯ್ಯೆಯಾದ ಆದಿಶೇಷನೆಂದೂ ಹೇಳಬಹುದು.

(ಶಿವಪರ) ಆಕಲಿತ =(ಸೊಂಡಿಲಿನಿಂದ ತಂದು) ಆಹಿತ= ತಲೆಯ ಮೇಲೆ ಸುರಿದ, ಆಪಂ = ಜಲವುಳ್ಳವನಾಗಿ, ಉತ್ಸಂಗಭುವಿ = ( ಶಿವನ) ತೊಡೆಯಮೇಲೆ, ನಿಷಣ್ಣೇನ = ಕುಳಿತಿದ್ದ, ವಿನಾಯಕೇನ =ಗಣಪತಿಯಿಂದ, ಪ್ರಹೃಷ್ಯನ್ = ಸಂತೋಷಪಡುತ್ತಿರುವ, ಪೂತನಾಮಾ=ಪವಿತ್ರವಾದ ನಾಮವುಳ್ಳ, ಊಹಕ = ಧ್ಯಾನಿಸತಕ್ಕವರ, ಚಿತ್ತ = ಹೃದಯದಲ್ಲಿ, ವೃತ್ತಿಃ = ನೆಲೆಸಿರತಕ್ಕವನು, ಯಃ = ಯಾವಾತನೋ, ಅಸೌ= ಆ, ಕೋಽಪಿ= ಅಚಿಂತ್ಯನಾದ, ಕಲಾಪಭೂಷಃ = ಚಂದ್ರನೆಂಬ ಅಲಂಕಾರವನ್ನು ಧರಿಸಿದ ಈಶ್ವರನು, ಅವ್ಯಾತ್ = ಕಾಪಾಡಲಿ.

ಟಿಪ್ಪಣಿ :- ಕಲಾಪಶಬ್ದಕ್ಕೆ ಚಂದ್ರನೆಂದರ್ಥ, 'ಚಂದ್ರೇವಿದಗ್ಧೇ ವ್ಯಾಕರಣಭೇದೇಽಪಿ ಕಥ್ಯತೇ ಬುಧೈಃ' ಎಂದು ಮೇದಿನೀಕೋಶದಲ್ಲಿದೆ. ಡಿಂಡಿಮದಲ್ಲಿ ಕಲಾಪಶಬ್ದಕ್ಕೆ ಬತ್ತಳಿಕೆಯೆಂದು ಅರ್ಥಬರೆದಿದ್ದಾರೆ. ಆ ಅರ್ಥವೂ ಇದೆ. ಆಹಿತಾಪ = ಅಪ್ ಶಬ್ದಕ್ಕೆ ಸಮಾಸಾಂತ 'ಅ' ಪ್ರತ್ಯಯ, ಋಕ್‌ಪೂರಬ್ಧೂಃ ಪಥಾಮಾನಕ್ಷೇ -ಎಂಬ ಸೂತ್ರದಿಂದ.

"ಗಣಪತಿಯು ಸೊಂಡಲಿನಿಂದ ನೀರುತಂದು ಶಿವನಿಗೆ ಸ್ನಾನಮಾಡಿಸಿ, ಅನಂತರ ಸಭೆಯಲ್ಲಿ ಶಿವನ ತೊಡೆಯಮೇಲೆ ಕುಳಿತಿದ್ದಾನೆ. ಈಶ್ವರನ ನಾಮವೇ ಪವಿತ್ರವಾದದ್ದು. ಭಕ್ತರ ಹೃದಯದಲ್ಲಿ ನೆಲೆಸಿರುವ ಆ ಚಂದ್ರಮೌಳಿಯು ನಮ್ಮನ್ನು ರಕ್ಷಿಸಲಿ.

ಪಾಠೀನಕೇತೋರ್ಜಯಿನೇ ಪ್ರತೀತ-
ಸರ್ವಜ್ಞಭಾವಾಯ ದಯೈಕಸೀಮ್ನೇ |
ಪ್ರಾಯಃ ಕ್ರತುದ್ವೇಷಕೃತಾದರಾಯ
ಬೋಧೈಕಧಾಮ್ನೇ ಸ್ಪೃಹಯಾಮಿ ಭೂಮ್ನೇ || ೧೮

(ಬುದ್ಧ) ಪಾಠೀನಕೇತೋಃ = ಮೀನಧ್ವಜನಾದ ಮನ್ಮಥನನ್ನು, ಜಯಿನೇ= ಜಯಿಸಿರುವ, ಪ್ರತೀತ ಸರ್ವಜ್ಞಭಾವಾಯ = ಪ್ರಖ್ಯಾತವಾದ ಸರ್ವಜ್ಞತ್ವವುಳ್ಳ, ದಯೈಕಸೀಮ್ನೇ = ದಯೆಗೆಒಂದು ಮೇರೆಯಾದ, ಪ್ರಾಯಃ = ವಿಶೇಷವಾಗಿ, ಕ್ರತುದ್ವೇಷಕೃತಾದರಾಯ =ಯಜ್ಞಗಳ ದ್ವೇಷದಲ್ಲಿ ಆದರವನ್ನಿರಿಸಿದ, ಬೋಧೈಕಧಾವ್ನೇ = ಜ್ಞಾನಕ್ಕೆ ಮುಖ್ಯಾಶ್ರಯನಾದ, ಭೂವ್ನೇ = ಮಹಾತ್ಮನಾದ ಬುದ್ಧಾವತಾರಿಗೋಸ್ಕರ, ಸ್ಪೃಹಯಾಮಿ = ಆಶಿಸುತ್ತೇನೆ.

ಟಿಪ್ಪಣಿ :- ಬುದ್ಧನು ಮಾರಜಿತ್ ಎಂದೂ ಸರ್ವಜ್ಞನೆಂದೂ ವಿಖ್ಯಾತನಾಗಿದ್ದಾನೆ. ವೈದಿಕಯಜ್ಞವಿಧಿಗಳಲ್ಲಿ ಆತನಿಗೆ ಆದರವಿರಲಿಲ್ಲ.

"ಮಾರನನ್ನು ಗೆದ್ದವನೂ ಸರ್ವಜ್ಞನೂ ದಯಾನಿಧಿಯೂ ವೈದಿಕಯಜ್ಞಗಳಲ್ಲಿ ಆದರವಿಲ್ಲದವನೂ ಜ್ಞಾನನಿಧಿಯೂ ಆದ ಬುದ್ಧನ ಅವತಾರವನ್ನೆತ್ತಿದ ವಿಷ್ಣುವನ್ನು ಬಯಸುತ್ತೇನೆ-ಭಕ್ತಿಯಿಂದ ಭಜಿಸುತ್ತೇನೆ.

(ಶಿವಪರ) ಕ್ರತುದ್ವೇಷ ಕೃತಾದರ-ಎಂಬಲ್ಲಿ ಕ್ರತುವೆಂದರೆ ದಕ್ಷನು ನಡೆಸಿದ ಯಾಗವೆಂದು ಗ್ರಹಿಸಬೇಕು. ಉಳಿದವೆಲ್ಲ ಸಮಾನ.

ವ್ಯತೀತ್ಯ ಚೇತೋವಿಷಯಂ ಜನಾನಾಂ
ವಿದ್ಯೋತಮಾನಾಯ ತಮೋನಿಹಂತ್ರೇ |
ಭೂಮ್ನೇ ಸದಾವಾಸಕೃತಾಶಯಾಯ
ಭೂಯಾಂಸಿ ಮೇ ಸಂತುತಮಾಂ ನಮಾಂಸಿ || ೧೯

(ಕಲ್ಕಿ) ಜನಾನಾಂ = ಜನರ, ಚೇತೋವಿಷಯಂ = ಮನಸ್ಸಿಗೆ ವಿಷಯವಾಗುವುದನ್ನು, ವ್ಯತೀತ್ಯ = ದಾಟಿ, ವಿದ್ಯೋತಮಾನಾಯ = ಪ್ರಕಾಶಿಸುವ, ತಮೋನಿಹಂತ್ರೇ = ಅಜ್ಞಾನವೆಂಬ ಕತ್ತಲೆಯನ್ನು ದೂರಮಾಡುವ, ಸದಾವಾಸ =ಸಜ್ಜನರ ಸುಖವಾಸದಲ್ಲಿ, ಕೃತಾಶಯಾಯ = ಆಶಯವನ್ನಿಟ್ಟಿರುವ, ಭೂಮ್ನೇ =ಮಹಾಪುರುಷನಾದ ಕಲ್ಕಿಗೆ, ಮೇ = ನನ್ನ, ಭೂಯಾಂಸಿ = ವಿಪುಲವಾದ, ನಮಾಂಸಿ= ನಮಸ್ಕಾರಗಳು, ಸಂತುತಮಾಂ = ವಿಶೇಷವಾಗಿರಲಿ.

ಟಿಪ್ಪಣಿ :- ಕೃತಾಶಯಾಯ = ಕೃತಯುಗವು ಬರಲೆಂದು ಅಪೇಕ್ಷೆಯನ್ನಿಟ್ಟುಕೊಂಡಿರುವ-ಎಂದೂ ಕಲ್ಕಿಪರವಾಗಿ ಹೇಳಬಹುದು.

"ಜನರ ಮನಸ್ಸಿಗೆ ಸಹ ಅಗೋಚರನೂ ಅಜ್ಞಾನನಾಶಕನೂ ಸಜ್ಜನರು ಸುಖವಾಗಿರಲೆಂದು ಬಯಸತಕ್ಕವನೂ ಮಹಾತ್ಮನೂ ಆದ ಕಲ್ಕಿಗೆ ಮತ್ತೆ ಮತ್ತೆ ನಮಸ್ಕಾರಗಳನ್ನರ್ಪಿಸುತ್ತೇನೆ."

ಶಿವಪರವಾಗಿಯೂ ಇದನ್ನೇ ಅನ್ವಯಿಸಿಕೊಳ್ಳಬೇಕು.

ಟಿಪ್ಪಣಿ :- ಅತಿಶಯೇನ ಸಂತು ಸಂತುತಮಾಂ, ಅತಿಶಾಯನಾರ್ಥದಲ್ಲಿ ತಮಪ್. ಅದರಮೇಲೆ ಆಮ್ ಪ್ರತ್ಯಯ.

ವೃಷಾಕಪಾಯೀವರಯೋಃ ಸಪರ್ಯಾಂ
ವಾಚಾಽತಿಮೋಚಾರಸಯೇತಿ ತನ್ವನ್ |
ಮುನಿಪ್ರವೀರೋ ಮುದಿತಾತ್ಮಕಾಮೋ
ಮೂಕಾಂಬಿಕಾಯಾಃ ಸದನಂ ಪ್ರತಸ್ಥೇ || ೨೦

ಮುನಿಶ್ರೇಷ್ಠರಾದ ಶ್ರೀಶಂಕರಭಗವತ್ಪಾದರು ಈ ಪ್ರಕಾರವಾಗಿ ಬಾಳೆಹಣ್ಣಿನ ರಸಕ್ಕಿಂತ ಮಧುರವಾದ ವಾಕ್ಕಿನಿಂದ ಲಕ್ಷ್ಮೀಪತಿಯಾದ ಹರಿ, ಪಾರ್ವತೀಪತಿಯಾದ ಹರ - ಇವರಿಬ್ಬರ ಅರ್ಚನೆಯನ್ನು ನೆರವೇರಿಸಿದರು. ತಮ್ಮ ಇಷ್ಟವು ಸಂತುಷ್ಟವಾಯಿತು -ನೆರವೇರಿತೆಂದು ತಿಳಿದು ಶ್ರೀಮೂಕಾಂಬಿಕೆಯ ನಿವಾಸಸ್ಥಾನಕ್ಕೆ ಪ್ರಯಾಣಮಾಡಿದರು.

ಟಿಪ್ಪಣಿ:- ಮೂಕಾಂಬಿಕಾಕ್ಷೇತ್ರ - ಕೊಲ್ಲೂರು. ವೃಷಾಕಪಾಯೀ - 'ವೃಷಾಕಪ್ಯಗ್ನಿ ಕುಸಿತಕುಸಿದಾನಾಮುದಾತ್ತಃ' ಎಂಬ ಸೂತ್ರದಿಂದ ಐಕಾರಾದೇಶ ಮತ್ತು ಜೀಪ್ ಪ್ರತ್ಯಯ. ವೃಷಾಕ್ರಪೇಃ ಸ್ತ್ರೀ - ವೃಷಾಕಪಾಯೀ. 'ಹರವಿಷ್ಣೂ ವೃಷಾಕಪೀ'' ವೃಷಾಕಪಾಯೀ ಶ್ರೀಗೌರ್ಯೋಃ' ಇತ್ಯಮರಃ.

ಅಂಕೇ ನಿಧಾಯ ವ್ಯಸುಮಾತ್ಮಜಾತಂ
ಮಹಾಕುಲೌ ಹಂತ ಮುಹುಃ ಪ್ರರುದ್ಯ |
ತದೈಕಪುತ್ರೌ ದ್ವಿಜದಂಪತೀ ಸ
ದೃಷ್ಟ್ವಾದಯಾಧೀನತಯಾ ಶುಶೋಚ || ೨೧

ದಾರಿಯಲ್ಲಿ ಉತ್ತಮಕುಲಜಾತರಾದ ಬ್ರಾಹ್ಮಣದಂಪತಿಗಳು ತಮಗಿದ್ದ ಒಬ್ಬನೇ ಮಗನು ಮೃತನಾದನೆಂದು ಮಗನ ದೇಹವನ್ನು ತೊಡೆಯ ಮೇಲಿಟ್ಟುಕೊಂಡು ಅತ್ತು ಅತ್ತು ಅತ್ಯಂತವ್ಯಾಕುಲರಾಗಿರುವುದನ್ನು ಆಚಾರ್ಯರು ಕಂಡರು. ಅಯ್ಯೋ ! ಅವರನ್ನು ಕಂಡು ಕೃಪಾವಶರಾದ ಆಚಾರ್ಯರೂ ಶೋಕಿಸಿದರು.

ಅಪಾರಮಂಚತ್ಯಥ ಶೋಕಮಸ್ಮಿನ್
ಅಭೂಯತೋಚ್ಚೈರಶರೀರವಾಚಾ |
ಜಾಯೇತ ಸಂರಕ್ಷಿತುಮಕ್ಷಮಸ್ಯ
ಜನಸ್ಯ ದುಃಖಾಯ ಪರಂ ದಯೇತಿ || ೨೨

ಹೀಗೆ ಆಚಾರ್ಯರೂ ಶೋಕವಶರಾದಾಗ ದೊಡ್ಡದಾದ ಒಂದು ಅಶರೀರವಾಣಿ ಯುಂಟಾಯಿತು. ಏನೆಂದರೆ "ಸಂರಕ್ಷಿಸಲು ಶಕ್ತನಾಗದವನಿಗೆ ಉಂಟಾಗುವ ದಯೆಯು ಕೇವಲ ದುಃಖಕ್ಕೆ ಕಾರಣವಾದೀತು !"

ಆಕರ್ಣ್ಯ ವಾಣೀಮಶರೀರಿಣೀಂ ತಾ -
ಮೃಷಾವಿತಿ ವ್ಯಾಹರತಿ ಸ್ಮ ವಿಜ್ಞಃ |
ಜಗತ್ರಯೀರಕ್ಷಣ ದಕ್ಷಿಣಸ್ಯ
ಸತ್ಯಂ ತವೈಕಸ್ಯ ತು ಶೋಭತೇ ಸಾ || ೨೩

ಅಶರೀರವಾಣಿಯನ್ನು ಕೇಳಿ ಸರ್ವಜ್ಞರಾದ ಶ್ರೀಶಂಕರರು "ಸತ್ಯವಿದು;ಲೋಕತ್ರಯವನ್ನೂ ಸಂರಕ್ಷಿಸಲು ದಕ್ಷನಾದ ನಿನಗೆ ಮಾತ್ರ ಈ ಹೇಳಿಕೆ ಒಪ್ಪುತ್ತದೆ !"ಎಂದರು.

ಇತೀರಯತ್ಯೇವ ಯತೌ ದ್ವಿಜಾತೇಃ
ಸುತಃ ಸುಖಂ ಸುಪ್ತ ಇವೋದತಿಷ್ಠತ್ ।
ಸಮೀಪಗೈಃ ಸರ್ವಜನೀನಮಸ್ಯ
ಚಾರಿತ್ರ್ಯಮಾಲೋಕ್ಯ ವಿಸಿಷ್ಮಿಯೇ ಚ ॥ ೨೪

ಆ ಯತೀಶ್ವರರು ಹೀಗೆ ನುಡಿದೊಡನೆ ಆ ದ್ವಿಜಪುತ್ರನು ನಿದ್ರೆಯಿಂದೆದ್ದಂತೆ ಎದ್ದನು ! ಆಗ ಆಚಾರ್ಯರ ಸರ್ವಹಿತಕಾರಿಯಾದ ಈ ಕೃತ್ಯವನ್ನು ವೀಕ್ಷಿಸಿ ಸಮೀಪದಲ್ಲಿದ್ದವರೆಲ್ಲರೂ ಅಚ್ಚರಿಗೊಂಡರು.

ಟಿಪ್ಪಣಿ :- ಸರ್ವಜನೀನ = ಸರ್ವಜನರಿಗೆ ಹಿತವೆಂಬ ಅರ್ಥದಲ್ಲಿ'ಸರ್ವಜನಾಟ್ಠಞ್ ಖಶ್ಚ' ಎಂಬ ವಾರ್ತಿಕದಿಂದ ಖಪ್ರತ್ಯಯ.

ರಮ್ಯೋಪಶಲ್ಯಂ ಕೃತಮಾಲಸಾಲ-
ರಸಾಲಹಿಂತಾಲ ತಮಾಲಶಾಲ್ಯೈಃ ।
ಸಿದ್ಧಿಸ್ಥಲಂ ಸಾಧಕಸಂಪದಾಂ ತತ್
ಮೂಕಾಂಬಿಕಾಯಾಃ ಸದನಂ ಜಗಾಹೇ ॥ ೨೫

ಅನಂತರ ಆಚಾರ್ಯರು ಸಾಧಕರ ಇಷ್ಟಾರ್ಥಗಳಿಗೆ ಸಿದ್ಧಿಸ್ಥಳವೆನಿಸಿದ, ಶ್ರೀಮೂಕಾಂಬಿಕೆಯ ನೆಲೆಯಾದ ಕೊಲ್ಲೂರಿಗೆ ಪ್ರಯಾಣಮಾಡಿದರು. ಆ ಗ್ರಾಮದ ಸುತ್ತಮುತ್ತಲೂ ಮಾಲೆಯಂತೆ ದಟ್ಟವಾಗಿ ಬೆಳೆದ ಸಾಲ, ಮಾವಿನ ಮರ, ತಾಳೆಮರ, ಹೊಂಗೆ ಮರ, ಮತ್ತಿಮರ - ಮುಂತಾದ ವೃಕ್ಷಗಳಿಂದ ಆ ಸ್ಥಳವು ರಮ್ಯವಾಗಿತ್ತು.

ಉಚ್ಚಾವಚಾನಂದಜಬಾಷ್ಪಮುಚ್ಚೈಃ
ಉದ್ಗೀರ್ಣರೋಮಾಂಚಮುದಾರಭಕ್ತಿಃ ।
ಅಂಬಾಮಿಹಾಪಾರ ಕೃಪಾವಲಂಬಾಂ
ಸಂಭಾವಯನ್ನಸ್ತುತ ನಿಸ್ತುಲಂ ಸಃ ॥ ೨೬

ಅಲ್ಲಿ ಶ್ರೀಮೂಕಾಂಬಿಕಾದೇವಿಯನ್ನು ನೋಡಿ ಉಕ್ಕೇರಿದ ಆನಂದಬಾಷ್ಪಗಳನ್ನು ಸುರಿಸುತ್ತಾ ರೋಮಾಂಚಿತರಾಗಿ, ಅಗಾಧಭಕ್ತಿಯುಳ್ಳ ಆಚಾರ್ಯರು ಅಪಾರ ಕೃಪಾಶಾಲಿನಿಯಾದ ಅಂಬೆಯನ್ನು ಅರ್ಚಿಸಿ ಅನುಪಮವಾದ ರೀತಿಯಲ್ಲಿ ಈ ಪ್ರಕಾರವಾಗಿ ಸ್ತೋತ್ರಮಾಡಿದರು.

ಪಾರೇಪರಾರ್ಧ್ಯಂ ಪದಪದ್ಮಭಾಃಸು
ಷಷ್ಟ್ಯುತ್ತರಂ ತೇ ತ್ರಿಶತಂ ತು ಭಾಸಃ ।
ಆವಿಶ್ಯ ವಹ್ನ್ಯರ್ಕಸುಧಾಮರೀಚೀ-
ನಾಲೋಕವಂತ್ಯಾದಧತೇ ಜಗಂತಿ ॥ ೨೭

"ಹೇ ದೇವಿ, ನಿನ್ನ ಪಾದಪದ್ಮಗಳ ಪರಾರ್ಧಕ್ಕಿಂತ ಅಧಿಕವಾದ ಕಿರಣಗಳಲ್ಲಿ ಕೇವಲ ಮುನ್ನೂರ ಅರವತ್ತು ರಶ್ಮಿಗಳು ಅಗ್ನಿ, ಸೂರ್ಯ, ಚಂದ್ರರಲ್ಲಿಸೇರಿ ಸಮಸ್ತ ಲೋಕಗಳನ್ನೂ ಬೆಳಗಿಸುತ್ತಿವೆ.

ಟಿಪ್ಪಣಿ :- ಪರಾರ್ಧ =ಒಂದು ದೊಡ್ಡ ಸಂಖ್ಯೆ. ಒಂದರ ಮುಂದೆ ಹದಿನೇಳು ಸೊನ್ನೆಗಳನ್ನಿಟ್ಟರೆ ಆಗುವಸಂಖ್ಯೆ, ಇಲ್ಲಿರುವ ಅಂಬಿಕಾಸ್ತೋತ್ರಗಳು ತಂತ್ರಮಾರ್ಗಾನುಸಾರಿಯಾದವುಗಳು. ಸೌಂದರ್ಯಲಹರಿಯ ಲಕ್ಷ್ಮೀಧರಕೃತವ್ಯಾಖ್ಯಾನದಲ್ಲಿ ಹೆಚ್ಚಿನ ವಿವರಗಳನ್ನು ನೋಡಬಹುದು.

ಅಂತಶ್ಚತುಃಷಷ್ಟ್ಯುಪಚಾರ ಭೇದೈಃ
ಅಂತೇವಸತ್ಕಾಂಡಪಟಪ್ರದಾನೈಃ |
ಆವಾಹನಾದೇಸ್ತವ ದೇವಿ ನಿತ್ಯಂ
ಆರಾಧನಾಮಾದಧತೇ ಮಹಾಂತಃ || ೨೮

"ದೇವಿ, ಮಹಾತ್ಮರು ನಿನ್ನನ್ನು ಪ್ರತಿದಿನವೂ ಮಾನಸ ಪೂಜೆಯಿಂದ ಆರಾಧಿಸುತ್ತಾರೆ. ಮನಸ್ಸಿನಲ್ಲಿಯೇ ಆವಾಹನಾದಿಯಾಗಿ ಅರುವತ್ತುನಾಲ್ಕು ವಿವಿಧೋಪಚಾರಗಳಿಂದ, ಕಡೆಗೆ ಬಳಿಯಲ್ಲಿರುವ ವಸ್ತ್ರದಿಂದ ತೆರೆಹಿಡಿಯುವವರೆಗೆ ಅರ್ಚಿಸುತ್ತಾರೆ.

ಅಂಬೋಪಚಾರೇಷ್ವಧಿಸಿಂಧುಷಷ್ಟಿ
ಶುದ್ಧಾಜ್ಞಯೋಃ ಶುದ್ಧಿದಮೇಕಮೇಕಮ್ |
ಸಹಸ್ರಪತ್ರಂ ದ್ವಿತಯಂ ಚ ಸಾಧು
ತನ್ವಂತಿ ಧನ್ಯಾಸ್ತವ ತೋಷಹೇತೋಃ || ೨೯

"ಅಮ್ಮ, ಅರುವತ್ತುನಾಲ್ಕು ಉಪಚಾರಗಳನ್ನು ಮಾಡುವಾಗ ವಿಶುದ್ಧಿಚಕ್ರ, ಆಜ್ಞಾಚಕ್ರಗಳಲ್ಲಿ ಶುದ್ಧಿಕರವಾದ ಒಂದೊಂದು ಅರ್ಚನೆಯನ್ನು ಸಲ್ಲಿಸಿ, ಸಹಸ್ರಾರದಲ್ಲಿ ಷಟ್‌ಚಕ್ರಗಳ ಸೇವಾತ್ಮಕ ಮತ್ತು ಧಾರಣತ್ಮಕವೆಂಬ ಎರಡು ಬಗೆಯ ಭಜನೆಗಳನ್ನು ನಿನ್ನ ಸಂತೋಷಕ್ಕಾಗಿ ಧನ್ಯರಾದವರು ನಡೆಸುತ್ತಿದ್ದಾರೆ.

ವಿವರಣೆ : ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರ, ಅನಾಹತ, ವಿಶುದ್ಧ, ಆಜ್ಞಾ-ಇವು ಷಟ್ ಚಕ್ರಗಳು. ಅನಂತರ ಸಹಸ್ರಾರವೆಂಬ ಸಹಸ್ರದಳ ಕಮಲ. ಶ್ರೀಚಕ್ರದ ಉಪಾಸನೆಯಲ್ಲಿ ಇವೆಲ್ಲವುಗಳ ವಿವರ ಇರುತ್ತದೆ. ಸಿಂಧು-ನಾಲ್ಕು, ಷಷ್ಟಿ = ಅರವತ್ತು = ೬೪

ಆರಾಧನಂ ತೇ ಬಹಿರೇವ ಕೇಚಿತ್
ಅಂತರ್ಬಹಿಶ್ಚೈಕತಮೇಽಂತರೇವ |
ಅನ್ಯೇ ಪರೇ ತ್ವಂಬ ಕದಾಪಿ ಕುರ್ಯುಃ
ನೈವ ತ್ವದೈಕ್ಯಾನುಭವೈಕನಿಷ್ಠಾಃ || ೩೦

"ಪ್ರಾಕೃತರಾದ ಕೆಲವರು ಬಾಹ್ಯದಲ್ಲಿ-ಪ್ರತಿಮೆಗಳಲ್ಲಿ ನಿನ್ನನ್ನು ಅರ್ಚಿಸುತ್ತಾರೆ. ಮಧ್ಯಮರಾದವರು ಬಾಹ್ಯದಲ್ಲಿಯೂ ಅಂತರಂಗದಲ್ಲಿಯೂ ಪೂಜಿಸುತ್ತಾರೆ. ಉತ್ತಮರು ಅಂತರಂಗದಲ್ಲಿ ಮಾತ್ರ ಮಾನಸಪೂಜೆಯನ್ನಾಚರಿಸುತ್ತಾರೆ. ಹೇ ಅಂಬ, ಇನ್ನು ಅತ್ಯುತ್ತಮರಾದ ಕೆಲವರಾದರೋ ಮಾನಸ ಪೂಜೆಯನ್ನು ಸಹ ಮಾಡುವುದೇ ಇಲ್ಲ!ಏಕೆಂದರೆ, ಅವರು ನಿನ್ನೊಡನೆ ಐಕ್ಯವನ್ನು ಸದಾ ಅನುಸಂಧಾನ ಮಾಡುತ್ತಲೇ ಇರುತ್ತಾರೆ.

ವಿವರಣೆ : ದೇವಿಯೇ ನಾನು ನಾನೇ ದೇವಿ-ಎಂಬ ಅದ್ವೈತಾನುಭವದಲ್ಲಿ ಎರಡು ವಸ್ತುಗಳೇ ಇಲ್ಲದ್ದರಿಂದ ಪೂಜೆಯೇ ಇರುವುದಿಲ್ಲ.

ಅಷ್ಟೋತ್ತರ ತ್ರಿಂಶತಿ ಯಾಃ ಕಲಾಸ್ತಾ-
ಸ್ವರ್ಘ್ಯಾಃ ಕಲಾಃ ಪಂಚ ನಿವೃತ್ತಿಮುಖ್ಯಾಃ |
ತಾಸಾಮುಪರ್ಯಂಬ ತವಾಂಘ್ರಿಪದ್ಮಂ
ವಿದ್ಯೋತಮಾನಂ ವಿಬುಧಾ ಭಜಂತೇ || ೩೧

"ಯಾವ ಮೂವತ್ತೆಂಟು ಕಲೆಗಳಿವೆಯೋ ಅವುಗಳಲ್ಲಿ ನಿವೃತ್ತಿಪ್ರಧಾನವಾದ ಐದು ಕಲೆಗಳು ಶ್ರೇಷ್ಠವಾದವು. ಓ ತಾಯಿಯೆ, ಅವುಗಳ ಮೇಲೆ ವಿರಾಜಿಸುತ್ತಿರುವ ನಿನ್ನ ಪಾದಪದ್ಮವನ್ನು ದೇವತೆಗಳೂ ಪಂಡಿತರೂ ಭಜಿಸುತ್ತಾರೆ.

ವಿವರಣೆ : ಆಧಾರಶಕ್ತಿ, ಧೂಮ್ರಾರ್ಚಿ-ಮೊದಲಾದ ೩೮ ಕಲೆಗಳು ತಂತ್ರಶಾಸ್ತ್ರದಲ್ಲಿ ಉಕ್ತವಾಗಿವೆ. ಅವುಗಳಲ್ಲಿ ಬೋಧಿನೀ, ಧಾರಿಣೀ, ಕ್ಷಮಾ, ಅಮೃತಾ, ಮಾನದಾ-ಇವು ಪ್ರಮುಖವಾದವುಗಳು. "ಅಷ್ಟೋತ್ತರ ತ್ರಿಂಶತಿ ಯಾಃ ಕಲಾಃ "-ಇಲ್ಲಿ ಸಂತಿ ಎಂದು ಅಧ್ಯಾಹಾರ. ಅಷ್ಟೋತ್ತರ ತ್ರಿಂಶತಿ-ಎಂಬುದನ್ನು ಕ್ರಿಯಾವಿಶೇಷಣವಾಗಿ ಮಾಡಿಕೊಳ್ಳಬೇಕು. ಆಗ ನಪುಂಸಕಲಿಂಗದ ಪ್ರಯೋಗಕ್ಕೆ ಉಪಪತ್ತಿದೊರೆಯುತ್ತದೆ.

ಕಾಲಾಗ್ನಿರೂಪೇಣ ಜಗಂತಿ ದಗ್ಧ್ವಾ
ಸುಧಾತ್ಮನಾऽऽಪ್ಲಾವ್ಯ ಸಮುತ್ಸೃಜಂತೀಮ್ |
ಯೇ ತ್ವಾಮವಂತೀಮಮೃತಾತ್ಮನೈವ
ಧ್ಯಾಯಂತಿ ತೇ ಸೃಷ್ಟಿಕೃತೋ ಭವಂತಿ || ೩೨

"ಹೇ ದೇವಿ, ಕಾಲಾಗ್ನಿರೂಪದಿಂದ ಲೋಕಗಳನ್ನು ಸುಟ್ಟುಹಾಕಿ, ಸುಧಾರೂಪದಿಂದ ತೋಯಿಸಿ ಸೃಷ್ಟಿಮಾಡಿ, ಅಮೃತಸ್ವರೂಪದಿಂದ ಲೋಕಗಳನ್ನು ಪಾಲಿಸುತ್ತಿರುವೆಯೆಂದು ಯಾರು ನಿನ್ನನ್ನು ಧ್ಯಾನಿಸುತ್ತಾರೋ ಅವರು ಸೃಷ್ಟಿಕರ್ತರೇ ಆಗಿಬಿಡುತ್ತಾರೆ. (ಇದು ಸಗುಣೋಪಾಸನೆ)

ಯೇ ಪ್ರತ್ಯಭಿಜ್ಞಾಮತಪಾರವಿಜ್ಞಾ
ಧನ್ಯಾಸ್ತು ತೇ ಪ್ರಾಗ್ವಿದಿತಾಂ ಗುರೂಕ್ತ್ಯಾ |
ಸೈವಾಹಮಸ್ಮೀತಿ ಸಮಾಧಿಯೋಗಾತ್
ತ್ವಾಂ ಪ್ರತ್ಯಭಿಜ್ಞಾವಿಷಯಂ ವಿದಧ್ಯುಃ || ೩೩

"ಇನ್ನು ಯಾರು ಪ್ರತ್ಯಭಿಜ್ಞಾಶಾಸ್ತ್ರದಲ್ಲಿ ಪಾರಂಗತರಾಗಿ ಗುರೂಪದೇಶದಿಂದ ನಿನ್ನ ಸ್ವರೂಪವನ್ನು ಮೊದಲು ತಿಳಿದು, ಸಮಾಧಿಯೋಗದಿಂದ "ಸೈವಾಹಮಸ್ಮಿ - ಅವಳೇ ನಾನಾಗಿದ್ದೇನೆ" ಎಂದು ನಿನ್ನನ್ನು ಪ್ರತ್ಯಭಿಜ್ಞಾಗೋಚರಳನ್ನಾಗಿ ಮಾಡಿ ಉಪಾಸನೆಮಾಡುತ್ತಾರೋ ಅವರೇ ಧನ್ಯರು.

ವಿವರಣೆ : ಪ್ರತ್ಯಭಿಜ್ಞಾಶಾಸ್ತ್ರವು ಕಾಶ್ಮೀರದಲ್ಲಿ ಪ್ರಸಿದ್ಧವಾಗಿತ್ತು. ಪ್ರಕ್ರಿಯಾಭೇದವಿದ್ದರೂ ಪರಮಾರ್ಥದಲ್ಲಿ ಇದು ಅದ್ವೈತವನ್ನೇ ಬೋಧಿಸುತ್ತದೆ. ಅದೇ ಇದು ಎಂಬ ಸ್ಮರಣೆ ಪ್ರತ್ಯಭಿಜ್ಞೆ. 'ಸೋಽಹಂ' ಎಂಬುದು ನಿರ್ಗುಣೋಪಾಸನೆ. ಅಹಂಗ್ರಹೋಪಾಸನೆ ಎಂದೂ ಹೇಳುತ್ತಾರೆ.

ಆಧಾರಚಕ್ರೇ ಚ ತದುತ್ತರಸ್ಮಿನ್
ಆರಾಧಯಂತ್ಯೈಹಿಕ ಭೋಗಲುಬ್ಧಾಃ |
ಉಪಾಸತೇ ಯೇ ಮಣಿಪೂರಕೇ ತ್ವಾಂ
ವಾಸಸ್ತು ತೇಷಾಂ ನಗರಾದ್ ಬಹಿಸ್ತೇ || ೩೪

"ಇಹಲೋಕದ ವಿಷಯಭೋಗಗಳಲ್ಲಿ ಆಸೆಯುಳ್ಳವರು ಮೂಲಾಧಾರ ಚಕ್ರದಲ್ಲಿಯೂ ಅದರ ಮೇಲಿರುವ ಸ್ವಾಧಿಷ್ಠಾನದಲ್ಲಿಯೂ ನಿನ್ನನ್ನು ಉಪಾಸಿಸುತ್ತಾರೆ. ಯಾರು ಮಣಿಪೂರಚಕ್ರದಲ್ಲಿ ನಿನ್ನ ಉಪಾಸನೆಯನ್ನು ಮಾಡುತ್ತಾರೋ ಅವರಿಗೆ ನಿನ್ನ ನಗರದ ಹೊರಗಡೆ ವಾಸಸ್ಥಾನವು ಲಭಿಸುತ್ತದೆ.

ಅನಾಹತೇ ದೇವಿ ಭಜಂತಿ ಯೇ ತ್ವಾಂ
ಅಂತಃಸ್ಥಿತಿಸ್ತ್ವನ್ನಗರೇ ತು ತೇಷಾಮ್ |
ಶುದ್ಧಾಜ್ಞಯೋರ್ಯೇ ತು ಭಜಂತಿ ತೇಷಾಂ
ಕ್ರಮೇಣ ಸಾಮೀಪ್ಯ ಸಮಾನಭೋಗೌ || ೩೫

"ಹೇ ದೇವಿ, ಯಾರು ಅನಾಹತಚಕ್ರದಲ್ಲಿ ನಿನ್ನನ್ನು ಭಜಿಸುತ್ತಾರೋ ಅವರಿಗೆ ನಿನ್ನ ನಗರದ ಒಳಗಡೆ ವಾಸವು ಪ್ರಾಪ್ತವಾಗುತ್ತದೆ. ಇನ್ನು ಯಾರು ವಿಶುದ್ಧಚಕ್ರದಲ್ಲಿ ಭಜಿಸುತ್ತಾರೋ ಅವರಿಗೆ ನಿನ್ನ ಸಾಮೀಪ್ಯವೂ ಆಜ್ಞಾಚಕ್ರದಲ್ಲಿ ಭಜಿಸತಕ್ಕವರಿಗೆ ಸಮಾನ ಭೋಗವೂ ಕ್ರಮವಾಗಿ ಲಭಿಸುತ್ತವೆ.

ಸಹಸ್ರಪತ್ರೇ ಧ್ರುವಮಂಡಲಾಖ್ಯೇ
ಸರೋರುಹೇ ತ್ವಾಮನುಸಂದಧಾನಃ |
ಚತುರ್ವಿಧೈಕ್ಯಾನುಭವಾಸ್ತಮೋಹಃ
ಸಾಯುಜ್ಯಮಂಬಾಂಚತಿ ಸಾಧಕೇಂದ್ರಃ || ೩೬

"ಸಹಸ್ರದಳಗಳಿರುವ ಧ್ರುವಮಂಡಲವೆಂಬ ಸಹಸ್ರಾರಕಮಲದಲ್ಲಿ ನಿನ್ನ ಉಪಾಸನೆಮಾಡತಕ್ಕವನು ನಾಲ್ಕುಬಗೆಯಾದ ಐಕ್ಯಾನುಭವದಿಂದ ಅಜ್ಞಾನವನ್ನು ವಿಧ್ವಂಸಗೊಳಿಸಿ, ಹೇ ಅಂಬ, ಸಾಯುಜ್ಯವನ್ನು ಪಡೆಯುತ್ತಾನೆ. ಈತನೇ ಸಾಧಕೋತ್ತಮ.

ಶ್ರೀಚಕ್ರಷಟ್ಚಕ್ರಕಯೋಃ ಪುರೋಽಥ
ಶ್ರೀಚಕ್ರಮನ್ವೋರಪಿ ಚಿಂತಿತೈಕ್ಯಮ್ |
ಚಕ್ರಸ್ಯ ಮನ್ತ್ರಸ್ಯ ತತಸ್ತ್ವಯೈಕ್ಯಂ
ಕ್ರಮಾದನುಧ್ಯಾಯತಿ ಸಾಧಕೇಂದ್ರಃ || ೩೭

ಈ ಸಾಧಕೋತ್ತಮನು ಶ್ರೀಚಕ್ರ - ಷಟ್‌ಚಕ್ರಗಳಿಗೆ ಐಕ್ಯವನ್ನೂ ಆಮೇಲೆ ಶ್ರೀಚಕ್ರ-ಮಂತ್ರಗಳಿಗೆ ಐಕ್ಯವನ್ನೂ ತರುವಾಯ ಶ್ರೀಚಕ್ರ -ದೇವಿಯಾದ ನಿನಗೆ ಐಕ್ಯವನ್ನೂ ಅನಂತರ ಮಂತ್ರಕ್ಕೂ ನಿನಗೂ ಇರುವ ಐಕ್ಯವನ್ನೂ ಕ್ರಮವಾಗಿ ಅನುಸಂಧಾನಮಾಡುತ್ತಾನೆ."

ವಿವರಣೆ :ಇವು ಹಿಂದಿನ ಶ್ಲೋಕದಲ್ಲಿ ಪ್ರಸ್ತುತವಾದ ನಾಲ್ಕುಬಗೆಯ ಐಕ್ಯಗಳು

೧. ಶ್ರೀಚಕ್ರ-ಷಟ್ ಚಕ್ರಗಳಿಗೆ ಐಕ್ಯ
೨. ಶ್ರೀಚಕ್ರ-ಮಂತ್ರಗಳ ಐಕ್ಯ
೩. ದೇವೀ-ಶ್ರೀಚಕ್ರಗಳ ಐಕ್ಯ
೪. ದೇವೀ-ಮಂತ್ರಗಳ ಐಕ್ಯ

ಇತಿ ತಾಂ ವಚನೈಃ ಪ್ರಪೂಜ್ಯ ಭೈಕ್ಷೌ -
ದನಮಾತ್ರೇಣ ಸ ತುಷ್ಟಿಮಾನ್ ಕೃತಾರ್ಥಃ |
ಬಹುಸಾಧಕಸಂಸ್ತುತಃ ಕಿಯಂತಂ
ಸಮಯೇ ತತ್ರ ನಿನಾಯ ಶಾಂತಚೇತಾಃ || ೩೮

ಈ ಪ್ರಕಾರವಾಗಿ ಆ ದೇವಿಯನ್ನು ಸ್ತೋತ್ರಮಾಡಿ ಪೂಜಿಸಿ, ಭಿಕ್ಷಾನ್ನದಿಂದಲೇ ಸಂತುಷ್ಟರಾಗಿ ನಾನು ಕೃತಾರ್ಥನಾದೆನೆಂದು ಆಚಾರ್ಯರು ಭಾವಿಸಿದರು. ಆಮೇಲೆ ಶಾಂತಚಿತ್ತರಾಗಿ ಕೆಲವು ದಿನಗಳನ್ನು ಆ ಸ್ಥಳದಲ್ಲಿ ಕಳೆದರು. ಅಲ್ಲಿದ್ದ ಬಹುಮಂದಿ ಸಾಧಕರು ಆಚಾರ್ಯರ ಮಹಿಮೆಯನ್ನು ತಿಳಿದು ಅವರನ್ನು ಕೊಂಡಾಡುತ್ತಿದ್ದರು.

ಶ್ರಯತಿ ಸ್ಮ ತತೋಽಗ್ರಹಾರಕಂ ಶ್ರೀ -
ಬಲಿಸಂಜ್ಞಂ ಸ ಕದಾಚನ ಸ್ವಶಿಷ್ಯೈಃ |
ಅನುಗೇಹಹುತಾಗ್ನಿಹೋತ್ರದುಗ್ಧ -
ಪ್ರಸರತ್ಪಾವನಗಂಧಲೋಭನೀಯಮ್ || ೩೯

ಆಮೇಲೆ ಶ್ರೀಶಂಕರರು ಒಂದು ಸಲ ತಮ್ಮ ಶಿಷ್ಯರೊಡನೆ ಶ್ರೀಬಲಿ ಎಂಬ ಅಗ್ರಹಾರಕ್ಕೆ ಹೋದರು. ಅಲ್ಲಿರುವ ಪ್ರತಿಯೊಂದು ಮನೆಯಲ್ಲಿಯೂ ಅಗ್ನಿಹೋತ್ರಮಾಡುವಾಗ ಹೋಮಮಾಡಿದ ಕ್ಷೀರದಿಂದ ಪಾವನಗಂಧವನ್ನು ಹೊತ್ತ ಗಾಳಿಯು ಎಲ್ಲೆಡೆಯೂ ಬೀಸಿ ರಮಣೀಯವಾಗಿತ್ತು.

ಟಿಪ್ಪಣಿ :- ಶ್ರೀಬಲಿ ಎಂಬುದೇ ಈಗ ಶಿವಳ್ಳಿ ಎಂದಾಗಿದೆ. (ಉಡಪಿಯನ್ನೊಳಗೊಂಡ ಹಳ್ಳಿ) ಅಥವಾ ಶಿರಾಳಿ.

ಯತೋಽಪಮೃತ್ಯುರ್ಬಹಿರೇವ ಯಾತಿ
ಭ್ರಾಂತ್ವಾ ಪ್ರದೇಶಂ ಶನಕೈರಲಬ್ಧ್ವಾ |
ದೃಷ್ಟ್ವಾ ದ್ವಿಜಾತೀನ್ನಿಜ ಕರ್ಮನಿಷ್ಠಾನ್
ದೂರಾನ್ನಿಷಿದ್ಧಂ ತ್ಯಜತೋಽಪ್ರಮತ್ತಾನ್ ||

೪೦

ಆ ಅಗ್ರಹಾರದಲ್ಲಿ ಅಪಮೃತ್ಯುವು ಸುಳಿಯುತ್ತಿರಲಿಲ್ಲ. ಏಕಂದರೆ, ಮೆಲ್ಲಗೆ ಅಲೆದಾಡಿದರೂ ಅದಕ್ಕೆ ಸರಿಯಾದ ಸ್ಥಳವು ಸಿಗದೆ ಗ್ರಾಮದಿಂದ ಹೊರಗೆ ಹೋಗಿ ಬಿಡುತ್ತಿತ್ತು ! ತಮ್ಮ ತಮ್ಮ ಕರ್ಮದಲ್ಲಿ ನಿಷ್ಠರೂ ಬಹಳ ಎಚ್ಚರಿಕೆಯಿಂದ ನಿಷಿದ್ಧ ಕರ್ಮವನ್ನು ದೂರದಿಂದಲೇ ತ್ಯಜಿಸಿ ಬಿಡುತ್ತಿದ್ದವರೂ ಆದ ಬ್ರಾಹ್ಮಣರನ್ನು ನೋಡಿ ಅಪಮೃತ್ಯು ದೂರ ಸರಿಯುತ್ತಿತ್ತು.

ಯಸ್ಮಿನ್ ಸಹಸ್ರದ್ವಿತಯಂ ಜನಾನಾಂ
ಆಗ್ನ್ಯಾಹಿತಾನಾಂ ಶ್ರುತಿಪಾಠಕಾನಾಮ್ |
ವಸತ್ಯವಶ್ಯಂ ಶ್ರುತಿಚೋದಿತಾಸು
ಕ್ರಿಯಾಸು ದಕ್ಷಂ ಪ್ರಥಿತಾನುಭಾವಮ್ || ೪೧

ಆ ಅಗ್ರಹಾರದಲ್ಲಿ ಆಹಿತಾಗ್ನಿಗಳೂ ವೇದಾಧ್ಯಯನ ಮಾಡತಕ್ಕವರೂ ಆದ ಎರಡುಸಾವಿರ ಜನರಿದ್ದರು. ಅವರೆಲ್ಲರೂ ವೇದೋದಿತವಾದ ಕರ್ಮಗಳನ್ನು ತಪ್ಪದೇ ಮಾಡುವುದರಲ್ಲಿ ದಕ್ಷರೂ ಮಹಾಮಹಿಮಶಾಲಿಗಳೂ ಆಗಿದ್ದರು.

ಮಧ್ಯೇ ವಸನ್ ಯಸ್ಯ ಕರೋತಿ ಭೂಷಾಂ
ಪಿನಾಕಪಾಣಿರ್ಗಿರಿಜಾಸಹಾಯಃ |
ಹಾರಸ್ಯ ಯಷ್ಟೇಸ್ತರಲೋ ಯಥಾ ವೈ
ರಾತ್ರೇರಿವೇಂದುರ್ಗಗನಾಧಿರೂಢಃ || ೪೨

ಶ್ರೀಬಲಿಕ್ಷೇತ್ರದ ಮಧ್ಯದಲ್ಲಿ ಪಾರ್ವತೀಸಹಿತನಾದ ಪರಮೇಶ್ವರನು ಅಗ್ರಹಾರಕ್ಕೆ ಶೋಭೆಯನ್ನುಂಟುಮಾಡುತ್ತಿದ್ದನು. ನಾಯಕಮಣಿಯು ಮುತ್ತಿನ ಸರಕ್ಕೆ ಹೇಗೋ, ಆಕಾಶದ ಮಧ್ಯದಲ್ಲಿರುವ ಚಂದ್ರನು ರಾತ್ರಿಗೆ ಹೇಗೋ, ಹಾಗೆ ಆತನಿಂದ ಅಗ್ರಹಾರಕ್ಕೆ ಒಂದು ಶೋಭೆಯುಂಟಾಗಿತ್ತು.

ತತ್ರ ದ್ವಿಜಃ ಕಶ್ಚನ ಶಾಸ್ತ್ರವೇದೀ
ಪ್ರಭಾಕರಾಖ್ಯಃ ಪ್ರಥಿತಾನುಭಾವಃ |
ಪ್ರವೃತ್ತಿಶಾಸ್ತ್ರೈಕರತಃ ಸುಬುದ್ಧಿಃ
ಆಸ್ತೇ ಕ್ರತೂನ್ಮೀಲಿತಕೀರ್ತಿವೃಂದಃ || ೪೩

ಆ ಊರಿನಲ್ಲಿ ಕೀರ್ತಿಶಾಲಿಯೂ ಶಾಸ್ತ್ರಜ್ಞನೂ ಆದ ಪ್ರಭಾಕರನೆಂಬ ಒಬ್ಬ ವಿಪ್ರನಿದ್ದನು. ಆತನು ಸದ್ಬುದ್ಧಿಯುಳ್ಳವನೂ ಯಜ್ಞಗಳನ್ನು ಮಾಡಿ ಯಶಸ್ಸನ್ನು ಹರಡಿದವನೂ ಪ್ರವೃತ್ತಿಮಾರ್ಗನಿರತನೂ ಆಗಿದ್ದನು.

ಗಾವೋ ಹಿರಣ್ಯಂ ಧರಣೀ ಸಮಗ್ರಾ
ಸದ್ಬಾಂಧವಾ ಜ್ಞಾತಿಜನಾಶ್ಚ ತಸ್ಯ |
ಸಂತ್ಯೇವ ಕಿಂ ತೈರ್ನ ಹಿ ತೋಷ ಏಭಿಃ
ಪುತ್ರೋ ಯದಸ್ಯಾಜನಿ ಮುಗ್ಧಚೇಷ್ಟಃ || ೪೪

ಆತನ ಬಳಿ ಹಸುಗಳೂ, ಚಿನ್ನವೂ, ಯಥೇಷ್ಟವಾಗಿ ಭೂಮಿಯೂ ಇದ್ದವಲ್ಲದೆ, ಬಂಧುಗಳೂ ಜ್ಞಾತಿಗಳೂ, ವಿಪುಲವಾಗಿದ್ದರು. ಆದರೇನು? ಅವನ ಮನಸ್ಸಿಗೆ ನೆಮ್ಮದಿ ಇರಲಿಲ್ಲ. ಏಕೆಂದರೆ, ಅವನಿಗೆ ಮೂಢನಂತೆ ನಡೆದುಕೊಳ್ಳುವ ಒಬ್ಬ ಮಗನು ಹುಟ್ಟಿದ್ದನು !

ನ ವಕ್ತಿ ಕಿಂಚಿನ್ನ ಶೃಣೋತಿ ಕಿಂಚಿತ್
ಧ್ಯಾಯನ್ನಿವಾಸ್ತೇ ಕಿಲ ಮಂದಚೇಷ್ಟಃ |
ರೂಪೇಷು ಮಾರೋ ಮಹಸಾ ಮಹಸ್ವಾನ್
ಮುಖೇನ ಚಂದ್ರಃ ಕ್ಷಮಯಾ ಮಹೀಸಮಃ || ೪೫

ಆ ಬಾಲಕನು ಏನನ್ನೂ ನುಡಿಯುತ್ತಿರಲಿಲ್ಲ. ಹೇಳಿದ್ದನ್ನು ಕೇಳಿಸಿಕೊಳ್ಳುತ್ತಲೂ ಇರಲಿಲ್ಲ. ಏನನ್ನೂ ಮಾಡದೆ ಯಾವುದನ್ನೋ ಧ್ಯಾನಿಸುತ್ತಿರುವಂತೆ ತೆಪ್ಪಗೆ ಕುಳಿತಿರುತ್ತಿದ್ದನು. ಆತನು ರೂಪದಲ್ಲಿ ಮನ್ಮಥ, ತೇಜಸ್ಸಿನಲ್ಲಿ ಸೂರ್ಯ, ಮುಖವನ್ನು ನೋಡಿದರೆ ಚಂದ್ರನಂತಿದ್ದನು. ತಾಳ್ಮೆಯ ಗುಣದಲ್ಲಿ ಪೃಥ್ವಿಗೆ ಸಮಾನ

ಗ್ರಹಗ್ರಹಾತ್ ಕಿಂ ಜಡವದ್ವಿಚೇಷ್ಟತೇ
ಕಿಂ ವಾ ಸ್ವಭಾವಾದುತ ಪೂರ್ವಕರ್ಮಣಃ |
ಸಂಚಿಂತಯಂಸ್ತಿಷ್ಠತಿ ತತ್ಪಿತಾಽನಿಶಂ
ಸಮಾಗತಾನ್ ಪ್ರಷ್ಟುಮನಾ ಬಹುಶ್ರುತಾನ್ || ೪೬

ತಂದೆಯಾದ ಪ್ರಭಾಕರನು ಚಿಂತೆಗೊಳಗಾಗಿ 'ಈ ಬಾಲಕನು ಯಾವುದಾದರೂ ಗ್ರಹಪೀಡೆಗೆ ಒಳಗಾಗಿ ಹೀಗೆ ಜಡನಂತೆ ಇರಬಹುದೆ? ಅಥವಾ ಈತನ ಸ್ವಭಾವವೇ ಹೀಗಿರಬಹುದೆ? ಜನ್ಮಾಂತರ ಕರ್ಮದಿಂದ ಹೀಗಾಗಿರಬಹುದೆ? ' ಎಂದು ಸದಾ ಆಲೋಚಿಸುತ್ತಾ ಇದ್ದನು. ಮನೆಗೆ ಬಂದ ವಿದ್ವಾಂಸರನ್ನು ಕುರಿತು ಈ ವಿಷಯವನ್ನು ಕೇಳಲು ತೊಡಗುತ್ತಿದ್ದನು.

ಶಿಷ್ಯೈಃ ಪ್ರಶಿಷ್ಯೈರ್ಬಹುಪುಸ್ತಭಾರೈಃ
ಸಮಾಗತಂ ಕಂಚನ ಪೂಜ್ಯಪಾದಮ್ |
ಶುಶ್ರಾವ ತಂ ಗ್ರಾಮಮನಿಂದಿತಾತ್ಮಾ
ನಿನಾಯ ಸೂನುಂ ನಿಕಟಂ ಸ ತಸ್ಯ || ೪೭

ಹೀಗಿರುವಾಗ (ಆಚಾರ್ಯರು ಆಗಮಿಸಲು) ಪೂಜ್ಯಪಾದರಾದ ಒಬ್ಬ ಮಹಾತ್ಮರು ಆ ಗ್ರಾಮಕ್ಕೆ ಬಂದಿದ್ದಾರೆಂಬುದನ್ನು ಅವನು ಕೇಳಿದನು. ಅವರೊಡನೆ ಬಹುಮಂದಿ ಶಿಷ್ಯ -ಪ್ರಶಿಷ್ಯರು ಬಹಳ ಪುಸ್ತಕಗಳ ಹೊರೆಗಳನ್ನೇ ಹೊತ್ತು ತಂದಿದ್ದಾರೆಂಬುದೂ ತಿಳಿಯಿತು. ಆಗ ಶುದ್ಧಚಿತ್ತನಾದ ಪ್ರಭಾಕರನು ಮಗನ ವಿಷಯವನ್ನು ಕೇಳಬೇಕೆಂದು ಅವರ ಬಳಿಗೆ ಮಗನನ್ನು ಕರೆದುಕೊಂಡು ಹೋದನು.

ನ ಶೂನ್ಯಹಸ್ತೋ ನೃಪಮಿಷ್ಟದೈವಂ
ಗುರುಂ ಚ ಯಾಯಾದಿತಿ ಶಾಸ್ತ್ರವಿತ್ ಸ್ವಯಮ್ |
ಸೋಪಾಯನಃ ಪ್ರಾಪ ಗುರುಂ ವ್ಯಶಿಶ್ರಣತ್
ಫಲಂ ನನಾಮಾಸ್ಯ ಚ ಪಾದಪಂಕಜೇ || ೪೮

ರಾಜನನ್ನೂ, ಇಷ್ಟದೇವತೆಯನ್ನೂ, ಗುರುವನ್ನೂ, ಬರಿಗೈಯಲ್ಲಿ ಹೋಗಿ ಕಾಣಬಾರದೆಂಬ ಶಾಸ್ತ್ರವನ್ನರಿತಿದ್ದ ಆತನು ಒಂದು ಕಾಣಿಕೆಯನ್ನು ತೆಗೆದು ಕೊಂಡು ಹೋಗಿ ಶ್ರೀ

ಶಂಕರಗುರುಗಳಿಗೆ ಅರ್ಪಿಸಿದನಲ್ಲದೆ ಒಂದು ಫಲವನ್ನು ಮುಂದಿಟ್ಟು ಅವರ ಪಾದ ಕಮಲಗಳಿಗೆ ನಮಸ್ಕರಿಸಿದನು.

ಆನೀನಮತ್ತಂ ಚ ತದೀಯಪಾದಯೋಃ
ಜಡಾಕೃತಿಂ ಭಸ್ಮನಿಗೂಢವಹ್ನಿವತ್ |
ಸ ನೋದತಿಷ್ಠತ್ ಪತಿತಃ ಪದಾಂಬುಜೇ
ಪ್ರಾಯಃ ಸ್ವಜಾಡ್ಯಂ ಪ್ರಕಟಂ ವಿಧಿತ್ಸತಿ || ೪೯

ಜಡನಂತಿದ್ದ ಆ ಬಾಲಕನಿಂದ ಗುರುಗಳಿಗೆ ನಮಸ್ಕಾರ ಮಾಡಿಸಿದನು. ಆ ಹುಡುಗನಾದರೋ ಬೂದಿಮುಚ್ಚಿದ ಕೆಂಡದಂತಿದ್ದವನು. ಅವನು ಆಚಾರ್ಯರ ಪಾದಕಮಲಗಳಿಗೆ ಅಡ್ಡಬಿದ್ದು ನಮಸ್ಕರಿಸಿದನು. ಮೇಲಕ್ಕೆ ಏಳಲೇಇಲ್ಲ. ಅವನು ತನ್ನ ಜಡತ್ವವನ್ನು ಹೀಗೆ ಪ್ರಕಟಿಸುತ್ತಿದ್ದನೋ ಏನೋ !

ಉಪಾತ್ತಹಸ್ತಃ ಶನಕೈರವಾಙ್ಮುಖಂ
ತಂ ದೇಶಿಕೇಂದ್ರಃ ಕೃಪಯೋದತಿಷ್ಠಿಪತ್ |
ಉತ್ಥಾಪಿತೇ ಸ್ವೇ ತನಯೇ ಪಿತಾऽಬ್ರವೀತ್
ವದ ಪ್ರಭೋ ಜಾಡ್ಯಮಮುಷ್ಯ ಕಿಂಕೃತಮ್ || ೫೦

ಹೀಗೆ ಅಧೋಮುಖನಾಗಿ ಮಲಗಿದ್ದ ಆ ಬಾಲಕನನ್ನು ದೇಶಿಕೇಂದ್ರರು ಕೈನೀಡಿ ಕೃಪೆಯಿಂದ ಮೇಲೆತ್ತಿದರು. ತನ್ನ ಮಗನು ಎದ್ದುನಿಂತಮೇಲೆ ಆತನ ತಂದೆಯು ಆಚಾರ್ಯರನ್ನು ಕುರಿತು ಹೀಗೆಂದನು -"ಸ್ವಾಮಿ, ಇವನ ಜಡತ್ವಕ್ಕೆ ಕಾರಣವೇನು ?

ವರ್ಷಾಣ್ಯತೀಯುರ್ಭಗವನ್ನಮುಷ್ಯ
ಪಂಚಾಷ್ಟ ಜಾತಸ್ಯ ವಿನಾऽವಬೋಧಮ್ |
ನಾಧ್ಯೈಷ್ಟ ವೇದಾನಲಿಖಚ್ಚ ನಾರ್ಣಾ-
ನಚೀಕರಂ ಚೋಪನಯಂ ಕಥಂಚಿತ್ || ೫೧

"ಹೇ ಭಗವನ್, ಇವನು ಹುಟ್ಟಿ ಹದಿಮೂರುವರ್ಷಗಳಾದವು. ಯಾವ ತಿಳಿವಳಿಕೆಯೂ ಬರಲಿಲ್ಲ. ವೇದಗಳನ್ನು ಕಲಿಯಲಿಲ್ಲ. ಅಕ್ಷರಗಳನ್ನೂ ಬರೆಯಲಿಲ್ಲ. ಹೇಗೋ ಕಷ್ಟದಿಂದ ಉಪನಯನವನ್ನು ಮಾಡಿಸಿದ್ದೇನೆ.

ಕ್ರೀಡಾಪರಾಃ ಕ್ರೋಶತಿ ಬಾಲವರ್ಗಃ
ತಥಾಪಿ ನ ಕ್ರೀಡಿತುಮೇಷ ಯಾತಿ |
ಬಾಲಾಃ ಶಠಾ ಮುಗ್ಧಮಿಮಂ ನಿರೀಕ್ಷ್ಯ
ಸಂತಾಡಯಂತೇऽಪಿ ನ ರೋಷಮೇತಿ || ೫೨

"ಬಾಲಕರ ಹಿಂಡು ಆಡುವುದಕ್ಕೆ ಬಾರೆಂದು ಕೂಗುತ್ತಲೇ ಇರುವುದು. ಅದನ್ನು ನೋಡಿಯೂ ಈತನು ಆಟಕ್ಕೆ ಹೋಗುವುದಿಲ್ಲ. ಕೆಲವು ಕೆಟ್ಟ ಹುಡುಗರು ಇವನು ಮೂಢನೆಂಬುದನ್ನು ತಿಳಿದು ಹೊಡೆಯುವುದೂ ಉಂಟು. ಆದರೂ ಈತನು ಸಿಟ್ಟುಮಾಡಿಕೊಳ್ಳುವುದಿಲ್ಲ.

ಭುಂಕ್ತೇ ಕದಾಚಿನ್ನ ತು ಜಾತು ಭುಂಕ್ತೇ
ಸ್ವೇಚ್ಛಾವಿಹಾರೀ ನ ಕರೋತಿ ಚೋಕ್ತಮ್ |
ತಥಾಪಿ ರುಷ್ಟೇನ ನ ತಾಡ್ಯತೇಽಯಂ
ಸ್ವಕರ್ಮಣಾ ವರ್ಧತ ಏವ ನಿತ್ಯಮ್ || ೫೩

ಒಮ್ಮೊಮ್ಮೆ ಊಟಮಾಡುತ್ತಾನೆ. ಕೆಲವುವೇಳೆ ಊಟಮಾಡುವುದೇ ಇಲ್ಲ. ತನಗೆ ತಿಳಿದಂತೆ ನಡೆಯುತ್ತಾನೆಯೇ ಹೊರತು ನಾವು ಹೇಳಿದ ಒಂದನ್ನೂ ಮಾಡುವುದೇ ಇಲ್ಲ. ಆದರೆ ನಾನು ಕೋಪಿಸಿಕೊಂಡು ಇವನನ್ನು ಹೊಡೆಯುವುದಿಲ್ಲ. ಇವನಾದರೋ 'ತಾನಾಯಿತು ತನ್ನ ಕೆಲಸವಾಯಿತು' ಎಂಬಂತೆ ಬೆಳೆಯುತ್ತಿದ್ದಾನೆ"- ಎಂದನು.

ಇತೀರಯಿತ್ವೋಪರತೇ ಚ ವಿಪ್ರೇ
ಪಪ್ರಚ್ಛ ತಂ ಶಂಕರದೇಶಿಕೇಂದ್ರಃ |
ಕಸ್ತ್ವಂ ಕಿಮೇವಂ ಜಡವತ್ ಪ್ರವೃತ್ತಃ
ಸ ಚಾಬ್ರವೀದ್ಬಾಲವಪುರ್ಮಹಾತ್ಮಾ || ೫೪

ಈ ಪ್ರಕಾರ ಆ ಬ್ರಾಹ್ಮಣನು ಹೇಳಿ ಸುಮ್ಮನಾಗಲು ಶ್ರೀಶಂಕರ ದೇಶಿಕೇಂದ್ರರು ಆ ಹುಡುಗನ್ನು ಕುರಿತು"ನೀನು ಯಾರು?ಹೀಗೆ ಜಡನಂತೆ ಏಕೆ ನಡೆದು ಕೊಳ್ಳುತ್ತೀಯೆ?" ಎಂದು ಕೇಳಿದರು. ಆಗ ಬಾಲಕ ರೂಪದಲ್ಲಿದ್ದ ಆ ಮಹಾತ್ಮನು ಹೀಗೆಂದನು—

ನಾಹಂ ಜಡಃ ಕಿಂತು ಜಡಃ ಪ್ರವರ್ತತೇ
ಮತ್ಸನ್ನಿಧಾನೇನ ನ ಸಂದಿಹೇ ಗುರೋ |
ಷಡೂರ್ಮಿಷಡ್ಭಾವ ವಿಕಾರವರ್ಜಿತಂ
ಸುಖೈಕತಾನಂ ಪರಮಸ್ಮಿ ತತ್ಪದಮ್ || ೫೫

"ನಾನು ಜಡನಲ್ಲ. ಆದರೆ ನನ್ನ ಸಾನ್ನಿಧ್ಯದಿಂದ ಈ ಜಡಶರೀರವು ಕೆಲಸಮಾಡುತ್ತದೆ. ಗುರುಗಳೆ, ಇದರಲ್ಲಿ ಸಂದೇಹವೇನೂ ಇಲ್ಲ. ನಾನು ಷಡೂರ್ಮಿಗಳಿಂದಲೂ ಷಡ್‌ಭಾವವಿಕಾರಗಳಿಂದಲೂ ವರ್ಜಿತವಾದ, ಕೇವಲ ಆನಂದಮಯವಾದ, ತತ್‌ಪದವಾಚ್ಯವಾದ ಪರಬ್ರಹ್ಮವಾಗಿದ್ದೇನೆ!

ಟಿಪ್ಪಣಿ :- ಷಡೂರ್ಮಿಗಳು = ಶೋಕ, ಮೋಹ, ಹಸಿವು, ಬಾಯಾರಿಕೆ, ಮುಪ್ಪು, ಮರಣ-ಎಂಬ ಆರು ಊರ್ಮಿಗಳು - ಸಂಸಾರದ ಅಲೆಗಳು. ಷಡ್‌ಭಾವವಿಕಾರಗಳು-ಜಾಯತೇ, ಅಸ್ತಿ, ವರ್ಧತೇ, ಪರಿಣಮತೇ, ಅಪಕ್ಷೀಯತೇ, ನಶ್ಯತಿ - ಎಂಬ ಆರು ವಿಕಾರಗಳು.

ಮಮೇವ ಭೂಯಾದನುಭೂತಿರೇಷಾ
ಮುಮುಕ್ಷುವರ್ಗಸ್ಯ ನಿರೂಪ್ಯ ವಿದ್ವನ್ ।
ಪದ್ಯೈಃ ಪರ್ಯೈರ್ದ್ವಾದಶಭಿರ್ಬಭಾಷೇ
ಚಿದಾತ್ಮತತ್ತ್ವಂ ವಿಧುತಪ್ರಪಂಚಮ್ ॥ ೫೬

ಓ ಜ್ಞಾನಿಗಳೆ, ಎಲ್ಲ ಮುಮುಕ್ಷುಗಳಿಗೂ ನನಗಿರುವಂತೆ ಈ ಅನುಭೂತಿಯುಂಟಾಗಲಿ." ಎಂದು ಹೇಳಿ ಆ ಬಾಲಕನು ಶ್ರೇಷ್ಠವಾದ ಹನ್ನೆರಡು ಪದ್ಯಗಳಿಂದ ಸಂಸಾರಾತೀತವಾದ ಚಿದಾತ್ಮನ ತತ್ತ್ವವನ್ನು ವಿವರಿಸಿದನು.

ಟಿಪ್ಪಣಿ :- ಈ ಹನ್ನೆರಡು ಪದ್ಯಗಳನ್ನು ಅನುಬಂಧದಲ್ಲಿ ಬರೆಯಲಾಗಿದೆ.

ಪ್ರಕಾಶಯಂತೇ ಪರಮಾತ್ಮತತ್ತ್ವಂ
ಕರಸ್ಥಧಾತ್ರೀ ಫಲವದ್ಯದೇಕಮ್ ।
ಶ್ಲೋಕಾಸ್ತು ಹಸ್ತಾಮಲಕಾಃ ಪ್ರಸಿದ್ಧಾಃ
ತತ್ಕರ್ತುರಾಖ್ಯಾಪಿ ತಥೈವ ವೃತ್ತಾ ॥ ೫೭

ಈ ಶ್ಲೋಕಗಳು ಅದ್ವಿತೀಯವಾದ ಪರಮಾರ್ಥತತ್ತ್ವವನ್ನು ಕೈಯಲ್ಲಿರುವ ನೆಲ್ಲಿಕಾಯಿಯಂತೆ ಸ್ಪಷ್ಟವಾಗಿ ಪ್ರತಿಪಾದಿಸುತ್ತವೆಯಾದ್ದರಿಂದ, ಇವು ಹಸ್ತಾಮಲಕ ಶ್ಲೋಕಗಳೆಂಬ ಹೆಸರಿನಿಂದ ಪ್ರಸಿದ್ಧವಾದವು. ಹಾಗೆಯೇ ಅವುಗಳನ್ನು ರಚಿಸಿದ ಆ ಬಾಲಕನಿಗೆ ಹಸ್ತಾಮಲಕನೆಂದೇ ಹೆಸರಾಯಿತು.

ಟಿಪ್ಪಣಿ :- ಹಸ್ತ = ಕೈ. ಆಮಲಕ = ನೆಲ್ಲಿಕಾಯಿ.

ವಿನೋಪದೇಶಂ ಸ್ವತ ಏವ ಜಾತಃ
ಪರಾತ್ಮಬೋಧೋ ದ್ವಿಜವರ್ಯಸೂನೋಃ ।
ವ್ಯಸ್ಮೇಷ್ಟ ಸಂಪ್ರೇಕ್ಷ್ಯ ಸ ದೇಶಿಕೇಂದ್ರೋ
ನ್ಯಧಾತ್ಸ್ವಹಸ್ತಂ ಕೃಪಯೋತ್ತಮಾಂಗೇ ॥ ೫೮

ಆ ದ್ವಿಜೋತ್ತಮನ ಪುತ್ರನಿಗೆ ಗುರೂಪದೇಶವಿಲ್ಲದೆಯೇ ತಾನಾಗಿ ಪರಮಾತ್ಮಜ್ಞಾನ ವುಂಟಾಯಿತೆಂಬುದನ್ನು ಕಂಡು ದೇಶಿಕೇಂದ್ರರಿಗೆ ವಿಸ್ಮಯವಾಯಿತು. ಅವರು ಕಾರುಣ್ಯದಿಂದ ಆತನ ಶಿರಸ್ಸಿನಮೇಲೆ ತಮ್ಮ (ದಕ್ಷಿಣ) ಹಸ್ತವನ್ನಿಟ್ಟರು.

ಸುತೇ ನಿವೃತ್ತೇ ವಚನಂ ಬಭಾಷೇ
ಸ ದೇಶಿಕೇಂದ್ರಃ ಪಿತರಂ ತದೀಯಮ್ |
ವಸ್ತುಂ ನ ಯೋಗ್ಯೋ ಭವತಾ ಸಹಾಯಂ
ನ ತೇಽಮುನಾರ್ಥೋ ಜಡಿಮಾಸ್ಪದೇನ || ೫೯

ಹೀಗೆ ಆ ಶ್ಲೋಕಗಳನ್ನು ಹೇಳಿ ಆ ಬಾಲಕನು ಸುಮ್ಮನಾಗಲು, ಆಚಾರ್ಯರು ಆತನ ತಂದೆಯನ್ನು ಕುರಿತು ಹೇಳಿದರು "ಈ ಹುಡುಗನು ನಿನ್ನೊಡನೆ ಇರುವುದು ಸರಿಯಲ್ಲ. ಜಡನಾಗಿ ನಡೆದುಕೊಳ್ಳುವ ಇವನಿಂದ ನಿನಗೆ ಪ್ರಯೋಜನವೂ ಇಲ್ಲ.

ಪುರಾಭವಾಭ್ಯಾಸವಶೇನ ಸರ್ವಂ
ಸ ವೇತ್ತಿ ಸಮ್ಯಜ್ ನ ಚ ವಕ್ತಿ ಕಿಂಚಿತ್ |
ನೋಚೇತ್ಕಥಂ ಸ್ವಾನುಭವೈಕಗರ್ಭ -
ಪದ್ಯಾನಿ ಭಾಷೇತ ನಿರಕ್ಷರಾಸ್ಯಃ || ೬೦

"ಜನ್ಮಾಂತರದಲ್ಲಿ ಮಾಡಿದ ಅಭ್ಯಾಸಬಲದಿಂದ ಇವನು ಸರ್ವವನ್ನೂ ಚೆನ್ನಾಗಿ ಬಲ್ಲವನಾಗಿದ್ದಾನೆ. ಆದರೆ ಏನನ್ನೂ ನುಡಿಯುವುದಿಲ್ಲ. ಹಾಗಿಲ್ಲದಿದ್ದರೆ ಅಕ್ಷರಾಭ್ಯಾಸವನ್ನೂ ಮಾಡದ ಇವನು ತನ್ನ ಅನುಭವಕ್ಕೆ ಮಾತ್ರ ಗೋಚರವಾಗುವ ವಿಷಯವನ್ನು ಕುರಿತು ಹೀಗೆ ಪದ್ಯಗಳನ್ನು ಹೇಳಿಯಾನೆ ?

ನ ಸಕ್ತಿರಸ್ಯಾಸ್ತಿ ಗೃಹಾದಿಗೋಚರಾ
ನಾತ್ಮೀಯದೇಹೇ ಭ್ರಮತೋಽಸ್ಯ ವಿದ್ಯತೇ |
ತಾದಾತ್ಮ್ಯತಾಽನ್ಯತ್ರ ಮಮೇತಿ ವೇದನಂ
ಯದಾ ನ ಸಾ ಸ್ವೇ ಕಿಮು ಬಾಹ್ಯವಸ್ತುಷು || ೬೧

ಈ ಹುಡುಗನಿಗೆ ಮನೆ ಮುಂತಾದ ವಿಷಯದಲ್ಲಿ ವ್ಯಾಮೋಹವಿಲ್ಲ. ತನ್ನ ದೇಹದಲ್ಲಿ ಸಹ ಭ್ರಮೆಯಿಂದಲೂ ತಾದಾತ್ಮ್ಯ ಬುದ್ಧಿ ಇವನಿಗಿಲ್ಲ. ತನ್ನ ದೇಹದಲ್ಲಿಯೇ ನನ್ನದೆಂಬ ಜ್ಞಾನವಿಲ್ಲದವನಿಗೆ ಬಾಹ್ಯವಸ್ತುಗಳಲ್ಲಿ ನನ್ನದೆಂಬ ಬುದ್ಧಿ ಬಂದೀತೆ "? ಎಂದರು.

ಟಿಪ್ಪಣಿ :- ತಾದಾತ್ಮ್ಯತಾ = ತದಾತ್ಮಶಬ್ದದಮೇಲೆ ಸ್ವಾರ್ಥೇ ಷ್ಯಞ್. ಅದರ ಮೇಲೆ ಭಾವೇ ತಲ್. 'ತದಾತ್ಮತಾ' ಎಂದು ಮೂಲಪಾಠವಿರಬಹುದು.

ಇತೀರಯಿತ್ವಾ ಭಗವಾನ್ ದ್ವಿಜಾತ್ಮಜಂ
ಯಯೌ ಗೃಹೀತ್ವಾ ದಿಶಮೀಪ್ಸಿತಾಂ ಪುನಃ |
ವಿಪ್ರೋಽಪ್ಯನುವ್ರಜ್ಯ ಯಯೌ ಸ್ವಮಂದಿರಂ
ಕಿಯತ್ಪ್ರದೇಶಂ ಸ್ಥಿರಧೀರ್ಬಹುಶ್ರುತಃ || ೬೨

ಈ ಪ್ರಕಾರವಾಗಿ ಭಗವತ್ಪಾದರು ನುಡಿದು ಆ ಬ್ರಾಹ್ಮಣನ ಮಗನನ್ನು ಕರೆದುಕೊಂಡು ತಮಗೆ ಇಷ್ಟವಾದ ದಿಕ್ಕಿಗೆ ಹೊರಟುಬಿಟ್ಟರು. ಆ ಪ್ರಭಾಕರನೆಂಬ ದ್ವಿಜನೂ ಸಹ ಸ್ವಲ್ಪ ದೂರದವರೆಗೆ ಅವರನ್ನು ಹಿಂಬಾಲಿಸುತ್ತ ಹೋಗಿ ಅನಂತರ ತನ್ನ ಮನೆಗೆ ಹಿಂದಿರುಗಿದನು. ಅವನು ಬಹುಶ್ರುತನಾದ ವಿದ್ವಾಂಸನಾದ್ದರಿಂದ (ಪುತ್ರನನ್ನು ಅಗಲಿಯೂ) ಸ್ಥಿರ ಚಿತ್ತನಾಗಿಯೇ ಇದ್ದನು.

ತತಃ ಶತಾನಂದ ಮಹೇಂದ್ರಪೂರ್ವೈಃ
ಸುಪರ್ವವೃಂದ್ಯೈರುಪಗೀಯಮಾನಃ |
ಪದ್ಮಾಂಘ್ರಿಮುಖ್ಯೈಃ ಸಮಮಾಪ್ತಕಾಮ-
ಕ್ಷೋಣೀಪತಿಃ ಶೃಂಗಗಿರಿಂ ಪ್ರತಸ್ಥೇ || ೬೩

ಅನಂತರ ಆಪ್ತಕಾಮರಾದ ಜ್ಞಾನಿಗಳಿಗೆ ಅಧಿಪತಿಗಳಾದ ಶ್ರೀಶಂಕರರು ಬ್ರಹ್ಮೇಂದ್ರಾದಿ ದೇವತೆಗಳಿಂದ ಸ್ತುತಿಸಲ್ಪಡುತ್ತ ಪದ್ಮಪಾದರೇ ಮೊದಲಾದ ಶಿಷ್ಯರೊಡನೆ ಶೃಂಗಗಿರಿಗೆ (ಶೃಂಗೇರಿಗೆ) ಪ್ರಯಾಣಮಾಡಿದರು.

ಯತ್ರಾಧುನಾಽಪ್ಯುತ್ತಮಮೃಷ್ಯಶೃಂಗಃ
ತಪಶ್ಚರತ್ಯಾತ್ಮಭೃದಂತರಂಗಃ |
ಸಂಸ್ಪರ್ಶಮಾತ್ರೇಣ ವಿತೀರ್ಣಭದ್ರಾ
ವಿದ್ಯೋತತೇ ಯತ್ರ ಚ ತುಂಗಭದ್ರಾ || ೬೪

ಅಲ್ಲಿ ಈಗಲೂ ಸಹ ಋಷ್ಯಶೃಂಗ ಮುನಿಗಳು ಹೃದಯದಲ್ಲಿ ಪರಮಾತ್ಮನನ್ನು ಧ್ಯಾನಿಸುತ್ತಾ ಶ್ರೇಷ್ಠವಾದ ತಪಸ್ಸನ್ನು ಆಚರಿಸುತ್ತಿದ್ದಾರೆ. ಆ ಶೃಂಗೇರಿಯ ಬಳಿ ಸ್ಪರ್ಶಮಾತ್ರದಿಂದಲೇ ಕಲ್ಯಾಣವನ್ನುಂಟುಮಾಡುವ ತುಂಗಭದ್ರಾನದಿಯು ವಿರಾಜಿಸುತ್ತಿದೆ.

ಟಿಪ್ಪಣಿ :-ಆತ್ಮಭೃದಂತರಂಗಃ = ಆತ್ಮ ಭೃತ್ ಅಂತರಂಗಂ ಯಸ್ಯ ಸಃ ಎಂದು ವಿಗ್ರಹ. ಬಹುವ್ರೀಹಿ ಸಮಾಸ. ಆತ್ಮವನ್ನು ಧರಿಸಿದ ಅಂತರಂಗವುಳ್ಳವನು ಎಂದು ಶಬ್ದಾರ್ಥ. ಶೃಂಗೇರಿಯ ಬಳಿ ಹರಿಯುವ ನದಿಗೆ ತುಂಗಾನದಿ ಎಂದು ಹೆಸರಿದೆ. ಇದು ಮುಂದೆ ಕೂಡಲಿಯಲ್ಲಿ ಭದ್ರಾನದಿಯೊಡನೆ ಸಂಗಮಿಸಿದಮೇಲೆ ತುಂಗಭದ್ರಾ ಎನಿಸುತ್ತದೆ. ಈ ಶ್ಲೋಕದಿಂದ ಪೂರ್ವದಲ್ಲಿ ತುಂಗಾನದಿಗೆ ತುಂಗಭದ್ರಾ ಎಂದು ಹೆಸರಿತ್ತೆಂದು ಹೇಳಬಹುದು. ಬೇರೆ ಹೆಸರಿದ್ದ ಭದ್ರಾನದಿಯು ಇದಕ್ಕೆ ಉಪನದಿಯಾಗಿ ಸೇರುತ್ತಿತ್ತೆಂದು ಕಾಣುತ್ತದೆ. ಅಥವಾ ಭದ್ರಂಕರವಾದ ತುಂಗಾನದಿ ಎಂದು ತುಂಗಭದ್ರಾಶಬ್ದದ ಅರ್ಥ.

ಅಭ್ಯಾಗತಾರ್ಚಾಲ್ಪಿತಕಲ್ಪ ಶಾಖಾಃ
ಕೂಲಂಕಷಾಧೀತಸಮಸ್ತ ಶಾಖಾಃ |
ಇಜ್ಯಾಶತೈರ್ಯತ್ರ ಸಮುಲ್ಲಸಂತಃ
ಶಾಂತಾಂತರಾಯಾ ನಿವಸಂತಿ ಸಂತಃ || ೬೫

ಆ ಊರಿನಲ್ಲಿ ನೂರಾರು ಯಜ್ಞಗಳನ್ನು ಮಾಡಿ ಕೀರ್ತಿಶಾಲಿಗಳೂ ಸಜ್ಜನರೂ ಆದ ವಿಪ್ರರು ನೆಲೆಸಿದ್ದರು. ಕಲ್ಪವೃಕ್ಷಗಳನ್ನು ಅಲ್ಪವೆನಿಸುವಂತೆ ಅಭ್ಯಾಗತರನ್ನು ಅವರು ಅರ್ಚಿಸಿ ಸತ್ಕರಿಸುತ್ತಿದ್ದರು. ಕೂಲಂಕಷವಾಗಿ ಸಮಸ್ತ ವೇದಶಾಖೆಗಳನ್ನೂ ಅಭ್ಯಾಸಮಾಡಿದ್ದರು. ಅವರಿಗೆ ಯಾವುದೇ ಬಗೆಯ ವಿಘ್ನಗಳೂ ಬರುತ್ತಿರಲಿಲ್ಲ.

ಅಧ್ಯಾಪಯಾಮಾಸ ಸ ಭಾಷ್ಯಮುಖ್ಯಾನ್
ಗ್ರಂಥಾನ್ನಿಜಾಂಸ್ತತ್ರ ಮನೀಷಿಮುಖ್ಯಾನ್ ।
ಆಕರ್ಣನ ಪ್ರಾಪ್ಯಮಹಾಪುಮರ್ಥಾನ್
ಆದಿಷ್ಟ ವಿದ್ಯಾಗ್ರಹಣೇ ಸಮರ್ಥಾನ್ ॥ ೬೬

ಆ ಶೃಂಗೇರಿಯಲ್ಲಿ ಶ್ರೀಶಂಕರಾಚಾರ್ಯರು ತಾವು ಬರೆದ ಗ್ರಂಥಗಳನ್ನು ಬುದ್ಧಿಶಾಲಿಗಳಿಗೆ ಅಧ್ಯಾಪನಮಾಡುತ್ತಿದ್ದರು. ಆ ಶಿಷ್ಯರು ಉಪದಿಷ್ಟವಾದ ಸಕಲ ವಿದ್ಯೆಯನ್ನೂ ಗ್ರಹಿಸುವುದರಲ್ಲಿ ಸಮರ್ಥರಾಗಿದ್ದರು. ಆ ಗ್ರಂಥಗಳೂ ಸಹ ಶ್ರವಣಮಾತ್ರದಿಂದಲೇ ಉತ್ತಮವಾದ ಪುರುಷಾರ್ಥವನ್ನು ಕೊಡಲು ಸಮರ್ಥವಾಗಿದ್ದವು.

ಮಂದಾಕ್ಷನಮ್ರಂ ಕಲಯನ್ನು ಶೇಷಂ
ಪರಾಣುದತ್ ಪ್ರಾಣಿತಮಾಂಸ್ಯಶೇಷಮ್ ।
ನಿರಸ್ತಜೀವೇಶ್ವರಯೋರ್ವಿಶೇಷಂ
ವ್ಯಾಚಷ್ಟ ವಾಚಸ್ಪತಿ ನಿರ್ವಿಶೇಷಮ್ ॥ ೬೭

ಆದಿಶೇಷನಾದ ಪತಂಜಲಿಯನ್ನೂ ನಾಚಿಕೆಯಿಂದ ತಲೆತಗ್ಗಿಸುವಂತೆ ಮಾಡುವರೋ ಎಂಬಂತೆ ಆಚಾರ್ಯರು ಜನರ ಸಮಸ್ತ ಅಜ್ಞಾನವನ್ನೂ ತೊಡೆದು ಹಾಕುತ್ತ ವಿಶದವಾಗಿ ಭಾಷ್ಯವನ್ನು ಬೋಧಿಸುತ್ತಿದ್ದರು. ಸಾಕ್ಷಾತ್ ಬೃಹಸ್ಪತಿಗೆ ಸದೃಶವಾದ ರೀತಿಯಲ್ಲಿ ಜೀವೇಶ್ವರರಿಗೆ ಯಾವಭೇದವೂ ಇಲ್ಲವೆಂದು ಸಾಧಿಸಿ ತಿಳಿಸಿಕೊಡುತ್ತಿದ್ದರು.

ಟಿಪ್ಪಣಿ:-ಈ ಶ್ಲೋಕದ ಪ್ರಥಮಪಾದದಲ್ಲಿ ಕಲಯನ್ ನು ಶೇಷಂ -ಎಂದು ಪದವಿಭಾಗ. ಕಲಯನ್ ಅಶೇಷಂ ಎಂದು ಪಾಠಾಂತರವಿದೆ.

ಪ್ರಕಲ್ಪ್ಯ ತತ್ರೇಂದ್ರವಿಮಾನ ಕಲ್ಪಂ
ಪ್ರಾಸಾದಮಾವಿಷ್ಕೃತ ಸರ್ವಶಿಲ್ಪಮ್ ।
ಪ್ರವರ್ತಯಾಮಾಸ ಸ ದೇವತಾಯಾಃ
ಪೂಜಾಮಜಾದ್ಯೈರಪಿ ಪೂಜಿತಾಯಾಃ ॥ ೬೮

ಶೃಂಗೇರಿಯಲ್ಲಿ ಆಚಾರ್ಯರು ದೇವೇಂದ್ರನ ಪ್ರಾಸಾದಕ್ಕೆ ಸದೃಶವೂ ಸಮಸ್ತ ಶಿಲ್ಪಖಚಿತವೂ ಆದ ಒಂದು ಪ್ರಾಸಾದವನ್ನು ನಿರ್ಮಿಸಿ ಅದರಲ್ಲಿ ಬ್ರಹ್ಮಾದಿ ದೇವತೆಗಳಿಂದಲೂ ಪೂಜಿತಳಾದ ಶ್ರೀಶಾರದಾದೇವಿಯ ಪೂಜೆಯು ನಡೆಯುವಂತೆ ವ್ಯವಸ್ಥೆಮಾಡಿದರು.

ಯಾ ಶಾರದಾಂಬೇತ್ಯಭಿಧಾಂ ವಹಂತೀ
ಕೃತಾಂ ಪ್ರತಿಜ್ಞಾಂ ಪ್ರತಿಪಾಲಯಂತೀ |
ಅದ್ಯಾಪಿ ಶೃಂಗೇರಿಪುರೇ ವಸಂತೀ
ಪ್ರದ್ಯೋತತೇಽಭೀಷ್ಟವರಾನ್ ದಿಶಂತೀ || ೬೯

ಆ ಶೃಂಗೇರಿ ಪಟ್ಟಣದಲ್ಲಿ ಈಗಲೂ ಸಹ ಆ ದೇವಿಯು ಶ್ರೀಶಾರದಾಂಬಾ ಎಂಬ ಹೆಸರನ್ನು ಧರಿಸಿ, ಆಚಾರ್ಯರಿಗೆ ತಾನು ಕೊಟ್ಟ ಪ್ರತಿಜ್ಞೆಯನ್ನು ಪಾಲಿಸುತ್ತಾ, ಭಕ್ತರಿಗೆ ಅಭೀಷ್ಟವರಗಳನ್ನು ಅನುಗ್ರಹಿಸುತ್ತಾ ವಿರಾಜಿಸುತ್ತಿದ್ದಾಳೆ.

ಚಿತ್ತಾನುವರ್ತೀ ನಿಜಧರ್ಮಚಾರೀ
ಭೂತಾನುಕಂಪೀ ತನುವಾಗ್ವಿಭೂತಿಃ |
ಕಶ್ಚಿದ್ವಿನೇಯೋಽಜನಿ ದೇಶಿಕಸ್ಯ
ಯಂ ತೋಟಕಾಚಾರ್ಯಮುದಾಹರಂತಿ || ೭೦

ಆ ಸ್ಥಳದಲ್ಲಿ ಆಚಾರ್ಯರಿಗೆ ಒಬ್ಬನೂತನ ಶಿಷ್ಯನೂ ಲಭಿಸಿದನು. ಅವನು ಗುರುಗಳ ಚಿತ್ತವನ್ನು ಅನುಸರಿಸಿ ನಡೆಯುತ್ತ, ತನ್ನ ಧರ್ಮವನ್ನು ಪಾಲಿಸುತ್ತ ಇದ್ದನು. ಪ್ರಾಣಿದಯಾಪರನೂ ಸ್ವಲ್ಪವೇ ಮಾತಾಡತಕ್ಕವನೂ ಆಗಿದ್ದನು. ಆತನನ್ನೇ ತೋಟಕಾಚಾರ್ಯನೆಂದು ಹೇಳುತ್ತಾರೆ.

ಸ್ನಾತ್ವಾ ಪುರಾ ಕ್ಷಿಪತಿ ಕಂಬಲವಸ್ತ್ರಮುಖ್ಯೈಃ
ಉಚ್ಚಾಸನಂ ಮೃದು ಸಮಂ ಸ ದದಾತಿ ನಿತ್ಯಮ್ |
ಸಂಲಕ್ಷ್ಯ ದಂತಪರಿಶೋಧನಕಾಷ್ಠಮಗ್ರ್ಯಂ
ಬಾಹ್ಯಾದಿಕಂ ಗತವತೇ ಸಲಿಲಾದಿಕಂ ಚ || ೭೧

ಅವನು ಮೊದಲು ಸ್ನಾನಮಾಡಿ ಮೃದುವಾದ ಕಂಬಳಿ ಮೊದಲಾದ ವಸ್ತ್ರದಿಂದ ಎತ್ತರವೂ ಮೆತ್ತಗಿರತಕ್ಕದ್ದೂ ಸಮತಳವೂ ಆದ ಒಂದು ಆಸನವನ್ನು ಪ್ರತಿದಿನವೂ ಆಚಾರ್ಯರಿಗಾಗಿ ಸಿದ್ಧಪಡಿಸುತ್ತಿದ್ದನು. ತಾನೇ ವಿಚಾರಮಾಡಿ ಹಲ್ಲುಜ್ಜುವ ಉತ್ತಮವಾದ ದಂತಕಾಷ್ಠವನ್ನು ತಂದು ಕೊಡುತ್ತಿದ್ದನು. ಬಾಹ್ಯವಾದ ಶೌಚಾದಿ ಕ್ರಿಯೆಗೆ ಗುರುಗಳು ಹೋದಾಗ ನೀರು ಮೃತ್ತಿಕೆ ಮೊದಲಾದ್ದನ್ನು ಒದಗಿಸುತ್ತಿದ್ದನು.

ಶ್ರೀದೇಶಿಕಾಯ ಗುರವೇ ತನುಮಾರ್ಜವಸ್ತ್ರಂ
ವಿಶ್ರಾಣಯತ್ಯನುದಿನಂ ವಿನಯೋಪಪನ್ನಃ |
ಶ್ರೀಪಾದಪದ್ಮಯುಗ ಮರ್ದನಕೋವಿದಶ್ಚ
ಛಾಯೇವ ದೇಶಿಕಮಸೌ ಭೃಶಮನ್ವಯಾದ್ಯಃ || ೭೨

ಆತನು ಪ್ರತಿದಿನವೂ ಗುರುಗಳಾದ ದೇಶಿಕೇಂದ್ರರಿಗೆ ದೇಹವನ್ನೊರಸುವ ವಸ್ತ್ರವನ್ನು ವಿನಯದಿಂದ ತಂದು ಒಪ್ಪಿಸುತ್ತಿದ್ದನು. ಆಚಾರ್ಯರ ಶ್ರೀಪಾದಪದ್ಮಗಳನ್ನು ಒತ್ತುವುದರಲ್ಲಿ ನಿಪುಣನಾಗಿ ನೆರಳಿನಂತೆ ದೇಶಿಕರನ್ನು ಹಿಂಬಾಲಿಸಿ ಸೇವೆ ಸಲ್ಲಿಸುತ್ತಿದ್ದನು.

ಗುರೋಃ ಸಮೀಪೇ ನ ತು ಜಾತು ಜೃಂಭತೇ
ಪ್ರಸಾರಯನ್ನೋ ಚರಣೌ ನಿಷೀದತಿ |
ನೋಪೇಕ್ಷತೇ ವಾ ಬಹು ವಾ ನ ಭಾಷತೇ
ನ ಪೃಷ್ಠದರ್ಶೀ ಪುರತೋಽಸ್ಯ ತಿಷ್ಠತಿ || ೭೩

ಆತನು ಗುರುಗಳ ಬಳಿ ಎಂದೂ ಆಕಳಿಸತಕ್ಕವನಲ್ಲ. ಅವರ ಸಮೀಪದಲ್ಲಿ ಕಾಲುಚಾಚಿ ಕುಳಿತುಕೊಳ್ಳತಕ್ಕವನಲ್ಲ. ಗುರುಸೇವೆಯ ವಿಷಯದಲ್ಲಿ ಯಾವುದನ್ನೂ ಉಪೇಕ್ಷಿಸತಕ್ಕವನಲ್ಲ. ಬಹಳ ಮಾತನಾಡತಕ್ಕವನೂ ಅಲ್ಲ. ಎದುರಿಗೆ ನಿಂತು ಕೊಂಡಾಗ ತನ್ನ ಹಿಂದುಗಡೆ ನೋಡುವ ಸ್ವಭಾವವು ಅವನಿಗಿರಲಿಲ್ಲ.

ತಿಷ್ಠನ್ ಗುರೌ ತಿಷ್ಠತಿ ಸಂಪ್ರಯಾತೇ
ಗಚ್ಛನ್ ಬ್ರುವಾಣೇ ವಿನಯೇನ ಶೃಣ್ವನ್ |
ಅನುಚ್ಯಮಾನೋಽಪಿ ಹಿತಂ ವಿಧತ್ತೇ
ಯಚ್ಚಾಹಿತಂ ತಚ್ಚ ತನೋತಿ ನಾಸ್ಯ || ೭೪

ಆ ಶಿಷ್ಯನು ಗುರುಗಳು ಎದ್ದು ನಿಂತರೆ ತಾನೂ ಎದ್ದುನಿಂತು ಕೊಳ್ಳುತ್ತಿದ್ದನು. ಅವರು ಹೊರಟರೆ ತಾನೂ ಹೋಗುತ್ತ, ಹೇಳುವುದನ್ನು ವಿನಯದಿಂದ ಕೇಳುತ್ತ, ತನಗೆ ಹೇಳದಿದ್ದರೂ ಗುರುಗಳಿಗೆ ಹಿತವಾದದ್ದನ್ನು ಮಾಡುತ್ತ ಇದ್ದನು. ಆಚಾರ್ಯರಿಗೆ ಬೇಡವಾದ್ದನ್ನು ಎಂದಿಗೂ ಮಾಡುತ್ತಿರಲಿಲ್ಲ.

ತಸ್ಮಿನ್ ಕದಾಚನ ವಿನೇಯವರೇ ಸ್ವಶಾಟೀ-
ಪ್ರಕ್ಷಾಲನಾಯ ಗತವತ್ಯುಪವರ್ತನೀಗಾಃ |
ವ್ಯಾಖ್ಯಾನಕರ್ಮಣಿ ತದಾಗಮಮೀಕ್ಷಮಾಣೋ
ಭಕ್ತೇಷು ವತ್ಸಲತಯಾ ವಿಲಲಂಬ ಏಷಃ || ೭೫

ಹೀಗಿರುವಾಗ ಒಂದುಸಲ ಆ ಶಿಷ್ಯೋತ್ತಮನು ಗುರುಗಳ ಕಾಷಾಯವಸ್ತ್ರವನ್ನು ತೊಳೆಯುವುದಕ್ಕಾಗಿ ಸಮೀಪದ ಕಾಲುದಾರಿಯಲ್ಲಿದ್ದ ನದಿಯ ನೀರಿನ ಬಳಿಗೆ ಹೋಗಿದ್ದನು. ಆಚಾರ್ಯರು ಭಕ್ತವತ್ಸಲರಾದ್ದರಿಂದ ಆ ಶಿಷ್ಯನ ಬರವನ್ನು ಕಾಯುತ್ತ ಅಧ್ಯಾಪನ ಕಾರ್ಯವನ್ನಾರಂಭಿಸಲು ಸ್ವಲ್ಪತಡಮಾಡಿದರು.

ಟಿಪ್ಪಣಿ:- ಉಪವರ್ತನೀಗಾಃ = ಉಪ-ಸಮೀದಲ್ಲಿರುವ, ವರ್ತನೀ-ಕಾಲುದಾರಿಯಲ್ಲಿದ್ದ, ಗಾಃ= (ನದಿಯ) ನೀರನ್ನು ಎಂದರ್ಥ. ವರ್ತನ್ಯೇಕಪದೀತಿಚ -ಎಂದು ಅಮರಕೋಶವಿದೆ. ಡಿಂಡಿಮ ವ್ಯಾಖ್ಯಾನದಲ್ಲಿ ಅಪವರ್ತನೀ ಎಂಬ ಪಾಠವನ್ನಿಟ್ಟುಕೊಂಡು ನದಿಯೆಂದು ಅರ್ಥಮಾಡಿದ್ದಾರೆ. ಅದಕ್ಕೆ ಆಧಾರವನ್ನೇನೂ ತಿಳಿಸಿಲ್ಲ. ನಾನು ಮೇಲ್ಕಂಡಂತೆ ತಿದ್ದಿರುತ್ತೇನೆ.

ಶಾಂತಿಪಾಠಮಥ ಕರ್ತುಮಸಂಖ್ಯೇ-
ಷೂದ್ಯತೇಷು ಸ ವಿನೇಯವರೇಷು |
ಸ್ಥೀಯತಾಂ ಗಿರಿರಪಿ ಕ್ಷಣಮಾತ್ರಾತ್
ಏಷ್ಯತೀತಿ ಸಮುದೀರಯತಿ ಸ್ಮ || ೭೬

ಆಗ ಇತರ ಬಹುಮಂದಿ ಶಿಷ್ಯರು ಶಾಂತಿಪಾಠವನ್ನು ಹೇಳಲು ಆರಂಭಿಸಲಾಗಿ ಆಚಾರ್ಯರು,"ತಡೆಯಿರಿ;ಒಂದು ಕ್ಷಣದಲ್ಲಿಯೇ ಗಿರಿಯೂ ಬರುವನು"ಎಂದು ಹೇಳಿದರು.

ಟಿಪ್ಪಣಿ:-ತೋಟಕಾಚಾರ್ಯರಿಗೆ ಮೊದಲು ಗಿರಿಯೆಂಬ ಹೆಸರಿತ್ತೆಂದು ಇದರಿಂದ ತಿಳಿಯುತ್ತದೆ.

ತಾಂ ನಿಶಮ್ಯ ನಿಗಮಾಂತಗುರೂಕ್ತಿಂ
ಮಂದಧೀರನಧಿಕಾರ್ಯಪಿ ಶಾಸ್ತ್ರೇ |
ಕಿಂ ಪ್ರತೀಕ್ಷ್ಯತ ಇತಿ ಸ್ಮ ಹ ಭಿತ್ತಿಃ
ಪದ್ಮಪಾದಮುನಿನಾ ಸಮದರ್ಶಿ || ೭೭

ವೇದಾಂತಗುರುಗಳ ಆ ಮಾತನ್ನು ಕೇಳಿ ಪದ್ಮಪಾದಾಚಾರ್ಯನು "ಗಿರಿಯು ಮಂದಬುದ್ಧಿಯವನು. ಶಾಸ್ತ್ರದಲ್ಲಿ ಅಧಿಕಾರಿಯೇ ಅಲ್ಲ. ಅವನಿಗಾಗಿ ಕಾಯುವುದೇಕೆ?" ಎಂದು ನುಡಿದು ಗೋಡೆಯನ್ನು ನೋಡಿದನು. (ಗಿರಿಗೆ ಪಾಠಹೇಳುವುದು ಗೋಡೆಗೆ ಪಾಠ ಹೇಳಿದಂತೆ ಎಂದು ಅಭಿಪ್ರಾಯ!)

ಟಿಪ್ಪಣಿ:-ಸಮದರ್ಶಿ =ದೃಶ್ ಧಾತುವಿನ ಮೇಲೆ ಕರ್ಮಣಿ ಲುಙ್.ಚಿಣ್‌ಲುಕ್. ಸಮ್ ಉಪಸರ್ಗ.

ತಸ್ಯ ಗರ್ವಮಪಹರ್ತುಮಖರ್ವಂ
ಸ್ವಾಶ್ರಯೇಷು ಕರುಣಾತಿಶಯಾಚ್ಚ |
ವ್ಯಾದಿದೇಶ ಸ ಚತುರ್ದಶ ವಿದ್ಯಾಃ
ಸದ್ಯ ಏವ ಮನಸಾ ಗಿರಿನಾಮ್ನೇ || ೭೮

ಆಗ ಪದ್ಮಪಾದನಿಗಿದ್ದ ಅಧಿಕವಾದ ಗರ್ವವನ್ನು ಪರಿಹರಿಸುವುದಕಾಗಿಯೂ ತಮ್ಮ ಶಿಷ್ಯರಲ್ಲಿದ್ದ ಅತಿಶಯ ಕಾರುಣ್ಯದಿಂದಲೂ ಆಚಾರ್ಯರು ಒಡನೆಯೇ ತಮ್ಮ ಮನಸ್ಸಿನಿಂದಲೇ ಗಿರಿ ಎಂಬವನಿಗೆ ಹದಿನಾಲ್ಕು ವಿದ್ಯೆಗಳೂ ಬರುವಂತೆ ಆದೇಶಿಸಿದರು.

ಟಿಪ್ಪಣಿ:- ಅಂಗಾನಿ ವೇದಾಶ್ಚತ್ವಾರೋ ಮೀಮಾಂಸಾ ನ್ಯಾಯವಿಸ್ತರಃ|
ಧರ್ಮಶಾಸ್ತ್ರಂ ಪುರಾಣಂ ಚ ವಿದ್ಯಾಹ್ಯೇತಾಶ್ಚತುರ್ದಶ|| ಇವು ಚತುರ್ದಶ ವಿದ್ಯೆಗಳು.

ಸೋಽಧಿಗಮ್ಯ ತದನುಗ್ರಹಮಗ್ರ್ಯಂ
ತತ್‌ಕ್ಷಣೇನ ವಿದಿತಾಖಿಲವಿದ್ಯಃ |
ಐಟ್ಟ ದೇಶಿಕವರಂ ಪರತತ್ತ್ವ-
ವ್ಯಂಜಕೈರ್ಲಲಿತ ತೋಟಕವೃತ್ತೈಃ || ೭೯

ಶಿಷ್ಯನಾದ ಗಿರಿಯು ಆಚಾರ್ಯರ ಪರಮೋತ್ತಮವಾದ ಆ ಅನುಗ್ರಹವನ್ನು ಪಡೆದು ಆ ಕ್ಷಣದಲ್ಲಿಯೇ ಸಮಸ್ತ ವಿದ್ಯೆಗಳನ್ನೂ ಬಲ್ಲವನಾದನು. ಪರತತ್ತ್ವವನ್ನು ಬೋಧಿಸುವ ಲಲಿತವಾದ ತೋಟಕವೃತ್ತದ ಶ್ಲೋಕಗಳಿಂದ ಸ್ತುತಿಸುತ್ತ ಆತನು ದೇಶಿಕೇಂದ್ರರ ಬಳಿಗೆ ಬಂದನು.

ಟಿಪ್ಪಣಿ :-ಐಟ್ಟ = ಈಡ ಸ್ತುತೌ. ಕರ್ತರಿಲುಜ್. ತೋಟಕವೃತ್ತದ ಲಕ್ಷಣ - 'ಇಹ ತೋಟಕಮಂಬುಧಿಸೈಃ ಕಥಿತಮ್'ತೋಟಕದ ಒಂದು ಪಾದದಲ್ಲಿ ನಾಲ್ಕು ಸಗಣಗಳಿರಬೇಕು.

ಶ್ರೀಮದ್ದೇಶಿಕ ಪಾದಪಂಕಜಯುಗೀಮೂಲಾ ತದೇಕಾಶ್ರಯಾ
ತತ್ಕಾರುಣ್ಯಸುಧಾವಸೇಕಸಹಿತಾ ತದ್ಭಕ್ತಿಸದ್ವಲ್ಲರೀ |
ಹೃದ್ಯಂ ತೋಟಕವೃತ್ತವೃಂತರುಚಿರಂ ಪದ್ಯಾತ್ಮಕಂ ಸತ್ಫಲಂ
ಲೇಭೇ ಭೋಕ್ತುಮನೋತಿಸತ್ತಮಶುಕೈರಾಸ್ವಾದ್ಯಮಾನಂ ಮುಹುಃ ||

ಶಿಷ್ಯನಾದ ಗಿರಿಗೆ ಆಚಾರ್ಯರಲ್ಲಿದ್ದ ಭಕ್ತಿಯೆಂಬ ಉತ್ತಮವಾದ ಬಳ್ಳಿಗೆ ದೇಶಿಕೇಂದ್ರರ ಪಾದಕಮಲಯುಗವೇ ಬೇರು. ಆ ಬಳ್ಳಿಯು ಆಚಾರ್ಯರನ್ನೇ ಅವಲಂಬಿಸಿಕೊಂಡು ಅವರ ಕರುಣಾಮೃತದ ಸೇಚನೆಯಿಂದ ಬೆಳೆಯಿತು. ಅದು ಈಗ ತೋಟಕ ವೃತ್ತವೆಂಬ ತೊಟ್ಟಿನಿಂದ ಮಧುರವಾದ ಮತ್ತು ಮನೋಹರವಾದ ಪದ್ಯಾತ್ಮಕವಾದ ಉತ್ತಮ ಫಲವನ್ನು ನೀಡಿತು. ಅದನ್ನು ತಿನ್ನಬೇಕೆಂಬ ಮನಸ್ಸುಳ್ಳ ಸಜ್ಜನರೆಂಬ ಗಿಣಿಗಳಿಂದ ಅದು ಮತ್ತೆ ಮತ್ತೆ ಆಸ್ವಾದಿಸಲ್ಪಡುತ್ತಲೇ ಇದೆ!

ಯೇನೌನ್ನತ್ಯಮವಾಪಿತಾ ಕೃತಪದಾ ಕಾಮಂ ಕ್ಷಮಾಯಾಮಿಯಂ
ನಿಃಶ್ರೇಣಿಃ ಪದಮುನ್ನತಂ ಜಿಗಮಿಷೋರ್ವ್ಯೋಮ ಸ್ಪೃಶಂತೀ ಪರಮ್ |
ವಂಶ್ಯಾ ಕಾಽಪ್ಯಧರೀಕೃತತ್ರಿಭುವನಶ್ರೇಣೀ ಗುರೂಣಾಂ ಕಥಂ
ಸೇವಾ ತಸ್ಯ ಯತೀಶಿತುರ್ನ ವಿರಲಂ ಕುರ್ವೀತ ಗುರ್ವೀ ತಮಃ || ೮೧

ಈ ಶ್ಲೋಕದಲ್ಲಿ ಗುರುಸೇವೆಯು ಎತ್ತರಕ್ಕೇರುವ ಏಣಿ(ನಿಚ್ಚಣಿಗೆ) ಎಂದು ರೂಪಕವನ್ನು ಮಾಡಿ ವರ್ಣಿಸಿದ್ದಾರೆ. ಗುರುಸೇವಾಪರವಾಗಿ ಪ್ರತಿ ಪದಾರ್ಥವನ್ನು ಮೊದಲು ಬರೆದು, ಅನಂತರ ಆ ವಿಶೇಷಣ ಪದಾರ್ಥಗಳು ಏಣಿಗೆ ಹೇಗೆ ಅನ್ವಯಿಸುತ್ತವೆಂಬುದನ್ನು ಮಾತ್ರ ತಿಳಿಸಲಾಗುವುದು —

ಯೇನ = ಯಾವ ತೋಟಕಾಚಾರ್ಯನಿಂದ, ಉನ್ನತಂ ಪದಂ = ಶ್ರೇಷ್ಠವಾದ ಮೋಕ್ಷವನ್ನು, ಜಿಗಮಿಷೋಃ =ಪಡೆಯಲಿಚ್ಛಿಸತಕ್ಕವನಿಗೆ, ನಿಃಶ್ರೇಣಿಃ =ಏಣಿಯಾಗಿರುವ, ಗುರೂಣಾಂ ಸೇವಾ = ಶ್ರೀಶಂಕರ ಗುರುಗಳ ಸೇವೆಯು, ಔನ್ನತ್ಯಂ= ಉತ್ತಮಸ್ಥಾನವನ್ನು, ಅವಾಪಿತಾ = ಪಡೆಯುವಂತಾಯಿತೋ, ಇಯಂ = ಈ ಗುರುಸೇವೆಯು, ಕಾಮಂ = ವಿಶೇಷವಾಗಿ, ಕ್ಷಮಾಯಾಂ =ತಾಳ್ಮೆಯೆಂಬ ಗುಣದಲ್ಲಿ, ಕೃತಪದಾ = ಬೇರೂರಿ ನಿಂತಿತೋ, ಅಲ್ಲದೆ ಯಾವುದು ಪರಂ ವ್ಯೋಮ = ಚಿದಾಕಾಶ ಪರಬ್ರಹ್ಮವನ್ನು, ಸ್ಪೃಶಂತೀ = ತಲುಪುತ್ತಿದೆಯೋ(ಪರಬ್ರಹ್ಮಪ್ರಾಪಕವೋ), ವಂಶ್ಯಾ = ಬ್ರಹ್ಮಜ್ಞಾನಿಗಳ ವಂಶಪರಂಪರೆಯಿಂದ ಬಂದ, ಅಧರೀಕೃತತ್ರಿಭುವನಶ್ರೀಣೀ = ಮೂರು ಲೋಕಗಳ ಭಾಗ್ಯವನ್ನೂ ತುಚ್ಛಗೊಳಿಸತಕ್ಕದ್ದಾಗಿದೆಯೋ, ಕಾಪಿ = ಅನಿರ್ವಾಚ್ಯವಾದ ಮಹಿಮೆಯುಳ್ಳದ್ದಾಗಿದೆಯೋ, ಗುರ್ವೀ = ಅಂತಹ ಈ ಮಹತ್ತರವಾದ ಸೇವೆಯು, ತಸ್ಯಯತೀಶಿತುಃ = ಆ ಯತೀಶ್ವರನಾದ ತೋಟಕಾಚಾರ್ಯನ, ತಮಃ = ಅಜ್ಞಾನವೆಂಬ ಕತ್ತಲೆಯನ್ನು, ವಿರಲಂ = ನಷ್ಟವಾದದ್ದನ್ನಾಗಿ, ಕಥಂ = ಹೇಗೆ ತಾನೆ, ನ ಕುರ್ವೀತ= ಮಾಡದೆ ಇದ್ದೀತು ?

(ಏಣಿಯ ಪರವಾಗಿ) ಕ್ಷಮಾಯಾಂ = ನೆಲದಮೇಲೆ, ಕೃತಪದಾ =ಸ್ಥಾಪಿತವಾದ, ಉನ್ನತಂ ಪದಂ = ಎತ್ತರವಾದ ಸ್ಥಲಕ್ಕೆ, ವಂಶ್ಯಾ = ಬಿದಿರಿನಿಂದ ನಿರ್ಮಿತವಾದ.

ತೋಟಕಾಚಾರ್ಯನು ತಾಳ್ಮೆಯಿಂದ ಬಹುಕಾಲ ಉತ್ತಮವಾದ ರೀತಿಯಲ್ಲಿ ಗುರುಸೇವೆ ಮಾಡಿದ್ದನು. ಮುಮುಕ್ಷುವಿಗೆ ಗುರುಸೇವೆ ಆವಶ್ಯಕವಾದದ್ದು. ಪರಂಪರೆಯಿಂದ ಈ ಸೇವಾಪದ್ಧತಿ ಬಂದಿದೆ. ಏಣಿ ಇಲ್ಲದೆ ಎತ್ತರದ ಸ್ಥಳಕ್ಕೆ ಹೋಗಲು ಹೇಗೆ ಸಾಧ್ಯವಿಲ್ಲವೋ ಹಾಗೆ ಗುರುಸೇವೆಮಾಡದೆ ಶಿಷ್ಯನು ಮೋಕ್ಷವನ್ನು ಗಳಿಸಲು ಸಾಧ್ಯವಿಲ್ಲ. ಗುರುಸೇವೆಯಿಂದ ಸಂತುಷ್ಟರಾದ ಸದ್ಗುರುಗಳು ಶಿಷ್ಯನ ಅಜ್ಞಾನವನ್ನು ಹೋಗಲಾಡಿಸುತ್ತಾರೆ. ಶ್ರೀಶಂಕರಗುರುಗಳು ಶಿಷ್ಯೋತ್ತಮನಾದ ಗಿರಿಯ ಅಜ್ಞಾನವನ್ನು ತೊಡೆದು ಹಾಕದೆ ಇದ್ದಾರೆಯೆ?-ಎಂದು ತಾತ್ಪರ್ಯ.

ಟಿಪ್ಪಣಿ :- ಈ ಗಿರಿಯನ್ನು ಆನಂದಗಿರಿಯೆಂದು ಕೆಲವರು ಹೇಳುತ್ತಾರೆ.

ಅಥ ತೋಟಕವೃತ್ತಪದ್ಯಜಾತ್ಯೈ-
ರಯಮಜ್ಞಾತ ಸುಪರ್ವಸೂಕ್ತಿಕೋಽಪಿ ।
ದಯಯೈವ ಗುರೋಸ್ತ್ರಯೀಶಿರೋಽರ್ಥಂ
ಸ್ಫುಟಯನ್ನೈಕ್ಷಿ ವಿಚಕ್ಷಣಃ ಸತೀರ್ಥ್ಯೈಃ ॥ ೮೨

ಅನಂತರ ಈ ಗಿರಿಯು ಸರಿಯಾಗಿ ಸಂಸ್ಕೃತ ಭಾಷೆಯನ್ನು ಅರಿಯದಿದ್ದರೂ ಸಹ ಗುರುಗಳ ದಯೆಯಿಂದಲೇ ತೋಟಕವೃತ್ತದ ಪದ್ಯಗಳಿಂದ ಉಪನಿಷದರ್ಥವನ್ನು ವಿವರಿಸುತ್ತ ವಿಚಕ್ಷಣನಾಗಿರುವುದನ್ನು ಸಹಪಾಠಿಗಳಾದ ಆ ಶಿಷ್ಯರು ನೋಡಿದರು.

ಟಿಪ್ಪಣಿ :- ಸುಪರ್ವಸೂಕ್ತಿ = ಅಮರವಾಣಿ - ಸಂಸ್ಕೃತ ಭಾಷೆ.

ಅಥ ತಸ್ಯ ಬುಧಸ್ಯ ವಾಕ್ಯಗುಂಫಂ
ನಿಶಮಯ್ಯಾಮೃತ ಮಾಧುರೀಧುರೀಣಮ್ ।
ಜಲಜಾಂಘ್ರಿಮುಖಾಃ ಸತೀರ್ಥ್ಯವರ್ಯಾಃ
ಸ್ಮಯಮನ್ವಸ್ಯ ಸವಿಸ್ಮಯಾ ಬಭೂವುಃ ॥ ೮೩

ಆಗ ಅಮೃತದಂತೆ ಅತ್ಯಂತಮಧುರವಾದ ಆ ವಿದ್ವಾಂಸನ ವಾಕ್ಯರಚನೆಯನ್ನು ಕೇಳಿ ಪದ್ಮಪಾದನೇ ಮೊದಲಾದ ಸಹಪಾಠಿಗಳು ತಮ್ಮ ಗರ್ವವನ್ನು ತ್ಯಜಿಸಿ ಅಚ್ಚರಿಗೊಂಡರು.

ಭಕ್ತ್ಯುತ್ಕರ್ಷಾತ್ ಪ್ರಾದುರಾಸನ್ಯತೋಽಸ್ಮಾತ್
ಪದ್ಯಾನ್ಯೇವಂ ತೋಟಕಾಖ್ಯಾನಿ ಸಂತಿ ।
ತಸ್ಮಾದಾಹುಸ್ತೋಟಕಾಚಾರ್ಯಮೇನಂ
ಲೋಕೇ ಶಿಷ್ಟಾಃ ಶಿಷ್ಟವಂಶ್ಯಂ ಮುನೀಂದ್ರಮ್ ॥ ೮೪

ಗುರುಭಕ್ತಿಯ ಉತ್ಕರ್ಷದಿಂದ ಗಿರಿಗೆ ತೋಟಕವೃತ್ತದ ಆ ಉತ್ತಮಪದ್ಯಗಳು ಸ್ಫುರಿಸಿದವು. ಆದ್ದರಿಂದ ಶಿಷ್ಟವಂಶದಲ್ಲಿ ಜನಿಸಿದ ಆ ಮುನೀಂದ್ರನನ್ನು ಸಜ್ಜನರು ತೋಟಕಾಚಾರ್ಯ ಎಂಬುದಾಗಿ ಲೋಕದಲ್ಲಿ ಹೇಳುತ್ತಾರೆ.

ಅದ್ಯಾಪಿ ತತ್ಪ್ರಕರಣಂ ಪ್ರಥಿತಂ ಪೃಥಿವ್ಯಾಂ
ತತ್ಸಂಜ್ಞಯಾ ಲಘು ಮಹಾರ್ಥಮನಲ್ಪನೀತಿ ।
ಶಿಷ್ಟೈರ್ಗೃಹೀತಮತಿ ಶಿಷ್ಟಪದಾನುವಿದ್ಧಂ
ವೇದಾಂತ ವೇದ್ಯಪರತತ್ತ್ವನಿವೇದನಂ ಯತ್ ॥ ೮೫

ಈಗಲೂ ಸಹ ಅವರು ರಚಿಸಿದ ಪ್ರಕರಣ ಗ್ರಂಥವು ತೋಟಕಾಚಾರ್ಯರ ಹೆಸರಿನಲ್ಲಿ ಲೋಕಪ್ರಸಿದ್ಧವಾಗಿದೆ. ಅದು ಸುಲಭವಾಗಿ ಮಹತ್ತರವಾದ ಅರ್ಥದಿಂದ ಕೂಡಿ ನಾನಾ ನ್ಯಾಯಗಳಿಂದ ವಸ್ತು ಪ್ರತಿಪಾದಕವೂ ಆಗಿದೆ. ಶಾಸ್ತ್ರ ಸಮ್ಮತವಾದ ವಿಷಯ ವಾಕ್ಯಗಳಿಂದ ಕೂಡಿ ಉಪನಿಷದ್ಬೋಧ್ಯವಾದ ಪರತತ್ತ್ವವನ್ನು ಬೋಧಿಸುತ್ತದೆಯಾದ್ದರಿಂದ ಶಿಷ್ಟರಾದವರು ಅದನ್ನು ಮಾನ್ಯತೆಯಿಂದ ಸ್ವೀಕರಿಸಿದ್ದಾರೆ.

ಟಿಪ್ಪಣಿ :- ತೋಟಕಾಚಾರ್ಯರ ಈ ಗ್ರಂಥಕ್ಕೆ ಶ್ರುತಿಸಾರಸಮುದ್ಧರಣ ಎಂದು ಹೆಸರು.

ತೋಟಕಾಹ್ವಯಮವಾಪ್ಯ ಮಹರ್ಷೇಃ
ಖ್ಯಾತಿಮಾಪ ಸ ದಿಶಾಸು ತದಾದಿ |
ಪದ್ಮಪಾದಸದೃಶಪ್ರತಿಭಾವಾನ್
ಮುಖ್ಯಶಿಷ್ಯಪದವೀಮಪಿ ಲೇಭೇ || ೮೬

ಮಹರ್ಷಿಗಳಾದ ಆಚಾರ್ಯರಿಂದ ಆ ಗಿರಿಯು ತೋಟಕನೆಂಬ ಹೆಸರನ್ನು ಪಡೆದು ಅಂದಿನಿಂದಲೂ ದಿಕ್ಕು ದಿಕ್ಕುಗಳಲ್ಲಿ ಪ್ರಸಿದ್ಧನಾದನು. ಪದ್ಮಪಾದರಿಗೆ ಸದೃಶವಾದ ಪ್ರತಿಭೆಯುಳ್ಳವನಾಗಿ ಆಚಾರ್ಯರ ಮುಖ್ಯ ಶಿಷ್ಯನೆಂಬ ಪದವಿಯನ್ನು ಪಡೆದನು.

ಪುಮರ್ಥಾಶ್ಚತ್ವಾರಃ ಕಿಮುತ ನಿಗಮಾ ಋಕ್ಪ್ರಭೃತಯಃ
ಪ್ರಭೇದಾ ವಾ ಮುಕ್ತೇರ್ವಿಮಲತರಸಾಲೋಕ್ಯಮುಖರಾಃ |
ಮುಖಾನ್ಯಾಹೋ ಧಾತುಶ್ಚಿರಮಿತಿ ವಿಮೃಶ್ಯಾಥ ವಿಬುಧಾ
ವಿದುಃ ಶಿಷ್ಯಾನ್ ಹಸ್ತಾಮಲಕಮುಖರಾನ್‌ಶಂಕರಗುರೋಃ || ೮೭

ಈ ಆಚಾರ್ಯರ ನಾಲ್ವರು ಶಿಷ್ಯರು (ಶರೀರವನ್ನು ತಳೆದ)ನಾಲ್ಕು ಪುರುಷಾರ್ಥಗಳೋ ಅಥವಾ ಋಗ್ವೇದ ಮೊದಲಾದ ನಾಲ್ಕು ವೇದಗಳೋ, ಶುದ್ಧವಾದ ಸಾಲೋಕ್ಯವೇ ಮೊದಲಾದ ಮುಕ್ತಿಯ ನಾಲ್ಕು ಭೇದಗಳೋ ಅಥವಾ ಬ್ರಹ್ಮನ ನಾಲ್ಕು ಮುಖಗಳೋ ಎಂದು ವಿಬುಧರು ಬಹಳ ಹೊತ್ತು ವಿಮರ್ಶಿಸಬೇಕಾಗಿತ್ತು. ಕಡೆಗೆ ಈ ನಾಲ್ಕು ಮಂದಿಯೂ ಶ್ರೀಶಂಕರಭಗವತ್ಪಾದರ ಹಸ್ತಾಮಲಕನೇ ಮೊದಲಾದ ಶಿಷ್ಯರೆಂದು ಗೊತ್ತು ಮಾಡುತ್ತಿದ್ದರು!

ಟಿಪ್ಪಣಿ :- ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ ಎಂಬವು ಮುಕ್ತಿಯ ನಾಲ್ಕು ಭೇದಗಳು. ವಿಬುಧಾಃ = ಪಂಡಿತರು ಅಥವಾ ದೇವತೆಗಳು. ನಾಲ್ವರು ಶಿಷ್ಯರು =ಪದ್ಮಪಾದ, ಸುರೇಶ್ವರ, ಹಸ್ತಾಮಲಕ, ತೋಟಕ -ಎಂಬ ಆಚಾರ್ಯರು.

ಸ್ಫಾರದ್ವಾರ ಪ್ರಘಾಣದ್ವಿರದಮದಸಮುಲ್ಲೋಲ ಕಲ್ಲೋಲಭೃಂಗೀ-
ಸಂಗೀತೋಲ್ಲಾಸಭಂಗೀಮುಖರಿತಹರಿತಃ ಸಂಪದೋಽಕಿಂಪಚಾನ್ಯೈಃ |
ನಿಷ್ಠೀವ್ಯಂತೇಽತಿದೂರಾದಧಿಗತಭಗವತ್ಪಾದಸಿದ್ಧಾಂತಕಾಷ್ಠಾ-
ನಿಷ್ಠಾಸಂಪದ್ವಿಜೃಂಭನ್ನಿರವಧಿಸುಖದಸ್ವಾತ್ಮಲಾಭೈಕಲೋಭೈಃ || ೮೮

ವಿಶಾಲವಾದ ಬಾಗಿಲುಗಳ ಎದುರಿಗಿರುವ ಅಂಗಳದಲ್ಲಿ ಆನೆಗಳ ಮದೋದಕದಿಂದ ಹರಿಯುವ ಅಲೆಗಳಲ್ಲಿ ನೆರೆದಿರುವ ಹೆಣ್ಣುದುಂಬಿಗಳ ಸಂಗೀತದ ಉಲ್ಲಾಸಭಂಗಿಯಿಂದ ದಿಕ್ಕು ದಿಕ್ಕಿಗೆ ಶಬ್ದತರಂಗಗಳನ್ನುಂಟುಮಾಡುವ ಸಂಪತ್ತುಗಳು ಎಲ್ಲಾದರೂ ಇದ್ದುಕೊಂಡಿರಲಿ ! ನಮ್ಮ ಭಗವತ್ಪಾದರ ಸಿದ್ಧಾಂತದ ಪರಮಾವಧಿಯನ್ನು ತಿಳಿದು ಅದರಲ್ಲಿ ಬೆಳೆಸಿಕೊಂಡ

ನಿಷ್ಠೆಯೆಂಬ ಸಂಪತ್ತು ಏನುಂಟು, ಆದರಿಂದ ವಿಜೃಂಭಿಸುವ ಅನಂತವಾದ ಸುಖವನ್ನು ಕೊಡುವ ಆತ್ಮಜ್ಞಾನವನ್ನು ಪಡೆದಿರತಕ್ಕ ಉದಾರಿಗಳಾದ ಶ್ರೀಮಂತರು ಹಿಂದೆ ಹೇಳಿದ ಸಂಪತ್ತುಗಳನ್ನು ದೂರದಲ್ಲಿ ಉಗುಳಿಬಿಡುತ್ತಾರೆ !

(ಆಚಾರ್ಯರು ಬೋಧಿಸಿದ ವೇದಾಂತದ ಅರ್ಥವನ್ನು ತಿಳಿದು ಅದರಲ್ಲಿ ನಿಷ್ಠರಾಗಿ ಬ್ರಹ್ಮಜ್ಞಾನಿಗಳಾದವರಿಗೆ ಅಸದೃಶವಾದ ಪರಮಾನಂದವು ಪ್ರಾಪ್ತವಾಗುತ್ತದೆ. ಆ ಜ್ಞಾನಿಗಳಿಗೆ ಲೌಕಿಕವಾದ ಐಶ್ವರ್ಯವು ತುಚ್ಛವಾಗಿ ಕಾಣಿಸುತ್ತದೆ ಎಂದು ತಾತ್ಪರ್ಯ.)

ಟಿಪ್ಪಣಿ :- ಅಕಿಂಪಚಾನ = ಕಿಂ ಕುತ್ಸಿತಂ ಪಚತೀತಿ ಕಿಂ ಪಚಾನಃ| ತಾಚ್ಛೀಲ್ಯೇ ಚಾನಶ್‌ಪ್ರತ್ಯಯಃ 'ಕಿಮಃ ಕ್ಷೇಪೇ' ಎಂಬ ಸೂತ್ರದಿಂದ ಸಮಾಸ. ಅನಂತರ ನಞ್ ಸಮಾಸ. ಜಿಪುಣನಲ್ಲದ ಎಂದು ವಾಚ್ಯಾರ್ಥ. ಅನಿತ್ಯವಾದ್ದರಿಂದ ಮುಮಾಗಮ ಬಂದಿಲ್ಲ.

ಸಮಿಂಧಾನೋ ಮಂಥಾಚಲಮಥಿತಸಿಂಧೂದರಭವ -
ತ್ಸುಧಾಫೇನಾಭೇನಾಮೃತರುಚಿ ನಿಭೇನಾಽತ್ಮಯಶಸಾ |
ನಿರುಂಧಾನೋ ದೃಷ್ಟ್ಯಾ ಪರಮಹಹ ಪಂಥಾನಮಸತಾಂ
ಪರಾಧೃಷ್ಯೈಃ ಶಿಷ್ಯೈರರಮತ ವಿಶಿಷ್ಯೈಷ ಮುನಿರಾಟ್ || ೭೯

ಮಂದರ ಪರ್ವತದಿಂದ ಕಡೆಯಲ್ಪಟ್ಟ ಕ್ಷೀರಸಮುದ್ರದಲ್ಲಿ ಉದಿಸಿದ ಅಮೃತದ ನೊರೆಗೆ ಸಮಾನವೂ, ಚಂದ್ರನಿಗೆ ಸದೃಶವೂ ಆದ ತಮ್ಮ ಶುಭ್ರ ಕೀರ್ತಿಯಿಂದ ವಿರಾಜಿಸುತ್ತಿದ್ದ ಆಚಾರ್ಯರು, ಕೇವಲ ದೃಷ್ಟಿಪಾತದಿಂದಲೇ ದುರ್ಜನರ ದುರ್ಮಾರ್ಗವನ್ನು ದೂರೀಕರಿಸಲು ಸಮರ್ಥರಾಗಿದ್ದರು. ಇದು ಒಂದು ಅಚ್ಚರಿ. ಅನ್ಯರ ವಾದಕ್ಕೆ ಮಣಿಯದಿರುವ ಆ ಪಂಡಿತ ಶಿಷ್ಯರೊಡನೆ ಮುನಿರಾಜರಾದ ಶ್ರೀಶಂಕರರು ವಿಶೇಷವಾಗಿ ಸಂತೋಷದಿಂದಿದ್ದರು.

ಇತಿ ಶ್ರೀ ಮಾಧವೀಯೇ ತದ್ಧಸ್ತಧಾತ್ರ್ಯಾದಿಸಂಶ್ರಯಃ |
ಸಂಕ್ಷೇಪಶಂಕರಜಯೇ ಸರ್ಗೋಽಯಂ ದ್ವಾದಶೋಽಭವತ್ ||

ಇಲ್ಲಿಗೆ ಶ್ರೀ ಮಾಧವೀಯ ಶಂಕರ ವಿಜಯದಲ್ಲಿ ಹಸ್ತಾಮಲಕಾದಿ ಶಿಷ್ಯಪ್ರಾಪ್ತಿಯನ್ನು ವರ್ಣಿಸುವ ಹನ್ನೆರಡನೆಯ ಸರ್ಗವು ಸಮಾಪ್ತವಾಯಿತು.

✣ ✣ ✣

## ತ್ರಯೋದಶಃ ಸರ್ಗಃ

## ನೈಷ್ಕರ್ಮ್ಯ ಸಿದ್ಧಿಃ

ಆಚಾರ್ಯರ ಸೂತ್ರಭಾಷ್ಯಕ್ಕೆ ವಾರ್ತಿಕವನ್ನು ಬರೆಯುವ ವಿಷಯದಲ್ಲಿ ಶಿಷ್ಯರ ಮತಭೇದ. ಹಸ್ತಾಮಲಕರ ಪೂರ್ವವೃತ್ತಾಂತ. ಸುರೇಶ್ವರರ ನೈಷ್ಕರ್ಮ್ಯಸಿದ್ಧಿ. ಪದ್ಮಪಾದರ ಪಂಚಪಾದಿಕಾ. ಅದ್ವೈತಸಿದ್ಧಾಂತದ ಇತರಗ್ರಂಥಗಳನ್ನು ರಚಿಸಬೇಕೆಂದು ಶಿಷ್ಯರಿಗೆ ಆದೇಶ.

ತತಃ ಕದಾಚಿತ್ ಪ್ರಣಿಪತ್ಯ ಭಕ್ತ್ಯಾ
ಸುರೇಶ್ವರಾರ್ಯೋ ಗುರುಮಾತ್ಮದೇಶಮ್ ।
ಶಾರೀರಕೇಽತ್ಯಂತ ಗಭೀರಭಾವೇ
ವೃತ್ತಿಂ ಸ್ಫುಟಂ ಕರ್ತುಮನಾ ಜಗಾದ ॥ ೧

ಅನಂತರ ಒಂದುಸಲ ಸುರೇಶ್ವರಾಚಾರ್ಯರು ಆತ್ಮಜ್ಞಾನವನ್ನು ಕರುಣಿಸುವುದರಲ್ಲಿ ಅಗ್ರಗಣ್ಯರಾದ ತಮ್ಮ ಗುರುಗಳಿಗೆ ಭಕ್ತಿಯಿಂದ ನಮಸ್ಕರಿಸಿದರು. ಅತ್ಯಂತ ಗಂಭೀರಾರ್ಥವನ್ನೊಳಗೊಂಡ ಆಚಾರ್ಯರ ಶಾರೀರಕ ಸೂತ್ರಭಾಷ್ಯಕ್ಕೆ ವಿಶದವಾಗಿ ಅರ್ಥವನ್ನು ಪ್ರತಿಪಾದಿಸುವ ಒಂದು ವೃತ್ತಿಯನ್ನು ಬರೆಯಬೇಕೆಂಬ ಇಚ್ಛೆಯುಳ್ಳವರಾಗಿ ಹೀಗೆಂದರು.

ಮಮ ಯತ್ಕರಣೀಯಮಸ್ತಿ ತೇ
ತ್ವಮಿಮಂ ಮಾಮನುಶಾಧ್ಯಸಂಶಯಮ್ ।
ತದಿದಂ ಪುರುಷಸ್ಯ ಜೀವಿತಂ
ಯದಯಂ ಜೀವತಿ ಭಕ್ತಿಮಾನ್ ಗುರೌ ॥ ೨

"ಗುರುಗಳೆ, ನಿಮಗೋಸ್ಕರ ನಾನು ಮಾಡಬೇಕಾದದ್ದು ಏನಾದರೂ ಇದ್ದರೆ ಅದನ್ನು ಮಾಡುವಂತೆ ಯಾವ ಶಂಕೆಯೂ ಇಲ್ಲದೆ ನನಗೆ ಆಜ್ಞೆಮಾಡಿರಿ. ಗುರುವಿನ ವಿಷಯದಲ್ಲಿ ಭಕ್ತಿಯುಕ್ತನಾಗಿ ಬದುಕಿರುವುದೇನುಂಟೋ ಅದೇ ಶಿಷ್ಯನಿಗೆ ಜೀವಿತಫಲ" ಎಂದರು.

ಇತೀರಿತೇ ಶಿಷ್ಯವರೇಣ ಶಿಷ್ಯಂ
ಪ್ರೋಚೇ ಗರೀಯಾನತಿಹೃಷ್ಟಚೇತಾಃ ।
ಮತ್ಕಸ್ಯ ಭಾಷ್ಯಸ್ಯ ವಿಧೇಯಮಿಷ್ಟಂ
ನಿಬಂಧನಂ ವಾರ್ತಿಕನಾಮಧೇಯಮ್ ॥ ೩

ಶಿಷ್ಯೋತ್ತಮರಾದ ಸುರೇಶ್ವರರರು ಹೀಗೆ ನುಡಿಯಲಾಗಿ ಆಚಾರ್ಯರಿಗೆ ಬಹಳ ಆನಂದವಾಯಿತು. ಆ ಮಹಾತ್ಮರು ಶಿಷ್ಯನನ್ನು ಕುರಿತು "ನನ್ನ ಸೂತ್ರಭಾಷ್ಯಕ್ಕೆ ವಾರ್ತಿಕ ರೂಪವಾದ ಒಂದು ನಿಬಂಧವನ್ನು ನೀನು ಬರೆಯಬೇಕೆಂದು ನನ್ನ ಅಪೇಕ್ಷೆ" ಎಂದರು.

ಟಿಪ್ಪಣಿ:- ಉಕ್ತಾನುಕ್ತ ದುರುಕ್ತಾನಾಂ ಚಿಂತಾ ಯತ್ರ ಪ್ರವರ್ತತೇ |
ತಂ ಗ್ರಂಥಂ ವಾರ್ತಿಕಂ ಪ್ರಾಹುರ್ವಾರ್ತಿಕಜ್ಞಾ ಮನೀಷಿಣಃ ||
ಎಂದು ವಾರ್ತಿಕದ ಲಕ್ಷಣವನ್ನು ಪರಾಶರೋಪ -ಪುರಾಣದಲ್ಲಿ ಹೇಳಿದೆ.

ದ್ರಷ್ಟುಂ ಸತರ್ಕಂ ಭವದೀಯಭಾಷ್ಯಂ
ಗಂಭೀರವಾಕ್ಯಂ ನ ಮಮಾಸ್ತಿ ಶಕ್ತಿಃ |
ತಥಾಽಪಿ ಭಾವತ್ಕಕಟಾಕ್ಷಪಾತೇ
ಯತೇ ಯಥಾಶಕ್ತಿ ನಿಬಂಧನಾಯ || ೪

ಆಗ ಸುರೇಶ್ವರಾಚಾರ್ಯರು "ಗಂಭೀರ ವಾಕ್ಯ ಘಟಿತವಾದ ನಿಮ್ಮ ಭಾಷ್ಯವನ್ನು ಯುಕ್ತವೇ ಅಯುಕ್ತವೇ ಎಂಬ ತರ್ಕದೃಷ್ಟಿಯಿಂದ ನೋಡಲು ನನಗೆ ಶಕ್ತಿ ಇಲ್ಲ. ಆದರೂ ನಿಮ್ಮ ಕರುಣಾಕಟಾಕ್ಷವು ಇರುವಾಗ ವಾರ್ತಿಕನಿಬಂಧವನ್ನು ರಚಿಸಲು ಯಥಾಶಕ್ತಿಯಾಗಿ ಯತ್ನಿಸುತ್ತೇನೆ."ಎಂದು ಹೇಳಿದರು.

ಅಸ್ತ್ವೇವಮಿತ್ಯಾರ್ಯಪದಾಭ್ಯನುಜ್ಞಾ -
ಮಾದಾಯ ಮೂರ್ಧ್ನಾ ಸ ವಿನಿರ್ಜಗಾಮ |
ಅಥಾಂಬುಜಾಂಘ್ರೇರ್ದಯಿತಾಃ ಸತೀರ್ಥ್ಯಾ -
ಸ್ತಂ ಚಿತ್ಸುಖಾದ್ಯಾ ರಹಸೀತ್ಥಮೂಚುಃ || ೫

ಅದಕ್ಕೆ ಪೂಜ್ಯಪಾದರಾದ ಶ್ರೀಶಂಕರರು ಹಾಗೆಯೇ ಆಗಲಿ ಎಂದು ಅನುಮತಿಯನ್ನು ನೀಡಿದರು. ಅದನ್ನು ಶಿರಸಾವಹಿಸಿ ಸುರೇಶ್ವರರು ಅಲ್ಲಿಂದ ನಿರ್ಗಮಿಸಿದರು. ಆಮೇಲೆ ಪದ್ಮಪಾದರಿಗೆ ಮಿತ್ರರಾದ ಚಿತ್ಸುಖಾಚಾರ್ಯ ಮೊದಲಾದ ಸತೀರ್ಥ್ಯರು ಈ ವಿಷಯವನ್ನು ತಿಳಿದು ರಹಸ್ಯವಾಗಿ ಆಚಾರ್ಯರ ಬಳಿಗೆ ಬಂದು (ಶಾರೀರಕ ಭಾಷ್ಯವಾರ್ತಿಕದ ವಿಷಯವಾಗಿ) ಹೀಗೆಂದರು.

ಯೋಽಯಂ ಪ್ರಯತ್ನಃ ಕ್ರಿಯತೇ ಹಿತಾಯ
ಹಿತಾಯ ನಾಯಂ ವಿಫಲಂತ್ವನರ್ಥಮ್ |
ಪ್ರತ್ಯೇಕಮೇವಂ ಗುರವೇ ನಿವೇದ್ಯ
ಬೋದ್ಧಾ ಸ್ವಯಂ ಕರ್ಮಣಿ ತತ್ಪರಶ್ಚ || ೬

"ಗುರುಗಳೆ, ಜನಹಿತಕ್ಕಾಗಿ ನಡೆಯುವ ಈ ಪ್ರಯತ್ನವು ಹಿತಕಾರಿಯಾಗುವುದಿಲ್ಲ. ಅದು ವ್ಯರ್ಥವಲ್ಲದೆ ಅನರ್ಥಕಾರಿಯೂ ಆಗುತ್ತದೆ." ಹೀಗೆ ಒಬ್ಬೊಬ್ಬರೂ ಹೇಳಿ ಮತ್ತೆ ಇಂತೆಂದರು."ಈ ಸುರೇಶ್ವರನು ಕರ್ಮವಿಷಯವನ್ನು ಚೆನ್ನಾಗಿ ತಿಳಿದುಕೊಂಡು ಕರ್ಮದ ಒಲವನ್ನೇ ಇಟ್ಟುಕೊಂಡಿದ್ದಾನೆ.

ಯಃ ಸಾರ್ವಲೌಕಿಕಮಪೀಶ್ವರಮೀಶ್ವರಾಣಾಂ
ಪ್ರತ್ಯಾದಿದೇಶ ಬಹುಯುಕ್ತಿಭಿರುತ್ತರಜ್ಞಃ |
ಕರ್ಮೈವ ನಾಕನರಕಾದಿಫಲಂ ದದಾತಿ
ನೈವಂ ಪರೋಽಸ್ತಿ ಫಲದೋ ಜಗದೀಶಿತೇತಿ || ೭

"ಹಿಂದೆ ಈತನೇ ಸರ್ವಲೋಕಪ್ರಸಿದ್ಧನೂ ಈಶ್ವರರಿಗೆ ಈಶ್ವರನೂ ಆದ ಭಗವಂತನನ್ನು ನಾನಾ ಯುಕ್ತಿಗಳಿಂದ ಇಲ್ಲವೆಂದು ನಿರಾಕರಿಸಿದ್ದಾನೆ. ನಿಮ್ಮ ಪ್ರಶ್ನೆಗಳಿಗೆ ಉತ್ತರ ಹೇಳಿದ್ದಾನೆ.'ಕರ್ಮವೇ ಸ್ವರ್ಗನರಕಾದಿ ಫಲಗಳನ್ನು ಕೊಡುತ್ತದೆ. ಫಲವನ್ನು ಕೊಡುವ ಜಗದೀಶ್ವರನಾದ ಪರಮೇಶ್ವರನೆಂಬವನೊಬ್ಬನಿಲ್ಲ' ಎಂದು ವಾದಿಸಿದ್ದಾನೆ

ಪ್ರತ್ಯೇಕಮಸ್ಯ ಪ್ರಲಯಂ ವದಂತಿ
ಪುರಾಣವಾಕ್ಯಾನಿ ಸ ತಸ್ಯ ಕರ್ತಾ |
ವ್ಯಾಸೋ ಮುನಿರ್ಜೈಮಿನಿರಸ್ಯ ಶಿಷ್ಯ-
ಸ್ತತ್ಪಕ್ಷಪಾತೀ ಪ್ರಲಯಾವಲಂಬೀ || ೮

"ಪುರಾಣವಾಕ್ಯಗಳು ಈ ಜಗತ್ತಿಗೆ ಒಂದೊಂದು ಬಗೆಯ ಪ್ರಳಯವಾಗುತ್ತದೆಯೆಂದು ಹೇಳುತ್ತವೆ. ಈ ಪುರಾಣಗಳನ್ನು ಬರೆದವರು ವ್ಯಾಸಮುನಿಗಳು. ಅವರ ಶಿಷ್ಯನಾದ ಜೈಮಿನಿಯು ಪ್ರಳಯವಾಗುತ್ತದೆ ಎಂದು ನಂಬಿದವನು. (ಜಗತ್ತು ಸತ್ಯವೆಂದೂ, ಸೃಷ್ಟಿ ಸ್ಥಿತಿ ಲಯಗಳು ನಡೆಯುತ್ತವೆ ಎಂದೂ ಲೋಕಾಭಿರಾಮವಾಗಿ ಪುರಾಣಗಳು ವರ್ಣಿಸುವುದನ್ನು ಜೈಮಿನಿಯು ಸತ್ಯವೆಂದು ತಿಳಿದುಕೊಂಡಿದ್ದಾನೆ ಎಂದು ಅಭಿಪ್ರಾಯ.)

ಗುರೋಶ್ಚ ಶಿಷ್ಯಸ್ಯ ಚ ಪಕ್ಷಭೇದೇ
ಕಥಂ ತಯೋಃ ಸ್ಯಾದ್ಗುರುಶಿಷ್ಯಭಾವಃ |
ತಥಾಽಪಿ ಯದ್ಯಸ್ತಿ ಸ ಪೂರ್ವಪಕ್ಷಃ
ಸಿದ್ಧಾಂತಭಾವಸ್ತು ಗುರೂಕ್ತ ಏವ || ೯

"ಗುರುವಿಗೂ ಶಿಷ್ಯನಿಗೂ ಅಭಿಪ್ರಾಯವು ಭಿನ್ನವಾದಲ್ಲಿ ಅವರಲ್ಲಿ ಗುರುಶಿಷ್ಯಭಾವವು ಹೇಗೆ ಉಳಿದೀತು? ಆದರೂ ಪುರಾಣೋಕ್ತವಾದದ್ದು ಪೂರ್ವಪಕ್ಷವಾದರೆ ಸಿದ್ಧಾಂತವು ಗುರು ಹೇಳಿದ್ದೇ ಆಗಬೇಕು.

ವಿವರಣೆ: ಗುರುಗಳಾದ ವ್ಯಾಸರು ಬ್ರಹ್ಮಸೂತ್ರಗಳಲ್ಲಿ ಜಗತ್ತು ಮಿಥ್ಯೆಯೆಂದು, ಬ್ರಹ್ಮವೇ ಸತ್ಯವೆಂದು ಪ್ರತಿಪಾದಿಸಿದ್ದಾರೆ. ಗುರುಗಳು ಹೀಗೆ ಹೇಳಿದರೂ ಜೈಮಿನಿಯು ಅದನ್ನು ನಂಬದೆ ಸ್ವರ್ಗ ನರಕಾದಿಗಳನ್ನು ಹೇಳಿ ಜಗತ್ತು ಸತ್ಯವೆಂದು ಪ್ರತಿಪಾದಿಸಿದ್ದಾನೆ ಎಂದು ಅಭಿಪ್ರಾಯ.

ಆ ಜನ್ಮನಃ ಸ ಖಲು ಕರ್ಮಣಿ ಯೋಜಿತಾತ್ಮಾ
ಕುರ್ವನ್ನವಸ್ಥಿತ ಇಹಾನಿಶಮೇವ ಕರ್ಮ ।
ಬ್ರೂತೇ ಪರಾಂಶ್ಚ ಕುರುತಾವಹಿತಾಃ ಪ್ರಯತ್ನಾತ್
ಸ್ವರ್ಗಾದಿಕಂ ಸುಖಮವಾಪ್ಸ್ಯಥ ಕಿಂ ವೃಥಾಧ್ವೇ ॥ ೧೦

"ಆತನು (ಸುರೇಶ್ವರನು) ಆಜನ್ಮವೂ ಕರ್ಮನಿಷ್ಠೆಯಲ್ಲಿ ಆಸಕ್ತಿಯನ್ನು ವಹಿಸಿ ಸದಾ ಕರ್ಮಗಳನ್ನೇ ಮಾಡುತ್ತಾ ಜನರನ್ನು ಕುರಿತು ಆಲಸ್ಯವಿಲ್ಲದೆ ನಿಷ್ಠೆಯಿಂದ ಕರ್ಮವನ್ನಾಚರಿಸಿರಿ, ಅದರಿಂದ ಸ್ವರ್ಗಾದಿ ಫಲವು ದೊರೆಯುವುದು. ವ್ಯರ್ಥವಾಗಿ ಏಕೆ ಸುಮ್ಮನಿರುತ್ತೀರಿ?- ಎಂದು ಹೇಳುತ್ತಿದ್ದನು.

ಏವಂ ವಿಧೇನ ಕ್ರಿಯತೇ ನಿಬಂಧನಂ
ಯದಿ ತ್ವದಾಜ್ಞಾಮವಲಂಬ್ಯ ಭಾಷ್ಯಕೇ ।
ಭಾಷ್ಯಂ ಪರಂ ಕರ್ಮಪರಂ ಸ ಯೋಕ್ಷ್ಯತೇ
ಮಾ ಚ್ಯಾವಿ ಮೂಲಾದಪಿ ವೃದ್ಧಿಮಿಚ್ಛತಾ ॥ ೧೧

"ಇಂತಹ ಮನುಷ್ಯನು ನಿಮ್ಮ ಆಜ್ಞೆಯನ್ನವಲಂಬಿಸಿ ಭಾಷ್ಯಕ್ಕೆ ನಿಬಂಧವನ್ನು ಬರೆದರೆ, ಅವನು ಭಾಷ್ಯವನ್ನು ಕರ್ಮಪರವಾಗಿಯೇ ಯೋಜಿಸಿಬಿಡುತ್ತಾನೆ. ಬಡ್ಡಿಯನ್ನು ಬಯಸತಕ್ಕವನು ಅಸಲನ್ನೂ ಕಳೆದುಕೊಳ್ಳಬಾರದು.

ಟಿಪ್ಪಣಿ: ವೃದ್ಧಿಮಿಚ್ಛತೋ ಮೂಲಮಪಿ ನಷ್ಟಂ - ಎಂದು ಗಾದೆ ಇದೆ. ಬಡ್ಡಿಯ ಆಸೆಗಾಗಿ ಹಣವನ್ನು ಕೊಟ್ಟು ಅಸಲನ್ನೂ ಕಳೆದುಕೊಂಡನು ಎಂದರ್ಥ.

ಸಂನ್ಯಾಸಮಪ್ಯೇಷ ನ ಬುದ್ಧಿಪೂರ್ವಕಂ
ವ್ಯಧತ್ತ ವಾದೇ ವಿಜಿತೋಽವಶೋ ವ್ಯಧಾತ್।
ತಸ್ಮಾನ್ನ ವಿಶ್ವಾಸಪದಂ ವಿಭಾತಿ ನೋ
ಮಾ ಚೀಕರೋಽನೇನ ನಿಬಂಧನಂ ಗುರೋ ॥ ೧೨

"ಈತನು ಸಂನ್ಯಾಸವನ್ನೂ ಸಹ ಬುದ್ಧಿಪೂರ್ವಕವಾಗಿ ಸ್ವೀಕರಿಸಲಿಲ್ಲ. ವಾದದಲ್ಲಿ ಪರಾಜಿತನಾದ್ದರಿಂದ ಮಾರ್ಗವಿಲ್ಲದೆ ಸಂನ್ಯಾಸವನ್ನು ತೆಗೆದುಕೊಂಡಿದ್ದಾನೆ. ಆದ್ದರಿಂದ ಈ ಸುರೇಶ್ವರನು ವಿಶ್ವಾಸಪಾತ್ರನೆಂದು ನಮಗೆ ತೋರುವುದಿಲ್ಲ. ಗುರುಗಳೆ, ಇವನಿಂದ ವಾರ್ತಿಕವನ್ನು ಬರೆಸಬೇಡಿ.

ಯಃ ಶಕ್ನುಯಾತ್ ಕರ್ಮ ವಿಧಾತುಮೀಪ್ಸಿತಂ
ಸೋಽಯಂ ನ ಕರ್ಮಾಣಿ ವಿಹಾತುಮರ್ಹತಿ |
ಯದ್ಯಸ್ತಿ ಸಂನ್ಯಾಸವಿಧೌ ದುರಾಗ್ರಹೋ
ಜಾತ್ಯಂಧಮೂಕಾದಿರಮುಷ್ಯ ಗೋಚರಃ || ೧೩

"ಯಾವಾತನು ಇಷ್ಟವಾದ ಕರ್ಮವನ್ನು ಮಾಡಲು ಸಮರ್ಥನಾಗಿದ್ದಾನೋ ಅವನು (ಸಂನ್ಯಾಸಿಯಾಗಿ) ಕರ್ಮಗಳನ್ನು ತ್ಯಜಿಸುವುದು ಶಾಸ್ತ್ರೀಯವಲ್ಲ. ಸಂನ್ಯಾಸವು ಶಾಸ್ತ್ರ ವಿಹಿತವೆಂದು ದುರಾಗ್ರಹವಿದ್ದರೆ ಅದು ಹುಟ್ಟು ಕುರುಡ, ಮೂಕ ಮೊದಲಾದವರಿಗೆ ಸಂಬಂಧಿಸಿದ್ದು - ಎಂದು ಭಾಟ್ಟಮತವಿದೆಯಷ್ಟೆ.

ಏವಂ ಸದಾ ಭಟ್ಟಮತಾನುಸಾರಿಣೋ
ಬ್ರುವಂತ್ಯಸೌ ತನ್ಮತಪಕ್ಷಪಾತವಾನ್ |
ಏವಂ ಸ್ಥಿತೇ ಯೋಗ್ಯಮದೋ ವಿಧೀಯತಾಂ
ನ ನೋಽಸ್ತಿ ನಿರ್ಬಂಧನಮತ್ರ ಕಿಂಚನ || ೧೪

"ಭಾಟ್ಟ ಮತಾನುಸಾರಿಗಳು ಸದಾ ಈರೀತಿ ಹಲುಬುತ್ತಲೇ ಇದ್ದಾರೆ. ಈತನು ಆ ಮತದಲ್ಲಿ ಪಕ್ಷಪಾತವನ್ನಿಟ್ಟುಕೊಂಡವನು. ಹೀಗಿರುವಾಗ ಯಾವುದು ಯೋಗ್ಯವೋ ಅದನ್ನು ಮಾಡೋಣವಾಗಲಿ. ನಮ್ಮ ನಿರ್ಬಂಧವು ಸ್ವಲ್ಪವೂ ಇಲ್ಲ.

ಪುರಾ ಕಿಲಾಸ್ಮಾಸು ಸುರಾಪಗಾಯಾಃ
ಪಾರೇ ಪರಸ್ಮಿನ್ ವಿಚರತ್ಸು ಸತ್ಸು |
ಆಕಾರಯಾಮಾಸ ಭವಾನಶೇಷಾನ್
ಭಕ್ತಿಂ ಪರಿಜ್ಞಾತುಮಿವಾಸ್ಮದೀಯಾಮ್ || ೧೫

"ಹಿಂದೆ ಒಂದು ಸಲ ನಾವು ಗಂಗಾನದಿಯ ಇನ್ನೊಂದು ದಡದಲ್ಲಿ ಸಂಚರಿಸುತ್ತಿದ್ದೆವು. ಆಗ(ಮತ್ತೊಂದು ದಡದಲ್ಲಿದ್ದ) ನೀವು, ನಮ್ಮ ಭಕ್ತಿಯನ್ನು ಪರೀಕ್ಷಿಸುವುದಕ್ಕೋ ಏನೋ ಎಲ್ಲರನ್ನೂ ಬರುವಂತೆ ಕರೆದಿರಿ.

ತದಾ ತದಾಕರ್ಣ್ಯ ಸಮಾಕುಲೇಷು
ನಾವರ್ಥಮಸ್ಮಾಸು ಪರಿಭ್ರಮತ್ಸು |
ಸನಂದನಸ್ತ್ವೇಷ ವಿಯತ್ತಟಿನ್ಯಾ
ಝರೀಮಭಿಪ್ರಸ್ಥಿತ ಏವ ತೂರ್ಣಮ್ || ೧೬

"ಆಗ ನಿಮ್ಮ ಕರೆಯನ್ನು ಕೇಳಿ ಸಂಭ್ರಾಂತರಾದ ನಾವು ದೋಣಿಗೋಸ್ಕರ ಅತ್ತಿತ್ತ ಚಲಿಸುತ್ತಿರಲು, ಈ ಸನಂದನನು ಒಡನೆಯೇ ಗಂಗಾನದಿಯ ಪ್ರವಾಹದಲ್ಲಿಳಿದು ಹೊರಟೇಬಿಟ್ಟನು.

ಅನನ್ಯಸಾಧಾರಣಮಸ್ಯ ಭಾವ -
ಮಾಚಾರ್ಯವರ್ಯೋ ಭಗವತ್ಯವೇಕ್ಷ್ಯ |
ತುಷ್ಟಾ ತ್ರಿವರ್ತ್ಮಾ ಕನಕಾಂಬುಜಾನಿ
ಪ್ರಾದುಷ್ಕರೋತಿ ಸ್ಮ ಪದೇ ಪದೇ ಚ || ೧೭

"ಆಚಾರ್ಯ ಶ್ರೇಷ್ಠರಾದ ಭಗವತ್ಪಾದರಲ್ಲಿ ಆತನಿಗೆ ಇದ್ದ ಅಸಾಧಾರಣವಾದ ಭಕ್ತಿಭಾವವನ್ನು ಕಂಡು, ಸಂತುಷ್ಟಳಾದ ಗಂಗಾದೇವಿಯು ಈತನ ಒಂದೊಂದು ಹೆಜ್ಜೆಗೂ ಆಧಾರವಾಗಿ ಚಿನ್ನದ ಕಮಲಗಳನ್ನು ಒಡ್ಡಿದಳು.

ಟಿಪ್ಪಣಿ:- ತ್ರಿವರ್ತ್ಮಾ = ತ್ರಿಪಥಗಾ ಗಂಗಾ

ಪದಾನಿ ತೇಷು ಪ್ರಣಿಧಾಯ ಯುಷ್ಮತ್ -
ಸಕಾಶಮಾಗಾದ್ಯದಯಂ ಮಹಾತ್ಮಾ |
ತತೋऽತಿತುಷ್ಟೋ ಭಗವಾಂಶ್ಚಕಾರ
ನಾಮ್ನಾ ತಮೇನಂ ಕಿಲ ಪದ್ಮಪಾದಮ್ || ೧೮

"ಈ ಮಹಾತ್ಮನು ಆ ಕಮಲಗಳಮೇಲೆ ಹೆಜ್ಜೆ ಇಡುತ್ತ ನಿಮ್ಮ ಬಳಿಗೆ ಬಂದನು. ಆಗ ಪರಮಸಂತುಷ್ಟರಾದ ನೀವು ಈತನಿಗೆ ಪದ್ಮಪಾದನೆಂದು ನಾಮಕರಣ ಮಾಡಿದಿರಲ್ಲವೆ?

ಸ ಏವ ಯುಷ್ಮಚ್ಚರಣಾರವಿಂದ-
ಸೇವಾವಿನಿರ್ಧೂತಸಮಸ್ತಭೇದಃ |
ಆಜಾನಸಿದ್ಧೋऽರ್ಹತಿ ಸೂತ್ರಭಾಷ್ಯೇ
ವೃತ್ತಿಂ ವಿಧಾತುಂ ಭಗವನ್ನಗಾಧೇ || ೧೯

"ಈತನೇ ನಿಮ್ಮ ಪಾದಪದ್ಮಗಳ ಸೇವೆಯಿಂದ ಅಖಿಲ ಭೇದಬುದ್ಧಿಯನ್ನೂ ತೊಡೆದು ಹಾಕಿ ಸಹಜವಾಗಿ ಸಿದ್ಧಪುರುಷನಾಗಿದ್ದಾನೆ. ಮಹಾಸ್ವಾಮಿ, ಅಗಾಧವಾದ ಸೂತ್ರಭಾಷ್ಯಕ್ಕೆ ವೃತ್ತಿಯನ್ನು ರಚಿಸಲು ಇವನು ಸಮರ್ಥ.

ಯದ್ವಾऽಯಮಾನಂದಗಿರಿರ್ಯದುಗ್ರ-
ತಪಃಪ್ರಪನ್ನಾ ಪರಮೇಷ್ಠಿಪತ್ನೀ |
ಭವತ್ಪ್ರಬಂಧೇಷು ಯಥಾಭಿಸಂಧಿ
ವ್ಯಾಖ್ಯಾನಸಾಮರ್ಥ್ಯವರಂ ದಿದೇಶ || ೨೦

"ಅಥವಾ ಈ ಆನಂದಗಿರಿಯಾದರೂ ವೃತ್ತಿಯನ್ನು ಬರೆಯಲಿ. ಇವನ ಉಗ್ರತಪಸ್ಸಿಗೆ ಮೆಚ್ಚಿದ ಬ್ರಹ್ಮನ ರಾಣಿ ಸರಸ್ವತೀದೇವಿಯು ನಿಮ್ಮ ಪ್ರಬಂಧಗಳಿಗೆ ನಿಮ್ಮ ಆಶಯಕ್ಕೆ ಅನುಸಾರವಾಗಿ ವ್ಯಾಖ್ಯಾನಗಳನ್ನು ಬರೆಯುವ ಸಾಮರ್ಥ್ಯವನ್ನು ಅನುಗ್ರಹಿಸಿದ್ದಾಳೆ.

ಕರ್ಮೈಕತಾನಮತಿರೇಷ ಕಥಂ ಗುರೋ ತೇ
ವಿಶ್ವಾಸಪಾತ್ರಮವಪದ್ಯತ ವಿಶ್ವರೂಪಃ |
ಭಾಷ್ಯಸ್ಯ ಪದ್ಮಪದ ಏವ ಕರೋತು ಟೀಕಾಂ
ಇತ್ಯೂಚಿರೇ ರಹಸಿ ಯೋಗಿವರಂ ವಿಧೇಯಾಃ || ೨೧

ಗುರುಗಳೆ, ಕೇವಲ ಕರ್ಮಾಚರಣೆಯಲ್ಲಿಯೇ ಒಲವಿರುವ ಈ ವಿಶ್ವರೂಪನು ಹೇಗೆ ನಿಮ್ಮ ವಿಶ್ವಾಸಕ್ಕೆ ಪಾತ್ರನಾಗಿರಬಹುದು! ಸೂತ್ರಭಾಷ್ಯಕ್ಕೆ ಪದ್ಮಪಾದನೇ ಟೀಕೆಯನ್ನು ಬರೆಯುವುದುತ್ತಮ" ಎಂದು ಆ ಶಿಷ್ಯರು ಯೋಗಿಶ್ರೇಷ್ಠರಾದ ಆಚಾರ್ಯರಿಗೆ ಹೇಳಿದರು.

ಟಿಪ್ಪಣಿ:- ಸುರೇಶ್ವರರನ್ನು ವಿಶ್ವರೂಪನೆಂದು ಪೂರ್ವಾಶ್ರಮದ ಹೆಸರಿನಿಂದ ಕರೆದಿರುವುದು, ಅವನು ಕರ್ಮಠನೆಂದು ನಿಂದಿಸುವುದಕ್ಕಾಗಿ. ಅವಪದ್ಯತ = ಅಡಾಗಮವು ಬರಬೇಕಾಗಿತ್ತು.

ಅತ್ರಾಂತರೇಽಭ್ಯರ್ಣಗತಃ ಸ ತೂರ್ಣಂ
ಸನಂದನೋ ವಾಕ್ಯಮುದಾಜಹಾರ |
ಆಚಾರ್ಯ ಹಸ್ತಾಮಲಕೋಽಪಿ ಕಲ್ಪೋ
ಭವತ್ಕೃತೌ ವಾರ್ತಿಕಮೇಷ ಕರ್ತುಮ್ || ೨೨

ಈ ಸಮಯದಲ್ಲಿ ಸಮೀಪದಲ್ಲಿದ್ದ ಸನಂದನನು ಥಟ್ಟನೆ ಹೀಗೆಂದನು. "ಆಚಾರ್ಯರೆ, ನಿಮ್ಮ ಕೃತಿಗೆ ವಾರ್ತಿಕವನ್ನು ರಚಿಸಲು ಈ ಹಸ್ತಾಮಲಕನು ಸಮರ್ಥನಾಗಿದ್ದಾನೆ.

ಯತಃ ಕರಸ್ಥಾಮಲಕಾವಿಶೇಷಂ
ಜಾನಾತಿ ಸಿದ್ಧಾಂತಮಸಾವಶೇಷಮ್ |
ಅತೋ ಹ್ಯಮುಷ್ಮೈ ಭವತೈವ ಪೂರ್ವಂ
ಅದಾಯಿ ಹಸ್ತಾಮಲಕಾಭಿಧಾನಮ್ || ೨೩

ಈತನು ಸಮಸ್ತ ವೇದಾಂತಸಿದ್ಧಾಂತವನ್ನು ಕೈಯಲ್ಲಿರುವ ನೆಲ್ಲಿಕಾಯಿಯಂತೆ ತಿಳಿದಿದ್ದಾನೆ. ಆದ್ದರಿಂದಲೇ ಸ್ವತಃ ನೀವೇ ಇವನಿಗೆ ಹಸ್ತಾಮಲಕನೆಂದು ಹೆಸರಿಟ್ಟಿದ್ದೀರಿ" ಎಂದನು.

ವಾಣೀಂ ಸಮಾಕರ್ಣ್ಯ ಸನಂದನಸ್ಯ
ಸಾಮಿಸ್ಮಿತಂ ಭಾಷ್ಯಕೃದಾಬಭಾಷೇ |
ನೈಪುಣ್ಯಮನ್ಯಾದೃಶಮಸ್ಯ ಕಿಂತು
ಸಮಾಹಿತತ್ವಾನ್ನ ಬಹಿಃಪ್ರವೃತ್ತಿಃ || ೨೪

ಸನಂದನನ ಈ ನುಡಿಯನ್ನು ಕೇಳಿ ಭಾಷ್ಯಕಾರರು ಮುಗುಳ್ನಗೆ ಬೀರುತ್ತ ಇಂತೆಂದರು."ಈತನಿಗೆ ಅಸಾಧಾರಣವಾದ ಪಾಂಡಿತ್ಯವೇನೋ ಇದೆ, ಆದರೆ ಯಾವಾಗಲೂ ಸಮಾಧಿಸ್ಥನಾಗಿರುತ್ತಾನೆ. ಬಾಹ್ಯವಾದ ಕಾರ್ಯದಲ್ಲಿ ಪ್ರವೃತ್ತಿ ಇರುವುದಿಲ್ಲ.

ಅಯಂ ತು ಬಾಲ್ಯೇ ನ ಪಪಾಠ ಪಿತ್ರಾ
ನಿಯೋಜಿತಃ ಸಾದರಮಕ್ಷರಾಣಿ ।
ನ ಚೋಪನೀತೋಽಪಿ ಗುರೋಃ ಸಕಾಶಾತ್
ಅಧ್ಯೈಷ್ಟ ವೇದಾನ್ ಪರಮಾರ್ಥನಿಷ್ಠಃ ॥ ೨೫

"ಬಾಲ್ಯದಲ್ಲಿ ಈತನು ತಂದೆಯು ಪ್ರೇರಿಸಿದರೂ ಸಹ ಆದರ ಪೂರ್ವಕವಾಗಿ ಅಕ್ಷರಗಳನ್ನು ಕಲಿಯಲಿಲ್ಲ. ಉಪನಯನವಾದ ಮೇಲೆ ಸಹ ಗುರುಸಾನ್ನಿಧ್ಯದಲ್ಲಿ ವೇದಗಳನ್ನು ಅಧ್ಯಯನ ಮಾಡಲಿಲ್ಲ. ಏಕೆಂದರೆ ಪರಮಾರ್ಥವಾದ ಬ್ರಹ್ಮದಲ್ಲಿಯೇ ಇವನ ನಿಷ್ಠೆ ಇರುತ್ತಿತ್ತು.

ಬಾಲೈರ್ನ ಚಿಕ್ರೀಡ ನ ಚಾನ್ನಮೈಚ್ಛತ್
ನ ಚಾರು ವಾಚಂ ಹ್ಯವದತ್ ಕದಾಽಪಿ ।
ನಿಶ್ಚಿತ್ಯ ಭೂತೋಪಹತಂ ತಮೇನಂ
ಆನಿನ್ಯಿರೇಽಸ್ಮನ್ನಿಕಟಂ ಕದಾಚಿತ್ ॥ ೨೬

"ಮಕ್ಕಳಜೊತೆಗೆ ಆಟವನ್ನೂ ಆಡುತ್ತಿರಲಿಲ್ಲ. ತಿನ್ನಲು ಅನ್ನವನ್ನೂ ಬಯಸುತ್ತಿರಲಿಲ್ಲ. ಸರಿಯಾಗಿ ಒಂದು ಮಾತನ್ನೂ ಸಹ ಯಾವಾಗಲೂ ಆಡಿದವನಲ್ಲ. ಇವನಿಗೆ ಭೂತ ಹಿಡಿದಿದೆ ಎಂದು ನಿಶ್ಚಯಿಸಿ ಒಂದು ಸಲ ನನ್ನ ಬಳಿಗೆ ಇವನನ್ನು ಕರೆತಂದರು.

ಅಸ್ಮಾನವೇಕ್ಷ್ಯೈವ ಮುಹುಃ ಪ್ರಣಮ್ಯ
ಕೃತಾಂಜಲೌ ತಿಷ್ಠತಿ ಬಾಲಕೇಽಸ್ಮಿನ್ ।
ಇಮಾಮಪೂರ್ವಾಂ ಪ್ರಕೃತಿಂ ವಿಲೋಕ್ಯ
ವಿಸಿಷ್ಮಿಯೇ ತತ್ರ ಜನಃ ಸಮೇತಃ ॥ ೨೭

"ನಮ್ಮನ್ನು ನೋಡಿದೊಡನೆಯೇ ಈ ಬಾಲಕನು ಮತ್ತೆ ಮತ್ತೆ ಅಡ್ಡಬಿದ್ದು ನಮಸ್ಕರಿಸಿ ಕೈಮುಗಿದು ನಿಂತುಕೊಂಡನು. ಈ ಅಪೂರ್ವವಾದ ಸ್ವಭಾವವನ್ನು ನೋಡಿ ಅಲ್ಲಿ ನೆರೆದಿದ್ದ ಜನರೆಲ್ಲರೂ ಆಶ್ಚರ್ಯಪಟ್ಟರು.

ಕಸ್ತ್ವಂ ಶಿಶೋ ಕಸ್ಯ ಸುತಃ ಕುತೋ ವೇ -
ತ್ಯಸ್ಮಾಭಿರಾಚಷ್ಟ ಕಿಲೈಷ ಪೃಷ್ಟಃ ।
ಆತ್ಮಾನಮಾನಂದಘನಸ್ವರೂಪಂ
ವಿಸ್ಮಾಪಯನ್ ವೃತ್ತಮಯೈರ್ವಚೋಭಿಃ ॥ ೨೮

"ಎಲೈ ಬಾಲಕ, ನೀನು ಯಾರು? ಯಾರ ಮಗ? ಎಲ್ಲಿಂದ ಬಂದೆ? ಎಂದು ನಾವು ಪ್ರಶ್ನೆಮಾಡಲಾಗಿ ಈತನು ತಾನು ಆನಂದ ಘನನಾದ ಆತ್ಮನೆಂಬುದಾಗಿ ಶ್ಲೋಕರೂಪವಾದ ಮಾತುಗಳಿಂದ ಉತ್ತರ ಕೊಟ್ಟನು. ಈ ರೀತಿ ಅಲ್ಲಿದ್ದವರನ್ನು ವಿಸ್ಮಯಗೊಳಿಸಿದನು.

ತದಾ ಕದಾಽಪ್ಯಶ್ರುತಿಗೋಚರಂ ತದ್
ಆಕರ್ಣ್ಯ ವಾಗ್ವೈಭವಮಾತ್ಮಜಸ್ಯ ।
ಪಿತಾ ಪ್ರಪದ್ಯಾಸ್ಯ ಪರಂ ಪ್ರಹರ್ಷಂ
ಸಪ್ರಶ್ರಯಾಂ ವಾಚಮುವಾಚ ವಿಜ್ಞಃ ॥ ೨೯

"ಆಗ ಈತನ ತಂದೆಯು ಎಂದೆಂದೂ ಕಿವಿಯಲ್ಲಿ ಕೇಳದಿದ್ದ ಮಗನ ಆ ವಾಗ್ವೈಭವವನ್ನು ಕೇಳಿ ಪರಮಾನಂದವನ್ನು ಹೊಂದಿದನು. ಆ ವಿದ್ವಾಂಸನು ನಮಸ್ಕಾರಮಾಡಿ ವಿನಯದಿಂದ ಇಂತೆಂದನು.

ಜನೈರ್ಜಡತ್ವೇನ ವಿನಿಶ್ಚಿತೋಽಪಿ
ಬ್ರವೀತಿ ಯದ್ಯೇಷ ಪರಾತ್ಮತತ್ತ್ವಮ್ ।
ಪ್ರಜ್ಞೋನ್ನತಾನಾಮಪಿ ದುರ್ವಿಭಾವ್ಯಂ
ಕಿಂ ವರ್ಣ್ಯತೇಽರ್ಹನ್ ಭವತಃ ಪ್ರಭಾವಃ ॥ ೩೦

"ಪೂಜ್ಯರೆ, ಜನರೆಲ್ಲರೂ ಇವನು ಜಡನೆಂದು ನಿಶ್ಚಯಿಸಿದ್ದರೂ ಈ ಪ್ರಕಾರವಾಗಿ ಪರಮಾರ್ಥ ತತ್ತ್ವವನ್ನು ಹೇಳುತ್ತಿದ್ದಾನಲ್ಲ! ಈ ತತ್ತ್ವವು ಉನ್ನತಪ್ರಜ್ಞಾಶಾಲಿಗಳಿಗೂ ತಿಳಿಯಲು ಕಠಿಣವಾದದ್ದು. ತಮ್ಮ ಮಹಿಮೆಯನ್ನು ಏನೆಂದು ವರ್ಣಿಸಲಿ?

ಆ ಜನ್ಮನಃ ಸಂಸೃತಿಪಾಶಮುಕ್ತಃ
ಶಿಷ್ಯೋಽಸ್ತ್ವಯಂ ವಿಶ್ವಗುರೋಸ್ತವೈವ ।
ಪ್ರಫುಲ್ಲರಾಜೀವವನೇ ವಿಹಾರೀ
ಕಥಂ ರಮೇತ ಕ್ಷುರಕೇ ಮರಾಲಃ ॥ ೩೧

ಹುಟ್ಟಿದಂದಿನಿಂದಲೂ ಸಂಸಾರ ಪಾಶದಿಂದ ಮುಕ್ತನಾದವನು ಈತನು. ಜಗದ್ಗುರುಗಳಾದ ನಿಮಗೆ ಇವನು ಶಿಷ್ಯನಾಗಿರಲಿ. ಅರಳಿದ ತಾವರೆಗಳಿರುವ ಸರಸ್ಸಿನಲ್ಲಿ ವಿಹರಿಸುವ ಹಂಸವು ನೆಗ್ಗಿಲು ಮುಳ್ಳಿನ ಮರದಲ್ಲಿ ಹೇಗೆ ಸಂತೋಷದಿಂದ ಇದ್ದೀತು?" ಎಂದನು.

ಟಿಪ್ಪಣಿ:- ಕ್ಷುರಕ = ನೆಗ್ಗಿಲು ಮರ; ಕೊಳವಳಿಕೆ ಗಿಡ. ಇದಕ್ಕೆ ಇಕ್ಷುರಕ ಎಂಬ ರೂಪಾಂತರವೂ ಉಂಟು.

ವಿಜ್ಞಾಪ್ಯ ತಸ್ಮಿನ್ನಿತಿ ನಿರ್ಗತೇಽಸೌ
ತದಾಪ್ರಭೃತ್ಯತ್ರ ವಸತ್ಯುದಾರಃ ।
ಆ ಶೈಶವಾದಾತ್ಮವಿಲೀನಚೇತಾಃ
ಕಥಂ ಪ್ರವರ್ತೇತ ಮಹಾಪ್ರಬಂಧೇ ॥ ೩೨

ಹೀಗೆ ವಿಜ್ಞಾಪಿಸಿ ಆತನು ಹೊರಟುಹೋಗಲಾಗಿ ಅಲ್ಲಿಂದ ಮೊದಲ್ಗೊಂಡು ಈ ಮಹಾತ್ಮನು ನಮ್ಮೊಡನಿದ್ದಾನೆ. ಶೈಶವದಿಂದಲೂ ಪರಮಾತ್ಮನಲ್ಲಿ ನೆಟ್ಟ ಮನಸ್ಸುಳ್ಳ ಈತನು ಒಂದು ಮಹಾ ಗ್ರಂಥವನ್ನು ರಚಿಸುವ ಕಾರ್ಯದಲ್ಲಿ ಹೇಗೆ ಪ್ರವೃತ್ತನಾದಾನು?" ಎಂದರು.

ಶ್ರುತ್ವೇತಿ ಪಪ್ರಚ್ಛುರಮುಂ ವಿನೇಯಾಃ
ಸ್ವಾಮಿನ್ ವಿನೈವ ಶ್ರವಣಾದ್ಯುಪಾಯೈಃ ।
ಅಲಬ್ಧ ವಿಜ್ಞಾನಮಯಂ ಕಥಂ ವಾ
ಭವಾನಿದಂ ಸಾಧು ವಿದಾಂಕರೋತು ॥ ೩೩

ಗುರುಗಳ ಈ ನುಡಿಯನ್ನು ಕೇಳಿ ಆ ಶಿಷ್ಯರು ಆಚಾರ್ಯರನ್ನು ಕುರಿತು "ಮಹಾಸ್ವಾಮಿ, ಶ್ರವಣ ಮನನಾದಿ ಉಪಾಯಗಳಿಲ್ಲದೆ ಈತನು ಬ್ರಹ್ಮಜ್ಞಾನವನ್ನು ಪಡೆದದ್ದು ಹೇಗೆ? ಇದನ್ನು ನೀವೇ ಸರಿಯಾಗಿ ಬಲ್ಲಿರಿ" ಎಂದರು.

ತಾನಬ್ರವೀತ್ ಸಂಯಮಿಚಕ್ರವರ್ತೀ
ಕಶ್ಚಿತ್ ಪುರಾ ಯಾಮುನತೀರವರ್ತೀ ।
ಬಭೂವ ಸಿದ್ಧಃ ಕಿಲ ಸಾಧುವೃತ್ತಃ
ಸಾಂಸಾರಿಕೇಭ್ಯಃ ಸುತರಾಂ ನಿವೃತ್ತಃ ॥ ೩೪

ಆಗ ಯತೀಶ್ವರರಾದ ಶ್ರೀಶಂಕರರು ಅವರಿಗೆ ಇಂತೆಂದರು. "ಹಿಂದೆ ಯಮುನಾ ನದೀತೀರದಲ್ಲಿ ಸದಾಚಾರನಾದ ಒಬ್ಬ ಸಿದ್ಧಪುರುಷನಿದ್ದನು. ಅವನು ಪ್ರಾಪಂಚಿಕ ವಿಚಾರಗಳಿಂದ ಸಂಪೂರ್ಣ ನಿವೃತ್ತನಾಗಿದ್ದನು.

ತಸ್ಯಾಂತಿಕೇ ಕಾಚನ ವಿಪ್ರಕನ್ಯಾ
ದ್ವಿಹಾಯನಂ ಜಾತು ನಿವೇಶ್ಯ ಬಾಲಮ್ ।
ಕ್ಷಣಂ ಪ್ರತೀಕ್ಷಸ್ವ ಶಿಶುಂ ದ್ವಿಜೇತಿ
ಸ್ನಾತುಂ ಸಖೀಭಿಃ ಸಹ ನಿರ್ಜಗಾಮ ॥ ೩೫

"ಒಮ್ಮೆ ಒಬ್ಬ ಬ್ರಾಹ್ಮಣಸ್ತ್ರೀಯು ಆತನ ಬಳಿಯಲ್ಲಿ ಎರಡು ವರ್ಷದ ಒಬ್ಬ ಬಾಲಕನನ್ನು ಬಿಟ್ಟು "ಬ್ರಾಹ್ಮಣ, ಸ್ವಲ್ಪ ಹೊತ್ತು ಈ ಮಗವನ್ನು ನೋಡಿಕೊ" ಎಂದು ಹೇಳಿ ಗೆಳತಿಯರೊಡನೆ ಸ್ನಾನಕ್ಕೆ ಹೋದಳು.

ಅತ್ರಾಂತರೇ ದೈವವಶಾತ್ಸ ಬಾಲ -
ಶ್ಚಂಕ್ರಮ್ಯಮಾಣೋ ನಿಪಪಾತ ನದ್ಯಾಮ್ |
ಮೃತಂ ತಮಾದಾಯ ಶಿಶುಂ ತದೀಯಾ-
ಶ್ಚಕ್ರಂದುರುಚ್ಚೈಃ ಪುರತೋ ಮಹರ್ಷೇಃ || ೩೬

"ಈ ಸಮಯದಲ್ಲಿ ಆ ಬಾಲಕನು ಅಂಬೆಗಾಲಿಡುತ್ತ ಹೋಗಿ ದೈವವಶದಿಂದ ಹೊಳೆಗೆ ಬಿದ್ದನು. ಆಮೇಲೆ ಮಗುವಿನ ಬಂಧುಗಳು ಮೃತನಾದ ಶಿಶುವನ್ನು ಎತ್ತಿಕೊಂಡು ಬಂದು ಆ ಮಹರ್ಷಿಯೆದುರಿಗೆ ಗಟ್ಟಿಯಾಗಿ ಅಳತೊಡಗಿದರು.

ಆಕ್ರೋಶಮಾಕರ್ಣ್ಯ ಮುನಿಃ ಸ ತೇಷಾಂ
ಅತ್ಯಂತಖಿನ್ನೋ ನಿಜಯೋಗಭೂಮ್ನಾ |
ಪ್ರಾವಿಕ್ಷದಂಗಂ ಪೃಥುಕಸ್ಯ ತಸ್ಯ
ಸ ಏಷ ಹಸ್ತಾಮಲಕಸ್ತಪಸ್ವೀ || ೩೭

"ಆ ಮಹರ್ಷಿಯು ಅವರ ಗೋಳನ್ನು ಕೇಳಿ ಅತ್ಯಂತಖಿನ್ನನಾದನು. ತನ್ನ ಯೋಗಶಕ್ತಿಯಿಂದ ಆ ಬಾಲಕನ ಶರೀರವನ್ನು ಪ್ರವೇಶಿಸಿಬಿಟ್ಟನು. ಆತನೇ ತಪಸ್ವಿಯಾದ ಈ ಹಸ್ತಾಮಲಕ.

ಟಿಪ್ಪಣಿ:- ದಕ್ಷಿಣದ ಕೊಲ್ಲೂರಿನ ಸಮೀಪದಲ್ಲಿರುವ ಶ್ರೀಬಲಿ(ಶಿವಳ್ಳಿ)ಯಲ್ಲಿ ಹಸ್ತಾಮಲಕನ ತಂದೆ ಪ್ರಭಾಕರನಿದ್ದನೆಂದು ಹಿಂದೆ(೧೩-೪೩) ಹೇಳಿದೆ. ಮಗುವಿನ ತಂದೆ ತಾಯಿಗಳು ಯಾತ್ರಾರ್ಥಿಗಳಾಗಿ ಉತ್ತರದೇಶಕ್ಕೆ ಹೋದಾಗ ಯಮುನಾತೀರದಲ್ಲಿ ಈ ಘಟನೆ ಸಂಭವಿಸಿರಬೇಕು.

ತಸ್ಮಾದಯಂ ವೇದ ವಿನೋಪದೇಶಂ
ಶ್ರುತೀರನಂತಾಃ ಸಕಲಾಃ ಸ್ಮೃತೀಶ್ಚ |
ಸರ್ವಾಣಿ ಶಾಸ್ತ್ರಾಣಿ ಪರಂ ಚ ತತ್ತ್ವ -
ಮಜ್ಞಾತಮೇತೇನ ನ ಕಿಂಚಿದಸ್ತಿ || ೩೮

"ಆದ್ದರಿಂದ ಈತನು ಉಪದೇಶವಿಲ್ಲದೆಯೇ ಅನಂತ ವೇದಗಳನ್ನೂ ಸಕಲಸ್ಮೃತಿಗಳನ್ನೂ ಬಲ್ಲವನಾಗಿದ್ದಾನೆ. ಸರ್ವಶಾಸ್ತ್ರಗಳನ್ನು ತಿಳಿದಿದ್ದಾನಲ್ಲದೆ ಪರತತ್ತ್ವವನ್ನು ಅರಿತಿದ್ದಾನೆ. ಇವನಿಗೆ ಗೊತ್ತಿಲ್ಲದ್ದು ಯಾವುದೂ ಇಲ್ಲ.

ತತ್ತಾದೃಗಾತ್ಮಾ ನ ಬಹಿಃ ಪ್ರವೃತ್ತೌ
ನಿಯೋಗಮರ್ಹತ್ಯಯಮತ್ರ ವೃತ್ತೌ |
ಸ ಮಂಡನಸ್ತ್ವರ್ಹತಿ ಬುದ್ಧತತ್ತ್ವಃ
ಸರಸ್ವತೀಸಾಕ್ಷಿಕಸರ್ವವಿತ್ತ್ವಃ || ೩೯

"ಅಂತಹ ಮಹಾತ್ಮನಾದ ಹಸ್ತಾಮಲಕನಿಗೆ, ಬಾಹ್ಯಕಾರ್ಯದಲ್ಲಿ ಪ್ರವೃತ್ತನಾಗಿ ಭಾಷ್ಯಕ್ಕೆ ವೃತ್ತಿಯನ್ನು ಬರೆಯುವಂತೆ ಆದೇಶಿಸುವುದು ಯೋಗ್ಯವಲ್ಲ. ಆ ಮಂಡನನು(ಸುರೇಶ್ವರನು) ಶಾಸ್ತ್ರರಹಸ್ಯವನ್ನು ಬಲ್ಲವನಾದ್ದರಿಂದ ವಾರ್ತಿಕವನ್ನು ರಚಿಸಲು ಅರ್ಹನು. ಆತನು ಸರ್ವಶಾಸ್ತ್ರವನ್ನೂ ಸರಿಯಾಗಿ ಅರಿತಿದ್ದಾನೆ ಎಂಬುದಕ್ಕೆ ಸಾಕ್ಷಾತ್ ಸರಸ್ವತಿಯೇ ಸಾಕ್ಷಿಯಾಗಿದ್ದಾಳೆ.

ತತ್ತಾದೃಶಾತ್ಯುಜ್ಜ್ವಲಕೀರ್ತಿರಾಶಿಃ
ಸಮಸ್ತಶಾಸ್ತ್ರಾರ್ಣವ ಪಾರದರ್ಶೀ |
ಆಸಾದಿತೋ ಧರ್ಮಹಿತಃ ಪ್ರಯತ್ನಾತ್
ಸ ಚೇನ್ನ ರೋಚೇತ ನ ದೃಶ್ಯತೇಽನ್ಯಃ || ೪೦

"ಅಷ್ಟೊಂದು ಉಜ್ಜ್ವಲಕೀರ್ತಿಶಾಲಿಯೂ ಸಮಸ್ತಶಾಸ್ತ್ರಸಾಗರಗಳ ಪಾರವನ್ನು ಕಂಡವನೂ ಕರ್ತವ್ಯನಿಷ್ಠನೂ ಆದ ಒಬ್ಬ ವಿದ್ವಾಂಸನು ಬಹುಶ್ರಮದಿಂದ ನಮಗೆ ದೊರಕಿದ್ದಾನೆ. ಅವನು ನಿಮಗೆ ರುಚಿಸದೆ ಹೋದರೆ, ಇನ್ನೊಬ್ಬನು ನನಗೆ ಕಾಣಿಸುವುದಿಲ್ಲ.

ಅಹಂ ಬಹೂನಾಮನಭೀಷ್ಟಕಾರ್ಯಂ
ನ ಕಾರಯಿಷ್ಯೇ ಹಿ ಮಹಾನಿಬಂಧೇ |
ಕಿಂ ಚಾತ್ರ ಸಂಶೀತಿರಭೂನ್ಮಮಾತೋ
ಯದೇಕಕಾರ್ಯೇ ಬಹವಃ ಪ್ರತೀಪಾಃ || ೪೧

ಒಂದು ಮಹಾಗ್ರಂಥದ ವಿಷಯದಲ್ಲಿ ಬಹಳ ಜನರಿಗೆ ಬೇಡವಾದ ಕಾರ್ಯವನ್ನು ನಾನು ಮಾಡಿಸುವುದಿಲ್ಲ, ಮತ್ತು (ಇದು ನಡೆಯುವುದರಲ್ಲಿ) ನನಗೆ ಸಂದೇಹ ಹುಟ್ಟಿತು. ಒಂದು ಕಾರ್ಯದಲ್ಲಿ ತೊಡಗಿದಾಗ ಬಹುಜನರು ವಿರೋಧಿಗಳಾದರು!" ಎಂದರು.

ಭವನ್ನಿದೇಶಾದ್ಭಗವನ್ ಸನಂದನಃ
ಕರಿಷ್ಯತೇ ಭಾಷ್ಯನಿಬಂಧಮೀಪ್ಸಿತಮ್ |
ಸ ಬ್ರಹ್ಮಚರ್ಯಾದುರರೀಕೃತಾಶ್ರಮೋ
ಮತಿಪ್ರಕರ್ಷೋ ವಿದಿತೋ ಹಿ ಸರ್ವತಃ || ೪೨

ಅದಕ್ಕೆ ಆ ಶಿಷ್ಯರು "ಭಗವನ್, ತಾವು ಆಜ್ಞೆಮಾಡಿದರೆ ಉದ್ದಿಷ್ಟವಾದ ಭಾಷ್ಯಸಂಬಂಧಿ ಗ್ರಂಥವನ್ನು ಸನಂದನನು ರಚಿಸುವನು. ಅವನು ಬ್ರಹ್ಮಚರ್ಯದಿಂದಲೇ ನೇರವಾಗಿ ಸಂನ್ಯಾಸಾಶ್ರಮವನ್ನು ಸ್ವೀಕರಿಸಿದವನು. ಅವನ ಬುದ್ಧಿವೈಭವವು ಸರ್ವರಿಗೂ ವಿದಿತವಾಗಿಯೇ ಇದೆ" ಎಂದರು.

ಸನಂದನೋ ನಂದಯಿತಾ ಜನಾನಾಂ
ನಿಬಂಧಮೇಕಂ ವಿದಧಾತು ಭಾಷ್ಯೇ |
ನ ವಾರ್ತಿಕಂ ತತ್ತು ಪರಪ್ರತಿಜ್ಞಂ
ವ್ಯಧಾತ್ ಪ್ರತಿಜ್ಞಾಂ ಸ ಹಿ ನೂತ್ನದೀಕ್ಷಃ || ೪೩

ಆಗ ಆಚಾರ್ಯರು "ಸನಂದನನು ಎಲ್ಲ ಜನರಿಗೂ ಬೇಕಾದವನು. ಆತನು ನನ್ನ ಭಾಷ್ಯಕ್ಕೆ ಒಂದು ನಿಬಂಧವನ್ನು ಬರೆಯಲಿ. ಆದರೆ ವಾರ್ತಿಕವನ್ನು ಬರೆಯುವುದು ಬೇಡ. ಬೇರೆಯವರು ಬರೆಯುವುದಾಗಿ ಒಪ್ಪಿಕೊಂಡ ಗ್ರಂಥವದು. ಹೊಸದಾಗಿ ಸಂನ್ಯಾಸದೀಕ್ಷೆಯನ್ನು ವಹಿಸಿಕೊಂಡ ಆತನು (ಸುರೇಶ್ವರನು) ವಾರ್ತಿಕವನ್ನು ರಚಿಸುವುದಾಗಿ ಅಂಗೀಕರಿಸಿದ್ದಾನಲ್ಲವೆ?" ಎಂದು ತಿಳಿಸಿದರು.

ಟಿಪ್ಪಣಿ:- ನಿಬಂಧ = ಅರ್ಥವನ್ನು ವಿವರಿಸುವ ವ್ಯಾಖ್ಯಾನ, ಟೀಕೆ ಅಥವಾ ಸ್ವತಂತ್ರಗ್ರಂಥ. ವಾರ್ತಿಕ = ಉಕ್ತಾನುಕ್ತದುರುಕ್ತ ಚಿಂತೆಗಳಿಂದ ಕೂಡಿದ ಮಹಾಪ್ರಬಂಧ.

ಆದಿಶ್ಯೇತ್ಥಂ ಶಿಷ್ಯಸಂಘಂ ಯತೀಂದ್ರಃ
ಪ್ರೋವಾಚೇತ್ಥಂ ನೂತ್ನಭಿಕ್ಷುಂ ರಹಸ್ತಮ್ |
ಭಾಷ್ಯೇ ಭಿಕ್ಷೋ ಮಾ ಕೃಥಾ ವಾರ್ತಿಕಂ ತ್ವಂ
ನೇಮೇ ಶಿಷ್ಯಾಃ ಸೇಹಿರೇ ದುರ್ವಿದಗ್ಧಾಃ || ೪೪

ಈ ಪ್ರಕಾರವಾಗಿ ಯತೀಂದ್ರರು ಆ ಶಿಷ್ಯಸಮುದಾಯಕ್ಕೆ ತಿಳಿಸಿ ನೂತನವಾಗಿ ಸಂನ್ಯಾಸಿಗಳಾದ ಸುರೇಶ್ವರರ ಬಳಿಗೆ ಹೋಗಿ ರಹಸ್ಯವಾಗಿ ಹೀಗೆ ನುಡಿದರು. "ಓ ಭಿಕ್ಷುವೇ, ನೀನು ಸೂತ್ರಭಾಷ್ಯಕ್ಕೆ ವಾರ್ತಿಕವನ್ನು ರಚಿಸುವುದು ಬೇಡ. ದುರಹಂಕಾರಿಗಳಾದ ಈ ಶಿಷ್ಯರು ಅದನ್ನು ಸಹಿಸದೇ ಹೋದರು.

ತಾತ್ಪರ್ಯಂ ತೇ ಗೇಹಿಧರ್ಮೇಷು ದೃಷ್ಟ್ವಾ
ತತ್ಸಂಸ್ಕಾರಂ ಸಾಂಪ್ರತಂ ಶಂಕಮಾನಾಃ |
ಭಾಷ್ಯೇ ಕೃತ್ವಾ ವಾರ್ತಿಕಂ ಯೋಜಯೇತ್ಸ
ಭಾಷ್ಯಂ ಪ್ರಾಹುಃ ಸ್ವೀಯಸಿದ್ಧಾಂತಶೇಷಮ್ || ೪೫

"ಗೃಹಸ್ಥ ಧರ್ಮಗಳಲ್ಲಿ ಹಿಂದೆ ನಿನಗಿದ್ದ ತಾತ್ಪರ್ಯವೇ ಸಂಸ್ಕಾರರೂಪದಲ್ಲಿ ಈಗಲೂ ಇದೆ ಎಂದು ಶಂಕಿಸುತ್ತಿದ್ದಾರೆ. -ಆತನು ಭಾಷ್ಯಕ್ಕೆ ವಾರ್ತಿಕವನ್ನು ಬರೆದು ಅದನ್ನು ತನ್ನ ಹಿಂದಿನ ಕರ್ಮ ಸಿದ್ಧಾಂತಕ್ಕೆ ವೇದಾಂತವು ಅಂಗವೆಂದು ಯೋಜಿಸಿಬಿಟ್ಟಾನು.

ನಾಸ್ತ್ಯೇವಾಸಾವಾಶ್ರಮಸ್ತುರ್ಯ ಇತ್ಥಂ
ಸಿದ್ಧಾಂತೋಽಯಂ ತಾವಕೋ ವೇದಸಿದ್ಧಃ |
ದ್ವಾರಿ ದ್ವಾಃಸ್ಥೈರ್ವಾರಿತಾ ಭಿಕ್ಷಮಾಣಾ
ವೇಶ್ಮಾಂತಸ್ತೇ ನ ಪ್ರವೇಶಂ ಲಭಂತೇ || ೪೬

"ನಾಲ್ಕನೆಯ ಸಂನ್ಯಾಸಾಶ್ರಮ ಎಂಬುದೇ ಇಲ್ಲ. ಇದು ವೇದದ ಸಿದ್ಧಾಂತವೆಂದು ನಿನ್ನ ಹಿಂದಿನ ಮತವಾಗಿತ್ತು. ಮನೆಯ ಬಾಗಿಲಿಗೆ ಭಿಕ್ಷೆಗಾಗಿ ಯತಿಗಳು ಬಂದರೆ ದ್ವಾರಪಾಲಕರು ತಡೆದು ಬಿಡುತ್ತಿದ್ದರು. ನಿನ್ನ ಆ ಮನೆಯೊಳಕ್ಕೆ ಅವರಿಗೆ ಪ್ರವೇಶವು ಲಭಿಸುತ್ತಿರಲಿಲ್ಲ.

ಇತ್ಯಾದ್ಯಾಂ ತಾಂ ಕಿಂವದಂತೀಂ ವಿದಿತ್ವಾ
ತೇಷಾಂ ನಾಽಽಸೀತ್ಪ್ರತ್ಯಯಸ್ತ್ವಯ್ಯನಲ್ಪೇ |
ಸ್ವಾತಂತ್ರ್ಯಾತ್ತ್ವಂ ಗ್ರಂಥಮೇಕಂ ಮಹಾತ್ಮನ್
ಕೃತ್ವಾ ಮಹ್ಯಂ ದರ್ಶಯಾಧ್ಯಾತ್ಮನಿಷ್ಠಮ್ || ೪೭

"ಇವೇ ಮೊದಲಾದ ಸುದ್ದಿಯನ್ನು ತಿಳಿದ ಅವರು ಮಹಾತ್ಮನಾದ ನಿನ್ನಲ್ಲಿಯೂ ನಂಬಿಕೆಯನ್ನೇ ತಳೆದಿಲ್ಲ. ಹೇ ಮಹಾತ್ಮನೆ, ನೀನು ಅಧ್ಯಾತ್ಮ ಪ್ರತಿಪಾದಕವಾದ ಒಂದು ಗ್ರಂಥವನ್ನು ಸ್ವತಂತ್ರವಾಗಿ ರಚಿಸಿ ನನಗೆ ತೋರಿಸು.

ವಿದ್ವನ್ ಯದ್ವತ್ಪ್ರತ್ಯಯಃ ಸ್ಯಾದಮೀಷಾಂ
ಶಿಷ್ಯಾಣಾಂ ನೋ ಗ್ರಂಥಸಂದರ್ಶನೇನ |
ಇತ್ಯುಕ್ತ್ವೇಮಂ ವಾರ್ತಿಕಂ ಸೂತ್ರಭಾಷ್ಯೇ
ನಾಭೂದ್ದಾಹೇತ್ಯಾಪ ಖೇದಂ ಚ ಕಿಂಚಿತ್ || ೪೮

ಪಂಡಿತೋತ್ತಮ, ಆ ಗ್ರಂಥವನ್ನು ನೋಡಿ ನಮ್ಮ ಈ ಶಿಷ್ಯರಿಗೆ ನಿನ್ನಲ್ಲಿ ವಿಶ್ವಾಸ ಹುಟ್ಟುವಂತೆ ಆ ಗ್ರಂಥವಿರಲಿ." ಎಂದು ಹೇಳಿದರು. ಹೀಗೆ ಸುರೇಶ್ವರಾಚಾರ್ಯರಿಗೆ ನುಡಿದು ನನ್ನ ಸೂತ್ರಭಾಷ್ಯಕ್ಕೆ ವಾರ್ತಿಕ ವಾಗಲಿಲ್ಲ, ಅಯ್ಯೋ ಎಂದು ಚಿಂತಿಸುತ್ತ ಆಚಾರ್ಯರು ಸ್ವಲ್ಪ ಖಿನ್ನರಾದರು.

ಶಿಷ್ಯೋಕ್ತಿಭಿಃ ಶಿಥಿಲಿತಾತ್ಮ ಮನೋರಥೋಽಸಾ-
ವೇನಂ ಸ್ವತಂತ್ರಕೃತಿನಿರ್ಮಿತಯೇ ನ್ಯಯುಂಕ್ತ |
ನೈಷ್ಕರ್ಮ್ಯಸಿದ್ಧಿಮಚಿರಾದ್ವಿದಧತ್ಸ ಚೇತ್ಥಂ
ನ್ಯಾಯ್ಯಾಮವಿಂದತ ಸುರೇಶ್ವರದೇಶಿಕಾಖ್ಯಾಮ್ || ೪೯

ಶಿಷ್ಯರ ಮಾತುಗಳಿಂದ ಶ್ರೀಶಂಕರರ ಮನೋರಥವು ಸಡಿಲವಾಯಿತು. ಅವರು ಈ ಪ್ರಕಾರ ಸ್ವತಂತ್ರ ಗ್ರಂಥವನ್ನು ಬರೆಯಬೇಕಂದು ಸುರೇಶ್ವರರನ್ನು ನಿಯೋಜಿಸಿದರು. ಅನಂತರ ಸುರೇಶ್ವರರು ಶೀಘ್ರದಲ್ಲಿಯೇ ನೈಷ್ಕರ್ಮ್ಯಸಿದ್ಧಿ ಎಂಬ ಗ್ರಂಥವನ್ನು ಸ್ವತಂತ್ರವಾಗಿ ರಚಿಸಿದರು. ಆ ಗ್ರಂಥದ ಘನತೆಗೆ ಅನುಗುಣವಾಗಿ ಅವರಿಗೆ ಸುರೇಶ್ವರಾಚಾರ್ಯ ಎಂಬ ಹೆಸರು ನ್ಯಾಯಪ್ರಾಪ್ತವಾಗಿ ಸಾರ್ಥಕವಾಯಿತು.

**ಟಿಪ್ಪಣಿ :- ಸುರೇಶ್ವರಾಚಾರ್ಯ = ಬೃಹಸ್ಪತಿ.**

ನೈಷ್ಕರ್ಮ್ಯಸಿದ್ಧಿಮಥ ತಾಂ ನಿರವದ್ಯಯುಕ್ತಿಂ
ನಿಷ್ಕರ್ಮತತ್ತ್ವವಿಷಯಾವಗತಿಪ್ರಧಾನಾಮ್ ।
ಆದ್ಯಂತ ಹೃದ್ಯಪದಬಂಧವತೀಮುದಾರಾ -
ಮಾದ್ಯಂತಮೈಕ್ಷತತರಾಂ ಪರಿತುಷ್ಟಚೇತಾಃ ॥ ೫೦

ನಿಷ್ಕರ್ಮವಾದ ಪರತತ್ತ್ವದ ಸಮ್ಯಗ್ ಜ್ಞಾನವೇ ಪ್ರಧಾನವೆಂದು ಪ್ರತಿಪಾದಿಸುವ ಆ ನೈಷ್ಕರ್ಮ್ಯಸಿದ್ಧಿಯು ನಿರ್ದೋಷವಾದ ಯುಕ್ತಿಗಳಿಂದ ಭೂಷಿತವಾಗಿತ್ತು. ಮೊದಲಿನಿಂದ ತುದಿಯವರೆಗೆ ಮನೋಹರವಾದ ಪದಬಂಧವುಳ್ಳದ್ದಾಗಿ ಗಂಭೀರಾರ್ಥವುಳ್ಳ ಆ ಗ್ರಂಥವನ್ನು ಆಚಾರ್ಯರು ಸಂತುಷ್ಟ ಚಿತ್ತರಾಗಿ ಆಸಕ್ತಿಯಿಂದ ನೋಡಿದರು.

ಗ್ರಂಥಂ ದೃಷ್ಟ್ವಾ ಮೋದಮಾನೋ ಮುನೀಂದ್ರ -
ಸ್ತಂ ಚಾನ್ಯೇಭ್ಯೋ ದರ್ಶಯಾಮಾಸ ಹೃದ್ಯಮ್ ।
ತೇಷಾಂ ಚಾಽಽಸೀತ್ಪ್ರತ್ಯಯಸ್ತದ್ವದಸ್ಮಿನ್
ಯದ್ವಚ್ಚಾನ್ಯಸ್ತತ್ತ್ವವಿದ್ಯಃ ಸ ನೇತಿ ॥ ೫೧

ಆ ಗ್ರಂಥವನ್ನು ನೋಡಿ ಆನಂದ ತುಂದಿಲರಾದ ಯತೀಂದ್ರರು ಮನೋಹರವಾದ ಆ ರಚನೆಯನ್ನು ಅನ್ಯಶಿಷ್ಯರಿಗೂ ತೋರಿಸಿದರು. ಈತನಿಗಿಂತ ಬೇರೆ ಯಾವನೂ ಇವನಷ್ಟು ತತ್ತ್ವವಿದನಲ್ಲ -ಎಂಬ ವಿಶ್ವಾಸವು ಆ ಶಿಷ್ಯರಿಗೆ ಈ ಶಿಷ್ಯನ ವಿಷಯದಲ್ಲಿ ಹುಟ್ಟಿತು!

ಯತ್ರಾದ್ಯಾಪಿ ಶ್ರೂಯತೇ ಮಸ್ಕರೀಂದ್ರೈ -
ರ್ನಿಷ್ಕರ್ಮಾಽಽತ್ಮಾ ಯತ್ರ ನೈಷ್ಕರ್ಮ್ಯಸಿದ್ಧಿಃ ।
ತನ್ನಾಮ್ನಾಽಯಂ ವವೃಧೇ ಗ್ರಂಥವರ್ಯ-
ಸ್ತನ್ಮಾಹಾತ್ಮ್ಯಾತ್ ಸರ್ವಲೋಕಾದೃತೋಽಭೂತ್ ॥ ೫೨

ಆತ್ಮನು ನಿಷ್ಕರ್ಮನೆಂದು ಆ ಗ್ರಂಥದಲ್ಲಿ ಪ್ರತಿಪಾದಿತವಾಗಿರುವುದನ್ನು ಅನೇಕ ಯತೀಶ್ವರರು ಈಗಲೂ ಶ್ರವಣಮಾಡುತ್ತಿದ್ದಾರೆ. ಅದರಲ್ಲಿ ನೈಷ್ಕರ್ಮ್ಯವಾದ ಮೋಕ್ಷದ ಸಿದ್ಧಿಯನ್ನು ಪ್ರತಿಪಾದಿಸಲಾಗಿದೆ. ಆದ್ದರಿಂದ ಆ ಗ್ರಂಥರತ್ನವು ನೈಷ್ಕರ್ಮ್ಯ ಸಿದ್ಧಿಯೆಂಬ

ಹೆಸರಿನಿಂದ ವಿಖ್ಯಾತವಾಯಿತು. ತನ್ನ ಮಹಿಮೆಯಿಂದಲೇ ಅದು ಎಲ್ಲೆಲ್ಲಿಯೂ ಆದರವನ್ನು ಪಡೆದುಕೊಂಡಿತು.

ಆಚಾರ್ಯವಾಕ್ಯೇನ ವಿಧಿತ್ಸಿತೇಽಸ್ಮಿನ್
ವಿಘ್ನಂ ಯದನ್ಯೇ ವ್ಯಧುರುತ್ಸಸರ್ಜ |
ಶಾಪಂ ಕೃತೇಽಸ್ಮಿನ್ ಕೃತಮಪ್ಯುದಾರ್ಯೈಃ
ತದ್ವಾರ್ತಿಕಂ ನ ಪ್ರಸರೇತ್ ಪೃಥಿವ್ಯಾಮ್ || ೫೩

ಆಚಾರ್ಯರ ಆಜ್ಞೆಯಂತೆ ಸೂತ್ರಭಾಷ್ಯಕ್ಕೆ ವಾರ್ತಿಕವನ್ನು ರಚಿಸಬೇಕೆಂದು ಉದ್ದೇಶಿಸಿದರೂ ಅನ್ಯರು ಇದಕ್ಕೆ ವಿಘ್ನವನ್ನು ಮಾಡಿದರು - ಎಂಬ ಬೇಸರದಿಂದ ಸುರೇಶ್ವರರು "ಮುಂದೆ ಯಾವ ವಿದ್ವಾಂಸರಾದರೂ ಸೂತ್ರಭಾಷ್ಯಕ್ಕೆ ವಾರ್ತಿಕವನ್ನು ಬರೆದರೆ ಅದು ಲೋಕದಲ್ಲಿ ಪ್ರಸಿದ್ಧವಾಗದೆ ಹೋಗಲಿ!" ಎಂದು ಶಪಿಸಿದರು.

ನೈಷ್ಕರ್ಮ್ಯಸಿದ್ಧ್ಯಾಖ್ಯನಿಬಂಧಮೇಕಂ
ಕೃತ್ವಾಽಽತ್ಮಪೂಜ್ಯಾಯ ನಿವೇದ್ಯ ಚಾಽಽಪ್ತ್ವಾ |
ವಿಶ್ವಾಸಮುಕ್ತ್ವಾಽಥ ಪುನರ್ಬಭಾಷೇ
ಸ ವಿಶ್ವರೂಪೋ ಗುರುಮಾತ್ಮದೇವಮ್ || ೫೪

ಹಿಂದೆ ವಿಶ್ವರೂಪನೆಂದು ಹೆಸರಿದ್ದ ಸುರೇಶ್ವರರು ನೈಷ್ಕರ್ಮ್ಯಸಿದ್ಧಿ ಎಂಬ ಈ ನಿಬಂಧವನ್ನು ಬರೆದು ತಮಗೆ ಪೂಜ್ಯರಾದ ಶ್ರೀಶಂಕರರಿಗೆ ತೋರಿಸಿ ಎಲ್ಲರ ವಿಶ್ವಾಸವನ್ನೂ ಪಡೆದರು. ಅನಂತರ ತಮ್ಮ ದೇವತೆ ಎಂದು ಭಾವಿಸಿದ್ದ ಗುರುಗಳನ್ನು ಕುರಿತು 'ಆಚಾರ್ಯರೆ' ಎಂದು ಸಂಬೋಧಿಸಿ ಹೀಗೆ ಹೇಳಿದರು.

ನ ಖ್ಯಾತಿಹೇತೋರ್ನ ಚ ಲಾಭಹೇತೋ-
ರ್ನಾಪ್ಯರ್ಚನಾಯೈ ವಿಹಿತಃ ಪ್ರಬಂಧಃ |
ನೋಲ್ಲಂಘನೀಯಂ ವಚನಂ ಗುರೂಣಾಂ
ನೋಲ್ಲಂಘನೇ ಸ್ಯಾದ್ಗುರು ಶಿಷ್ಯಭಾವಃ || ೫೫

"ನಾನು ಈ ನಿಬಂಧವನ್ನು ರಚಿಸಿದ್ದು ಕೀರ್ತಿಯನ್ನು ಗಳಿಸುವುದಕ್ಕಾಗಿ ಅಲ್ಲ. ಯಾವ ಲಾಭಕ್ಕಾಗಿಯೂ ಅಲ್ಲ. ಜನರಿಂದ ಪೂಜೆಯನ್ನು ಪಡೆಯುವುದಕ್ಕಾಗಿಯೂ ಅಲ್ಲ. ಗುರುಗಳ ಮಾತನ್ನು ಉಲ್ಲಂಘಿಸಬಾರದು. ಉಲ್ಲಂಘಿಸದಿದ್ದಾಗಲೇ ಗುರಶಿಷ್ಯಭಾವವೆಂಬುದು ಉಳಿದಿರುತ್ತದೆ.

ಪೂರ್ವಂ ಗೃಹಿತ್ವೇಽಪಿ ನ ತತ್ಸ್ವಭಾವೋ
ನ ಬಾಲ್ಯಮನ್ವೇತಿ ಹಿ ಯೌವನಸ್ಥಮ್ |
ನ ಯೌವನಂ ವೃದ್ಧಮುಪೈತಿ ತದ್ವತ್
ವ್ರಜನ್ ಹಿ ಪೂರ್ವಸ್ಥಿತಿಮೋಜ್ಝ್ಯ ಗಚ್ಛೇತ್ || ೫೬

"ಹಿಂದೆ ಗೃಹಸ್ಥ ಧರ್ಮದಲ್ಲಿದ್ದರೂ ಆ ಸ್ವಭಾವ ಈಗ ಇಲ್ಲ. ಯೌವನ ಬಂದಮೇಲೆ ಬಾಲ್ಯವೂ ಜೊತೆಗೆ ಬರುವುದಿಲ್ಲವಷ್ಟೆ. ಯೌವನವು ಮುದುಕನನ್ನು ಹಿಂಬಾಲಿಸಿ ಬರುವುದಿಲ್ಲ. ಅದೇ ರೀತಿಯಲ್ಲಿ ಹಿಂದಿನ ಸ್ಥಿತಿಯನ್ನು ಬಿಟ್ಟು ಮುಂದಿನ ಸ್ಥಿತಿಗೆ ಹೋಗಿ ಸೇರಬೇಕು.

ಅಹಂ ಗೃಹೀ ನಾತ್ರ ವಿಚಾರಣೀಯಂ
ಕಿಂ ತೇನ ಪೂರ್ವಂ ಮನ ಏವ ಹೇತುಃ |
ಬಂಧೇ ಚ ಮೋಕ್ಷೇ ಚ ಮನೋವಿಶುದ್ಧೋ
ಗೃಹೀ ಭವೇದ್ವಾಽಪ್ಯುತ ಮಸ್ಕರೀ ವಾ || ೫೭

"ನಾನು ಗೃಹಸ್ಥನಾಗಿದ್ದುದು ದಿಟ. ಅದರಲ್ಲಿ ವಿಚಾರಿಸಬೇಕಾದ್ದೇನೂ ಇಲ್ಲ. ಅದರಿಂದೇನು? ಅದು ಹಿಂದಿನ ವಿಷಯವಾಯಿತು. ಅದಕ್ಕೆಲ್ಲಾ ಮನಸ್ಸೇ ಕಾರಣ. ಬಂಧಕ್ಕೂ ಮೋಕ್ಷಕ್ಕೂ ಮನಸ್ಸೇ ಹೇತು. ಶುದ್ಧವಾದ ಗೃಹಸ್ಥಧರ್ಮದಲ್ಲಿರಬೇಕು. ಅಥವಾ ಪರಿಶುದ್ಧ ಚಿತ್ತನಾದ ಸಂನ್ಯಾಸಿಯಾಗಬೇಕು.

ನಾಸ್ತ್ಯೇವ ಚೇದಾಶ್ರಮ ಉತ್ತಮಾಽಽದಿಃ
ಕಥಂ ಚ ತತ್ಪ್ರಾಪ್ತಿನಿವೃತ್ತಿಗಾಮಿನೌ |
ಪ್ರತಿಶ್ರವೌ ನೌ ಕಥಮಲ್ಪಕಾಲೌ
ನ ಹಿ ಪ್ರತಿಜ್ಞಾ ಭಗವನ್ನಿರುದ್ಧಾ || ೫೮

"ಪೂಜ್ಯರೆ, ಮೊದಲನೆಯ ಗೃಹಸ್ಥಾಶ್ರಮವು ಇಲ್ಲವೇ ಇಲ್ಲವಾದರೆ 'ಗೃಹಸ್ಥಾಶ್ರಮದ ಪ್ರಾಪ್ತಿ ಅದರಿಂದ ನಿವೃತ್ತಿ' ಇವನ್ನು ಒಳಗೊಂಡು(ವಾದಕಾಲದಲ್ಲಿ ಮಾಡಿಕೊಂಡ) ನಮ್ಮ ಪ್ರತಿಜ್ಞೆಗಳು ಸ್ವಲ್ಪಕಾಲವಾದರೂ ಹೇಗೆ ಸಂಭವಿಸುತ್ತಿದ್ದವು? ಈ ಪ್ರತಿಜ್ಞೆಯನ್ನು ಭಗವತ್ಪಾದರಾದ ನೀವು ವಿರೋಧಿಸಲಿಲ್ಲವಷ್ಟೆ.

ವಿವರಣೆ: ಹಿಂದೆ ಆಚಾರ್ಯರಿಗೂ ಮಂಡನಮಿಶ್ರನಿಗೂ ವಾದವು ನಡೆದಾಗ, ನಾನು ಸೋತರೆ ಸಂನ್ಯಾಸಾಶ್ರಮವನ್ನು ತೆಗೆದು ಕೊಳ್ಳುತ್ತೇನೆ. ನೀವು ಸೋತರೆ ಸಂನ್ಯಾಸಾಶ್ರಮವನ್ನು ತ್ಯಜಿಸಬೇಕು ಎಂದು ನಾವು ಪ್ರತಿಜ್ಞೆಮಾಡಿದೆವು. ಸಂನ್ಯಾಸವೆಂಬ ಆಶ್ರಮವೇ ಇಲ್ಲ ಎಂದು ನನ್ನ ನಿಶ್ಚಯವಾದರೆ ಈ ಪ್ರತಿಜ್ಞೆ ಹೇಗೆ

ಘಟಿಸುತ್ತಿತ್ತು? ಸಂನ್ಯಾಸಾಶ್ರಮವನ್ನು ತ್ಯಜಿಸಬೇಕು - ಎಂಬುದೂ ಯುಕ್ತವಾಗುತ್ತಿರಲಿಲ್ಲ - ಎಂದು ಅಭಿಪ್ರಾಯ.

ಸಂಭಿಕ್ಷಮಾಣಾ ನ ಲಭಂತ ಏವ ಚೇದ್
ಗೃಹಪ್ರವೇಶಂ ಗುರುಣಾ ಪ್ರವೇಶನಮ್ |
ಕಥಂ ಹಿ ಭಿಕ್ಷಾ ವಿಹಿತಾ ನನೂತ್ತಮಾ
ಕೋ ನಾಮ ಲೋಕಸ್ಯ ಮುಖಾಪಿಧಾಯಕಃ || ೫೯

"ಭಿಕ್ಷೆಗಾಗಿ ಬಂದ ಯತಿಗಳು ಗೃಹದೊಳಗೆ ಪ್ರವೇಶವನ್ನೇ ಪಡೆಯುವುದಿಲ್ಲವಾದರೆ ಗುರುಗಳಾದ ನೀವು ಆ ನನ್ನ ಮನೆಯೊಳಗೆ ಪ್ರವೇಶಿಸಿದ್ದು ಹೇಗೆ? ಅಲ್ಲದೆ ಉತ್ತಮವಾದ ಭಿಕ್ಷೆಯನ್ನು ನೀವು ಪಡೆದದ್ದು ಹೇಗೆ? ಜನರ ಬಾಯನ್ನು ಮುಚ್ಚಿಸತಕ್ಕವನು ಯಾವನು?

ತತ್ತ್ವೋಪದೇಶಾದ್ವಿದಿತಾತ್ಮತತ್ತ್ವೋ
ವ್ಯಧಾಮಹಂ ಸಂನ್ಯಸನಂ ಕೃತಾತ್ಮಾ |
ವಿರಾಗಭಾವಾನ್ನ ಪರಾಜಿತಸ್ತು
ವಾದೋ ಹಿ ತತ್ತ್ವಸ್ಯ ವಿನಿರ್ಣಯಾಯ || ೬೦

"ನಿಮ್ಮ ತತ್ತ್ವೋಪದೇಶದಿಂದ ನಾನು ಸರಿಯಾದ ಆತ್ಮತತ್ತ್ವವನ್ನರಿತು ಸಂನ್ಯಾಸವನ್ನು ಸ್ವೀಕರಿಸಿ ಧನ್ಯನಾದೆನು. ಈ ಸಂನ್ಯಾಸಸ್ವೀಕಾರವು ವೈರಾಗ್ಯದಿಂದ ಆದದ್ದು. ನಾನು ಸೋತೆನೆಂದಲ್ಲ. ವಾದವು ಕೇವಲ ತತ್ತ್ವ ನಿರ್ಣಯಕ್ಕಾಗಿ.

ಪುರಾ ಗೃಹಸ್ಥೇನ ಮಯಾ ಪ್ರಬಂಧಾ
ನೈಯಾಯಿಕಾದೌ ವಿಹಿತಾ ಮಹಾರ್ಥಾಃ |
ಇತಃ ಪರಂ ಮೇ ಹೃದಯಂ ಚಿಕೀರ್ಷುಃ
ತ್ವದಂಘ್ರಿಸೇವಾಂ ನ ವಿಲಂಘ್ಯ ಕಿಂಚಿತ್ || ೬೧

"ಹಿಂದೆ ನಾನು ಗೃಹಸ್ಥನಾಗಿದ್ದಾಗ ನೈಯಾಯಿಕರೇ ಮೊದಲಾದವರ ಸಿದ್ಧಾಂತವನ್ನು ಕುರಿತು ಅರ್ಥವತ್ತಾದ ಪ್ರಬಂಧಗಳನ್ನು ರಚಿಸಿದ್ದೇನೆ. ಇನ್ನು ಮುಂದೆ ನಿಮ್ಮ ಪಾದಸೇವೆಯನ್ನು ಬಿಟ್ಟು ಇನ್ನೇನನ್ನು ಮಾಡಲೂ ನನ್ನ ಹೃದಯವು ಬಯಸುವುದಿಲ್ಲ.

ಶ್ರದ್ಧಾಮದ್ವೈತಬದ್ಧಾದರಬುಧಪರಿಷಚ್ಛೇಮುಷೀಸಂನಿಷಣ್ಣಾ -
ಮರ್ವಾಗ್ದುರ್ವಾದಿಗರ್ವಾನಲವಿಪುಲತರಜ್ವಾಲಮಾಲಾವಲೀಢಾಮ್ |
ಸಿಕ್ತ್ವಾ ಸೂಕ್ತಾಮೃತೌಘೈರಹಹ ಪರಿಹಸನ್ಜೀವಯಸ್ಯದ್ಯ ಸದ್ಯಃ
ಕೋ ವಾ ಸೇವಾಪಟುಃ ಸ್ಯಾದೃಣತರಣವಿಧೌ ಸದ್ಗುರೋರ್ನೈವ ಜಾನೇ ||

ಗುರುಗಳೆ, ಅದ್ವೈತಮಾರ್ಗದಲ್ಲಿ ಆದರವನ್ನಿಟ್ಟುಕೊಂಡಿರುವ ವಿದ್ವಾಂಸರು ಬಹಳಜನರಿದ್ದಾರೆ. ಅವರ ಬುದ್ಧಿಯಲ್ಲಿ ಅದ್ವೈತಶ್ರದ್ಧೆಯು ದೃಢವಾಗಿ ನೆಲೆಸಿರುತ್ತದೆ. ಈಚೆಗೆ ಬಂದ ದುರ್ವಾದಿಗಳ ಗರ್ವವೆಂಬ ಬೆಂಕಿಯ ಜ್ವಾಲಾಮಾಲೆಗಳು ಅದ್ವೈತಶ್ರದ್ಧೆಯನ್ನು ಮುಸುಕಿಬಿಡುವುದುಂಟು. ಆ ಸಮಯದಲ್ಲಿ ಉಪನಿಷತ್ ಸೂಕ್ತಿಗಳೆಂಬ ಅಮೃತ ಧಾರೆಗಳನ್ನು ಸುರಿಸಿ, ಜ್ವಾಲೆಯನ್ನಾರಿಸಿ, ಲೀಲೆಯಿಂದ ಆ ಶ್ರದ್ಧೆಯನ್ನು ಕೂಡಲೇ ಉಜ್ಜೀವನಗೊಳಿಸುತ್ತಿದ್ದೀರಿ. ಆಹಾ! ಇಂತಹ ಸದ್ಗುರುವಿನ ಋಣವನ್ನು ತೀರಿಸಬಲ್ಲ ಸೇವಾಕುಶಲನು ಯಾವನಿದ್ದಾನೋ ಕಾಣೆ"

ಟಿಪ್ಪಣಿ:- ಈ ಶ್ಲೋಕದ ಕಡೆಯ ಪಾದದಲ್ಲಿ 'ರಣತರಣವಿಧೌ' ಎಂದು ಪಾಠಾಂತರವಿದೆ. ರಣ = ವಾದಯುದ್ಧ.

ಇತ್ಯುಕ್ತ್ವೋಪರತೇ ಸುರೇಶ್ವರಗುರೌ ತೇನೈವ ಶಾರೀರಕೇ
ನೋ ಸಂಭಾವ್ಯಹಹಾತ್ರ ವಾರ್ತಿಕಮಿತಿ ಪ್ರೌಢಂ ಶುಗಗ್ನಿಂ ಶನೈಃ |
ಧೀರಾಗ್ರ್ಯಃ ಶಮಯನ್ವಿವೇಕಪಯಸಾ ದೇವೇಶ್ವರೇಣ ತ್ರಯೀ -
ಭಾಷ್ಯೇ ಕಾರಯಿತುಂ ಸ ವಾರ್ತಿಕಯುಗಂ ಬದ್ಧಾದರೋಽಭೂನ್ಮುನಿಃ ||

ಹೀಗೆ ಉದ್ಗರಿಸಿ ಸುರೇಶ್ವರಾಚಾರ್ಯರು ಸುಮ್ಮನಾದರು. ಆಗ "ನಮ್ಮ ಶಾರೀರಕಭಾಷ್ಯಕ್ಕೆ ಈತನಿಂದಲೇ ವಾರ್ತಿಕರಚನೆಯಾಗದೆ ಹೋಯಿತಲ್ಲ, ಅಯ್ಯೋ!" ಎಂಬ ತೀವ್ರವಾದ ಶೋಕಾಗ್ನಿಯು ಶ್ರೀಶಂಕರಭಗವತ್ಪಾದರಿಗೆ ಉಂಟಾಯಿತು. ಧೀರರಾದ ಆ ಯತಿಗಳು ವಿವೇಕವೆಂಬ ಜಲದಿಂದ ಆ ಶೋಕಾಗ್ನಿಯನ್ನು ಸಿಂಪಡಿಸಿ ಮೆಲ್ಲಗೆ ತಣಿಸಿಕೊಂಡರು. ತಮ್ಮ ಉಪನಿಷದ್‌ಭಾಷ್ಯಕ್ಕಾದರೂ ಎರಡು ವಾರ್ತಿಕಗ್ರಂಥಗಳನ್ನು ಸುರೇಶ್ವರರಿಂದ ಬರೆಯಿಸಬೇಕೆಂದು ಸಂಕಲ್ಪಿಸಿದರು.

ಭಾವಾನುಕಾರಿಮೃದುವಾಕ್ಯನಿವೇಶಿತಾರ್ಥಂ
ಸ್ವೀಯೈಃ ಪದ್ಯೈಃ ಸಹ ನಿರಾಕೃತಪೂರ್ವಪಕ್ಷಮ್ |
ಸಿದ್ಧಾಂತಯುಕ್ತಿವಿನಿವೇಶಿತತತ್ಸ್ವರೂಪಂ
ದೃಷ್ಟ್ವಾಽಭಿನಂದ್ಯ ಪರಿತೋಷವಶಾದವೋಚತ್ || ೬೪

ನೈಷ್ಕರ್ಮ್ಯಸಿದ್ಧಿಯು ಗುರೂಪದಿಷ್ಟ ಭಾವವನ್ನನುಸರಿಸಿದ ಮೃದುವಾಕ್ಯಗಳಿಂದ ಅರ್ಥಗರ್ಭಿತವಾಗಿಯೂ ಸ್ವತಂತ್ರಪದರಚನೆಯಿಂದ ಪೂರ್ವಪಕ್ಷವನ್ನು ನಿರಾಕರಿಸತಕ್ಕದ್ದೂ ಸಿದ್ಧಾಂತ ಪ್ರತಿಪಾದನೆಗೆ ಬೇಕಾದ ಯುಕ್ತಿಗಳಿಂದ ಸಿದ್ಧಾಂತಸ್ವರೂಪವನ್ನು ನಿರ್ಣಯಿಸತಕ್ಕದ್ದೂ ಆಗಿರುವುದನ್ನು ನೋಡಿ ಮೆಚ್ಚಿದ ಆಚಾರ್ಯರು ಸಂತುಷ್ಟರಾಗಿ ಇಂತೆಂದರು.

ಸತ್ಯಂ ಯದಾತ್ಥ ವಿನಯಿನ್ ಮಮ ಯಾಜುಷೀ ಯಾ
ಶಾಖಾ ತದಂತಗತಭಾಷ್ಯನಿಬಂಧ ಇಷ್ಟಃ |
ತದ್ವಾರ್ತಿಕಂ ಮಮ ಕೃತೇ ಭವತಾ ಪ್ರಣೇಯಂ
ಸಚ್ಚೇಷ್ಟಿತಂ ಪರಹಿತೈಕಫಲಂ ಪ್ರಸಿದ್ಧಮ್ || ೬೫

"ಹೇ ವಿನಯಶೀಲ, ನೀನು ಹೇಳುವುದು ಸತ್ಯ. ನನ್ನ ಯಜುಃಶಾಖೆಯ ತೈತ್ತಿರೀಯೋಪನಿಷತ್ತಿಗೆ ನಾನು ಭಾಷ್ಯವನ್ನು ಬರೆದಿದ್ದೇನಷ್ಟೆ. ಅದರ ಮೇಲೊಂದು ಪ್ರಬಂಧದ ರಚನೆಯಾಗಬೇಕೆಂದು ನನ್ನ ಇಚ್ಛೆ ಇದೆ. ಆ ಭಾಷ್ಯದ ಮೇಲೊಂದು ವಾರ್ತಿಕ ಗ್ರಂಥವನ್ನು ನನಗೋಸ್ಕರ ನೀನು ಬರೆಯಬೇಕು. ಸಜ್ಜನರು ಪರಹಿತಕ್ಕಾಗಿಯೇ ಪ್ರವರ್ತಿಸುತ್ತಾರೆಂಬುದು ಪ್ರಸಿದ್ಧವಾಗಿದೆ.

ತದ್ವತ್ತ್ವದೀಯಾ ಖಲು ಕಾಣ್ವಶಾಖಾ
ಮಮಾಪಿ ತತ್ರಾಸ್ತಿ ತದಂತಭಾಷ್ಯಮ್ |
ತದ್ವಾರ್ತಿಕಂ ಚಾಪಿ ವಿಧೇಯಮಿಷ್ಟಂ
ಪರೋಪಕಾರಾಯ ಸತಾಂ ಪ್ರವೃತ್ತಿಃ || ೬೬

"ಹಾಗೆಯೇ ನಿನ್ನ ಕಾಣ್ವಶಾಖೆಯ ಬೃಹದಾರಣ್ಯಕೋಪನಿಷತ್ತಿಗೂ ನನ್ನ ಭಾಷ್ಯವಿದೆ. ಅದರ ಮೇಲೆ ಸಹ ನೀನು ವಾರ್ತಿಕವನ್ನು ರಚಿಸಬೇಕೆಂದು ನನ್ನ ಇಷ್ಟ. ಪರೋಪಕಾರಕ್ಕಾಗಿ ವಿದ್ವಾಂಸರು ಇಂತಹ ಕಾರ್ಯವನ್ನು ಮಾಡಬೇಕಾಗುತ್ತದೆ.

ತತೋಭಯತ್ರ ಕುರು ವಾರ್ತಿಕಮಾರ್ತಿಹಾರಿ
ಕೀರ್ತಿಂ ಚ ಯಾಹಿ ಜಿತಕಾರ್ತಿಕಚಂದ್ರಿಕಾಭಾಮ್ |
ಮಾ ಶಂಕಿ ಪೂರ್ವಮಿವ ದುಃಶಠವಾಕ್ಯರೋಧೋ
ಮದ್ವಾಕ್ಯಮೇವ ಶರಣಂ ವ್ರಜ ಮಾ ವಿಚಾರೀಃ || ೬೭

ಆ ಎರಡು ಭಾಷ್ಯಗಳಿಗೂ ತಾಪತ್ರಯ ವಿನಾಶಕವಾದ ವಾರ್ತಿಕಗಳನ್ನು ರಚಿಸು. ಕಾರ್ತಿಕಮಾಸದ-ಶರತ್ಕಾಲದ ಬೆಳದಿಂಗಳಿನಂತಹ ಶುಭ್ರವಾದ ಕೀರ್ತಿಯು ನಿನಗೆ ಲಭಿಸಲಿ! ಹಿಂದಿನಂತೆ ಚಾಡಿಖೋರದಿಂದ ಅಡ್ಡಿಯಾದೀತೆಂದು ಶಂಕಿಸಲೇ ಬೇಡ. ಸುರೇಶ್ವರ, ನನ್ನ ಈ ಮಾತೇ ನಿನಗೆ ರಕ್ಷಣೆಯೆಂದು ತಿಳಿ. ಇನ್ನು ವಿಚಾರಿಸಲೇ ಬೇಡ" ಎಂದರು.

ಇತ್ಥಂ ಸ ಉಕ್ತೋ ಭಗವತ್ಪದೇನ
ಶ್ರೀ ವಿಶ್ವರೂಪೋ ವಿದುಷಾಂ ವರಿಷ್ಠಃ |
ಚಕಾರ ಭಾಷ್ಯದ್ವಯವಾರ್ತಿಕೇ ದ್ವೇ
ಹ್ಯಾಜ್ಞಾ ಗುರೂಣಾಂ ಹ್ಯವಿಚಾರಣೀಯಾ || ೬೮

ಭಗವತ್ಪಾದರು ಈ ಪ್ರಕಾರ ನುಡಿಯಲಾಗಿ, ಹಿಂದೆ ವಿಶ್ವರೂಪನೆಂದು ವಿಖ್ಯಾತರಾಗಿದ್ದ ವಿದ್ವದ್ವರೇಣ್ಯರಾದ ಸುರೇಶ್ವರಾಚಾರ್ಯರು ಆ ಎರಡು ಭಾಷ್ಯಗಳಿಗೆ ಎರಡು ವಾರ್ತಿಕಗ್ರಂಥಗಳನ್ನು ವಿರಚಿಸಿದರು. ಗುರುಗಳ ಆಜ್ಞೆಯನ್ನು ಮೀರಬಾರದಷ್ಟೆ?

ಆಜ್ಞಾ ಗುರೋರನುಚರೈರ್ನ ಹಿ ಲಂಘನೀಯೇ -
ತ್ಯುಕ್ತ್ವಾ ತಯೋರ್ನಿಗಮಶೇಖರಯೋರುದಾರಮ್ |
ನಿರ್ಮಾಯ ವಾರ್ತಿಕಯುಗಂ ನಿಜದೇಶಿಕಾಯ
ನಿಃಸೀಮನಿಸ್ತುಲನಧೀರುಪದಾಂ ಚಕಾರ || ೬೯

"ಗುರುಗಳ ಆಜ್ಞೆಯನ್ನು ಅನುಚರರು ಉಲ್ಲಂಘಿಸಬಾರದು" ಎಂದು ನುಡಿದು, ಅಪಾರವೂ ಅಸದೃಶವೂ ಆದ ಧೀಶಕ್ತಿಯಿದ್ದ ಸುರೇಶ್ವರಾಚಾರ್ಯರು ಆ ಶ್ರೇಷ್ಠ ಉಪನಿಷತ್ತುಗಳಾದ ತೈತ್ತಿರೀಯ-ಬೃಹದಾರಣ್ಯಕಗಳಿಗೆ ಪ್ರೌಢವಾದ ಎರಡು ವಾರ್ತಿಕ ಗ್ರಂಥಗಳನ್ನು ವಿರಚಿಸಿ ತಮ್ಮ ಗುರುಗಳಾದ ಶ್ರೀಶಂಕರಾಚಾರ್ಯರಿಗೆ ಗುರುದಕ್ಷಿಣೆಯನ್ನಾಗಿ ಸಮರ್ಪಿಸಿದರು

ಟಿಪ್ಪಣಿ:- ತೈತ್ತಿರೀಯ, ಬೃಹದಾರಣ್ಯಕ, ನೃಸಿಂಹಪೂರ್ವತಾಪನೀಯ ಎಂಬ ಮೂರು ಉಪನಿಷತ್ತುಗಳ ಭಾಷ್ಯಗಳಿಗೆ ಸುರೇಶ್ವರರು ವಾರ್ತಿಕಗಳನ್ನು ರಚಿಸಿದರೆಂದು ಅದ್ವೈತಲಕ್ಷ್ಮೀ ವ್ಯಾಖ್ಯಾನದಲ್ಲಿ ಬರೆದಿದ್ದಾರೆ. ೬೩ನೆಯ ಶ್ಲೋಕದಲ್ಲಿರುವ 'ತ್ರಯೀಭಾಷ್ಯೇ' ಎಂಬ ಶಬ್ದಬಲದಿಂದ ಹೀಗೆ ಅರ್ಥವನ್ನು ಹಿಗ್ಗಿಸಿದಂತೆ ಕಾಣುತ್ತದೆ. ಪಂಚೀಕರಣ ವಾರ್ತಿಕ, ದಕ್ಷಿಣಾಮೂರ್ತಿಸ್ತೋತ್ರ ವಾರ್ತಿಕಗಳೂ ಸೇರಿ 'ವಾರ್ತಿಕಪಂಚಕಮ್' ಸುರೇಶ್ವರಾಚಾರ್ಯರದೆಂದೂ ತಿಳಿಸಿದ್ದಾರೆ.

ಸನಂದನೋ ನಾಮ ಗುರೋರನುಜ್ಞಯಾ
ಭಾಷ್ಯಸ್ಯ ಟೀಕಾಂ ವ್ಯಧಿತೇರಿತಃ ಪರಾಮ್ |
ಯತ್ಪೂರ್ವಭಾಗಃ ಕಿಲ ಪಂಚಪಾದಿಕಾ
ತಚ್ಛೇಷಗಾ ವೃತ್ತಿರಿತಿ ಪ್ರಥೀಯಸೀ || ೭೦

ಸನಂದನನೆಂಬ ಶಿಷ್ಯನು (ಪದ್ಮಪಾದನು) ಗುರುಗಳ ಅನುಜ್ಞೆಯಿಂದ ಪ್ರೇರಿತನಾಗಿ ಸೂತ್ರ ಭಾಷ್ಯಕ್ಕೆ ಒಂದು ಉತ್ತಮವಾದ ಟೀಕೆಯನ್ನು ಬರೆದನು. ಅದರ ಪೂರ್ವಭಾಗವು ಪಂಚಪಾದಿಕಾ ವ್ಯಾಖ್ಯೆಯೆಂದೂ ಉಳಿದದ್ದು ವೃತ್ತಿಯೆಂದೂ ಪ್ರಸಿದ್ಧವಾಗಿದೆ.

ಟಿಪ್ಪಣಿ:- ವ್ಯಧಿತ = (ಡು)ಧಾಞ್ ಧಾರಣಪೋಷಣಯೋಃ, ಕರ್ತರಿ ಲುಙ್. ಸ್ಥಾಘ್ವೋರಿಚ್ಚ-ಇತಿ ಇಕಾರಾದೇಶಃ. ಹ್ರಸ್ವಾದಂಗಾತ್-ಇತಿ ಸಿಚೋ ಲೋಪಃ.

ವ್ಯಾಸರ್ಷಿಸೂತ್ರನಿಚಯಸ್ಯ ವಿವೇಚನಾಯ
ಟೀಕಾಭಿಧಂ ವಿಜಯಡಿಂಡಿಮಮಾತ್ಮಕೀರ್ತೇಃ|
ನಿರ್ಮಾಯ ಪದ್ಮಚರಣೋ ನಿರವದ್ಯಯುಕ್ತಿ-
ದೃಬ್ಧಂ ಪ್ರಬಂಧಮಕರೋದ್ಗುರುದಕ್ಷಿಣಾಂ ಸಃ || ೭೧

ಹೀಗೆ ಆ ಪದ್ಮಪಾದಾಚಾರ್ಯನು ವ್ಯಾಸ ಋಷಿಗಳು ಬರೆದ ಸೂತ್ರ ಕದಂಬಕದ ಅರ್ಥ ವಿವೇಚನೆಗೋಸ್ಕರ ಬರೆದ ಟೀಕೆಯು ಆತನ ಕೀರ್ತಿಗೆ ವಿಜಯ ಭೇರಿಯಾಯಿತು. ನಿರ್ದೋಷವಾದ ಯುಕ್ತಿಗಳಿಂದ ಕೂಡಿದ ಆ ಪ್ರಬಂಧವನ್ನು ಆತನು ಗುರುದಕ್ಷಿಣೆಯಾಗಿ ಆಚಾರ್ಯರಿಗೆ ಸಮರ್ಪಿಸಿದನು.

ಟಿಪ್ಪಣಿ:- ಈ ವ್ಯಾಖ್ಯೆಯನ್ನು ವಿಜಯ ಡಿಂಡಿಮ ಎಂದು ಕೆಲವರು ಹೇಳುತ್ತಾರೆ.

ಆಲೋಚಯನ್ನಥ ತದಾನು ಗತಿಂ ಗ್ರಹಾಣಾ -
ಮೂಚೇ ಸುರೇಶ್ವರಸಮಾಹ್ವಮುಪಹ್ವರೇ ಸಃ |
ಪಂಚೈವ ವತ್ಸ ಚರಣಾಃ ಪ್ರಥಿತಾ ಇಹ ಸ್ಯು -
ಸ್ತತ್ರಾಪಿ ಸೂತ್ರಯುಗಲದ್ವಯಮೇವ ಭೂಮ್ನಾ || ೭೨

(ಪದ್ಮಪಾದನು ಟೀಕೆಯನ್ನರ್ಪಿಸಿದ ಸಮಯದಲ್ಲಿದ್ದ) ಗ್ರಹಗಳ ಗತಿಯನ್ನು ಸಮಾಲೋಚಿಸಿದ ಆಚಾರ್ಯರು ಸುರೇಶ್ವರರನ್ನು ಕುರಿತು ಏಕಾಂತದಲ್ಲಿ "ಪ್ರಿಯಶಿಷ್ಯನೆ, ಈ ಪದ್ಮಪಾದನ ಗ್ರಂಥದಲ್ಲಿ ಐದು ಪಾದಗಳವರೆಗಿರುವ ವ್ಯಾಖ್ಯಾನವು ಮಾತ್ರ ಪ್ರಸಿದ್ಧಿಯಲ್ಲಿರುತ್ತದೆ. ಅದರಲ್ಲಿಯೂ ಮೊದಲನೆಯ ನಾಲ್ಕು ಸೂತ್ರಗಳ ವ್ಯಾಖ್ಯಾನವು ವಿಶೇಷವಾಗಿ ಪ್ರಸಿದ್ಧಿಯನ್ನು ಪಡೆದಿರುತ್ತದೆ.

ಪ್ರಾರಬ್ಧಕರ್ಮಪರಿಪಾಕವಶಾತ್ ಪುನಸ್ತ್ವಂ
ವಾಚಸ್ಪತಿತ್ವಮಧಿಗಮ್ಯ ವಸುಂಧರಾಯಾಮ್ |
ಭವ್ಯಾಂ ವಿಧಾಸ್ಯಸಿತಮಾಂ ಮಮ ಭಾಷ್ಯಟೀಕಾ -
ಮಾಭೂತಸಂಲಯಮಧಿಕ್ಷಿತಿ ಸಾ ಚ ಜೀಯಾತ್ || ೭೩

ಪ್ರಾರಬ್ಧಕರ್ಮವಶದಿಂದ ನೀನು ವಾಚಸ್ಪತಿಯೆಂಬ ಹೆಸರಿನಿಂದ ಮತ್ತೆ ಈ ಭೂಮಿಯಲ್ಲಿ ಜನಿಸಿ ನನ್ನ ಸೂತ್ರಭಾಷ್ಯಕ್ಕೆ ಭವ್ಯವಾದ ಒಂದು ಟೀಕೆಯನ್ನು ಸೊಗಸಾಗಿ ಬರೆಯುವೆ. ಅದು ಪ್ರಳಯ ಪರ್ಯಂತವೂ ಜಗತ್ತಿನಲ್ಲಿ ವಿಜಯಶಾಲಿಯಾಗಿರಲಿ!" ಎಂದರು.

ಟಿಪ್ಪಣಿ:- ಮುಂದೆ ವಾಚಸ್ಪತಿಮಿಶ್ರನು ಬರೆದ ಭಾಮತೀ ಎಂಬ ವ್ಯಾಖ್ಯಾನವೇ ಇದು

ಇತ್ಯೇವಮುಕ್ತ್ವಾಽಥ ಯತೀಶ್ವರೋಽಸಾ -
ವಾನಂದಗಿರ್ಯಾದಿಮುನೀನ್ ಸ ಹೂತ್ವಾ |
ಕುರುಧ್ವಮದ್ವೈತ ಪರಾನ್ನಿಬಂಧಾ -
ನಿತ್ಯನ್ವಶಾನ್ನಿರ್ಮಮಸಾರ್ವಭೌಮಃ || ೭೪

ಹೀಗೆ ನುಡಿದು ನಿರ್ಮಮಸಾರ್ವಭೌಮರಾದ ಆ ಯತೀಶ್ವರರು ಆನಂದಗಿರಿಯೇ ಮೊದಲಾದ ಮುನಿಗಳನ್ನು ಕರೆದು "ನೀವು ಅದ್ವೈತಪರವಾದ ಕೆಲವು ಗ್ರಂಥಗಳನ್ನು ರಚಿಸಿರಿ" ಎಂದು ಆದೇಶವನ್ನಿತ್ತರು.

ಟಿಪ್ಪಣಿ:- ಅನ್ವಶಾತ್ = ಶಾಸ್ ಧಾತು ಕರ್ತರಿ ಲಙ್, ಪ್ರ. ಪು. ಏಕ ವಚನ. ತಿಪ್ಯನಸ್ತೇಃ - ಇತಿ ಸಸ್ಯ ದಕಾರಃ, ಚರ್ತ್ವಮ್.

ತೇ ಸರ್ವೇಽಪ್ಯನುಮತಿಮಾಪ್ಯ ದೇಶಿಕೇಂದ್ರೋ -
ರಾನಂದಾಚಲಮುಖರಾ ಮಹಾನುಭಾವಾಃ |
ಆತೇನುರ್ಜಗತಿ ಯಥಾಸ್ವಮಾತ್ಮತತ್ತ್ವ-
ಮ್ಭೋಜಾರ್ಕಾನ್ ವಿಶದತರಾನ್ ಬಹೂನ್ನಿಬಂಧಾನ್ || ೭೫

ಈ ರೀತಿಯಲ್ಲಿ ಆನಂದಗಿರಿಯೇ ಮೊದಲಾದ ಮಹಾನುಭಾವರು ದೇಶಿಕೋತ್ತಮರಿಂದ ಅನುಜ್ಞೆಯನ್ನು ಪಡೆದು ವೇದಾಂತದಲ್ಲಿ ಅನೇಕ ನಿಬಂಧಗಳನ್ನು ರಚಿಸಿದರು. ತಮಗೆ ತೋರಿದ ಕ್ರಮದಲ್ಲಿ ಬರೆದ ಆ ಗ್ರಂಥಗಳು ಆತ್ಮತತ್ತ್ವವೆಂಬ ಕಮಲವನ್ನರಳಿಸುವ ಸೂರ್ಯರೋ ಎಂಬಂತೆ ಲೋಕದಲ್ಲಿ ಪ್ರಸಿದ್ಧವಾದವು.

ಇತಿ ಶ್ರೀ ಮಾಧವೀಯೇ ತದ್ವಾರ್ತಿಕಾಂತ ಪ್ರವರ್ತನಃ |
ಸಂಕ್ಷೇಪಶಂಕರಜಯೇ ಪೂರ್ಣಃ ಸರ್ಗಸ್ತ್ರಯೋದಶಃ ||

ಇಲ್ಲಿಗೆ ಶ್ರೀಮಾಧವೀಯ ಸಂಕ್ಷೇಪಶಂಕರವಿಜಯದಲ್ಲಿ ಭಾಷ್ಯವಾರ್ತಿಕದವರೆಗೆ ಅನೇಕ ಪ್ರಬಂಧಗಳ ರಚನೆಯನ್ನು ವರ್ಣಿಸುವ ಹದಿಮೂರನೆಯ ಸರ್ಗವು ಸಮಾಪ್ತವಾಯಿತು.

✤ ✤ ✤

## ಚತುರ್ದಶಃ ಸರ್ಗಃ

## ಪದ್ಮಪಾದ ತೀರ್ಥಯಾತ್ರಾವರ್ಣನಮ್

ತೀರ್ಥಯಾತ್ರೆಯ ಗುಣದೋಷಗಳು. ಪದ್ಮಪಾದರ ತೀರ್ಥಯಾತ್ರೆ. ಆಚಾರ್ಯರು ಕಾಲಟಿಗೆ ಹೋಗಿ ಮಾತೃ ಸಂಸ್ಕಾರವನ್ನು ಮಾಡುವುದು. ಪದ್ಮಪಾದರ ಪಂಚಪಾದಿಕೆಯು ಬೆಂಕಿಯಲ್ಲಿ ಸುಟ್ಟುಹೋಗುವುದು. ಕೇರಳದಲ್ಲಿ ಗುರುಶಿಷ್ಯರ ಸಮಾಗಮ. ಆಚಾರ್ಯರು ಸ್ಮರಣಶಕ್ತಿಯಿಂದ ಪಂಚಪಾದಿಕೆಯನ್ನೂ ಕೇರಳ ರಾಜನ ನಾಟಕಗಳನ್ನೂ ಹೇಳಿಬರೆಸುವುದು.

ಅಥಾಬ್ಜಪಾತ್ ಕರ್ತುಮನಾಃ ಸ ತೀರ್ಥ -
ಯಾತ್ರಾಮಯಾಚಿಷ್ಟ ಗುರೋರನುಜ್ಞಾಮ್ |
ದೇಯಾ ಗುರೋ ಮೇ ಭಗವನ್ನನುಜ್ಞಾ
ದೇಶಾನ್ ದಿದೃಕ್ಷೇ ಬಹುತೀರ್ಥಯುಕ್ತಾನ್ || ೧

ಆಮೇಲೆ ಪದ್ಮಪಾದನು ತೀರ್ಥಯಾತ್ರೆಯನ್ನು ಮಾಡಬೇಕೆಂದು ಉದ್ದೇಶಿಸಿ ಆಚಾರ್ಯರನ್ನು ಕುರಿತು"ಭಗವನ್, ನಾನಾತೀರ್ಥಗಳಿರುವ ವಿಭಿನ್ನ ದೇಶಗಳನ್ನು ನೋಡಬಯಸುತ್ತೇನೆ. ಗುರುಗಳೆ, ಇದಕ್ಕೆ ಅನುಮತಿಯನ್ನು ಕೊಡಬೇಕು" ಎಂದು ಅವರ ಅನುಜ್ಞೆಯನ್ನು ಬೇಡಿದನು.

ಸ ಕ್ಷೇತ್ರವಾಸೋ ನಿಕಟೇ ಗುರೋರ್ಯೋ
ವಾಸಸ್ತದೀಯಾಂಘ್ರಿಜಲಂ ಚ ತೀರ್ಥಮ್ |
ಗುರೂಪದೇಶೇನ ಯದಾತ್ಮದೃಷ್ಟಿಃ
ಸೈವ ಪ್ರಶಸ್ತಾಽಖಿಲದೇವದೃಷ್ಟಿಃ || ೨

ಆಚಾರ್ಯರು ಹೀಗೆಂದರು: "ಗುರುವಿನ ಬಳಿ ವಾಸಮಾಡುವುದೇ ಕ್ಷೇತ್ರವಾಸ. ಗುರುವಿನ ಪಾದಜಲವು ತೀರ್ಥ. ಗುರೂಪದೇಶದಿಂದಾಗುವ ಯಾವ ಆತ್ಮದರ್ಶನವುಂಟೋ ಅದು ಪ್ರಶಸ್ತವಾದದ್ದು. ಸಕಲದೇವತಾದರ್ಶನವೂ ಅದೇ.

ಶುಶ್ರೂಷಮಾಣೇನ ಗುರೋಃ ಸಮೀಪೇ
ಸ್ಥೇಯಂ ನ ನೇಯಂ ಚ ತತೋಽನ್ಯದೇಶೇ |
ವಿಶಿಷ್ಯ ಮಾರ್ಗಶ್ರಮಕರ್ಶಿತಸ್ಯ
ನಿದ್ರಾಭಿಭೂತ್ಯಾ ಕಿಮು ಚಿಂತನೀಯಮ್ || ೩

"ಶುಶ್ರೂಷೆ ಮಾಡುವ ಶಿಷ್ಯನು ಗುರುವಿನ ಸಮೀಪದಲ್ಲಿರಬೇಕು. ಬೇರೆ ಸ್ಥಳದಲ್ಲಿ (ಆಯುಸ್ಸನ್ನು) ಕಳೆಯಬಾರದು. ವಿಶೇಷವಾಗಿ ಮಾರ್ಗಶ್ರಮದಿಂದ ಬಳಲಿದವನಿಗೆ ನಿದ್ರೆ ಬಂದು ಮುಸುಕುತ್ತದೆ. ಅವನಿಗೆ ಆತ್ಮಚಿಂತನವಾಗುತ್ತದೆಯೆ?

ಟಿಪ್ಪಣಿ:-ನೇಯಂ = ಶ್ಲೋಕದಲ್ಲಿ 'ಆಯುಃ' ಎಂದು ಅಧ್ಯಾಹಾರ. ಅಥವಾ ನೀಧಾತುವಿಗೆ ಗಮ್ ಧಾತ್ವರ್ಥವನ್ನೊಪ್ಪಿ -'ಅನ್ಯದೇಶಕ್ಕೆ ಹೋಗಬಾರದು ' ಎಂದು ಅರ್ಥಮಾಡಬೇಕು.

ದ್ವಿಧಾ ಹಿ ಸಂನ್ಯಾಸ ಉದೀರಿತೋಽಯಂ
ವಿಬುದ್ಧತತ್ತ್ವಸ್ಯ ಚ ತದ್ಬುಭುತ್ಸೋಃ |
ತತ್ತ್ವಂಪದಾರ್ಥೈಕ್ಯ ಉದೀರಿತೋಽಯಂ
ಯತ್ನಾತ್ತ್ವಮರ್ಥಃ ಪರಿಶೋಧನೀಯಃ || ೪

"ಸಂನ್ಯಾಸವು ಎರಡು ಬಗೆಯಾಗಿದೆ. ತತ್ತ್ವಜ್ಞಾನವಾದವನಿಗೆ ವಿದ್ವತ್ಸಂನ್ಯಾಸ. ತತ್ತ್ವವನ್ನು ತಿಳಿಯಬಯಸತಕ್ಕವನಿಗೆ ವಿವಿದಿಷಾಸಂನ್ಯಾಸ. ತತ್ ತ್ವಂ - ಪದಾರ್ಥಗಳ ವಿಷಯದಲ್ಲಿ (ವಿಚಾರಮಾಡಿ ಅನುಭವಕ್ಕೆ ತಂದುಕೊಳ್ಳುವುದಕ್ಕಾಗಿ) ಈ ವಿವಿದಿಷಾ ಸಂನ್ಯಾಸವು ಉಕ್ತವಾಗಿದೆ. ತ್ವಂ - ಪದಾರ್ಥವನ್ನು ವಿಶೇಷವಾಗಿ ಪರಿಶೋಧಿಸಬೇಕಾಗಿದೆ.

ವಿವರಣೆ : ತತ್ಪದಾರ್ಥವಾದ ಬ್ರಹ್ಮದ ಸ್ವರೂಪವನ್ನರಿಯುವುದು ಅಷ್ಟು ಕಠಿಣವಲ್ಲ. ತ್ವಂ ಪದಾರ್ಥವನ್ನು ತಿಳಿಯುವುದೇ ಕಠಿಣ. ಅದು ಗೊತ್ತಾಗದ ಹೊರತು ಐಕ್ಯಾನುಸಂಧಾನವು ಸಾಧ್ಯವಾಗುವುದಿಲ್ಲ. ನೀವು ವಿವಿದಿಷಾಸಂನ್ಯಾಸಿಗಳು. ನೀವು ಗುರುಗಳ ಬಳಿಯಲ್ಲಿಯೇ ಇರಬೇಕು. ತೀರ್ಥಯಾತ್ರೆ ಮೊದಲಾದ್ದರಲ್ಲಿ ಕಾಲಹರಣ ಮಾಡಬಾರದು - ಎಂದು ಅಭಿಪ್ರಾಯ.

ಸಂಭಾವ್ಯತೇ ಕ್ವ ಚ ಜಲಂ ಕ್ವ ಚ ನಾಸ್ತಿ ಪಾಥಃ
ಶಯ್ಯಾಸ್ಥಲಂ ಕ್ವಚಿದಿಹಾಸ್ತಿ ನ ಚ ಕ್ವಚಾಸ್ತಿ |
ಶಯ್ಯಾಸ್ಥಲೀಜಲನಿರೀಕ್ಷಣಸಕ್ತಚೇತಾಃ
ಪಾಂಥೋ ನ ಶರ್ಮ ಲಭತೇ ಕಲುಷೀಕೃತಾತ್ಮಾ || ೫

"ಪಥಿಕನಾದರೋ "ಎಲ್ಲಿ ನೀರು ಸಿಗಬಹುದು? ಎಲ್ಲಿ ಸಿಗದೆ ಇರಬಹುದು? ಮಲಗಲು ಸ್ಥಳ ಈ ಊರಲ್ಲಿ ಎಲ್ಲಿ ದೊರೆಯಬಹುದು? ಅಥವಾ ಎಲ್ಲಿ ಹೋದರೆ ದೊರೆಯದೆ ಹೋಗಬಹುದು?" - ಈ ಪ್ರಕಾರವಾಗಿ ಶಯನಸ್ಥಳ ಜಲಾದಿಗಳ ಅನ್ವೇಷಣೆಯಲ್ಲಿ ಮನಸ್ಸನ್ನು ತೊಡಗಿಸುತ್ತಾನೆ. ಮನಸ್ಸು ಕಲುಷಿತವಾಗುವುದರಿಂದ ಅವನಿಗೆ ನೆಮ್ಮದಿ ಇರುವುದಿಲ್ಲ.

ಜ್ವರಾತಿಸಾರಾದಿ ಚ ರೋಗಜಾಲಂ
ಬಾಧೇತ ಚೇತ್ತರ್ಹಿ ನ ಕೋಽಪ್ಯುಪಾಯಃ |
ಸ್ಥಾತುಂ ಚ ಗಂತುಂ ಚ ನ ಪಾರಯೇತ
ತದಾ ಸಹಾಯೋಽಪಿ ವಿಮುಂಚತೀಮಮ್ || ೬

"ತೀರ್ಥಯಾತ್ರೆಗೆ ಹೊರಟ ಪಾಂಥನಿಗೆ ಜ್ವರ, ಅತಿಸಾರ - ಮೊದಲಾದ ರೋಗಗಳುಂಟಾಗಿ ಬಾಧೆಯಾಗಬಹುದು. ಅದಕ್ಕೆ ಪರಿಹಾರೋಪಾಯವೂ ಇರುವುದಿಲ್ಲ. ಒಂದು ಕಡೆ ಇರಲು ಅನುಕೂಲವಿಲ್ಲ, ಮುಂದೆ ಹೋಗಲು ಸಾಧ್ಯವಿಲ್ಲ -ಎಂಬ ಪರಿಸ್ಥಿತಿಯುಂಟಾಗಿ ಬಿಡುತ್ತದೆ. ಜೊತೆಗೆ ಬಂದವನೂ ಬಿಟ್ಟು ಹೋಗುತ್ತಾನೆ!

ಸ್ನಾನಂ ಪ್ರಭಾತೇ ನ ಚ ದೇವತಾರ್ಚನಂ
ಕ್ವ ಚೋಕ್ತಶೌಚಂ ಕ್ವ ಚ ವಾ ಸಮಾಧಯಃ |
ಕ್ವ ಚಾಶನಂ ಕುತ್ರ ಚ ಮಿತ್ರಸಂಗತಿಃ
ಪಾಂಥೋ ನ ಶಾಕಂ ಲಭತೇ ಕ್ಷುಧಾತುರಃ || ೭

ಪ್ರಾತಃಕಾಲದಲ್ಲಿ ನಿಯತವಾದ ಸ್ನಾನವಿರುವುದಿಲ್ಲ. ದೇವತಾರ್ಚನೆ ಇಲ್ಲ. ಇನ್ನು ಧ್ಯಾನಾದಿಗಳು ಎಲ್ಲಿರುತ್ತವೆ? ಊಟವೆಲ್ಲಿ? ಸ್ನೇಹಿತರ ಸಹಾಯವಿರುತ್ತದೆಯೆ? ತೀರ್ಥಯಾತ್ರೆಗೆ ಹೊರಟ ಪಾಂಥನು ಹಸಿವಿನಿಂದ ಬಳಲಿದಾಗ ತಿನ್ನಲು ಸೊಪ್ಪುಸೆದೆಯೂ ಇಲ್ಲದೆ ಹೋದೀತು!"ಎಂದು ನುಡಿದರು.

ನಾಸ್ತ್ಯುತ್ತರಂ ಗುರುಗಿರಸ್ತದಪೀಹ ವಕ್ಷ್ಯೇ
ಸತ್ಯಂ ಯದಾಹ ಭಗವಾನ್ ಗುರುಪಾರ್ಶ್ವವಾಸಃ |
ಶ್ರೇಯಾನಿತಿ ಪ್ರಥಮಸಂಯಮಿನಾಮನೇಕಾನ್
ದೇಶಾನವೀಕ್ಷ್ಯ ಹೃದಯಂ ನ ನಿರಾಕುಲಂ ಮೇ || ೮

ಆಗ ಪದ್ಮಪಾದಾಚಾರ್ಯನು ಹೇಳಿದನು- "ಗುರುಗಳ ಮಾತಿಗೆ ನನ್ನಲ್ಲಿ ಉತ್ತರವಿಲ್ಲ. ಆದರೂ ಇಷ್ಟನ್ನು ಹೇಳುವೆನು. ಗುರುವಿನ ಬಳಿಯಲ್ಲಿಯೇ ವಾಸಮಾಡುವುದು ಶ್ರೇಯಸ್ಕರವೆಂದು ಭಗವತ್ಪಾದರು ಹೇಳಿದ್ದು ಸತ್ಯವೇ ಸರಿ. ಅದು ನೂತನ ಸಂನ್ಯಾಸಿಗಳಿಗೆ ಅನ್ವಯಿಸಬಹುದು. ನನಗಾದರೋ ನಾನಾದೇಶಗಳನ್ನು ನೋಡದೆ ಇದ್ದರೆ ಹೃದಯದ ವ್ಯಾಕುಲತೆ ಹೋಗುವುದೇ ಇಲ್ಲ.

ಸರ್ವತ್ರ ನ ಕ್ವಾಪಿ ಜಲಂ ಸಮಸ್ತಿ
ಪಶ್ಚಾತ್ ಪುರಸ್ತಾದಥವಾ ವಿದಿಕ್ಷು |
ಮಾರ್ಗೋ ಹಿ ವಿದ್ಯೇತ ನ ಸುವ್ಯವಸ್ಥಃ
ಸುಖೇನ ಪುಣ್ಯಂ ಕ್ವ ನು ಲಭ್ಯತೇಽಧುನಾ || ೯

"ಎಲ್ಲ ಕಡೆಯೂ ನೀರು ಇರುವುದಿಲ್ಲವೆಂಬ ಕೊರತೆ ಸರ್ವತ್ರ ಇದ್ದೇ ಇದೆ. ಅಲ್ಲದೆ ದಿಕ್ಕಿನ ಮೂಲೆ ಮೂಲೆಗಳಲ್ಲಿಯೂ ವ್ಯವಸ್ಥಿತವಾದ ದಾರಿಯೂ ಇರುವುದಿಲ್ಲ. ಆದರೆ ಸುಖವಾಗಿ ಪುಣ್ಯವು ಎಲ್ಲಿ ಲಭಿಸುತ್ತದೆ?

ಜನ್ಮಾಂತರಾರ್ಜಿತಮಘಂ ಫಲದಾನಹೇತೋ -
ರ್ವ್ಯಾಧ್ಯಾತ್ಮನಾ ಜನಿಮುಪೈತಿ ನ ನೋ ವಿವಾದಃ ।
ಸಾಧಾರಣಾದಿಹ ಚ ವಾ ಪರದೇಶಕೇ ವಾ
ಕರ್ಮ ಹ್ಯಭುಕ್ತಮನುವರ್ತತ ಏವ ಜಂತುಮ್ ॥ ೧೦

"ಜನ್ಮಾಂತರದಲ್ಲಿ ನಾವು ಮಾಡಿದ ಪಾಪವು ಫಲವನ್ನೀಯುವುದಕ್ಕಾಗಿ ವ್ಯಾಧಿರೂಪದಿಂದ ಹುಟ್ಟಿಕೊಳ್ಳುತ್ತದೆ. ಅದರಲ್ಲಿ ನಮಗೆ ವಿವಾದವೇನೂ ಇಲ್ಲ. ಇಲ್ಲಿದ್ದರೂ ಪರಸ್ಥಳಕ್ಕೆ ಹೋದರೂ ಅದು ಸಮಾನವೇ. ಅನುಭವಿಸದೇ ಉಳಿದಿರುವ ಸಂಚಿತಕರ್ಮವು ಮನುಷ್ಯನನ್ನು ಹಿಂಬಾಲಿಸಿಕೊಂಡು ಬಂದೇ ಬರುತ್ತದೆ.

ಇಹ ಸ್ಥಿತಂ ವಾ ಪರತಃ ಸ್ಥಿತಂ ವಾ
ಕಾಲೋ ನ ಮುಂಚೇತ್ ಸಮಯಾಗತಶ್ಚೇತ್ ।
ತದ್ದೇಶಗತ್ಯಾಽಮೃತ ದೇವದತ್ತ
ಇತ್ಯಾದಿಕಂ ಮೋಹಕೃತಂ ಜನಾನಾಮ್ ॥ ೧೧

"ಇಲ್ಲಿ ಇದ್ದವನನ್ನಾಗಲಿ ಪರದೇಶಕ್ಕೆ ಹೋದವನನ್ನಾಗಲಿ ಫಲಭೋಗದ ಸಮಯವು ಬಂದರೆ ಕಾಲವು ಬಿಡುವುದೇ ಇಲ್ಲ. ಆ ದೇಶಕ್ಕೆ ಹೋದ್ದರಿಂದ ದೇವದತ್ತನು ಮೃತನಾದನು - ಇತ್ಯಾದಿಯಾಗಿ ಹೇಳುವುದು ಜನರ ಅಜ್ಞಾನದಿಂದ.

ಟಿಪ್ಪಣಿ :- ಅಮೃತ = ಮೃಙ್ ಪ್ರಾಣತ್ಯಾಗೇ ಎಂಬ ಧಾತುವಿನ ಲುಙ್. ಪ್ರ. ಪು. ಏಕವಚನ.

ಮನ್ವಾದಯೋ ಮುನಿವರಾಃ ಖಲು ಧರ್ಮಶಾಸ್ತ್ರೇ
ಧರ್ಮಾದಿ ಸಂಕುಚಿತಮಾಹುರತಿಪ್ರವೃದ್ಧಮ್ ।
ದೇಶಾದ್ಯವೇಕ್ಷ್ಯ ನ ತು ತತ್ಸರಣಿಂ ಗತಾನಾಂ
ಶೌಚಾದ್ಯತಿಕ್ರಮಕೃತಂ ಪ್ರಭವೇದಘಂ ನಃ ॥ ೧೨

"ಮನುವೇ ಮೊದಲಾದ ಮುನಿಶ್ರೇಷ್ಠರು ಧರ್ಮಶಾಸ್ತ್ರದಲ್ಲಿ ವಿಸ್ತೃತವಾದ ಧರ್ಮವೇ ಮೊದಲಾದ್ದನ್ನು ದೇಶಕಾಲಗಳಿಗೆ ಅನುಸಾರವಾಗಿ ಸಂಕೋಚಮಾಡಿ ಹೇಳಿದ್ದಾರಲ್ಲವೆ? ಆ ಕ್ರಮವನ್ನು ಅನುಸರಿಸುವ ನಮಗೆ ಶೌಚಾದಿಗಳ ಅತಿಕ್ರಮದಿಂದ ಪಾಪವೇನೂ ಬರುವುದಿಲ್ಲ.

ದೈವೇಽನುಕೂಲೇ ವಿಪಿನಂ ಗತೋ ವಾ
ಸಮಾಪ್ನುಯಾದ್ವಾಂಛಿತಮನ್ನಮೇಷಃ ।
ಹ್ರಿಯೇತ ನಶ್ಯೇದಪಿ ವಾ ಪುರಃಸ್ಥಂ
ತಸ್ಮಿನ್ ಪ್ರತೀಪೇ ತತ ಏವ ಸರ್ವಮ್ ॥ ೧೩

"ದೈವವು ಅನುಕೂಲವಾಗಿದ್ದರೆ, ಕಾಡಿಗೆ ಹೋದವನೂ ಸಹ ಇಷ್ಟವಾದ ಆಹಾರವನ್ನು ಪಡೆದಾನು. ದೈವವು ಪ್ರತಿಕೂಲವಾಗಿದ್ದರೆ ಎದುರಿಗಿರುವ ಆಹಾರವೆಲ್ಲವೂ ಅನ್ಯರಿಂದ ಅಪಹೃತವಾಗಬಹುದು. ಅಥವಾ ನಾಶವಾಗಿ ಬಿಡಬಹುದು.

ಗೃಹಂ ಪರಿತ್ಯಜ್ಯ ವಿದೇಶಗೋ ನಾ
ಸುಖಂ ಸಮಾಗಚ್ಛತಿ ತೀರ್ಥದೃಶ್ವಾ ।
ಗೃಹಂ ಗತೋ ಯಾತಿ ಮೃತಿಂ ಪುರಸ್ತಾತ್
ತದಾಗಮಾದತ್ರ ಚ ಕಿಂ ನಿಮಿತ್ತಮ್ ॥ ೧೪

"ಮನೆಯನ್ನು ಬಿಟ್ಟು ವಿದೇಶಕ್ಕೆಹೋದ ಮನುಷ್ಯನು ತೀರ್ಥಗಳ ದರ್ಶನವನ್ನು ಮಾಡಿಕೊಂಡು ಸುಖವಾಗಿ ಹಿಂದಿರುಗಿ ಬರುತ್ತಾನೆ. ಹೋಗದೆ ಮನೆಯಲ್ಲಿರತಕ್ಕವನು, ಯಾತ್ರಾರ್ಥಿಯು ಹಿಂದಿರುಗಿ ಬರುವ ಮೊದಲೇ ಸಾವನ್ನು ಅಪ್ಪುತ್ತಾನೆ. ಇದಕ್ಕೆ ನಿಮಿತ್ತವೇನು?

ದೇಶೇ ಕಾಲೇಽವಸ್ಥಿತಂ ತದ್ವಿಮುಕ್ತಂ
ಬ್ರಹ್ಮಾನಂದಂ ಪಶ್ಯತಾಂ ತತ್ರ ತತ್ರ ।
ಚಿತ್ತೈಕಾಗ್ರ್ಯೇ ವಿದ್ಯಮಾನೇ ಸಮಾಧಿಃ
ಸರ್ವತ್ರಾಸೌ ದುರ್ಲಭೋ ನೇತಿ ಮನ್ಯೇ ॥ ೧೫

"ದೇಶಕಾಲ ವಿಮುಕ್ತವಾದ ಬ್ರಹ್ಮಾನಂದವು ಎಲ್ಲ ದೇಶಕಾಲಗಳಲ್ಲಿಯೂ ಇದ್ದೇ ಇರುತ್ತದೆ. ಚಿತ್ತದ ಏಕಾಗ್ರತೆ ಇರತಕ್ಕವರು ಎಲ್ಲ ಕಡೆಯಲ್ಲಿಯೂ ಬ್ರಹ್ಮಾನಂದವನ್ನು ಕಾಣತಕ್ಕವರಾದ್ದರಿಂದ ಅವರಿಗೆ ಸಮಾಧಿಯು ಸರ್ವತ್ರ ದುರ್ಲಭವಲ್ಲವೆಂದು ನಾನು ಭಾವಿಸಿದ್ದೇನೆ.

ಸತ್ತೀರ್ಥಸೇವಾ ಮನಸಃ ಪ್ರಸಾದಿನೀ
ದೇಶಸ್ಯ ವೀಕ್ಷಾ ಮನಸಃ ಕುತೂಹಲಮ್ ।
ಕ್ಷಿಣೋತ್ಯನರ್ಥಾನ್ ಸುಜನೇನ ಸಂಗಮ -
ಸ್ತಸ್ಮಾನ್ನ ಕಸ್ಮೈ ಭ್ರಮಣಂ ವಿರೋಚತೇ ॥ ೧೬

"ತೀರ್ಥಯಾತ್ರೆಯು ಮನಸ್ಸಿಗೆ ಪ್ರಸನ್ನತೆಯನ್ನುಂಟುಮಾಡುತ್ತದೆ. ದೇಶವನ್ನು ನೋಡಬೇಕೆಂಬುದು ಮನಸ್ಸಿನ ಒಂದು ಕುತೂಹಲ. ಸಜ್ಜನರ ಸಹವಾಸವು ಅನರ್ಥಗಳನ್ನು ಹೋಗಲಾಡಿಸುತ್ತದೆ. ಆದ್ದರಿಂದ ತೀರ್ಥಾಟನೆಯು ಯಾರಿಗೆ ರುಚಿಸದೆ ಇದ್ದೀತು?

ಅಟಾಟ್ಯಮಾನೋಽಪಿ ವಿದೇಶಸಂಗತಿಂ
ಲಭೇತ ವಿದ್ವಾನ್ ವಿದುಷಾಽಭಿಸಂಗತಿಮ್ |
ಬುಧೋ ಬುಧಾನಾಂ ಖಲು ಮಿತ್ರಮೀರಿತಂ
ಖಲೇನ ಮೈತ್ರೀ ನ ಚಿರಾಯ ತಿಷ್ಠತಿ || ೧೭

"ವಿದೇಶಸಂಚಾರವನ್ನವಲಂಬಿಸಿ ಅಲೆದಾಡುತ್ತಿದ್ದರೂ ವಿದ್ವಾಂಸನು ವಿದ್ವಜ್ಜನರ ಸಹವಾಸವನ್ನು ಪಡೆಯುತ್ತಾನೆ. ಪಂಡಿತರಿಗೆ ಪಂಡಿತನು ಮಿತ್ರನೆಂದು ಉಕ್ತವಾಗಿದೆಯಲ್ಲವೆ? ಖಳಜನರೊಡನೆ ಸ್ನೇಹವು ಬಹಳಕಾಲ ನಿಲ್ಲತಕ್ಕದ್ದಲ್ಲ.

ಸಮೀಪವಾಸೋಽಯಮುದೀರಿತೋ ಗುರೋ-
ರ್ವಿದೇಶಗೋ ಯದ್ ಹೃದಯೇನ ಧಾರಯೇತ್ |
ಸಮೀಪಗೋಽಪ್ಯೇಷ ನ ಸಂಸ್ಥಿತೋಽಂತಿಕೇ
ನ ಭಕ್ತಿಹೀನೋ ಯದಿ ಧಾರಯೇತ್ ಹೃದಿ || ೧೮

"ದೇಶಾಂತರಕ್ಕೆ ಹೋದವನು ಹೃದಯದಲ್ಲಿ ಗುರುವನ್ನು ಧರಿಸಿದ್ದರೆ ಆಗ ಗುರು-ಸಮೀಪದಲ್ಲಿ ವಾಸವಾಯಿತೆಂದೇ ಹೇಳುತ್ತಾರೆ. ಸಮೀಪದಲ್ಲಿದ್ದವನೂ ಸಹ ಭಕ್ತಿಹೀನನಾಗಿ ಹೃದಯದಲ್ಲಿ ಗುರುವನ್ನು ಧರಿಸದಿದ್ದರೆ ಅವನು ಗುರುಸಮೀಪದಲ್ಲಿ ಇದ್ದವನೇ ಅಲ್ಲ!

ಸುಜನಃ ಸುಜನೇನ ಸಂಗತಃ
ಪರಿಪುಷ್ಣಾತಿ ಮತಿಂ ಶನೈಃ ಶನೈಃ |
ಪರಿಪುಷ್ಟಮತಿರ್ವಿವೇಕವಾನ್
ಶನಕೈರ್ಹೇಯಗುಣಂ ವಿಮುಂಚತಿ || ೧೯

ಸತ್ಪುರುಷನು ಸತ್ಪುರುಷನೊಡನೆ ಸೇರಿದಾಗ ಮೆಲ್ಲಮೆಲ್ಲನೆ ತನ್ನ ಬುದ್ಧಿಯನ್ನು ಬೆಳೆಸಿಕೊಳ್ಳುತ್ತಾನೆ. ಅವನ ಬುದ್ಧಿಯು ಬೆಳೆದು ವಿವೇಕಶಾಲಿಯಾಗಿ ದುರ್ಗುಣವನ್ನು ಕ್ರಮವಾಗಿ ತ್ಯಜಿಸುತ್ತಾನೆ." ಎಂದು ಹೇಳಿದನು.

ಯದ್ಯಾಗ್ರಹೋಽಸ್ತಿ ತವ ತೀರ್ಥನಿಷೇವಣಾಯಾಂ
ವಿಘ್ನೋ ಮಯಾಽತ್ರ ನ ಖಲು ಕ್ರಿಯತೇ ಪುಮರ್ಥೇ |
ಚಿತ್ತಸ್ಥಿರತ್ವಗತಯೇ ವಿಹಿತೋ ನಿಷೇಧೋ
ಮಾ ಭೂದ್ವಿಶೇಷಗಮನಂ ತ್ವತಿದುಃಖಹೇತುಃ || ೨೦

ಆಗ ಶ್ರೀಶಂಕರರು ಇಂತೆಂದರು. " ನಿನಗೆ ತೀರ್ಥಯಾತ್ರೆ ಮಾಡುವುದರಲ್ಲಿ ಹಠವಿದ್ದರೆ ನಾನೇನೂ ಅದಕ್ಕೆ ವಿಘ್ನವನ್ನು ಮಾಡುವುದಿಲ್ಲ. ಪುರುಷಾರ್ಥಸಾಧನೆಗಾಗಿ ಚಿತ್ತದ ಸ್ಥಿರತ್ವವು

ಒಂದೇ ರೀತಿ ಇರಲೆಂದು ಯಾತ್ರೆಯನ್ನು ನಿಷೇಧಿಸಿದೆನು. ಅತ್ಯಂತ ದುಃಖಕ್ಕೆ ಕಾರಣವಾಗುವುದರಿಂದ ವಿಶೇಷವಾಗಿ ಅಲೆದಾಡದಿರು.

ನೈಕೋ ಮಾರ್ಗೋ ಬಹುಜನಪದಕ್ಷೇತ್ರ ತೀರ್ಥಾನಿ ಯಾತಾಂ
ಚೌರಾಢ್ಯಾನಂ ಪರಿಹರ ಸುಖಂ ತ್ವನ್ಯಮಾರ್ಗೇಣ ಯಾಹಿ |
ವಿಪ್ರಾಗ್ರ್ಯಾಣಾಂ ವಸತಿವಿತತಿರ್ಯತ್ರ ವಸ್ತವ್ಯಮೀಷ -
ನ್ನೋ ಚೇತ್ಸಾರ್ಧಂ ಪರಿಚಿತಜನೈಃ ಶೀಘ್ರಮುದ್ದಿಷ್ಟದೇಶಮ್ || ೨೧

"ನಾನಾ ದೇಶ, ಕ್ಷೇತ್ರ, ತೀರ್ಥಗಳಿಗೆ ಹೋಗತಕ್ಕವರಿಗೆ ದಾರಿ ಒಂದೇ ಆಗಿರುವುದಿಲ್ಲ. ಕಳ್ಳರಿರುವ ದಾರಿಯನ್ನು ತ್ಯಜಿಸು. ಬೇರೆ ದಾರಿಯಲ್ಲಿ ಸುಖವಾಗಿ ಹೋಗು. ವಿಪ್ರೋತ್ತಮರ ವಸತಿಯು ಎಲ್ಲಿ ಹೆಚ್ಚಾಗಿದೆಯೋ ಅಲ್ಲಿ ಸ್ವಲ್ಪಕಾಲ ಇರಬಹುದು. ವಿಪ್ರವಸತಿಯು ಇಲ್ಲದಿದ್ದರೆ ಪರಿಚಿತಜನರೊಡನೆ ಉದ್ದಿಷ್ಟವಾದ ಸ್ಥಳಕ್ಕೆ ಶೀಘ್ರವಾಗಿ ಹೊರಟುಹೋಗಬೇಕು.

ಟಿಪ್ಪಣಿ : ಯಾತಾಂ = ಯಾಧಾತು. ಶತೃ ಪ್ರತ್ಯಯ, ಷಷ್ಠಿಬಹುವಚನ.

ಸದ್ಭಿಃ ಸಂಗೋ ವಿಧೇಯಃ ಸ ಹಿ ಸುಖನಿಚಯಂ ಸೂಯತೇ ಸಜ್ಜನಾನಾ-
ಮಧ್ಯಾತ್ಮೈಕ್ಯೇ ಕಥಾಸ್ತಾ ಘಟಿತಬಹುರಸಾಃ ಶ್ರಾವ್ಯಮಾಣಾಃ
ಪ್ರಶಾಂತ್ಯೈಃ |
ಕಾಯಕ್ಲೇಶಂ ವಿಭಿಂದ್ಯುಃ ಸತತಭಯಭಿದಃ ಶ್ರಾಂತವಿಶ್ರಾಮವೃಕ್ಷಾಃ
ಸ್ವಾಂತಶ್ರೋತ್ರಾಭಿರಾಮಾಃ ಪರಿಮೃಷಿತತೃಷಃ ಕ್ಷೋಭಿತಕ್ಷುತ್ಕಲಂಕಾಃ ||

"ಸಜ್ಜನರೊಡನೆಯೇ ಸಂಗವನ್ನು ಮಾಡಬೇಕು. ಅದು ಸಜ್ಜನರಾದವರಿಗೆ ಪರಮಸುಖವನ್ನೀಯುತ್ತದೆ. ಅಧ್ಯಾತ್ಮ ವಿಷಯದಲ್ಲಿ ಶಾಂತರಾದವರು ಹೇಳುವ ರಸವತ್ತಾದ ಮಾತು ಕಥೆಗಳು ಪಥಿಕರ ದೇಹಾಯಾಸವನ್ನು ಹೋಗಲಾಡಿಸುತ್ತವೆ. ಅವು ಸತತವೂ ನಮ್ಮ ಭಯವನ್ನು ನಿವಾರಿಸುತ್ತವೆ. ನಡೆದು ಶ್ರಾಂತರಾದವರಿಗೆ ವಿಶ್ರಾಂತಿಯನ್ನು ಪಡೆಯಲು ಮಾರ್ಗವೃಕ್ಷಗಳಾಗಿರುತ್ತವೆ. ಆ ಮಾತುಕಥೆಗಳು ಮನಸ್ಸಿಗೂ ಕಿವಿಗೂ ಆನಂದಕರವಾಗಿ ಇರುತ್ತವೆ. ಸಜ್ಜನರೊಡನೆ ಸಂಲಾಪಗಳು ನಮ್ಮ ಬಾಯಾರಿಕೆಯನ್ನು ಹೋಗಲಾಡಿಸುತ್ತವೆ; ಹಸಿವೆಂಬ ಕೊರತೆಯನ್ನೂ ನೀಗಿಸುತ್ತವೆ.

ಸತ್ಸಂಗೋಽಯಂ ಬಹುಗುಣಯುತೋಽಪ್ಯೇಕದೋಷೇಣ ದುಷ್ಟೋ
ಯತ್ ಸ್ವಾಂತೇಽಯಂ ತಪತಿ ಚ ಪರಂ ಸೂಯತೇ ದುಃಖಜಾಲಮ್ |
ಖಲ್ವಾಸಂಗೋ ವಸತಿ ಸಮಯೇ ಶರ್ಮದಃ ಪೂರ್ವಕಾಲೇ
ಪ್ರಾಯೋ ಲೋಕೇ ಸತತವಿಮಲಂ ನಾಸ್ತಿ ನಿರ್ದೋಷಮೇಕಮ್ ||

"ಸತ್ಸಂಗದಲ್ಲಿ ಬಹಳ ಗುಣಗಳಿದ್ದರೂ ಒಂದೇ ದೋಷದಿಂದ ದುಷ್ಟವಾಗಿದೆ! ಏನೆಂದರೆ, ಇದು ತನ್ನ ಅಂತ್ಯವಾದಾಗ - ಸತ್ಸಂಗವು ಮುಗಿದಮೇಲೆ (ವಿರಹ) ಖೇದವನ್ನೂ ದುಃಖವನ್ನೂ ಉಂಟುಮಾಡುತ್ತದೆ! ಮೊದಲು ಸಂತರ ಜೊತೆಯಲ್ಲಿದ್ದಾಗ ಮಾತ್ರ ಅದು ಸುಖವನ್ನು ನೀಡುತ್ತದೆ. ಪ್ರಾಯಶಃ ಈ ಲೋಕದಲ್ಲಿ ಸದಾ ಪರಿಶುದ್ಧವಾದದ್ದೂ ದೋಷಮುಕ್ತವಾದದ್ದೂ ಒಂದೂ ಇಲ್ಲ.

ಟಿಪ್ಪಣಿ :- ಮೂರನೇ ಪಾದದ ಆದಿಯಲ್ಲಿರುವ 'ಖಲು' ಶಬ್ದಪ್ರಯೋಗವು ಆಲಂಕಾರಿಕ ಸಮ್ಮತವಲ್ಲ. 'ನ ಪಾದಾದೌ ಖಲ್ವದಯಃ' ಎಂದು ವಾಮನನ ಕಾವ್ಯಾಲಂಕಾರಸೂತ್ರವಿದೆ.

ಮಾರ್ಗೇ ಯಾಸ್ಯನ್ನ ಬಹುದಿವಸಾನ್ ಪಾಥಸಃ ಸಂಗ್ರಹೀ ಸ್ಯಾ -
ತ್ತಸ್ಮಾದ್ದೋಷೋ ಜಿಗಮಿಷುಪದಪ್ರಾಪ್ತಿವಿಘ್ನಸ್ತತಃ ಸ್ಯಾತ್ |
ಪ್ರಾಪ್ಯೋದ್ದಿಷ್ಟಂ ವಸ ನಿರಶನಂ ತತ್ರ ಕಾರ್ಯಸ್ಯ ಸಿದ್ಧೇ -
ರ್ಮೂಲಾದ್ಭ್ರಂಶೋಽಭಿಲಷಿತಪದಪ್ರಾಪ್ತ್ಯಭಾವೋಽನ್ಯಥಾ ಹಿ || ೨೪

ಯಾತ್ರಾರ್ಥಿಯಾದ ನೀನು ಬಹಳದಿವಸ ದಾರಿಹಿಡಿದು ಹೋಗಬೇಕಾಗುವುದು. ಆದರೂ ಜೊತೆಗೆ ಪಾಥೇಯವನ್ನು (ಆಹಾರವನ್ನು) ಸಂಗ್ರಹಿಸಿಕೊಂಡು ಹೋಗಬಾರದು. ಮುಮುಕ್ಷುವು ಹೋಗಿಸೇರಬೇಕಾದ ಗುರಿಗೆ ಅದರಿಂದ ವಿಘ್ನವಾದೀತು. ಉಪವಾಸಮಾಡುತ್ತಲೇ ಉದ್ದಿಷ್ಟಸ್ಥಳಕ್ಕೆ ಹೋಗಿ ವಸತಿಮಾಡು. ಅಲ್ಲಿ ಕಾರ್ಯಸಿದ್ಧಿಯಾಗುತ್ತದೆ (ಆಹಾರವು ದೊರೆಯುತ್ತದೆ). ಅನ್ಯಥಾ (ಆಹಾರಸಂಗ್ರಹ ಮಾಡಿಕೊಂಡು ಹೋಗುವುದಾದರೆ) ತೀರ್ಥಯಾತ್ರೆಯ ಮೂಲೋದ್ದೇಶಕ್ಕೆ ಭಂಗವಾದೀತು. ಅಪೇಕ್ಷಣೀಯವಾದ ಪುಣ್ಯ ಪ್ರಾಪ್ತಿಯೂ ಆಗುವುದಿಲ್ಲ.

ಟಿಪ್ಪಣಿ :- ಪಾಥಃ= ಇಲ್ಲಿ ಪಾಥೇಯ - ಅನ್ನ ಎಂದರ್ಥ.'ಉದಕೇ ಥುಟ್‌ಚ, ಅನ್ನೇ ಚ' ಎಂಬ ಉಣಾದಿಸೂತ್ರಗಳಿಂದ(೪-೨೦೩, ೨೦೪) ಈ ಶಬ್ದವು ನಿಷ್ಪನ್ನವಾಗಿದೆ. ಪಾಥೋ ಭಕ್ತಂ- ಎಂದು ಸಿ.ಕೌ. ಅಪ್ಟೇಯವರ ಸಂಸ್ಕೃತ - ಇಂಗ್ಲೀಷ್ ಕೋಶದಲ್ಲಿಯೂ ಈ ಅರ್ಥವಿದೆ. 'ನಿರಸನಂ' ಎಂಬ ಪಾಠವನ್ನು 'ನಿರಶನಂ' ಎಂದು ತಿದ್ದಿಕೊಂಡಿದ್ದೇನೆ. ಪಾಥಃ = ಜಲಂ, ನಿರಸನಂ= ಬಾಧಃ - ಎಂದು ಡಿಂಡಿಮವ್ಯಾಖ್ಯಾನ.

ಮಾರ್ಗೇ ಚೋರಾ ನಿಕೃತಿವಪುಷಃ ಸಂವಸೇಯುಃ ಸಹೈವ
ಧನ್ಯಾತ್ಮಾನೋ ಬಹುವಿಧಗುಣೈಃ ಸಂಪರೀಕ್ಷ್ಯಾಃ ಪ್ರಯತ್ನಾತ್ |
ದೇವಾನ್ ವಸ್ತ್ರಂ ಲಿಖಿತಮಥವಾ ದುರ್ವಿಧಾ ನೇತುಕಾಮಾ
ವಿಶ್ವಾಸೋಽತೋಽಪರಿಚಿತನೃಷು ಪ್ರೋಜ್ಝನೀಯೋ ನ ಕಾರ್ಯಃ ||

ಮಾರ್ಗದಲ್ಲಿ ವಂಚನಾಪಟುಗಳಾದ ಕಳ್ಳಜನರು, ನಾನಾ ಸದ್ಗುಣಗಳನ್ನು ತೋರಿಸಿ ತಮ್ಮ ಸ್ವರೂಪವನ್ನು ಮುಚ್ಚಿಕೊಂಡು ಜೊತೆಯಲ್ಲಿಯೇ ಬಂದು ಸೇರಿಕೊಂಡಾರು. ಅವರನ್ನು ಪ್ರಯತ್ನಪೂರ್ವಕವಾಗಿ ಪರೀಕ್ಷಿಸಬೇಕು. ಆ ದುಷ್ಟರಿಗೆ ದೇವತಾವಿಗ್ರಹಗಳನ್ನೋ

ಬಟ್ಟೆಯನ್ನೋ ಅಥವಾ ಹಸ್ತಲಿಖಿತಪುಸ್ತಕವನ್ನೋ ಅಪಹರಿಸುವ ಉದ್ದೇಶವಿರುತ್ತದೆ. ಆದ್ದರಿಂದ ಅಪರಿಚಿತರಲ್ಲಿ ವಿಶ್ವಾಸವನ್ನು ವರ್ಜಿಸಬೇಕು. ವಿಶ್ವಾಸವನ್ನಿಡಬಾರದು.

ಮಧ್ಯೇಮಾರ್ಗಂ ಯೋಜನಾಭ್ಯಂತರೇ ವಾ
ತಿಷ್ಠೇಯುಶ್ಚೇದ್ಭಿಕ್ಷವಸ್ತೇಽಭಿಗಮ್ಯಾಃ |
ಪೂಜ್ಯಾಃ ಪೂಜ್ಯಾಸ್ತದ್ವ್ಯತಿ ಕ್ರಾಂತಿರುಗ್ರಾ
ಶ್ರೇಯಸ್ಕಾರ್ಯಂ ನಿಷ್ಫಲೀಕರ್ತುಮೀಶಾಃ || ೨೬

"ಮಧ್ಯಮಾರ್ಗದಲ್ಲಿ ಅಥವಾ ದಾರಿಗೆ ಒಂದು ಯೋಜನದೊಳಗೆ ಸಂನ್ಯಾಸಿಗಳು ಇದ್ದರೆ ಹೋಗಿ ದರ್ಶನವನ್ನು ತೆಗೆದುಕೊಳ್ಳಬೇಕು. ಪೂಜ್ಯರನ್ನು ಪೂಜಿಸಲೇ ಬೇಕು. ಮೀರಿ ನಡೆಯುವುದು ಬಹಳ ಕೆಟ್ಟದು. ಏಕೆಂದರೆ, ಪೂಜ್ಯರಾದ ಅವರು ನಮ್ಮ ಶ್ರೇಯಸ್ಸನ್ನು ತಡೆಯುವ ಸಾಮರ್ಥ್ಯವನ್ನು ಪಡೆದಿರುತ್ತಾರೆ.

ಯದಾಪದಪದಂ ಸದಾ ಯತಿವರ ಸ್ಥಿತಂ ವಸ್ತು ತ -
ನ್ಮತಂ ಭಜ ಮಿತಂಪಚಾನ್ ಮನಸಿ ಮಾ ಕೃಥಾಃ ಪ್ರಾಕೃತಾನ್ |
ಕಷಾಯಕಲುಷಾಶಯಕ್ಷತಿವಿನಿರ್ವೃತಃ ಸನ್ಮತಃ
ಸುಖೀ ಚರ ಸುಖೇ ಚಿರಾತ್ ಸ್ಫುರತಿ ಸಂತತಾನಂದತಾ || ೨೭

ಯತಿ ಶ್ರೇಷ್ಠ - ಪದ್ಮಪಾದ, ಯಾವುದಕ್ಕೆ ಆಪತ್ತುಗಳ ಲೇಶವೂ ಇಲ್ಲವೋ ಆ ಪೂಜ್ಯವಾದ ಬ್ರಹ್ಮವಸ್ತುವನ್ನು ಸದಾಭಜಿಸುತ್ತಿರು. ಕ್ಷುದ್ರವಾದ ಪ್ರಾಕೃತವಿಷಯಗಳನ್ನು ಮನಸ್ಸಿಗೂ ತಂದುಕೊಳ್ಳಬೇಡ. ಜನ್ಮಾಂತರಸಂಸ್ಕಾರದಿಂದ ಕಲುಷವಾದ ಹೃದಯದ ಕೊಳೆಯನ್ನು ತೊಡೆದುಹಾಕಿ ಸಂತುಷ್ಟನಾಗಿ ಸಜ್ಜನಪೂಜ್ಯನಾಗಿ ಸುಖವಾಗಿ ಸಂಚರಿಸುತ್ತಿರು. ಮನಸ್ಸಿನ ಸುಖದಲ್ಲಿಯೇ, ಬಹಳ ಕಾಲ ಆದಮೇಲೆ, ಸಂತತಾನಂದ ಸ್ವರೂಪವಾದ ಬ್ರಹ್ಮತತ್ತ್ವವು ಬೆಳಗುವುದು "-ಎಂದು ಹಿತೋಪದೇಶ ಮಾಡಿದರು.

ಇತ್ಥಂ ಗುರೋರ್ಮುಖ ಗುಹೋದಿತ ವಾಕ್ಸುಧಾಂ ತಾ -
ಮಾಪೀಯ ಹೃಷ್ಟಹೃದಯಃ ಸ ಮುನಿಃ ಪ್ರತಸ್ಥೇ |
ಪ್ರಸ್ಥಾಪ್ಯ ತಂ ಗುರುವರೋಽಥ ಸುರೇಶ್ವರಾದ್ಯೈಃ
ಕಾಲಂ ಕಿಯಂತಮನಯತ್ ಸಹ ಶೃಂಗಕುಧ್ರೇ || ೨೮

ಈ ಪ್ರಕಾರವಾಗಿ ಗುರುಗಳ ಹೃದಯಾಂತರಾಳದಿಂದ ಹೊರಬಂದ ಆ ವಾಗಮೃತವನ್ನು ಕುಡಿದು ಸಂತುಷ್ಟಹೃದಯನಾಗಿ ಪದ್ಮಪಾದಯತಿಯು ಪ್ರಯಾಣಮಾಡಿದನು. ಗುರುಶ್ರೇಷ್ಠರಾದ ಶ್ರೀಶಂಕರರು ಆತನನ್ನು ಕಳಿಸಿಕೊಟ್ಟು ಸುರೇಶ್ವರಾಚಾರ್ಯರೇ ಮೊದಲಾದ ಶಿಷ್ಯರೊಡನೆ ಶೃಂಗಗಿರಿಯಲ್ಲಿ ಕೆಲವು ಕಾಲವಿದ್ದರು.

ಅಧಿಗಮ್ಯ ತದಾಽತ್ಮಯೋಗಶಕ್ತೇ -
ರನುಭಾವೇನ ನಿವೇದ್ಯ ಚಾಽಽಶ್ರವೇಭ್ಯಃ |
ಅವಲಂಬಿತತಾರಕಾಪಥೋಽಸಾವ-
ಚಿರಾತ್ ಅಂತಿಕಮಾಸಸಾದ ಮಾತುಃ || ೨೯

ಆಮೇಲೆ ತಮ್ಮ ಯೋಗಶಕ್ತಿಯ ಮಹಿಮೆಯಿಂದ (ತಾಯಿಯ ವೃತ್ತಾಂತವನ್ನು) ತಿಳಿದು, ಆ ವಿಷಯವನ್ನು ಶಿಷ್ಯರಿಗೆ ತಿಳಿಸಿ, ಆಚಾರ್ಯರು ಆಕಾಶಮಾರ್ಗದಿಂದ ಶೀಘ್ರದಲ್ಲಿಯೇ ತಾಯಿಯ ಬಳಿಗೆ ಬಂದರು.

ತತ್ರಾಽಽತುರಾಂ ಮಾತರಮೈಕ್ಷತಾಸೌ
ನನಾಮ ತಸ್ಯಾಶ್ಚರಣೌ ಕೃತಾತ್ಮಾ |
ಸಾ ಚೈನಮುದ್ವೀಕ್ಷ್ಯ ಶರೀರತಾಪಂ
ಜಹೌ ನಿದಾಘಾರ್ತ ಇವಾಂಬುದೇನ || ೩೦

ಅಲ್ಲಿ ತಾಯಿಯು ವ್ಯಾಧಿಪೀಡಿತಳಾಗಿರುವುದನ್ನು ಕಂಡು ಅವಳ ಪಾದಗಳಿಗೆ ನಮಸ್ಕರಿಸಿ ಧನ್ಯರಾದರು. ತಾಯಿಯಾದ ಆರ್ಯಾಂಬೆಯು ತನ್ನ ಈ ಪುತ್ರನನ್ನು ವೀಕ್ಷಿಸಿ ಶರೀರಕ್ಕಾದ ರೋಗ ಪೀಡೆಯನ್ನು ಮರೆತಳು. ಬೇಸಿಗೆಯಿಂದ ಬಳಲಿದವನಿಗೆ ಮೋಡವನ್ನು ಕಂಡಂತೆ ಅವಳಿಗೆ ಸಂತೋಷವಾಯಿತು.

ಅಸಾವಸಂಗೋಽಪಿ ತದಾಽರ್ದ್ರಚೇತಾ -
ಸ್ತಾಮಾಹ ಮೋಹಾಂಧತಮೋಽಪಹರ್ತಾ |
ಅಂಬಾಯಮಸ್ಮ್ಯತ್ರ ಶುಚಂ ಜಹೀಹಿ
ಪ್ರಬ್ರೂಹಿ ಕಿಂ ತೇ ಕರವಾಣಿ ಕೃತ್ಯಮ್ || ೩೧

ಆಚಾರ್ಯರು ಎಲ್ಲ ಸಂಗವನ್ನು ತೊರೆದವರಾದರೂ ತಾಯಿಯನ್ನು ಕಂಡು ಅವರ ಮನಸ್ಸು ಕರಗಿತು. ಮೋಹವೆಂಬ ಕುರುಡುಕತ್ತಲೆಯನ್ನು ಪರಿಹರಿಸಬಲ್ಲ ಆ ಯತಿಗಳು "ಅಮ್ಮಾ, ಇದೋ ನಾನು ಇಲ್ಲಿ ಬಂದಿದ್ದೇನೆ. ಶೋಕವನ್ನು ತ್ಯಜಿಸು. ನಿನಗಾಗಿ ಯಾವ ಕೃತ್ಯವನ್ನು ಮಾಡಲಿ?ಹೇಳು". ಎಂದರು.

ದೃಷ್ಟ್ವಾ ಚಿರಾತ್ ಪುತ್ರಮನಾಮಯಂ ಸಾ
ಹೃಷ್ಟಾಂತರಾತ್ಮಾ ನಿಜಗಾದ ಮಂದಮ್ |
ಅಸ್ಯಾಂ ದಶಾಯಾಂ ಕುಶಲೀ ಮಯಾ ತ್ವಂ
ದಿಷ್ಟ್ಯಾಽಸಿ ದೃಷ್ಟಃ ಕಿಮತೋಽಸ್ತಿ ಕೃತ್ಯಮ್ || ೩೨

ಬಹಳ ಕಾಲದ ಮೇಲೆ ಆರೋಗ್ಯವಂತನಾಗಿ ಬಂದಿರುವ ಪುತ್ರನನ್ನು ನೋಡಿ ಆರ್ಯಾಂಬೆಯ ಹೃದಯಕ್ಕೆ ಆನಂದವಾಯಿತು. ಅವಳು ಮೆಲ್ಲಗೆ ಇಂತೆಂದಳು. "ನನ್ನ ಈ ಅವಸ್ಥೆಯಲ್ಲಿ ಕುಶಲದಿಂದಿರುವ ನಿನ್ನನ್ನು ಕಂಡದ್ದು ನನ್ನ ಭಾಗ್ಯ. ಇದಕ್ಕಿಂತ ಹೆಚ್ಚಾಗಿ ಮಾಡಬೇಕಾದ ಕೃತ್ಯವೇನಿದೆ ?

ಇತಃ ಪರಂ ಪುತ್ರಕ ಗಾತ್ರಮೇತ -
ದ್ವೋಢುಂ ನ ಶಕ್ನೋಮಿ ಜರಾತಿಶೀರ್ಣಮ್ |
ಸಂಸ್ಕೃತ್ಯ ಶಾಸ್ತ್ರೋದಿತ ವರ್ತ್ಮನಾ ತ್ವಂ
ಸದ್ವೃತ್ತ ಮಾಂ ಪ್ರಾಪಯ ಪುಣ್ಯಲೋಕಾನ್ || ೩೩

ವತ್ಸ, ಈ ದೇಹವು ಮುಪ್ಪಿನಿಂದ ಜರ್ಜರಿತವಾಗಿದೆ. ಇದನ್ನು ಧರಿಸಲು ಇನ್ನು ಮುಂದೆ ನನಗೆ ಶಕ್ತಿಯಿಲ್ಲ. ಓ ಗುಣಶಾಲಿ, ಶಾಸ್ತ್ರವಿಹಿತವಾದ ಮಾರ್ಗದಿಂದ ಈ ದೇಹವನ್ನು ಸಂಸ್ಕರಿಸಿ ನನ್ನನ್ನು ಪುಣ್ಯಲೋಕಕ್ಕೆ ಸೇರಿಸು". ಎಂದಳು.

ಸುತಾನುಗಾಂ ಸೂಕ್ತಿಮಿಮಾಂ ಜನನ್ಯಾಃ
ಶ್ರುತ್ವಾಽಥ ತಸ್ಯೈ ಸುಖರೂಪಮೇಕಮ್ |
ಮಾಯಾಮಯಾಶೇಷ ವಿಶೇಷಶೂನ್ಯಂ
ಮಾನಾತಿಗಂ ಸ್ವಪ್ರಭಮಪ್ರಮೇಯಮ್ || ೩೪

ಉಪಾದಿಶದ್ಬ್ರಹ್ಮ ಪರಂ ಸನಾತನಂ
ನ ಯತ್ರ ಹಸ್ತಾಂಘ್ರಿವಿಭಾಗಕಲ್ಪನಾ |
ಅಂತರ್ಬಹಿಃ ಸಂನಿಹಿತಂ ಯಥಾಂಬರಂ
ನಿರಾಮಯಂ ಜನ್ಮಜರಾದಿವರ್ಜಿತಮ್ || ೩೫

ಮಗನಾದವನ ಕರ್ತವ್ಯವನ್ನು ಸೂಚಿಸುವ ಜನನಿಯ ಈ ಮಾತನ್ನು ಕೇಳಿದ ಆಚಾರ್ಯರು ಆನಂದರೂಪವೂ, ಅದ್ವಿತೀಯವೂ, ಮಾಯಾಮಯವಾದ ಸಮಸ್ತ ವಿಶೇಷಗಳಿಂದ ಶೂನ್ಯವೂ, ಪ್ರಮಾಣಕ್ಕೆ ನಿಲುಕದೇ ಇರತಕ್ಕದ್ದೂ, ಸ್ವಪ್ರಕಾಶವೂ, ಅಪ್ರಮೇಯವೂ ಆದ ಪರಬ್ರಹ್ಮತತ್ತ್ವವನ್ನು ಆರ್ಯಾಂಬೆಗೆ ಉಪದೇಶಿಸಿದರು. ಆ ಪರಬ್ರಹ್ಮವು ಸನಾತನವಾದದ್ದು. ಕೈಕಾಲು ಮುಂತಾದ ವಿಭಾಗಕಲ್ಪನೆ ಇಲ್ಲದ್ದು. ಆಕಾಶದಂತೆ ಒಳಗೂ ಹೊರಗೂ ಸದಾ ಇರತಕ್ಕದ್ದು. ನಿರ್ಬಾಧವೂ ಹುಟ್ಟು ಮುಪ್ಪು ಮೊದಲಾದ್ದರಿಂದ ವರ್ಜಿತವೂ ಆದದ್ದು.

ಸೌಮ್ಯಾಗುಣೇ ಮೇ ರಮತೇ ನ ಚಿತ್ತಂ
ರಮ್ಯಂ ವದ ತ್ವಂ ಸಗುಣಂ ತು ದೇವಮ್ |
ನ ಬುದ್ಧಿಮಾರೋಹತಿ ತತ್ತ್ವಮಾತ್ರಂ
ಯದೇಕಮಸ್ಥೂಲಮನಣ್ವಗೋತ್ರಮ್ || ೩೬

ಆಗ ಅವರ ತಾಯಿಯು "ಸೌಮ್ಯ, ನಿರ್ಗುಣವಾದ ಬ್ರಹ್ಮತತ್ತ್ವದಲ್ಲಿ ನನ್ನ ಮನಸ್ಸು ನಿಲ್ಲಲಾರದು. ಆದ್ದರಿಂದ ರಮ್ಯನೂ ಗುಣಸಹಿತನೂ ಆದ ಒಬ್ಬದೇವತೆಯನ್ನು ಕುರಿತು ಹೇಳು. ಸ್ಥೂಲವೂ ಅಲ್ಲ, ಅಣುವೂ ಅಲ್ಲ, ಕುಲವೂ ಇಲ್ಲ. ಅಂತಹ ಅದ್ವಿತೀಯವಾದ ತತ್ತ್ವವು ನನ್ನ ಬುದ್ಧಿಗೆ ಎಟುಕುವುದಿಲ್ಲ" ಎಂದಳು.

ನಿಶಮ್ಯ ಮಾತುರ್ವಚನಂ ದಯಾಲು -
ಸ್ತುಷ್ಟಾವ ಭಕ್ತ್ಯಾ ಮುನಿರಷ್ಟಮೂರ್ತಿಮ್ |
ವೃತ್ತೈರ್ಭುಜಂಗೋಪಪದೈಃ ಪ್ರಸನ್ನಃ
ಪ್ರಸ್ಥಾಪಯಾಮಾಸ ಸ ಚ ಸ್ವದೂತಾನ್ || ೩೭

ಕರುಣಾಳುಗಳಾದ ಆಚಾರ್ಯರು ತಾಯಿಯ ಈ ನುಡಿಯನ್ನು ಕೇಳಿ ಅಷ್ಟಮೂರ್ತಿಯಾದ ಶಿವನನ್ನು ಭಕ್ತಿಪೂರ್ವಕವಾಗಿ ಭುಜಂಗಪ್ರಯಾತವೃತ್ತಗಳಿಂದ ಸ್ತೋತ್ರ ಮಾಡಿದರು. ಸುಪ್ರಸನ್ನನಾದ ಶಿವನು ತನ್ನ ದೂತರನ್ನು ಅಲ್ಲಿಗೆ ಕಳುಹಿಸಿದನು.

ವಿಲೋಕ್ಯ ತಾನ್ ಶೂಲಪಿನಾಕಹಸ್ತಾನ್
ನೈವಾನುಗಚ್ಛೇಯಮಿತಿ ಬ್ರುವಂತ್ಯಾಮ್ |
ತಸ್ಯಾಂ ವಿಸೃಜ್ಯಾನುನಯೇನ ಶೈವಾ -
ನಸ್ತೌದಥೋ ಮಾಧವಮಾದರೇಣ || ೩೮

ಆ ದೂತರು ತ್ರಿಶೂಲ, ಪಿನಾಕವೆಂಬ ಧನಸ್ಸು -ಇವನ್ನು ಕೈಯಲ್ಲಿ ಹಿಡಿದು ಬಂದಿರುವುದನ್ನು ನೋಡಿ ಆ ವೃದ್ಧೆಯು "ಅಯ್ಯೋ, ನಾನು ಇವರೊಡನೆ ಹೋಗಲಾರೆ" ಎಂದಳು. ಆಗ ಆಚಾರ್ಯರು ವಿನಯ ಪೂರ್ವಕವಾಗಿ ಆ ಶಿವದೂತರನ್ನು ಕಳುಹಿಸಿ ಲಕ್ಷ್ಮೀಪತಿಯಾದ ವಿಷ್ಣುವನ್ನು ಭಕ್ತಿಯಿಂದ ಸ್ತುತಿಸಿದರು.

ಟಿಪ್ಪಣಿ :- ಈ ಶ್ಲೋಕದಲ್ಲಿರುವ 'ಅಸ್ತೌತ್' ಎಂಬುದನ್ನು ಮುಂದಿನ ಶ್ಲೋಕಗಳಿಗೂ ಅನ್ವಯಿಸಿಕೊಳ್ಳಬೇಕು.

ಭುಜಗಾಧಿಪಭೋಗತಲ್ಪಭಾಜಂ
ಕಮಲಾಂಕಸ್ಥಲಕಲ್ಪಿತಾಂಘ್ರಿಪದ್ಮಮ್ |
ಅಭಿವೀಜಿತಮಾದರೇಣ ನೀಲಾ-
ವಸುಧಾಭ್ಯಾಂ ಚಲಮಾನಚಾಮರಾಭ್ಯಾಮ್ || ೩೯

ಲಕ್ಷ್ಮೀದೇವಿಯ ತೊಡೆಯಮೇಲೆ ತನ್ನ ಪಾದಪದ್ಮಗಳನ್ನಿಟ್ಟು, ಭುಜಂಗರಾಜನಾದ ಆದಿಶೇಷನ ದೇಹವೆಂಬ ಹಾಸಿಗೆಯಲ್ಲಿ ಮಲಗಿದವನೂ, ನೀಲಾದೇವಿ ಭೂದೇವಿಯರಿಂದ

ಆದರ ಪೂರ್ವಕವಾಗಿ ಬೀಸುವ ಬೀಸಣಿಗೆಗಳಿಂದ ಗಾಳಿಹಾಕಲ್ಪಡತಕ್ಕವನೂ ಆದ ಲಕ್ಷ್ಮೀಪತಿಯನ್ನು ಆಚಾರ್ಯರು(ಹಾಗೆ ವರ್ಣಿಸಿ)ಸ್ತುತಿಸಿದರು.

ಟಿಪ್ಪಣಿ :- ನೀಲಾದೇವಿಯು ಶ್ರೀಕೃಷ್ಣನ ಅಷ್ಟಮಹಿಷಿಯರಲ್ಲಿ ಒಬ್ಬಳು.

ವಿಹಿತಾಂಜಲಿನಾ ನಿಷೇವ್ಯಮಾಣಂ
ವಿನತಾನಂದಕೃತಾಽಗ್ರತೋ ರಥೇನ |
ಧೃತಮೂರ್ತಿಭಿರಸ್ತ್ರದೇವತಾಭಿಃ
ಪರಿತಃ ಪಂಚಭಿರಂಚಿತೋಪಕಂಠಮ್ || ೪೦

ವಿನತೆಗೆ ಆನಂದವನ್ನುಂಟುಮಾಡತಕ್ಕವನೂ ತನ್ನ ರಥವೂ ಆದ ಗರುಡನು ಕೈಮುಗಿದುಕೊಂಡು ಸೇವಾತತ್ಪರನಾಗಿ ಯಾರೆದುರಿಗೆ ನಿಂತಿರುವನೋ ಮತ್ತು ಐವರು ಅಸ್ತ್ರದೇವತೆಗಳು ಶರೀರಧಾರಿಗಳಾಗಿ ಯಾರ ಸುತ್ತಲೂ ಸಮೀಪದಲ್ಲಿ ನಿಂತಿರುವರೋ ಆ ಮಾಧವನನ್ನು ಶ್ರೀಶಂಕರರು ಸ್ತೋತ್ರಮಾಡಿದರು.

ಟಿಪ್ಪಣಿ :- ಶಂಖ, ಚಕ್ರ, ಗದೆ, ಖಡ್ಗ ಮತ್ತು ಧನುಸ್ಸು - ಇವು ಐದು ವಿಷ್ಣುವಿನ ಆಯುಧಗಳು.

ಮಹನೀಯತಮಾಲಕೋಮಲಾಂಗಂ
ಮುಕುಟೀರತ್ನಚಯಂ ಮಹಾರ್ಹಯಂತಮ್ |
ಶಿಶಿರೇತರಭಾನುಶೀಲಿತಾಗ್ರಂ
ಹರಿನೀಲೋಪಲಭೂಧರಂ ಹಸಂತಮ್ || ೪೧

ಉತ್ತಮವಾದ ತಮಾಲತರುವಿನಂತೆ (ಶ್ಯಾಮಲವರ್ಣದ) ಕೋಮಲಾಂಗನೆಂದೂ ಕಿರೀಟದಲ್ಲಿರುವ ರತ್ನರಾಶಿಗೆ ವಿಶಿಷ್ಟಶೋಭೆಯನ್ನುಂಟುಮಾಡತಕ್ಕವನೆಂದೂ ಆದ್ದರಿಂದಲೇ ಉಷ್ಣಕಿರಣನಾದ ಸೂರ್ಯನನ್ನು ಶಿಖರದಲ್ಲಿ ಧರಿಸಿದ ಇಂದ್ರನೀಲಪರ್ವತವನ್ನು ಹಾಸ್ಯಮಾಡುತ್ತಾನೆಂದೂ, (ಅದನ್ನು ಹೋಲುತ್ತಾನೆಂದೂ) ಆಚಾರ್ಯರು ವಿಷ್ಣುವನ್ನು ಸ್ತೋತ್ರಮಾಡಿದರು.

ಟಿಪ್ಪಣಿ :- ಮಹಾರ್ಹಂ ಕುರ್ವಂತಂ ಮಹಾರ್ಹಯಂತಂ. 'ತತ್ಕರೋತಿ ತದಾಚಷ್ಟೇ' ಇತಿ ಣಿಚ್. ಶ್ಯಾಮಲಾಂಗನಾದ ವಿಷ್ಣುವು ಇಂದ್ರನೀಲಪರ್ವತದಂತೆಯೂ ರತ್ನಖಚಿತಕಿರೀಟವು ಪರ್ವತಶಿಖರದಲ್ಲಿರುವ ಸೂರ್ಯನಂತೆಯೂ ಇದೆಯೆಂದು ಅಭಿಪ್ರಾಯ.

ತತ್ರಾದೃಶಂ ನಿಜಸುತೋದಿತಮಂಬುಜಾಕ್ಷಂ
ಚಿತ್ತೇ ದಧಾರ ಮೃತಿಕಾಲ ಉಪಾಗತೇಽಪಿ |
ಚಿತ್ತೇನ ಕಂಜನಯನಂ ಹೃದಿ ಭಾವಯಂತೀ
ತತ್ಯಾಜ ದೇಹಮಬಲಾ ಕಿಲ ಯೋಗಿವತ್ಸಾ || ೪೨

ಈ ಪ್ರಕಾರವಾಗಿ ತನ್ನ ಪುತ್ರನು ವಿಷ್ಣುವನ್ನು ಸ್ತುತಿಸಲಾಗಿ, ಆರ್ಯಾಂಬೆಯು ತನ್ನ ಮರಣಕಾಲದಲ್ಲಿ ಅದೇ ಆಕೃತಿಯ ವಿಷ್ಣುವನ್ನು ಹೃದಯದಲ್ಲಿ ಧರಿಸಿದಳು. ಒಬ್ಬ ಮಹಾಯೋಗಿಯನ್ನು ಪುತ್ರನನ್ನಾಗಿ ಪಡೆದಿದ್ದ ಆ ಮಹಿಳೆಯು ತನ್ನ ಹೃದಯದಲ್ಲಿ ಕಮಲನೇತ್ರನಾದ ಶ್ರೀಮನ್ನಾರಾಯಣನನ್ನು ಮನಃ ಪೂರ್ವಕವಾಗಿ ಧ್ಯಾನಿಸುತ್ತ ದೇಹವನ್ನು ತ್ಯಜಿಸಿದಳು.

ವಿವರಣೆ : ಅಂತಕಾಲೇ ಚ ಮಾಮೇವ ಸ್ಮರನ್ ಮುಕ್ತ್ವಾ ಕಲೇವರಂ|
ಯಃ ಪ್ರಯಾತಿ ಸ ಮದ್ಭಾವಂ ಯಾತಿ ನಾಸ್ತ್ಯತ್ರ ಸಂಶಯಃ ||
ಎಂಬ ಗೀತಾವಚನವನ್ನು (೮-೫) ಇಲ್ಲಿ ಸ್ಮರಿಸಿಕೊಳ್ಳಬೇಕು.

ತತಃ ಶರಚ್ಚಂದ್ರಮರೀಚಿರೋಚಿಃ
ವಿಚಿತ್ರ ಪಾರಿಪ್ಲವಕೇತನಾಢ್ಯಮ್ |
ವಿಮಾನಮಾದಾಯ ಮನೋಜ್ಞರೂಪಂ
ಪ್ರಾದುರ್ಬಭೂವುಃ ಕಿಲ ವಿಷ್ಣುದೂತಾಃ || ೪೩

ಆಗ ವಿಷ್ಣುದೂತರು ಶರತ್ಕಾಲದ ಚಂದ್ರನ ಕಿರಣಗಳ ಕಾಂತಿಯಂತೆ ಶುಭ್ರವಾದ ಮತ್ತು ವಿಚಿತ್ರವಾಗಿ ಅಲ್ಲಾಡುವ ಧ್ವಜಪಟಗಳಿಂದ ಕೂಡಿದ ಸುಂದರವಾದ ವಿಮಾನವನ್ನು ತೆಗೆದುಕೊಂಡು ಬಂದು ಪ್ರತ್ಯಕ್ಷರಾದರು.

ವೈಮಾನಿಕಾಂಸ್ತಾನ್ ನಯನಾಭಿರಾಮಾನ್
ಅವೇಕ್ಷ್ಯ ಹೃಷ್ಟಾ ಪ್ರಶಶಂಸ ಪುತ್ರಮ್ |
ವಿಮಾನಮಾರೋಪ್ಯ ವಿರಾಜಮಾನಂ
ಅನಾಯಿ ತೈಃ ಸಾ ಬಹುಮಾನಪೂರ್ವಮ್ || ೪೪

ಕಣ್ಣಿಂದ ನೋಡಲು ಸುಂದರರಾದ ಸೌಮ್ಯಾಕೃತಿಯ ಆ ವೈಮಾನಿಕರನ್ನು ವೀಕ್ಷಿಸಿ ಆರ್ಯಾಂಬೆಯು ಸಂತುಷ್ಟಳಾಗಿ ತನ್ನ ಪುತ್ರನನ್ನು ಹೊಗಳಿದಳು. ಆ ವೈಮಾನಿಕರು ವಿರಾಜಿಸುತ್ತಿದ್ದ ಆ ವಿಮಾನದೊಳಗೆ ಆಕೆಯನ್ನು ಗೌರವಪೂರ್ವಕವಾಗಿ ಹತ್ತಿಸಿ ಕರೆದೊಯ್ದರು.

ಇಯಮರ್ಚಿರಹರ್ವಲಕ್ಷಪಕ್ಷಾನ್
ಷಡುದಙ್ಮಾಸ ಸಮಾನಿಲಾರ್ಕಚಂದ್ರಾನ್ |
ಚಪಲಾವರುಣೇಂದ್ರ ಧಾತೃಲೋಕಾನ್
ಕ್ರಮಶೋಽತೀತ್ಯ ಪರಂ ಪದಂ ಪ್ರಪೇದೇ || ೪೫

ಶ್ರೀಶಂಕರರ ಮಾತೆಯಾದ ಇವಳು ಅಗ್ನಿ, ದಿನ, ಶುಕ್ಲಪಕ್ಷ, ಉತ್ತರಾಯಣದ ಆರು ಮಾಸಗಳು, ಸಂವತ್ಸರ- ಇವುಗಳ ಅಭಿಮಾನಿದೇವತೆಗಳ ಲೋಕಗಳನ್ನೂ ಅನಂತರ ವಾಯು, ಸೂರ್ಯ, ಚಂದ್ರ, ವಿದ್ಯುತ್, ವರುಣ, ಇಂದ್ರ, ಬ್ರಹ್ಮ, - ಇವರ ಲೋಕಗಳನ್ನೂ ಕ್ರಮವಾಗಿ ದಾಟಿ ಪರಮಪದವಾದ ವೈಕುಂಠವನ್ನು ಸೇರಿದಳು.

ಟಿಪ್ಪಣಿ :- ಈ ಮಾರ್ಗಕ್ಕೆ ಅರ್ಚಿರಾದಿಮಾರ್ಗವೆಂದೂ ದೇವಯಾನವೆಂದೂ ಹೆಸರಿದೆ. ವಿವರಗಳಿಗೆ ಭಗವದ್ಗೀತೆಯ ೮-೨೩, ೨೪, ೨೫, ೨೬ನೆಯ ಶ್ಲೋಕಗಳನ್ನೂ ಭಾಷ್ಯವನ್ನೂ ನೋಡಬಹುದು.

ಸ್ವಯಮೇವ ಚಿಕೀರ್ಷುರೇಷ ಮಾತುಃ
ಚರಮಂ ಕರ್ಮ ಸಮಾಜುಹಾವ ಬಂಧೂನ್ |
ಕಿಮಿಹಾಸ್ತಿ ಯತೇ ತವಾಧಿಕಾರಃ
ಕಿತವೇತ್ಯೇನಮಮೀ ನಿನಿಂದುರುಚ್ಚೈಃ || ೪೬

ಆಮೇಲೆ ಆಚಾರ್ಯರು ತಾಯಿಯ ಉತ್ತರಕ್ರಿಯೆಯನ್ನು ತಾವೇ ಮಾಡಬೇಕೆಂದು ಇಚ್ಛಿಸಿ, ನೆರವಿಗಾಗಿ ಬಂಧುಗಳನ್ನು ಕರೆದರು. ಅವರು "ಏ ಸಂನ್ಯಾಸಿ, ಈ ಅಂತ್ಯಕ್ರಿಯೆಯನ್ನು ಮಾಡಲು ನಿನಗೆ ಅಧಿಕಾರವೆಲ್ಲಿದೆ ?ಅಯೋಗ್ಯ" ಎಂದು ಕೂಗಾಡಿ ಈ ಯತೀಶ್ವರರನ್ನು ನಿಂದಿಸಿದರು.

ಅನಲಂ ಬಹುಧಾಽರ್ಥಿತಾಽಪಿ ತಸ್ಮೈ
ಬತ ನಾಽಽದತ್ತ ಚ ಬಂಧುತಾ ತದೀಯಾ |
ಅಥ ಕೋಪಪರೀವೃತಾಂತರೋಽಸಾ -
ವಖಿಲಾಂಸ್ತಾನಶಪಚ್ಚ ನಿರ್ಮಮೇಂದ್ರಃ || ೪೭

ಅದಕ್ಕೆ ಆಚಾರ್ಯರು "ಬೆಂಕಿಯನ್ನಾದರೂ ಕೊಡಿರಿ" ಎಂದು ಬಹುವಿಧದಲ್ಲಿ ಬೇಡಿಕೊಂಡರೂ ಅವರ ಬಂಧುಗಳು ಅದನ್ನು ಕೊಡಲಿಲ್ಲ. ಆಗ ಆ ನಿರ್ಮಮೇಂದ್ರರಿಗೆ ಸಿಟ್ಟುಬಂದುದರಿಂದ ಆ ಎಲ್ಲ ಜನರನ್ನೂ ಶಪಿಸಿಬಿಟ್ಟರು.

ಟಿಪ್ಪಣಿ:- ಬಂಧುತಾ = ಬಂಧುಸಮೂಹ. 'ಗ್ರಾಮಜನಬಂಧುಭ್ಯಸ್ತಲ್'ಎಂಬ ಸೂತ್ರದಿಂದ ಸಮೂಹಾರ್ಥದಲ್ಲಿ ತಲ್‌ಪ್ರತ್ಯಯ.

ಸಂಚಿತ್ಯ ಕಾಷ್ಠಾನಿ ಸುಶುಷ್ಕವಂತಿ
ಗೃಹೋಪಕಂಠೇ ಧೃತತೋಯಪಾತ್ರಃ |
ಸ ದಕ್ಷಿಣೇ ದೋಷ್ಣಿ ಮಮಂಥ ವಹ್ನಿಂ
ದದಾಹ ತಾಂ ತೇನ ಚ ಸಂಯತಾತ್ಮಾ || ೪೮

ಶ್ರೀಶಂಕರಯತಿಗಳು ಚೆನ್ನಾಗಿ ಒಣಗಿದ ಕಟ್ಟಿಗೆಗಳನ್ನು ಮನೆಯ ಬಳಿಯಲ್ಲಿಯೇ ಕೂಡಿಸಿದರು. ಎಡಗೈಯಲ್ಲಿ ಜಲಪಾತ್ರೆಯನ್ನು ಹಿಡಿದುಕೊಂಡು ಬಲಗೈಯಲ್ಲಿ ಅಗ್ನಿಮಂಥನಮಾಡಿ ಆ ಅಗ್ನಿಯಿಂದ ತಾಯಿಯ ದಹನಕ್ರಿಯೆಯನ್ನು ಪರಿಶುದ್ಧಚಿತ್ತರಾಗಿ ನೆರವೇರಿಸಿದರು.

ನ ಯಾಚಿತಾ ವಹ್ನಿಮದುರ್ಯದಸ್ಮೈ
ಶಶಾಪ ತಾನ್ ಸ್ವೀಯಜನಾನ್ ಸರೋಷಃ ।
ಇತಃ ಪರಂ ವೇದಬಹಿಷ್ಕೃತಾಸ್ತೇ
ದ್ವಿಜಾ ಯತೀನಾಂ ನ ಭವೇಚ್ಚ ಭಿಕ್ಷಾ ॥ ೪೯

ಗೃಹೋಪಕಂಠೇಷು ಚ ವಃ ಶ್ಮಶಾನಂ
ಅದ್ಯಪ್ರಭೃತ್ಯಸ್ತ್ವಿತಿ ತಾನ್ ಶಶಾಪ ।
ಅದ್ಯಾಪಿ ತದ್ದೇಶಭವಾ ನ ವೇದಂ
ಅಧೀಯತೇ ನೋ ಯಮಿನಾಂ ಚ ಭಿಕ್ಷಾ ॥ ೫೦

ಬೇಡಿಕೊಂಡರೂ ಬೆಂಕಿಯನ್ನೂ ಸಹ ಬಂಧುಜನರು ಕೊಡದೆ ಹೋದ್ದರಿಂದ ಆಚಾರ್ಯರು ಕುಪಿತರಾಗಿ"ಇನ್ನು ಮುಂದೆ ಈ ದ್ವಿಜರು ವೇದ ಬಹಿಷ್ಕೃತರಾಗಲಿ! ಯತಿಗಳಿಗೆ ಇವರ ಮನೆಗಳಲ್ಲಿ ಭಿಕ್ಷೆಇಲ್ಲದಂತಾಗಲಿ!" ಎಂದೂ "ಎಲೈ ಇನ್ನುಮುಂದೆ ನಿಮ್ಮ ಮನೆಗಳ ಬಳಿಯಲ್ಲಿಯೇ ಶ್ಮಶಾನಭೂಮಿ ಇರಲಿ!" ಎಂದೂ ಶಪಿಸಿದರು. ಈಗಲೂ ಸಹ ಆ ದೇಶದ(ನಂಬೂದರಿ) ಬ್ರಾಹ್ಮಣರು ವೇದಾಧ್ಯಯನಮಾಡುವುದಿಲ್ಲ. ಅವರಲ್ಲಿ ಸಂನ್ಯಾಸಿಗಳಿಗೆ ಭಿಕ್ಷೆಯೂ ನಡೆಯುವುದಿಲ್ಲ.

ತದಾ ಪ್ರಭೃತ್ಯೇವ ಗೃಹೋಪಕಂಠೇಷು
ಆಸೀತ್ ಶ್ಮಶಾನಂ ಕಿಲ ಹಂತ ತೇಷಾಮ್ ।
ಮಹತ್ಸು ಧೀಪೂರ್ವಕೃತಾಪರಾಧೋ
ಭವೇತ್ ಪುನಃ ಕಸ್ಯ ಸುಖಾಯ ಲೋಕೇ ॥ ೫೧

ಅಲ್ಲಿಂದ ಮೊದಲ್ಗೊಂಡು ಆ ದೇಶದ ದ್ವಿಜರ ಮನೆಯ ಹಿತ್ತಿಲಿನಲ್ಲಿಯೇ ಶ್ಮಶಾನವಾಯಿತು. ಅಯ್ಯೋ ವಿಧಿಯೇ! ಮಹಾತ್ಮರ ವಿಷಯದಲ್ಲಿ ಬುದ್ಧಿಪೂರ್ವಕವಾಗಿ ಮಾಡಿದ ಅಪರಾಧವು ಲೋಕದಲ್ಲಿ ಯಾರಿಗೆ ತಾನೇ ಸುಖವನ್ನು ತಂದೀತು?

ಶಾಂತಃ ಪುಮಾನಿತಿ ನ ಪೀಡನಮಸ್ಯ ಕಾರ್ಯಂ
ಶಾಂತೋಽಪಿ ಪೀಡನವಶಾತ್ ಕ್ರುಧಮುದ್ವಹೇತ್ ಸಃ ।
ಶೀತಃ ಸುಖೋಽಪಿ ಮಥಿತಃ ಕಿಲ ಚಂದನದ್ರುಃ
ತೀವ್ರಂ ಹುತಾಶಜನಕೋ ಭವತಿ ಕ್ಷಣೇನ ॥ ೫೨

ಒಬ್ಬ ಮನುಷ್ಯನು ಶಾಂತಸ್ವಭಾವದನೆಂದು ಅವನನ್ನು ಅತಿಯಾಗಿ ಪೀಡಿಸಬಾರದು. ಶಾಂತನೂ ಸಹ ತುಂಬ ಪೀಡಿಸಿದಾಗ ಕ್ರುದ್ಧನಾದಾನು. ಶ್ರೀಗಂಧವೃಕ್ಷವು ಶೀತಳವೂ ಸುಖಕರವೂ ಆಗಿದ್ದರೂ ತೀವ್ರವಾಗಿ ಮಂಥನಮಾಡಿದರೆ ಒಂದು ಕ್ಷಣದಲ್ಲಿ ಬೆಂಕಿಯನ್ನು ಹೊತ್ತಿಸಿಬಿಡುತ್ತದೆ.

ಟಿಪ್ಪಣಿ :- ತೀವ್ರಾಹುತಾಶಜನಕಃ - ಎಂಬುದನ್ನು 'ತೀವ್ರಂ ಹುತಾಶಜನಕಃ' ಎಂದು ತಿದ್ದಿಕೊಂಡಿದೆ.

ಯದ್ಯಪ್ಯಶಾಸ್ತ್ರೀಯತಯಾ ವಿಭಾತಿ
ತೇಜಸ್ವಿನಾಂ ಕರ್ಮ ತಥಾಽಪ್ಯನಿಂದ್ಯಮ್ ।
ಅನಿಂದ್ಯಕೃತ್ಯಂ ಕಿಲ ಭಾರ್ಗವಸ್ಯ
ದದುಃ ಸ್ವಪುತ್ರಾನ್ ಕತಿಚಿದ್ ವೃಕಾಯ ॥ ೫೩

ತೇಜಸ್ವಿಗಳಾದವರು ಕೆಲವುವೇಳೆ ಮಾಡುವ ಕೃತ್ಯವು ಅಶಾಸ್ತ್ರೀಯವಾಗಿ ಕಾಣಿಸಿದರೂ ಅದು ಅವರಿಗೆ ದೋಷಕಾರಿಯಲ್ಲ. ಪರಶುರಾಮನ (ಮಾತೃವಧರೂಪವಾದ) ಕೃತ್ಯವು ನಿಂದ್ಯವಾದ್ದಲ್ಲವೇ ? ಕೆಲವರು ತಮ್ಮ ಮಕ್ಕಳನ್ನು ತೋಳಕ್ಕೆ ಅಥವಾ ತೋಳಸದೃಶವಾದ ಮೃತ್ಯುವಿಗೆ ಅರ್ಪಿಸಿದ್ದೂ ಉಂಟು.

ವಿವರಣೆ : ಸಂನ್ಯಾಸಿಗಳು ಮಾತೃಸಂಸ್ಕಾರವನ್ನು ಮಾಡುವುದು ಶಾಸ್ತ್ರೀಯವಲ್ಲ. ಆದರೂ ತಾಯಿಯ ಆಜ್ಞೆಯನ್ನು ಪಾಲಿಸುವುದಕ್ಕಾಗಿಯೂ ಮರಣಸಂಸ್ಕಾರವನ್ನು ಮಾಡುವೆನೆಂದು ತಾಯಿಗೆ ಮಾತು ಕೊಟ್ಟಿದ್ದರಿಂದಲೂ ಆಚಾರ್ಯರು ತಾಯಿಯ ಅಂತ್ಯಕ್ರಿಯೆಯನ್ನು ಆಚರಿಸಬೇಕಾಯಿತು(ನೋಡಿ. ಸರ್ಗ ೫- ಶ್ಲೋಕ ೭೦ - ೭೧)ಅವರು ಮಹಾತೇಜಸ್ವಿಗಳಾದ್ದರಿಂದ ಅವರಿಗೆ ಇದರಿಂದ ದೋಷವೇನೂ ಇಲ್ಲ.

ಧರ್ಮವ್ಯತಿಕ್ರಮೋ ದೃಷ್ಟ ಈಶ್ವರಾಣಾಂ ಚ ಸಾಹಸಮ್ ।
ತೇಜೀಯಸಾಂ ನ ದೋಷಾಯ ವಹ್ನೇಃ ಸರ್ವಭುಜೋ ಯಥಾ ॥- ಭಾಗ. ೧೦.೩೩-೩೦

ಇನ್ನೂ ಅಧಿಕವಾದ ವಿವರಣೆಯನ್ನು ಗ್ರಂಥದ ಪ್ರಸ್ತಾವನೆಯಲ್ಲಿ ಬರೆಯಲಾಗಿದೆ.

ಇತಿ ಸ್ವಜನನೀಮಸೌ ಮುನಿಜನೈರಪಿ ಪ್ರಾರ್ಥಿತಾಂ
ಪುನಃ ಪತನವರ್ಜಿತಾಮತನುಸೌಖ್ಯಸಂದೋಹಿನೀಮ್ ।
ಯತಿಕ್ಷಿತಿಪತಿರ್ಗತಿಂ ವಿತಮಸಂ ಸ ನೀತ್ವಾ ತತ -
ಸ್ತತೋಽನ್ಯಮತಶಾತನೇ ಪ್ರಯತತೇ ಸ್ಮ ಪೃಥ್ವೀತಲೇ ॥ ೫೪

ಯತಿರಾಜರಾದ ಶ್ರೀಶಂಕರರು ಈ ಪ್ರಕಾರದಲ್ಲಿ ದಹನಾದಿಸಂಸ್ಕಾರಗಳನ್ನುಮಾಡಿ ತಮ್ಮ ಜನನಿಯನ್ನು, ಮುನಿಜನಗಳೂ ಸಹ ಬಯಸುವ ಪುನರ್ಜನ್ಮರಹಿತವೂ ಪರಮಾನಂದದಾಯಿಯೂ ಅಂಧಕಾರರಹಿತವೂ ಆದ ವೈಕುಂಠಪದವೆಂಬ ಸದ್ಗತಿಗೆ ಸೇರಿಸಿದರು. ಅನಂತರ ಪೃಥ್ವೀತಳದಲ್ಲಿ ಹರಡಿದ್ದ ಅನ್ಯದುರ್ಮತಗಳನ್ನು ಖಂಡಿಸುವುದರಲ್ಲಿ ಉದ್ಯುಕ್ತರಾದರು.

ಅಥ ತತ್ಸಹಾಯಜಲಜಾಂಘ್ರ್ಯುಪಾಗಮೇ -
ಚ್ಛುರಭೀಪ್ಸಿತೇಽತ್ರ ವಿಲಲಂಬ ವಿಷಕಃ |
ಜಲಜಾಂಘ್ರಿರಪ್ಯಥ ಪುರಾ ನಿಜಾಜ್ಞಯಾ
ಕೃತವಾನುದೀಚ್ಯ ಬಹುತೀರ್ಥಸೇವನಮ್ || ೫೫

ಉದ್ದಿಷ್ಟವಾದ ಈ ಕಾರ್ಯದಲ್ಲಿ ಪದ್ಮಪಾದನು ಸಹಾಯಕ್ಕಾಗಿ ಬರಲೆಂದುಬಯಸಿದ ಆಚಾರ್ಯರು ಆತನ ಆಗಮನಕ್ಕಾಗಿ ಸ್ವಲ್ಪಕಾಲ ಕಾದರು. ಅವರ ಆಜ್ಞೆಯಂತೆಯೇ ಪದ್ಮಪಾದನೂ ಸಹ ಮೊದಲು ಉತ್ತರದೇಶದಲ್ಲಿದ್ದ ನಾನಾತೀರ್ಥಕ್ಷೇತ್ರಗಳನ್ನು ಸಂದರ್ಶಿಸಿದನು.

ಆಸಸಾದ ಶನಕೈರ್ದಿಶಂ ಮುನೇ -
ರ್ಯಸ್ಯ ಜನ್ಮ ವಸುಧಾಘಟೀ ಸ್ಮೃತಾ |
ಸಾ ಶ್ರುತಿಃ ಸಕಲರೋಗನಾಶಿನೀ
ಯೋಽಪಿಬಜ್ಜಲಧಿಮೇಕಬಿಂದುವತ್ || ೫೬

ಅನಂತರ, ಯಾವ ಮುನಿಗಳ ಜನ್ಮವು ಮಣ್ಣಿನ ಗಡಿಗೆಯಲ್ಲಾಯಿತೋ ಯಾರು ಸಮುದ್ರವನ್ನೇ ಒಂದು ತೊಟ್ಟುನೀರನ್ನು ಕುಡಿದಂತೆ ಕುಡಿದುಬಿಟ್ಟರೋ ಅಂತಹ (ಮಹಿಮಶಾಲಿಗಳಾದ)ಅಗಸ್ತ್ಯಮುನಿಗಳು ಆಶ್ರಯಿಸಿದ ದಕ್ಷಿಣದಿಕ್ಕಿಗೆ ಪದ್ಮಪಾದನು ಕ್ರಮವಾಗಿ ಬಂದನು. ಅಗಸ್ತ್ಯಮುನಿಗಳ ಕಥಾಶ್ರವಣವೇ ಸಕಲರೋಗಗಳನ್ನೂ ನಿವಾರಿಸಬಲ್ಲದು.

ಅದ್ರಾಕ್ಷೀತ್ಸುಭಗಾಹಿಭೂಷಿತತನುಂ ಶ್ರೀಕಾಲಹಸ್ತೀಶ್ವರಂ
ಲಿಂಗೇ ಸನ್ನಿಹಿತಂ ದಧಾನಮನಿಶಂ ಚಾಂದ್ರೀಂ ಕಲಾಂ ಮಸ್ತಕೇ |
ಪಾರ್ವತ್ಯಾ ಕರುಣಾರಸಾರ್ದ್ರಮನಸಾಽಽಶ್ಲಿಷ್ಟಂ ಪ್ರಮೋದಾಸ್ಪದಂ
ದೇವೈರಿಂದ್ರಪುರೋಗಮೈರ್ಜಯ ಜಯೇತ್ಯಾಭಾಷ್ಯಮಾಣಂ ಮುನಿಃ ||

ಪದ್ಮಪಾದಯತಿಯು ಕಾಳಹಸ್ತಿಗೆ ಬಂದು ಲಿಂಗದಲ್ಲಿ ಸನ್ನಿಹಿತನಾಗಿ, ಭಾಗ್ಯಶಾಲಿಯಾದ ಸರ್ಪರಾಜನಿಂದ ಅಲಂಕೃತ ಶರೀರನಾದ ಶ್ರೀಕಾಳಹಸ್ತೀಶ್ವರನನ್ನು ದರ್ಶನಮಾಡಿದನು. ಆ ಈಶ್ವರನು ಶಿರಸ್ಸಿನಲ್ಲಿ ಚಂದ್ರಕಲೆಯುನ್ನು ಧರಿಸಿರುವನು. ಕರುಣಾರಸದಿಂದ ಆರ್ದ್ರಚಿತ್ತಳಾದ ಪಾರ್ವತೀದೇವಿಯಿಂದ ಆಲಿಂಗಿತನೂ ಆನಂದ ಸ್ವರೂಪನೂ ಆದವನು. ಇಂದ್ರಾದಿದೇವತೆಗಳು ಜಯ ಜಯ ಎಂದು ಆ ಪರಮೇಶ್ವನನ್ನು ಸ್ತುತಿಸುತ್ತಿದ್ದರು.

ವಿವರಣೆ : ನಿರ್ಗುಣನೂ ಅವ್ಯಕ್ತನೂ ಆದ ಪರಶಿವನನ್ನು ಭಕ್ತರು ಸೇವಿಸಲು ಅಸಮರ್ಥರು. ಭಕ್ತರ ಮೇಲಿನ ಕಾರುಣ್ಯದಿಂದ ಮಾಯಾಶಕ್ತಿ ಸ್ವರೂಪಿಣಿಯಾದ ಪಾರ್ವತಿಯು ತನ್ನ ಆಲಿಂಗನದಿಂದ ಶಿವನು ವ್ಯಕ್ತನೂ ಸಗುಣನೂ ಆಗುವಂತೆ ಮಾಡಿತೋರಿಸುತ್ತಿದ್ದಳು - ಎಂದು ಅಭಿಪ್ರಾಯ.

ಟಿಪ್ಪಣಿ :- ಇಲ್ಲಿ ಕರುಣಾರಸವೆಂದರೆ ಕಾರುಣ್ಯ-ದಯೆ, ಅಲಂಕಾರಿಕರ ಕರುಣರಸವಲ್ಲ.

ಸ್ನಾತ್ವಾ ಸುವರ್ಣಮುಖರೀ ಸಲಿಲಾಶಯೇಽಂತ -
ರ್ಗತ್ವಾ ಪುನಃ ಪ್ರಣಮತಿ ಸ್ಮ ಶಿವಂ ಭವಾನ್ಯಾ |
ಆನರ್ಚ ಭಾವಕುಸುಮೈರ್ಮನಸಾ ನುನಾವ
ಸ್ತುತ್ವಾ ಚ ತಂ ಪುನರಯಾಚತ ತೀರ್ಥಯಾತ್ರಾಮ್ || ೫೮

ಪದ್ಮಪಾದನು ಸುವರ್ಣಮುಖೀನದಿಯ ಮಡುವಿನಲ್ಲಿ ಸ್ನಾನಮಾಡಿ ಮತ್ತೆ ಬಂದು ಪಾರ್ವತೀಸಹಿತನಾದ ಪರಶಿವನಿಗೆ ನಮಸ್ಕರಿಸಿದನು. ಮನಃಕಲ್ಪಿತಗಳಾದ ಭಾವಕುಸುಮಗಳಿಂದ ಪೂಜಿಸಿ ಸ್ತುತಿಸಿದನು. ತನ್ನ ತೀರ್ಥಯಾತ್ರೆಯು ಸುಗಮವಾಗಲೆಂದು ಪ್ರಾರ್ಥಿಸಿಕೊಂಡನು.

ಲಬ್ಧ್ವಾಽನುಜ್ಞಾಂ ತಜ್ಜ್ಞರಾಟ್‌ಕಾಲಹಸ್ತಿ -
ಕ್ಷೇತ್ರಾತ್ ಕಾಂಚೀಕ್ಷೇತ್ರಮಾಗಾತ್ಪವಿತ್ರಮ್ |
ಸಂಸಾರಾಬ್ಧಿಂ ಸಂತಿತೀರ್ಷೋಃ ಪ್ರಸಿದ್ಧಂ
ವೃದ್ಧಾಃ ಪ್ರಾಹುರ್ಯದ್ಧಿ ಲೋಕೇ ಹ್ಯಮುಷ್ಮಿನ್ || ೫೯

ತತ್ತ್ವಜ್ಞಾನಿಗಳಲ್ಲಿ ಅಗ್ರಗಣ್ಯನಾದ ಪದ್ಮಪಾದನು ಪರಮೇಶ್ವರನ ಅನುಜ್ಞೆಯನ್ನು ಪಡೆದು ಕಾಳಹಸ್ತಿಕ್ಷೇತ್ರದಿಂದ ಹೊರಟು ಪವಿತ್ರವಾದ ಕಾಂಚೀಕ್ಷೇತ್ರಕ್ಕೆ ಆಗಮಿಸಿದನು. ಸಂಸಾರಸಾಗರವನ್ನು ದಾಟಲು ಬಯಸತಕ್ಕ ಮುಮುಕ್ಷುವಿಗೆ ಈ ಲೋಕದಲ್ಲಿ ಉಪಯುಕ್ತವಾದ ಪ್ರಸಿದ್ಧಸ್ಥಳವೆಂದು ಆ ಕ್ಷೇತ್ರವನ್ನು ಹಿರಿಯರು ಹೊಗಳಿ ಹೇಳುತ್ತಾರೆ.

ತತ್ರೈಕಾಮ್ರಾಧೀಶ್ವರಂ ವಿಶ್ವನಾಥಂ
ನತ್ವಾ ಗಮ್ಯಂ ಸ್ವೀಯ ಭಾಗ್ಯಾತಿಶೀತ್ಯಾ |
ದೇವೀಂ ಧಾಮಾಂತರ್ಗತಾಮಂತಕಾರೇಃ
ಹಾರ್ದಂ ರುದ್ರಸ್ಯೇವ ಜಿಜ್ಞಾಸಮಾನಾಮ್ || ೬೦

ಕಾಂಚಿಯಲ್ಲಿ ಏಕಾಮ್ರೇಶ್ವರನೆಂದು ವಿಖ್ಯಾತನಾದ ವಿಶ್ವನಾಥನಿಗೆ ಪದ್ಮಪಾದಯತಿಯು ನಮಸ್ಕರಿಸಿದನು. ಆ ಸ್ವಾಮಿಯಾದರೋ ಮನುಷ್ಯನ ಭಾಗ್ಯಾತಿಶಯದಿಂದ ಲಭ್ಯನಾಗತಕ್ಕವನು. ಅಂತಕಾರಿಯಾದ ಈಶ್ವರನ ಹೃದಯವೇನೆಂಬುದನ್ನು ತಿಳಿಯಲೋ ಎಂಬಂತೆ ಆ ದೇವಾಲಯದಲ್ಲಿ ನೆಲೆಸಿರುವ ಪಾರ್ವತೀದೇವಿಯನ್ನು ಅನಂತರ ದರ್ಶನಮಾಡಿ ನಮಸ್ಕರಿಸಿದನು.

ಟಿಪ್ಪಣಿ :- ಇಲ್ಲಿ ದೇವಿಯು ಕಾಮಾಕ್ಷಿಯೆಂದು ಪ್ರಸಿದ್ಧಳು.

ಕಲ್ಲಾಲೇಶಂ ದ್ರಾಕ್ತತೋ ನಾತಿದೂರೇ
ಲಕ್ಷ್ಮೀಕಾಂತಂ ಸಂವಸಂತಂ ಪುರಾಣಮ್ |
ಕಾರುಣ್ಯಾದ್ರ್ರಸ್ವಾಂತಮಂತಾದಿಶೂನ್ಯಂ
ದೃಷ್ಟ್ವಾ ದೇವಂ ಸಂತುತೋಷೈಕಭಕ್ತ್ಯಾ || ೬೧

ಆಮೇಲೆ ಅಲ್ಲಿಗೆ ಸಮೀಪದಲ್ಲಿರುವ ಕಲ್ಲಾಲಗ್ರಾಮೇಶ್ವರನೂ ಪುರಾಣನೂ ಲಕ್ಷ್ಮೀಪತಿಯೂ ಆದ ಶ್ರೀವರದರಾಜಸ್ವಾಮಿಯನ್ನು ಪದ್ಮಪಾದನು ಸಂದರ್ಶಿಸಿದನು. ಕಾರುಣ್ಯದಿಂದ ಆರ್ದ್ರಚಿತ್ತನೂ ಅನಾದ್ಯನಂತನೂ ಆದ ಆ ಸ್ವಾಮಿಯನ್ನು ಅತ್ಯಂತ ಭಕ್ತಿಯಿಂದ ಕಂಡು ಆನಂದಿಸಿದನು.

ಟಿಪ್ಪಣಿ :- ಕಲ್ಲಾಲಗ್ರಾಮವು ಈಗ ವಿಷ್ಣುಕಾಂಚಿಯೆಂದು ಪ್ರಸಿದ್ಧವಾಗಿದೆ.

ಪುಂಡರೀಕಪುರಮಾಯಯೌ ಮುನಿಃ
ಯತ್ರ ನೃತ್ಯತಿ ಸದಾಶಿವೋಽನಿಶಮ್ |
ವೀಕ್ಷತೇ ಪ್ರಕೃತಿರಾದಿಮಾ ಹೃದಾ
ಪಾರ್ವತೀಪರಿಣತಿಃ ಶುಚಿಸ್ಮಿತಾ || ೬೨

ಪದ್ಮಪಾದಯತಿಯು ಅಲ್ಲಿಂದ ಪುಂಡರೀಕಪುರಕ್ಕೆ ಆಗಮಿಸಿದನು. ಅಲ್ಲಿ ಸದಾಶಿವನು ಸರ್ವದಾ ನೃತ್ಯಮಾಡುತ್ತಿರುವನು. ಆದಿಪ್ರಕೃತಿಯು ಪಾರ್ವತೀರೂಪವನ್ನು ಧರಿಸಿ, ಶುಭ್ರವಾದ ನಗುವನ್ನು ಬೀರುತ್ತ ಆ ನೃತ್ಯವನ್ನು ನೋಡುತ್ತಿರುವಳು.

ಟಿಪ್ಪಣಿ :- ಪುಂಡರೀಕಪುರ = ವ್ಯಾಘ್ರಪುರ, ಪುಂಡರೀಕಶಬ್ದಕ್ಕೆ ವ್ಯಾಘ್ರವೆಂದು ಅರ್ಥ. 'ವ್ಯಾಘ್ರೇಽಪಿ ಪುಂಡರೀಕೋ ನಾ' ಇತ್ಯಮರಃ. ವ್ಯಾಘ್ರಪುರವೇ ಚಿದಂಬರಕ್ಷೇತ್ರ.

ತಾಂಡವಂ ಮುನಿಜನೋಽತ್ರ ವೀಕ್ಷತೇ
ದಿವ್ಯಚಕ್ಷುರಮಲಾಶಯೋಽನಿಶಮ್ |
ಜನ್ಮಮೃತ್ಯುಭಯಭೇದಿ ದರ್ಶನಾತ್
ನೇತ್ರಮಾನಸವಿನೋದಕಾರಕಮ್ || ೬೩

ಪರಿಶುದ್ಧಚಿತ್ತರಾಗಿ ದಿವ್ಯದೃಷ್ಟಿಯನ್ನು ಪಡೆದಿರುವ ಮುನಿಜನರು ಈ ಸ್ಥಳದಲ್ಲಿ ಶಿವನ ತಾಂಡವನೃತ್ಯವನ್ನು ಸದಾ ನೋಡುತ್ತಿರುವರು. ಆ ನೃತ್ಯವು ಕಣ್ಣಿಗೂ ಮನಸ್ಸಿಗೂ ವಿನೋದವನ್ನುಂಟುಮಾಡುತ್ತದೆಯಲ್ಲದೆ, ದರ್ಶನಮಾತ್ರದಿಂದ ಜನನ ಮರಣಗಳನ್ನು ಸಹ ನಾಶಮಾಡಿಬಿಡುತ್ತದೆ.

ಕಿಂ ಚಾತ್ರ ತೀರ್ಥಮಿತಿ ಭಿಕ್ಷುಗಣೇನ ಕಶ್ಚಿತ್
ಪೃಷ್ಟೋಽಬ್ರವೀಚ್ಛಿವಪದಾಂಬುಜಸಕ್ತಚಿತ್ತಃ |
ಸಂಪ್ರಾರ್ಥಿತಃ ಕರುಣಯಾಽಸ್ಮರದತ್ರ ಗಂಗಾಂ
ದೇವೋಽಥ ಸಂನ್ಯಧಿತ ದಿವ್ಯಸರಿತ್ ಸುತೀರ್ಥಮ್ || ೬೪

ಪರಶಿವನ ಪಾದಾಂಬುಜಗಳಲ್ಲಿ ಚಿತ್ತವನ್ನಿಟ್ಟ ಒಬ್ಬ ಭಕ್ತನನ್ನು ನೋಡಿ ಪದ್ಮಪಾದಾದಿಯತಿಗಳು"ಇಲ್ಲಿರುವ ತೀರ್ಥಯಾವುದು? ಅದರ ವಿಶೇಷವೇನು?" ಎಂದು ಕೇಳಿದರು. ಆಗ ಆ ಶಿವಭಕ್ತನು ಹೀಗೆ ಹೇಳಿದನು" ಭಕ್ತಜನರ ಬೇಡಿಕೆಯನ್ನು ಸ್ವಾಮಿಯು ಕರುಣೆಯಿಂದ ಮನ್ನಿಸಿ ಗಂಗಾದೇವಿಯನ್ನು ಸ್ಮರಿಸಿಕೊಂಡನು. ಆ ದಿವ್ಯನದಿಯು ಪುಣ್ಯತೀರ್ಥವಾಗಿ ಇಲ್ಲಿ ಸಂನಿಹಿತಳಾದಳು.

ಶಿವಾಜ್ಞಯಾಽಭೂದಿತಿ ತೀರ್ಥಮೇತ-
ಚ್ಛಿವಸ್ಯ ಗಂಗಾಂ ಪ್ರವದಂತಿ ಲೋಕೇ |
ಸ್ನಾನಾದಮುಷ್ಯಾಂ ವಿಧುತೋರುಪಾಪಾಃ
ಶನೈಃ ಶನೈಸ್ತಾಂಡವಮೀಕ್ಷಮಾಣಾಃ || ೬೫

"ಶಿವನ ಆಜ್ಞೆಯಿಂದ ಈ ತೀರ್ಥವು ನಿರ್ಮಿತವಾದ್ದರಿಂದ ಇದನ್ನು ಶಿವಗಂಗೆ ಎಂದು ಲೋಕದಲ್ಲಿ ಹೇಳುತ್ತಾರೆ. ಇದರಲ್ಲಿ ಸ್ನಾನಮಾಡುತ್ತಿದ್ದರೆ ಭಕ್ತರ ಸಮಸ್ತಪಾಪಗಳೂ ಧ್ವಂಸವಾಗುತ್ತವೆ. ಆಗ ಶಿವನ ತಾಂಡವನೃತ್ಯವನ್ನು ವೀಕ್ಷಿಸಲು ಸಮರ್ಥರಾಗುತ್ತಾರೆ!

ಶಿವಸ್ಯ ನಾಟ್ಯಶ್ರಮಕರ್ಶಿತಸ್ಯ
ಶ್ರಮಾಪನೋದಾಯ ವಿಚಿಂತಯಂತೀ |
ಶಿವೇತಿ ಗಂಗಾಪರಿಣಾಮಗಾಽಭೂತ್
ತತೋಽಥ ವೈ ತತ್ಪ್ರಥಿತಂ ತದಾಖ್ಯಮ್ || ೬೬

"ನಾಟ್ಯಶ್ರಮದಿಂದ ನೊಂದ ಈಶ್ವರನ ಆಯಾಸವನ್ನು ಹೇಗೆ ಪರಿಹರಿಸಬೇಕೆಂದು ಚಿಂತಿಸಿದ ಪಾರ್ವತೀದೇವಿಯೇ ಗಂಗಾಜಲವಾಗಿ ಪರಿಣಮಿಸಿದ್ದಾಳೆ. ಆದ್ದರಿಂದ ತೀರ್ಥವು ಶಿವಗಂಗೆಯೆಂದು ಪ್ರಸಿದ್ಧವಾಯಿತು ಎಂದು ಸಹ ಹೇಳಿಕೆ ಇದೆ.

**ಟಿಪ್ಪಣಿ :- ಶಿವಾ ಗಂಗಾ = ಶಿವಗಂಗಾ. ಶಿವಾ = ಪಾರ್ವತಿ-ಎಂದು ಅಭಿಪ್ರಾಯ.**

ನೃತ್ಯತ್ತೀರಹತಸ್ಫುಲಜ್ಜಲಗತೇಃ ಪರ್ಯಾಪತದ್ಬಿಂದುಕಂ
ಪಾರ್ಶ್ವೇ ಸ್ವಾವಸತೇರ್ವಿನೋದವಶತೋ ಯಜ್ಜಹ್ನುಕನ್ಯಾಪಯಃ |
ನೃತ್ಯಂ ತನ್ವತಿ ಧೂರ್ಜಟೌ ವಿಗಲಿತಂ ಪ್ರೇಂಖಜ್ಜಟಾಮಂಡಲಾ-
ತ್ತೇನೈತಚ್ಛಿವಜಾಹ್ನವೀತಿ ಕಥಯಂತ್ಯನ್ಯೇ ವಿಪಶ್ಚಿಜ್ಜನಾಃ || ೬೭

"ಇನ್ನು ಕೆಲವು ವಿದ್ವಾಂಸರು ಹೇಳುವುದೇನೆಂದರೆ - ವಿನೋದಕ್ಕಾಗಿ ಶಿವನು ತಾಂಡವ ನೃತ್ಯವನ್ನು ಮಾಡುತ್ತಿರುವಾಗ ಅವನ ಜಟಾಮಂಡಲವು ಚಲಿಸಿ ಹೊಯ್ದಾಡುತ್ತಿತ್ತು. ಜಟೆಯ ನಡುವೆ ಜಾಹ್ನವೀ ನದಿಯಿರುವುದಷ್ಟೆ. ನದಿಯ ದಡಗಳಾದ ಜಟಾಭಾಗಗಳು ಚಲಿಸಿ ಅಲ್ಲಾಡಿದಾಗ, ನಡುವೆ ಇದ್ದ ನದೀಪ್ರವಾಹವು ಸಂದಿನಲ್ಲಿ ಜಾರಿ ಸೋರುತ್ತಿದೆಯೋ ಎಂಬಂತೆ ಜಾಹ್ನವೀನದಿಯ ಪ್ರವಾಹವು ತೊಟ್ಟುತೊಟ್ಟಾಗಿ ಕೆಳಗೆ ಸುರಿದು ಈ ತೀರ್ಥವಾಗಿದೆ! ಆದ್ದರಿಂದ ಇದಕ್ಕೆ ಶಿವಗಂಗೆ ಎಂಬ ಹೆಸರು ಬಂದಿತು ಎಂದು.

ಟಿಪ್ಪಣಿ :- ಜಾಹ್ನವೀ = ಗಂಗಾನದಿ.

ಸ್ನಾಯಂ ಸ್ನಾಯಂ ತೀರ್ಥವರ್ಯೇಽತ್ರ ನಿತ್ಯಂ
ವೀಕ್ಷಂ ವೀಕ್ಷಂ ದೇವಪಾದಾಬ್ಜಯುಗ್ಮಮ್ |
ಶೋಧಂ ಶೋಧಂ ಮಾನಸಂ ಮಾನವೋಽಸೌ
ವೀಕ್ಷೇತೇದಂ ತಾಂಡವಂ ಶುದ್ಧಚೇತಾಃ || ೭೮

"ಈ ಉತ್ತಮ ತೀರ್ಥದಲ್ಲಿ ಪ್ರತಿದಿನವೂ ಸ್ನಾನ ಮಾಡಿ ಮಾಡಿ, ದೇವರ ಚರಣಕಮಲದ್ವಯವನ್ನು ನೋಡಿ ನೋಡಿ, ಮನಸ್ಸನ್ನು ಮತ್ತೆ ಮತ್ತೆ ಶುದ್ಧಗೊಳಿಸಿಕೊಂಡು ಪರಿಶುದ್ಧಚಿತ್ತನಾದ ಮಾನವನು ಈ ತಾಂಡವನೃತ್ಯವನ್ನು ನೋಡಬಹುದು.

ಶುದ್ಧಂ ಮಹದ್ವರ್ಣಯಿತುಂ ಕ್ಷಮೇತ
ಪುಣ್ಯಂ ಪುರಾರಿಃ ಸ್ವಯಮೇವ ತಸ್ಯ |
ನಿಮಜ್ಯ ಶಂಭುದ್ಯುಸರಿತ್ಯಮುಷ್ಯಾಂ
ದಾಕ್ಷಾಯಣೀನಾಥಮುದೀಕ್ಷತೇ ಯಃ || ೭೯

ಈ ಶಿವಗಂಗೆಯಲ್ಲಿ ಸ್ನಾನಮಾಡಿ ಯಾವಾತನು ದಾಕ್ಷಾಯಿಣೀಪತಿಯಾದ ಶಿವನ ದರ್ಶನವನ್ನು ಮಾಡುವನೋ - ಅವನ ಪಾಪಲೇಶವೂ ಇಲ್ಲದಂತಾಗಲು, ಆತನು ಗಳಿಸುವ ಮಹತ್ತರವಾದ ಪುಣ್ಯವನ್ನು ವರ್ಣಿಸುವುದಕ್ಕೆ ಸ್ವಯಂಪರಮೇಶ್ವರನೇ ಸಮರ್ಥನಾದಾನು!" ಎಂದು ಹೇಳಿದನು.

ಇತೀರಿತಃ ಶಂಕರಯೋಜಿತಾತ್ಮಾ
ಕೇನಾಪಿ ಭಿಕ್ಷುರ್ಮುದಿತೋ ಜಗಾಹೇ |
ತೀರ್ಥಂ ತದಾಪ್ಲುತ್ಯ ನನಾಮ ಶಂಭೋ-
ರಂಘ್ರಿಂ ಜಿತಾತ್ಮಾ ಭುವನಸ್ಯ ಗೋಪ್ತುಃ || ೮೦

ಆತನು ಹೀಗೆ ಹೇಳಲಾಗಿ ಶಿವನಲ್ಲಿಯೇ ಚಿತ್ತವಿಟ್ಟಿದ್ದ ಒಬ್ಬ ಸಂನ್ಯಾಸಿಯು ಹರ್ಷದಿಂದ ಆ ತೀರ್ಥದಲ್ಲಿಳಿದು ಸ್ನಾನಮಾಡಿ ಮನಸ್ಸನ್ನು ಅಂಕೆಯಲ್ಲಿಟ್ಟುಕೊಂಡು ಜಗದೀಶ್ವರನಾದ ಶಂಭುವಿನ ಪಾದಕ್ಕೆ ನಮಸ್ಕರಿಸಿದನು !

ರಾಮಸೇತುಗಮನಾಯ ಸಂದಧೇ
ಮಾನಸಂ ಮುನಿರನುತ್ತಮಃ ಪುನಃ |
ವರ್ತ್ಮನಿ ಪ್ರಯತಮಾನಸೋ ವ್ರಜನ್
ಸಂದದರ್ಶ ಸರಿತಂ ಕವೇರಜಾಮ್ || ೭೧

ಅನಂತರ ಯತಿಶ್ರೇಷ್ಠನಾದ ಪದ್ಮಪಾದನು ರಾಮಸೇತುವಿಗೆ ಹೋಗಲು ಮನಸ್ಸುಮಾಡಿದನು. ಜಿತಾತ್ಮನಾಗಿ ಭಗವಂತನನ್ನು ಧ್ಯಾನಿಸುತ್ತಾ ದಾರಿಯನ್ನು ಹಿಡಿದು ಪ್ರಯಾಣಮಾಡುವಾಗ ದಾರಿಯಲ್ಲಿ ಕವೇರಪುತ್ರಿಯಾದ ಕಾವೇರೀ ನದಿಯನ್ನು ಕಂಡನು.

ಯತ್ಪವಿತ್ರ ಪುಲಿನಸ್ಥಲಂ ಪಯಃ
ಸಿಂಧುವಾಸರಸಿಕಾಯ ವಿಷ್ಣವೇ |
ಅಭ್ಯರೋಚತ ಹಿರಣ್ಯವಾಸಸೇ
ಪದ್ಮನಾಭಮುಖನಾಮಶಾಲಿನೇ || ೭೨

ಕ್ಷೀರಸಾಗದಲ್ಲಿ ವಾಸಮಾಡಲು ಪ್ರೀತಿಸುವವನೂ ಪೀತಾಂಬರಧಾರಿ, ಪದ್ಮನಾಭ - ಇತ್ಯಾದಿ ನಾಮಾಂಕಿತನೂ ಆದ ವಿಷ್ಣುವಿಗೆ ಈ ಕಾವೇರೀ ನದಿಯ ಪವಿತ್ರವಾದ ಪುಳಿನಸ್ಥಳದಲ್ಲಿರುವ ಜಲವು ಪ್ರಿಯವಾಗಿ ತೋರಿತು!

ಟಿಪ್ಪಣಿ :- ಹಿರಣ್ಯವಾಸಸೇ = ಚಿನ್ನದಂತೆ ಹಳದಿಯ ವಸ್ತ್ರವನ್ನು ಧರಿಸಿದ, ಪೀತಾಂಬರಧಾರಿ.

ಸಹ್ಯಪರ್ವತಸುತಾತಿನಿರ್ಮಲಾಂ-
ಭೋಽಭಿಷಿಕ್ತಭಗವತ್ಪದಾಂಬುಜೇ |
ಆಕಲಯ್ಯ ಬಹುಶಿಷ್ಯಸಂವೃತಃ
ಪ್ರಾಸ್ಥಿತಾಭಿರುಚಿತಸ್ಥಲಾಯ ಸಃ || ೭೩

ಅಲ್ಲಿ ಪದ್ಮಪಾದಯತಿಯು ಸಹ್ಯಪರ್ವತದಿಂದ ನಿರ್ಗಮಿಸುವ ಕಾವೇರೀ ನದಿಯ ಜಲದಿಂದ ಅಭಿಷಿಕ್ತವಾದ ಭಗವಂತನ (ಶ್ರೀರಂಗನಾಥಸ್ವಾಮಿಯ) ಪಾದಕಮಲಗಳನ್ನು ಧ್ಯಾನಮಾಡಿ, ಅನೇಕ ಶಿಷ್ಯರಿಂದ ಪರಿವೃತನಾಗಿ ತನಗೆ ಇಷ್ಟವಾದ ಮುಂದಿನ ಸ್ಥಳಕ್ಕೆ ಪ್ರಯಾಣಮಾಡಿದನು.

ಟಿಪ್ಪಣಿ :- ಪ್ರಾಸ್ಥಿತ = ಪ್ರ ಉಪಸರ್ಗ ಪೂರ್ವಕ ಸ್ಥಾ ಧಾತು. ಆತ್ಮನೇಪದಿ. ಇದರ ಲುಙ್ ಪ್ರ. ಪು. ಏಕವಚನ. ಈ ಶ್ಲೋಕದಲ್ಲಿ ವರ್ಣಿತವಾದ ಸ್ಥಳವು ಶ್ರೀರಂಗವಾಗಿರಬೇಕು.

ಗಚ್ಛನ್ ಗಚ್ಛನ್ ಮಾರ್ಗಮಧ್ಯೇಽಭಿಯಾತಂ
ಗೇಹಂ ಭಿಕ್ಷುರ್ಮಾತುಲಸ್ಯಾಽಽಜಗಾಮ |
ದೃಷ್ಟ್ವಾ ಶಿಷ್ಯೈಸ್ತಂ ಚಿರೇಣಾಭಿಯಾತಂ
ಮೋದಂ ಪ್ರಾಪನ್ಮಾತುಲಃ ಶಾಸ್ತ್ರವೇದೀ || ೭೪

ಮುಂದೆ ಹೋಗುತ್ತ ಹೋಗುತ್ತ ಮಾರ್ಗ ಮಧ್ಯದಲ್ಲಿ, ತಾನು ಹಿಂದೆ ಹೋಗಿದ್ದ, ಸೋದರಮಾವನ ಮನೆಗೆ ಪದ್ಮಪಾದಯತಿಯು ಆಗಮಿಸಿದನು. ಶಿಷ್ಯರಿಂದ ಸಮೇತನಾಗಿ ಬಹಳಕಾಲದಮೇಲೆ ಆಗಮಿಸಿದ ಆತನನ್ನು ನೋಡಿ ಶಾಸ್ತ್ರಜ್ಞನಾದ ಸೋದರಮಾವನು ಸಂತೋಷಪಟ್ಟನು.

ಶುಶ್ರಾವ ತಂ ಬಂಧುಜನಃ ಸಶಿಷ್ಯಂ
ಸ್ವಮಾತುಲಾಗಾರಮುಪೇಯಿವಾಂಸಮ್ |
ಆಗತ್ಯ ದೃಷ್ಟ್ವಾ ಚಿರಮಾಗತಂ ತಂ
ಜಹರ್ಷ ಹರ್ಷಾತಿಶಯೇನ ಸಾಶ್ರುಃ || ೭೫

ಹೀಗೆ ಪದ್ಮಪಾದನು ಶಿಷ್ಯಸಮೇತನಾಗಿ ಸೋದರಮಾವನ ಮನೆಗೆ ಬಂದಿದ್ದಾನೆಂಬುದನ್ನು ಕೇಳಿ ಆತನ ಬಂಧುಗಳು ಅಲ್ಲಿಗೆ ಆಗಮಿಸಿದರು. ಬಹಳ ಕಾಲದಮೇಲೆ ಬಂದ ಅವನನ್ನು ಕಂಡು ಬಂಧುಗಳಿಗೆ ಬಹಳ ಹರ್ಷವಾಯಿತು. ಆನಂದ ಬಾಷ್ಪವು ತುಳುಕಿತು.

ರುರೋದ ಕಶ್ಚಿನ್ಮುಮುದೇಽತ್ರ ಕಶ್ಚಿತ್
ಜಹಾಸ ಪೂರ್ವಾಚರಿತಂ ಬಭಾಷೇ |
ಕಶ್ಚಿತ್ಪ್ರಮೋದಾತಿಶಯೇನ ಕಿಂಚಿತ್
ವಚಃ ಸ್ಖಲದ್ಗೀಃ ಪ್ರಣನಾಮ ಕಶ್ಚಿತ್ || ೭೬

ಅವರಲ್ಲೊಬ್ಬನು ಅತ್ತನು. ಇನ್ನೊಬ್ಬನು ಸಂತೋಷಿಸಿದನು. ಮತ್ತೊಬ್ಬನು ನಕ್ಕು ಹಿಂದಿನ ಕಥೆಯನ್ನು ಹೇಳಿದನು. ಮಗದೊಬ್ಬನು ಪರಮಾನಂದವನ್ನು ಹೊಂದಿ ತೊದಲುತ್ತಾ ಏನನ್ನೋ ಹೇಳಿದನು. ಇನ್ನೊಬ್ಬನು ಪದ್ಮಪಾದಯತಿಗೆ ನಮಸ್ಕರಿಸಿದನು।

ಊಚೇಽಥ ತಂ ಜ್ಞಾತಿಜನಃ ಪ್ರಮೋದೀ
ದೃಷ್ಟ್ವಾ ಚಿರಾಯಾಕ್ಷಿಪಥಂ ಗತೋಽಭೂಃ |
ದಿದೃಕ್ಷತೇ ತ್ವಾಂ ಜನತಾಽತಿಹಾರ್ದಾತ್
ತಥಾಽಪಿ ಶಕ್ನೋಷಿ ನ ವೀಕ್ಷಣಾಯ || ೭೭

ಅನಂತರ ಸಂತುಷ್ಟರಾದ ಬಂಧುಜನರಲ್ಲಿ ಒಬ್ಬೊಬ್ಬರೂ ಅವನನ್ನು ನೋಡಿ ಹೀಗೆ ಹೇಳ ತೊಡಗಿದರು. "ಬಹಳ ವರ್ಷಗಳಾದ ಮೇಲೆ ಕಣ್ಣಿಗೆ ಕಾಣಿಸಿಕೊಂಡಿದ್ದೀಯೆ. ಜನರೆಲ್ಲರೂ ಹೃದಯಪೂರ್ವಕವಾಗಿ ನಿನ್ನನ್ನು ನೋಡಲು ಬಯಸುತ್ತಿದ್ದರು. ನೀನು ಮಾತ್ರ ನೋಡಲು ಸಿಗುತ್ತಿರಲಿಲ್ಲ.

ಪುತ್ರಾಃ ಸಮಿತ್ರಾನ ನ ಬಂಧುವರ್ಗೋ
ನ ರಾಜಬಾಧಾ ನ ಚ ಚೋರಭೀತಿಃ |
ಕೃತಾರ್ಥತಾಮೂಲಪದಂ ಯತಿತ್ವಂ
ಪ್ರಸೂನವಂತಂ ಫಲಿತಂ ಮಹಾಂತಮ್ || ೭೮

ಶಾಖೋಪಶಾಖಾಂಚಿತಮೇವ ವೃಕ್ಷಂ
ಬಾಧಂತ ಆಗತ್ಯ ನ ತದ್ವಿಹೀನಮ್ |
ಯಥಾ ತಥಾ ವಾ ಧನಿನಂ ದರಿದ್ರಾ
ಬಾಧಂತ ಆಗತ್ಯ ದಿನೇ ದಿನೇ ಸ್ಮ || ೭೯

"ಸಂನ್ಯಾಸಿಯಾಗಿ ಬಿಡುವುದು ಉತ್ತಮ. ಪುತ್ರರಿಲ್ಲ, ಮಿತ್ರರಿಲ್ಲ, ಬಂಧುಗಳು ಹೇಗೂ ಇಲ್ಲ. ರಾಜಬಾಧೆ ಇಲ್ಲ, ಕಳ್ಳರ ಕಾಟವಿಲ್ಲ! ಸಂನ್ಯಾಸವು ಬದುಕಿನಲ್ಲಿ ಧನ್ಯನಾಗಲು ಮೂಲಕಾರಣ! ಏಕೆಂದರೆ, ಹೂ ಹಣ್ಣುಗಳನ್ನು ಬಿಡುತ್ತಾ ಶಾಖೋಪಶಾಖೆಗಳಿಂದ ದೊಡ್ಡದಾಗಿ ಬೆಳೆದು ನಿಂತ ಮಹಾವೃಕ್ಷವನ್ನು ಹಕ್ಕಿಗಳೇ ಮೊದಲಾದವು ಬಾಧಿಸುತ್ತವೆ. ಹೂ ಮೊದಲಾದದ್ದು ಏನೂ ಇಲ್ಲದೆ ನಿಂತಿರುವ ಬೋಳುಮರಕ್ಕೆ ಯಾವ ಪೀಡೆಯೂ ಇಲ್ಲ ! ಹಾಗೆಯೇ ಧನಿಕನಾದವನ ಬಳಿಗೆ ಬಡವರು ದಿನದಿನವೂ ಬಂದು ಬಾಧಿಸುತ್ತಲೇ ಇರುತ್ತಾರೆ! (ಹಣವಿಲ್ಲದಿದ್ದರೆ ಯಾರ ಬಾಧೆಯೂ ಇಲ್ಲ.)

ಕುಟುಂಬರಕ್ಷಾಗತಮಾನಸಾನಾಂ
ಆಯಾತಿ ನಿದ್ರಾಽಪಿ ಸುಖಂ ನ ಜಾತು |
ಕ್ವ ದೇವತಾರ್ಚಾ ಕ್ವ ಚ ತೀರ್ಥಯಾತ್ರಾ
ಕ್ವ ವಾ ನಿಷೇವಾ ಮಹತಾಂ ಭವೇನ್ನಃ || ೮೦

"ಕುಟುಂಬರಕ್ಷಣೆಗಾಗಿ ಮನಸ್ಸನ್ನಿಡಬೇಕಾದ ಗೃಹಸ್ಥರಿಗೆ ಒಂದುಸಲವೂ ಸುಖನಿದ್ರೆಯು ಬರುವುದಿಲ್ಲ. ನಮಗೆ ದೇವತಾರ್ಚನೆ ಎಲ್ಲಿ, ತೀರ್ಥಯಾತ್ರೆ ಎಲ್ಲಿ? ಮಹಾತ್ಮರ ಸೇವೆ ಎಂಬುದೆಲ್ಲಿ ?

ಅಶ್ರೌಷ್ಮ ಸಂನ್ಯಾಸಕೃತಂ ಭವಂತಂ
ವಿಪ್ರಾತ್ ಕುತಶ್ಚಿತ್ ಗೃಹಮಾಗತಾನ್ನಃ |
ಕಾಲೋಽತ್ಯಗಾತ್ತೇ ಬಹುರದ್ಯ ದೈವಾತ್
ತೀರ್ಥಸ್ಯ ಹೇತೋರ್ಗೃಹಮಾಗತಸ್ತ್ವಮ್ || ೮೧

"ನಮ್ಮ ಮನೆಗೆ ಎಲ್ಲಿಂದಲೋ ಬಂದಿದ್ದ ಒಬ್ಬ ವಿಪ್ರನಿಂದ ನೀನು ಸಂನ್ಯಾಸವನ್ನು ಸ್ವೀಕರಿಸಿದೆ- ಎಂದು ನಾವು ಕೇಳಿದೆವು. ಅದಾಗಿ ಎಷ್ಟೋಕಾಲ ಕಳೆದುಹೋಯಿತು. ಅದೃಷ್ಟವಶದಿಂದ ಈಗ ತೀರ್ಥಯಾತ್ರೆಗಾಗಿ ಮನೆಗೆ ಬಂದಿದ್ದೀಯೆ.

ಯಥಾ ಶಕುಂತಾಃ ಪರವರ್ಧಿತಾನ್ ದ್ರುಮಾನ್
ಸಮಾಶ್ರಯಂತೇ ಸುಖದಾಂಸ್ತ್ಯಜಂತ್ಯಪಿ |
ಪರಪ್ರಕ್ಲೃಪ್ತಾನ್ ಮಠದೇವತಾಗೃಹಾನ್
ಯತಿಃ ಸಮಾಶ್ರಿತ್ಯ ತಥೋಜ್ಝತಿ ಧ್ರುವಮ್ || ೮೨

"ಹಕ್ಕಿಗಳು ಯಾರೋ ಬೆಳೆಸಿದ ಮರಗಳಲ್ಲಿ ಬಂದು ಸೇರಿಕೊಳ್ಳುತ್ತವೆ. ಆ ಮರಗಳು ಸುಖಕರವಾಗಿರುತ್ತವೆ. ಆಮೇಲೆ ಅವನ್ನು ಬಿಟ್ಟು ಹಾರಿ ಹೋಗುತ್ತವೆ! ಹಾಗೆ ಯಾರೋ ಕಟ್ಟಿಸಿದ ಮಠ ದೇವಾಲಯಗಳನ್ನು ಆಶ್ರಯಿಸಿಕೊಂಡಿದ್ದ ಸಂನ್ಯಾಸಿಯು ಆಮೇಲೆ ಅದನ್ನು ನಿಶ್ಚಯವಾಗಿ ಬಿಟ್ಟು ಬಿಡುವನು.

ಯಥಾ ಹಿ ಪುಷ್ಪಾಣ್ಯಧಿಗಮ್ಯ ಷಟ್ಪದಾಃ
ಸಂಗೃಹ್ಯ ಸಾರಂ ರಸಮೇವ ಭುಂಜತೇ |
ತಥಾ ಯತಿಃ ಸಾರಮವಾಪ್ನುವನ್ ಸುಖಂ
ಗೃಹಾದ್ಗೃಹಾದೋದನಮೇವ ಭಿಕ್ಷತೇ || ೮೩

"ದುಂಬಿಗಳು ಹೂಗಳ ಬಳಿಗೆ ಹೋಗಿ ಸಾರವಾದ್ದನ್ನು ಹೀರಿ ರಸವನ್ನು ಕುಡಿಯುತ್ತವೆ. ಹಾಗೆ ಸಂನ್ಯಾಸಿಯೂ ಮನೆಯಿಂದ ಮನೆಗೆ ಹೋಗಿ ಭಿಕ್ಷೆಯನ್ನು ಬೇಡುತ್ತಾನೆ. ರಸವತ್ತಾದ ಊಟ ಅವನಿಗೆ ಸುಖವಾಗಿ ಸಿಗುತ್ತದೆ!

ಯತೇರ್ವಿರಜ್ಯಾತ್ಮಗತಿಃ ಕಲತ್ರಂ
ದೇಹಂ ಗೃಹಂ ಸಂಯತಮೇವ ಸೌಖ್ಯಮ್ |
ವಿರಕ್ತಿಭಾಜಸ್ತನಯಾಃ ಸ್ವಶಿಷ್ಯಾಃ
ಕಿಮರ್ಥನೀಯಂ ಯತಿನೋ ಮಹಾತ್ಮನ್ || ೮೪

"ವೈರಾಗ್ಯದಿಂದ ಯತಿಯಾದವನಿಗೆ ಆತ್ಮಜ್ಞಾನವೇ ಮಡದಿ. ದೇಹವೇ ಗೃಹ. ಸಮಾಧಿಯಲ್ಲಿರುವುದೇ ಸೌಖ್ಯ. ಈ ವಿರಕ್ತರಿಗೆ ತಮ್ಮ ಶಿಷ್ಯರೇ ಮಕ್ಕಳು. ಓ ಮಹಾತ್ಮ, ಯತಿಗೆ ಇನ್ನೇನು ಬೇಕಾಗಿದೆ?

ಮನೋರಥಾನಾಂ ನ ಸಮಾಪ್ತಿರಿಷ್ಯತೇ
ಪುನಃ ಪುನಃ ಸಂತನುತೇ ಮನೋರಥಾನ್ |
ದಾರಾನಭೀಪ್ಸುರ್ಯತತೇ ದಿವಾನಿಶಂ
ತಾನ್ ಪ್ರಾಪ್ಯ ತೇಭ್ಯಸ್ತನಯಾನಭೀಪ್ಸತಿ || ೮೫

"ನಮ್ಮಂಥವರ ಮನೋರಥಗಳಿಗೆ ಮುಕ್ತಾಯವೇ ಇರುವುದಿಲ್ಲ. ಗೃಹಸ್ಥನು ಮತ್ತೆ ಮತ್ತೆ ಹೊಸ ಹೊಸ ಮನೋರಥಗಳನ್ನು ಕಲ್ಪಿಸಿಕೊಳ್ಳುತ್ತಾನೆ. ಹೆಂಡತಿಯರು ಬೇಕೆಂದು ಹಗಲೂ ರಾತ್ರಿಯೂ ಪ್ರಯತ್ನಿಸುತ್ತಾನೆ. ಆಮೇಲೆ ಪುತ್ರರು ಹುಟ್ಟಲಿ ಎಂದು ಬಯಸುತ್ತಾನೆ.

ಅನಾಪ್ನುವನ್ ದುಃಖಮಸೌ ಸುತೀವ್ರಂ
ಪ್ರಾಪ್ನೋತಿ ಚೇಷ್ಟೇನ ವಿಯುಜ್ಯತೇ ಪುನಃ |
ಸರ್ವಾತ್ಮನಾ ಕಾಮವಶಸ್ಯ ದುಃಖಂ
ತಸ್ಮಾದ್ವಿರಕ್ತಿಃ ಪುರುಷೇಣ ಕಾರ್ಯಾ || ೮೬

"ಆತನಿಗೆ ಸಂತತಿಯಾಗದಿದ್ದರೆ ತೀವ್ರವಾದ ದುಃಖವಾಗುತ್ತದೆ. ಇಷ್ಟಜನರ ವಿಯೋಗವೂ ಆಗುತ್ತದೆ. ಹೀಗೆ ಕಾಮವಶನಾದವನಿಗೆ ಸರ್ವವಿಧದಲ್ಲಿಯೂ ದುಃಖವೇ ಗತಿ. ಆದ್ದರಿಂದ ಮನುಷ್ಯನು ವಿರಕ್ತನಾಗುವುದು ಒಳ್ಳೆಯದು.

ವಿರಕ್ತಿಮೂಲಂ ಮನಸೋ ವಿಶುದ್ಧಿಂ
ತನ್ಮೂಲಮಾಹುರ್ಮಹತಾಂ ನಿಷೇವಾಮ್ |
ಭವಾದೃಶಾಸ್ತೇನ ಚ ದೂರದೇಶೇ
ಪರೋಪಕಾರಾಯ ರಸಾಮಟಂತಿ || ೮೭

"ಚಿತ್ತಶುದ್ಧಿಯೂ ವೈರಾಗ್ಯಕ್ಕೆ ಕಾರಣ. ಚಿತ್ತ ಶುದ್ಧಿಗೆ ಮಹಾತ್ಮರ ಸೇವೆ ಕಾರಣವೆಂದು ಬಲ್ಲವರು ಹೇಳುತ್ತಾರೆ. ಈ ಎಲ್ಲ ಕಾರಣದಿಂದ ನಿನ್ನಂಥವರು ದೂರದೇಶದಲ್ಲಿ ಪರೋಪಕಾರಕ್ಕಾಗಿ ಭೂಮಿಯಲ್ಲಿ ಸಂಚರಿಸುತ್ತಾರೆ.

ಅಜ್ಞಾತಗೋತ್ರಾ ವಿದಿತಾತ್ಮತತ್ತ್ವಾ
ಲೋಕಸ್ಯ ದೃಷ್ಟ್ಯಾ ಜಡವದ್ವಿಭಾಂತಃ |
ಚರಂತಿ ಭೂತಾನ್ಯನುಕಂಪಮಾನಾಃ
ಸಂತೋ ಯದೃಚ್ಛೋಪನತೋಪಭೋಗ್ಯಾಃ || ೮೮

"ಅವರ ಗೋತ್ರಾದಿಗಳು ಯಾರಿಗೂ ತಿಳಿದಿರುವುದಿಲ್ಲ. ಆತ್ಮದ ನಿಜ ಸ್ವರೂಪವನ್ನರಿತ ಮಹಾತ್ಮರು ಲೋಕದೃಷ್ಟಿಯಲ್ಲಿ ಜಡರಂತೆ ತೋರುತ್ತಾರೆ. ಸಕಲಭೂತಗಳನ್ನು ಕೃಪಾದೃಷ್ಟಿಯಿಂದ ನೋಡುತ್ತಾ ತಾನಾಗಿ ದೊರಕಿದ ಆಹಾರಾದಿಗಳನ್ನು ಸ್ವೀಕರಿಸುತ್ತಾ ಈ ಸಜ್ಜನರು ಸಂಚರಿಸುತ್ತಾರೆ.

ಚರಂತಿ ತೀರ್ಥಾನ್ಯಪಿ ಸಂಗ್ರಹೀತುಂ
ಲೋಕಂ ಮಹಾಂತೋ ನನು ಶುದ್ಧಭಾವಾಃ |
ಶುದ್ಧಾತ್ಮವಿದ್ಯಾಕ್ಷಪಿತೋರುಪಾಪಾ-
ಸ್ತಜ್ಜುಷ್ಟಮಂಭೋ ನಿಗದಂತಿ ತೀರ್ಥಮ್ || ೮೯

"ಶುದ್ಧ ಭಾವವುಳ್ಳ ಮಹಾಪುರುಷರು ಲೋಕಸಂಗ್ರಹಕ್ಕಾಗಿ ತೀರ್ಥಯಾತ್ರೆಗೂ ಹೊರಡುತ್ತಾರೆ. ಇವರು ಶುದ್ಧವಾದ ಆತ್ಮವಿದ್ಯೆಯನ್ನು ಅರಿತವರಾಗಿ ಸಕಲಪಾಪಗಳನ್ನೂ ನಿವಾರಿಸಲು ಶಕ್ತರಾಗಿರುತ್ತಾರೆ. ಇವರು ಮುಟ್ಟಿದ ನೀರು ತೀರ್ಥವೆಂದು ಹಿರಿಯರು ಹೇಳುತ್ತಾರೆ.

ವಸ್ತವ್ಯಮತ್ರ ಕತಿಚಿದ್ದಿವಸಾನಿ ವಿದ್ವಂ-
ಸ್ತ್ವದ್ದರ್ಶನಂ ವಿತನುತೇ ಮುದಿತಾದಿ ಭವ್ಯಮ್ |
ವಿಷ್ಯದ್ವಿಯೋಗಚಕಿತಾ ಜನತೇಯಮಾಸ್ತೇ
ದುಃಖಂ ಗತೇಽತ್ರ ಭವಿತೇತಿ ಭವತ್ಯಸಂಗೇ || ೬೦

"ಹೇ ವಿದ್ವದಗ್ರೇಸರ, ಕೆಲವು ದಿನಗಳವರೆಗೆ ಇಲ್ಲಿ ವಸತಿ ಮಾಡೋಣವಾಗಲಿ. ನಿನ್ನ ದರ್ಶನವು ಆನಂದವನ್ನೂ, ಶುಭವನ್ನೂ ನಮಗೆ ಉಂಟುಮಾಡುತ್ತದೆ. ನೀನು ಯಾವಾಗ ಹೋಗಿಬಿಡುತ್ತೀಯೋ ಎಂದು ಜನತೆಯು ಚಿಂತಾತುರವಾಗಿದೆ. ನಿಃಸಂಗನಾದ ನೀನು ಹೋದಮೇಲೆ ನಿನ್ನ ವಿರಹದಿಂದ ದುಃಖವಾಗುವುದೆಂದು ಜನರು ವಿಷಾದಿಸುತ್ತಾರೆ.

ಕೋಶಂ ಕ್ಲೇಶಮಲಸ್ಯ ಲಾಸ್ಯಗೃಹಮಪ್ಯದ್ರಂಹಸಾಮಾಲಯಂ
ಪೈಶುನ್ಯಸ್ಯ ನಿಶಾಂತಮುತ್ಕಟಮೃಷಾಭಾಷಾವಿಶೇಷಾಶ್ರಯಮ್ |
ಹಿಂಸಾಮಾಂಸಲಮಾಶ್ರಿತಾ ಘನಘನಾಶಂಸಾನೃಶಂಸಾ ವಯಂ
ವರ್ಜ್ಯಂ ದುರ್ಜನಸಂಗಮಂ ಕರುಣಯಾ ಶೋಧ್ಯಾ ಯತೀಂದೋ
ತ್ವಯಾ || ೬೧

ನಾನಾಕ್ಲೇಶವೆಂಬ ಕೊಳೆಗೆ ಕೋಶವೂ, ಸಾಹಸ ಕೃತ್ಯಗಳಿಗೆ ನೃತ್ಯಶಾಲೆಯೂ, ಚಾಡಿಮಾತಿಗೆ ಮನೆಯೂ, ಉತ್ಕಟವಾದ ಸುಳ್ಳು ಮಾತುಗಳಿಗೆ ಭವನವೂ, ಹಿಂಸೆಯಿಂದ ಪರಿಪುಷ್ಟವೂ, ಹೇಯವೂ ಆದ ದುರ್ಜನ ಸಂಗವನ್ನು ನಾವು ಮಾಡುತ್ತಿದ್ದೇವೆ. ಅತಿಯಾದ ಧನಲೋಭದಿಂದ ದುಷ್ಟರಾಗಿದ್ದೇವೆ. ಹೇ ಯತಿಶ್ರೇಷ್ಠ, ನೀನು ಕರುಣೆಯಿಂದ ನಮ್ಮನ್ನು ಶುದ್ಧಿಗೊಳಿಸಬೇಕು" ಎಂದು ನುಡಿದರು.

ಸಂಯುನಕ್ತಿ ವಿಯುನಕ್ತಿ ದೇಹಿನಂ
ದೈವಮೇವ ಪರಮಂ ಮನಾಗಪಿ |
ಇಷ್ಟಸಂಗತಿನಿವೃತ್ತಿಕಾಲಯೋಃ
ನಿರ್ವಿಕಾರಹೃದಯೋ ಭವೇನ್ನರಃ || ೬೨

ಆಗ ಪದ್ಮಪಾದನು ಪ್ರತಿಯಾಗಿ ಇಂತೆಂದನು. "ಬಲವತ್ತರವಾದ ದೈವವೇ ಮನುಷ್ಯನನ್ನು ಮೆಲ್ಲಗೆ ಇನ್ನೊಂದರ ಜೊತೆಗೂಡಿಸುತ್ತದೆ. ಹಾಗೆಯೇ ಅಗಲಿಸುತ್ತದೆ. ಇಷ್ಟರಾದವರ ಸಂಯೋಗ ವಿಯೋಗಗಳ ಸಮಯದಲ್ಲಿ ಮನುಷ್ಯನು ನಿರ್ವಿಕಾರ ಚಿತ್ತನಾಗಿರಬೇಕು.

ಟಿಪ್ಪಣಿ :- ದೈವ = ನಮ್ಮ ಪುರಾತನ ಕರ್ಮ.

ಮಧ್ಯಾಹ್ನಕಾಲೇ ಕ್ಷುಧಿತಸ್ತೃಷಾರ್ತಃ
ಕ್ವ ಮೇಽನ್ನದಾತೇತಿ ವದನ್ನುಪೈತಿ |
ಯಸ್ತಸ್ಯ ನಿರ್ವಾಪಯಿತಾ ಕ್ಷುಧಾರ್ತೇಃ
ಕಸ್ತಸ್ಯ ಪುಣ್ಯಂ ವದಿತುಂ ಕ್ಷಮೇತ || ೯೩

"ಮಧ್ಯಾಹ್ನದ ಹೊತ್ತಿನಲ್ಲಿ ಹಸಿವು ಬಾಯಾರಿಕೆಗಳಿಂದ ನೊಂದು ನನ್ನ ಅನ್ನದಾತನು ಎಲ್ಲಿದ್ದಾನೆ ಎಂದು ಹೇಳುತ್ತಾ ಯಾವನು ಬರುತ್ತಾನೋ ಆತನ ಹಸಿವಿನ ಪೀಡೆಯನ್ನು ಹೋಗಲಾಡಿಸತಕ್ಕವನು ಗೃಹಸ್ಥ. ಅವನ ಪುಣ್ಯವನ್ನು ವರ್ಣಿಸಲು ಯಾವನು ಸಮರ್ಥನಾದಾನು?

ಸಾಯಂ ಪ್ರಾತರ್ವಹ್ನಿಕಾರ್ಯಂ ವಿತನ್ವನ್
ಮಜ್ಜಂಸ್ತೋಯೇ ದಂಡಕೃಷ್ಣಾಜಿನೀ ಚ |
ನಿತ್ಯಂ ವರ್ಣೀ ವೇದವಾಕ್ಯಾನ್ಯಧೀಯನ್
ಕ್ಷುಧ್ವಾ ಶೀಘ್ರಂ ಗೇಹಿನೋ ಗೇಹಮೇತಿ || ೯೪

"ಬ್ರಹ್ಮಚಾರಿಯಾದರೆ ನಿತ್ಯವೂ ತಣ್ಣೀರಲ್ಲಿ ಮುಳುಗಿ ಸ್ನಾನಮಾಡಿ ಪ್ರಾತಃಕಾಲದಲ್ಲಿಯೂ ಸಾಯಂಕಾಲದಲ್ಲಿಯೂ ಅಗ್ನಿಕಾರ್ಯವನ್ನು ಮಾಡಬೇಕು. ಕೃಷ್ಣಾಜಿನವನ್ನುಟ್ಟು ದಂಡಧಾರಿಯಾಗಿರಬೇಕು. ವೇದವನ್ನು ತಪ್ಪದೆ ಅಧ್ಯಯನ ಮಾಡಬೇಕು. ಹಸಿವಾದೊಡನೆ(ಭಿಕ್ಷಾನ್ನಕ್ಕಾಗಿ) ಬೇಗಬೇಗನೆ ತೆರಳಬೇಕು!

ಟಿಪ್ಪಣಿ :- ಅಧೀಯನ್ = ಇಙ್‌ಧಾರ್ಯೋಃ ಶತ್ರಕೃಚ್ಛ್ರಿಣಿ- ಎಂಬ ಸೂತ್ರದಿಂದ ಶತೃಪ್ರತ್ಯಯ.

ಉಚ್ಚೈಃ ಶಾಸ್ತ್ರಂ ಭಾಷಮಾಣೋಽಪಿ ಭಿಕ್ಷುಃ
ತಾರಂ ಮಂತ್ರಂ ಸಂಜಪನ್ವಾ ಯತಾತ್ಮಾ |
ಮಧ್ಯೇಘಸ್ರಂ ಜಾಠರಾಗ್ನೌ ಪ್ರದೀಪ್ತೇ
ದಂಡೀ ನಿತ್ಯಂ ಗೇಹಿನೋ ಗೇಹಮೇತಿ || ೯೫

"ಸಂನ್ಯಾಸಿಯು ದೊಡ್ಡದಾಗಿ ಶಾಸ್ತ್ರಪ್ರವಚನವನ್ನು ಮಾಡುತ್ತಿರಲಿ ಅಥವಾ ಜಿತೇಂದ್ರಿಯನಾಗಿ ತಾರಕಮಂತ್ರವನ್ನು ಜಪಿಸುತ್ತಿರಲಿ, ಮಧ್ಯಾಹ್ನವಾದೊಡನೆ ಅವನ ಜಠರಾಗ್ನಿಯು ದೀಪ್ತವಾಗಿಬಿಡುತ್ತದೆ! ಆಗ ದಂಡವನ್ನುಹಿಡಿದು ತಪ್ಪದೆ ಗೃಹಸ್ಥನ ಮನೆಯ ಬಾಗಿಲಿಗೆ ತೆರಳುತ್ತಾನೆ!

ಯದನ್ನದಾನೇನ ನಿಜಂ ಶರೀರಂ
ಪುಷ್ಣಂಸ್ತಪೋಽಯಂ ಕುರುತೇ ಸುತೀವ್ರಮ್ |
ಕರ್ತುಸ್ತದರ್ಧಂ ದದತೋಽನ್ನಮರ್ಧಂ
ಇತಿ ಸ್ಮೃತಿಃ ಸಂವವೃತೇಽನವದ್ಯಾ || ೯೬

"ಯಾವಾತನು ಮಾಡುವ ಅನ್ನದಾನದಿಂದ ಸಂನ್ಯಾಸಿಯು ತನ್ನ ದೇಹವನ್ನು ಪೋಷಿಸಿ ಕೊಂಡು ತೀವ್ರವಾದ ತಪಸ್ಸನ್ನಾಚರಿಸುತ್ತಾನೋ ಆತನ ತಪಃಫಲದಲ್ಲಿ ಕರ್ತೃವಾದ ಸಂನ್ಯಾಸಿಗೆ ಅರ್ಧಫಲವು ಮಾತ್ರ ಲಭಿಸುತ್ತದೆ. ಉಳಿದ ಅರ್ಧಫಲವು ಅನ್ನದಾತನಿಗೆ ಸಲ್ಲುತ್ತದೆ. ಪೂಜ್ಯವಾದ ಧರ್ಮಶಾಸ್ತ್ರವೇ ಇದನ್ನು ತಿಳಿಸಿ ಕೊಟ್ಟಿದೆ.

ಪುಣ್ಯಂ ಗೃಹಸ್ಥೇನ ವಿಚಕ್ಷಣೇನ
ಗೃಹೇಷು ಸಂಚೇತುಮಲಂ ಪ್ರಯಾಸಾತ್ |
ವಿನಾಽಪಿ ತತ್ಕರ್ತೃನಿಷೇವಣೇನ
ತೀರ್ಥಾದಿಸೇವಾ ಬಹುದುಃಖಸಾಧ್ಯಾ || ೯೭

"ಗೃಹಸ್ಥನು ಬುದ್ಧಿಶಾಲಿಯಾದರೆ ಪ್ರಯಾಸವಿಲ್ಲದೆಯೇ ಮನೆಯಲ್ಲಿಯೇ ಇದ್ದು ಪುಣ್ಯವನ್ನು ಸಂಪಾದಿಸಲು ಸಾಧ್ಯವಿದೆ. ತೀರ್ಥಯಾತ್ರೆಮೊದಲಾದ್ದನ್ನು ಮಾಡತಕ್ಕವರ ಸೇವೆಯನ್ನು ಮಾಡಿದರೆ ಸಾಕಾಗುತ್ತದೆ. ತೀರ್ಥಯಾತ್ರೆ ಮೊದಲಾದದ್ದು ಕಷ್ಟಸಾಧ್ಯವಾದುದು.

ಗೃಹೀ ಧನೀ ಧನ್ಯತರೋ ಮತೋ ಮೇ
ತಸ್ಯೋಪಜೀವಂತಿ ಧನಂ ಹಿ ಸರ್ವೇ |
ಚೌರ್ಯೇಣ ಕಶ್ಚಿತ್ಪ್ರಣಯೇನ ಕಶ್ಚಿತ್
ದಾನೇನ ಕಶ್ಚಿದ್ಬಲತೋಽಪಿ ಕಶ್ಚಿತ್ || ೯೮

"ಧನಿಕನಾದ ಗೃಹಸ್ಥಾಶ್ರಮಿಯು ಉಳಿದವರಿಗಿಂತ ಧನ್ಯತರನೆಂದು ನನ್ನ ಅಭಿಪ್ರಾಯ. ಉಳಿದವರು ಆತನ ಧನವನ್ನು ಆಶ್ರಯಿಸಿಕೊಂಡು ಜೀವಿಸಬೇಕಲ್ಲವೆ? ಒಬ್ಬನು ಕಳ್ಳತನದಿಂದ, ಇನ್ನೊಬ್ಬನು ಪ್ರೀತಿಪಾತ್ರನಾಗುವುದರಿಂದ, ಮತ್ತೊಬ್ಬನು ದಾನವನ್ನು ಸ್ವೀಕರಿಸುವುದರಿಂದ, ಮಗದೊಬ್ಬನು ಬಲಾತ್ಕಾರವಾಗಿ ಹಣವನ್ನು ಕಿತ್ತುಕೊಳ್ಳುವುದರಿಂದ ಜೀವಿಸುತ್ತಿರಬಹುದು. (ಅಂತೂ ಗೃಹಸ್ಥನ ಹಣದಿಂದ ಎಲ್ಲರೂ ಉಪಯೋಗವನ್ನು ಪಡೆಯುತ್ತಾರೆಂದು ತಾತ್ಪರ್ಯ).

ಸಂತೋಷಯೇದ್ವೇದವಿದಂ ದ್ವಿಜಂ ಯಃ
ಸಂತೋಷಯತ್ಯೇಷ ಸ ಸರ್ವದೇವಾನ್ |
ತದ್ವೇದವಿಪ್ರೇ ನಿವಸಂತಿ ದೇವಾ
ಇತಿ ಸ್ಮ ಸಾಕ್ಷಾಚ್ಛ್ರುತಿರೇವ ವಕ್ತಿ || ೯೯

"ವೇದಜ್ಞನಾದ ಬ್ರಾಹ್ಮಣನನ್ನು ಯಾವಾತನು ಸಂತೋಷಪಡಿಸುತ್ತಾನೋ ಅವನು ಸರ್ವದೇವತೆಗಳನ್ನೂ ಸಂತೋಷಪಡಿಸಿದಂತೆಯೇ ಸರಿ. ವೇದವಿದನಾದ ವಿಪ್ರನಲ್ಲಿ ಸರ್ವದೇವತೆಗಳೂ ವಾಸವಾಗಿದ್ದಾರೆಂದು ಸಾಕ್ಷಾತ್ ವೇದವೇ ಘೋಷಿಸುತ್ತಿದೆ.

ಟಿಪ್ಪಣಿ :- ಯಾವತೀ ರ್ವೈ ದೇವತಾಸ್ತಾಃ ಸರ್ವಾ ವೇದವಿದಿ ಬ್ರಾಹ್ಮಣೇ ವಸಂತಿ -ಎಂದು ವೇದವಚನವಿದೆ.

ಸ್ವಧರ್ಮನಿಷ್ಠಾ ವಿದಿತಾಖಿಲಾರ್ಥಾ
ಜಿತೇಂದ್ರಿಯಾಃ ಸೇವಿತಸರ್ವತೀರ್ಥಾಃ |
ಪರೋಪಕಾರವ್ರತಿನೋ ಮಹಾಂತ
ಆಯಾಂತಿ ಸರ್ವೇ ಗೃಹಿಣೋ ಗೃಹಾಯ || ೧೦೦

"ಸ್ವಧರ್ಮನಿಷ್ಠರೂ ಸಕಲವಿಷಯಗಳನ್ನು ಬಲ್ಲವರೂ ಜಿತೇಂದ್ರಿಯರೂ ಸಮಸ್ತ ತೀರ್ಥಗಳನ್ನು ಸೇವಿಸಿದವರೂ ಮತ್ತು ಪರೋಪಕಾರವನ್ನು ವ್ರತವೆಂದು ಕೈಗೊಂಡವರೂ ಆದ ಮಹಾಪುರುಷರೆಲ್ಲರೂ ಗೃಹಸ್ಥರ ಮನೆಗೆ ಆಗಮಿಸುತ್ತಾರೆ.

ಗೃಹೀ ಗೃಹಸ್ಥೋಽಪಿ ತದಶ್ನುತೇ ಫಲಂ
ಯತ್ತೀರ್ಥಸೇವಾಭಿರವಾಪ್ಯತೇ ಜನೈಃ |
ತತ್ತಸ್ಯ ತೀರ್ಥಂ ಗೃಹಮೇವ ಕೀರ್ತಿತಂ
ಧನೀ ವದಾನ್ಯಃ ಪ್ರವಸೇನ್ನ ಕಶ್ಚನ || ೧೦೧

"ಗೃಹಸ್ಥನಾದವನು ಮನೆಯಲ್ಲಿದ್ದರೂ ಸಹ ತೀರ್ಥಯಾತ್ರೆಯಿಂದ ಜನರಿಗೆ ಲಭಿಸುವ ಫಲವನ್ನು ಪಡೆದುಕೊಳ್ಳುತ್ತಾನೆ. ಆತನ ಮನೆಯೇ ತೀರ್ಥವೆಂದು ಉಕ್ತವಾಗಿದೆ. ದಾನಶೀಲನಾದ ಧನಿಕನು ಪ್ರವಾಸಮಾಡಬೇಕಾದ್ದೇ ಇಲ್ಲ.

ಅಂತಃಸ್ಥಿತಾ ಮೂಷಕಮುಖ್ಯಜೀವಾ
ಬಹಿಃ ಸ್ಥಿತಾ ಗೋಮೃಗಪಕ್ಷಿಮುಖ್ಯಾಃ |
ಜೀವಂತಿ ಜೀವಾಃ ಸಕಲೋಪಜೀವ್ಯಃ
ತಸ್ಮಾದ್‌ಗೃಹೀ ಸರ್ವವರೋ ಮತೋ ಮೇ || ೧೦೨

"ಮನೆಯೊಳಗೆ ಇಲಿಯೇ ಮೊದಲಾದ ಪ್ರಾಣಿಗಳು ಜೀವಿಸಿ ಕೊಂಡಿರುತ್ತವೆ. ಹೊರಗಡೆ ಗೋವು, ಮೃಗ, ಪಕ್ಷಿ ಮೊದಲಾದವು ಗೃಹಸ್ಥನನ್ನಾಶ್ರಯಿಸಿ ಬದುಕಿಕೊಂಡಿರುತ್ತವೆ. ಹೀಗೆ ಗೃಹಸ್ಥನು ಸಕಲರಿಗೂ ಉಪಜೀವ್ಯನಾಗಿದ್ದಾನೆ. ಆದ್ದರಿಂದ ಗೃಹಿಯೇ ಎಲ್ಲರಿಗಿಂತ ಉತ್ತಮನೆಂದು ನನ್ನ ಅಭಿಪ್ರಾಯ.

ಶರೀರಮೂಲಂ ಪುರುಷಾರ್ಥಸಾಧನಂ
ತಚ್ಚಾನ್ನಮೂಲಂ ಶ್ರುತಿತೋಽವಗಮ್ಯತೇ |
ತಚ್ಚಾನ್ನಮಸ್ಮಾಕಮಮೀಷು ಸಂಸ್ಥಿತಂ
ಸರ್ವಂ ಫಲಂ ಗೇಹಪತಿದ್ರುಮಾಶ್ರಯಮ್ || ೧೦೩

"ಪುರುಷಾರ್ಥವನ್ನು ಸಾಧಿಸುವುದಕ್ಕೆ ಶರೀರವು ಮೂಲಕಾರಣ. ಶರೀರವು ಅನ್ನಮೂಲವಾದದ್ದು. ಇದು ಶ್ರುತಿಯಿಂದಲೇ ತಿಳಿದು ಬರುತ್ತದೆ. ನಮ್ಮಂಥವರ ಅನ್ನವು ಗೃಹಸ್ಥರಿಂದ ದೊರೆಯಬೇಕಾಗಿದೆ. ಆದ್ದರಿಂದ ಸರ್ವಫಲವೂ ಗೃಹಸ್ಥನೆಂಬ ಕಲ್ಪವೃಕ್ಷವನ್ನು ಆಶ್ರಯಿಸಿಕೊಂಡಿದೆ.

ಟಿಪ್ಪಣಿ :- ಅನ್ನಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ, ಅನ್ನೇನ ಜಾತಾನಿ ಜೀವಂತಿ-ಎಂದು ಭೃಗುವಲ್ಲಿಯಲ್ಲಿದೆ.

ಬ್ರವೀಮಿ ಭೂಯಃ ಶೃಣುತಾಽದರೇಣ ವೋ
ಗೃಹಾಗತಂ ಪೂಜಯತಾಽಽತುರಾತಿಥಿಮ್ |
ಸಂಪೂಜಿತೋ ವೋಽತಿಥಿರುದ್ಧರೇತ್ಕುಲಂ
ನಿರಾಕೃತಾತ್ ಕಿಂ ಭವತೀತಿ ನೋಚ್ಯತೇ || ೧೦೪

"ಎಲೈ ವಿಪ್ರರೇ, ಇನ್ನೂ ಒಂದು ಮಾತನ್ನು ನಿಮಗೆ ಹೇಳುತ್ತೇನೆ, ಕೇಳಿರಿ. ಕಷ್ಟದಲ್ಲಿರುವ ಅತಿಥಿಯು ನಿಮ್ಮ ಮನೆಗೆ ಬಂದರೆ ಅವನನ್ನು ಆದರದಿಂದ ಸತ್ಕರಿಸಿರಿ. ಹೀಗೆ ಸತ್ಕೃತನಾದ ಅತಿಥಿಯು ನಿಮ್ಮ ಕುಲವನ್ನೇ ಉದ್ಧರಿಸುವನು. ಅತಿಥಿಯನ್ನು ನಿರಾಕರಿಸಿದರೆ ಏನಾಗುವುದೆಂಬುದನ್ನು ಈಗ ಹೇಳುವುದಿಲ್ಲ.

ವಿನಾಽಭಿಸಂಧಿಂ ಕುರುತ ಶ್ರುತೀರಿತಂ
ಕರ್ಮ ದ್ವಿಜಾ ನೋ ಜಗತಾಮಧೀಶ್ವರಃ |
ತುಷ್ಯೇದಿತಿ ಪ್ರಾರ್ಥನಯಾಽಪಿ ತೇನ
ಸ್ಯಾಂತಸ್ಯ ಶುದ್ಧಿರ್ಭವಿತಾಽಚಿರೇಣ ವಃ || ೧೦೫

"ಶ್ರುತಿಚೋದಿತವಾದ ಕರ್ಮವನ್ನು, ಎಲೈ ವಿಪ್ರರೇ, ಫಲಾಪೇಕ್ಷೆ ಇಲ್ಲದೆ ಮಾಡುತ್ತ ಹೋಗಿರಿ. "ಜಗದೀಶ್ವರನು ನಮ್ಮ ಕರ್ಮದಿಂದ ಸಂತುಷ್ಟನಾಗಲಿ" ಎಂಬ ಪ್ರಾರ್ಥನೆಯೂ ಇಲ್ಲದಿರಲಿ. ಅದರಿಂದ ಬಹುಬೇಗನೆ ನಿಮ್ಮ ಅಂತಃಕರಣದ ಶುದ್ಧಿಯಾಗುವುದು.

ಸಸಂರಂಭಶ್ಲಿಷ್ಯತ್ಸುಫಣಿತಿವಧೂಟೀಕುಚತಟೀ-
ಪಟೀವತ್ಪಾಟೀರಾಗರವನವಪಂಕಾಂಕಿತಹೃದಃ |
ತಥಾಽಪ್ಯೇತೇ ಪೂತಾ ಯತಿಪತಿಪದಾಂಭೋಜಭಜನ-
ಕ್ಷಣಕ್ಷೀಣಕ್ಲೇಶಾಃ ಸದಯಹೃದಯಾಭಾಃ ಸುಕೃತಿನಃ || ೧೦೬

ಸಂಭ್ರಮದಿಂದ ಆಲಿಂಗಿಸಿ ಸವಿಮಾತುಗಳನ್ನಾಡುವ ಸ್ತ್ರೀಯರ ಕುಚತಟದಲ್ಲಿ ವಸ್ತ್ರದಂತೆ ಸಾಂದ್ರವಾಗಿರುವ ಚಂದನ ಮತ್ತು ಅಗರುವಿನ ನವಗಂಧದಿಂದ ಗೃಹಸ್ಥರ ಹೃದಯವು (ಎದೆ ಮತ್ತು ಮನಸ್ಸು) ಲಿಪ್ತವಾಗಿರಬಹುದು. ಆದರೂ ಇವರು ಯತಿರಾಜರಾದ ಶ್ರೀಶಂಕರಾಚಾರ್ಯರ ಪಾದಕಮಲವನ್ನು ಭಜಿಸಿದ ಕ್ಷಣದಲ್ಲಿಯೇ ಇವರ ಕಷ್ಟಗಳೆಲ್ಲವೂ ಕ್ಷಯಿಸಿಬಿಡುತ್ತವೆ: ಪವಿತ್ರರಾಗುವ ಈ ಸುಕೃತಿಗಳು ದಯಾಪೂರ್ಣವಾದ ಮೃದುಹೃದಯದಿಂದ ವಿರಾಜಿಸುವರು."

ವಿವರಣೆ : ಗೃಹಸ್ಥರಾದರೂ ಶ್ರೀಶಂಕರಭಕ್ತರು ತಮ್ಮ ಕಷ್ಟಗಳನ್ನು ನೀಗಿಕೊಳ್ಳುತ್ತಾರೆ. ಶೃಂಗಾರಮಯವಾದ ಜನರ ಹೃದಯವೂ ಆಚಾರ್ಯರ ಉಪದೇಶದಿಂದ ದಯಾಮಯವಾಗಿಬಿಡುತ್ತದೆ. ಅವರು ಶುದ್ಧರಾಗಿ ಧನ್ಯರಾಗುತ್ತಾರೆ- ಎಂದು ಅಭಿಪ್ರಾಯ.

ಸಂದಿಶ್ಯೇತ್ಥಂ ಬಂಧುತಾಂ ಭಿಕ್ಷುರಾಜೋ
ಭಿಕ್ಷಾಂ ಚಕ್ರೇ ಮಾತುಲಸ್ಯೈವ ಗೇಹೇ |
ಪಪ್ರಚ್ಛೈನಂ ಮಾತುಲೋ ಭುಕ್ತವಂತಂ
ಕಿಂಸ್ವಿಚ್ಛನ್ನಂ ಪುಸ್ತಕಂ ಶಿಷ್ಯಹಸ್ತೇ || ೧೦೭

ಈರೀತಿಯಾಗಿ ಬಂಧುಜನರಿಗೆ ಸಂದೇಶವನ್ನಿತ್ತು ಭಿಕ್ಷುರಾಜರಾದ ಪದ್ಮಪಾದರು ತಮ್ಮ ಸೋದರಮಾವನ ಮನೆಯಲ್ಲಿಯೇ ಭಿಕ್ಷೆಯನ್ನು ಸ್ವೀಕರಿಸಿದರು. ಭೋಜನವಾದ ಮೇಲೆ ಅವರನ್ನು ಕುರಿತು ಸೋದರಮಾವನು 'ನಿಮ್ಮ ಶಿಷ್ಯನ ಕೈಯಲ್ಲಿ ವಸ್ತ್ರಾಚ್ಛಾದಿತವಾದ ಪುಸ್ತಕವಿದೆಯಲ್ಲ, ಯಾವುದದು?' ಎಂದು ಕೇಳಿದನು.

ಟೀಕಾ ವಿದ್ವನ್ ಭಾಷ್ಯಗೇತಿ ಬ್ರುವಾಣಂ
ತಾಂ ದೇಹೀತಿ ಪ್ರೋಚುಷೇ ದತ್ತವಾಂಶ್ಚ |
ಅದ್ರಾಕ್ಷೀತ್ತಾಂ ಮಾತುಲಸ್ತಸ್ಯ ಬುದ್ಧಿಂ
ದೃಷ್ಟ್ವಾಽಽನಂದೀತ್ ಖೇದಮಾಪಚ್ಚ ಕಿಂಚಿತ್ || ೧೦೮

ಪದ್ಮಪಾದರು "ಪಂಡಿತರೆ, ಅದು ನಮ್ಮ ಗುರುಗಳ ಭಾಷ್ಯಕ್ಕೆಬರೆದ ಟೀಕೆ" ಎಂದರು. ಸೋದರಮಾವನು "ಅದನ್ನಿಲ್ಲಿ ಕೊಡಿರಿ" ಎಂದು ಕೇಳಲಾಗಿ ಪದ್ಮಪಾದರು ಆ ಪುಸ್ತಕವನ್ನು ಕೊಟ್ಟರು. ಆ ಪಂಡಿತನು ಟೀಕಾಗ್ರಂಥವನ್ನು ಓದಿ ತನ್ನ(ಸೋದರಳಿಯನಾದ) ಆತನ ಬುದ್ಧಿವೈಭವನ್ನು ಕಂಡು ಆನಂದಿಸಿದನು. ಆನಂದದ ಜೊತೆಗೆ ಸ್ವಲ್ಪ ವಿಷಾದವೂ ಆಯಿತು!

ಪ್ರಬಂಧನಿರ್ಮಾಣವಿಚಿತ್ರನೈಪುಣೀಂ
ದೃಷ್ಟ್ವಾ ಪ್ರಮೋದಂ ಸ ವಿವೇದ ಕಿಂಚಿತ್ |
ಮತಾಂತರಾಣಾಂ ಕಿಲ ಯುಕ್ತಿಜಾಲೈ:
ನಿರುತ್ತರಂ ಬಂಧನಮಾಲುಲೋಕೇ || ೧೦೯

ಟೀಕಾಪ್ರಬಂಧವನ್ನು ನಿರ್ಮಿಸುವುದರಲ್ಲಿ ಪದ್ಮಪಾದರಿಗಿದ್ದ ಅದ್ಭುತವಾದ ನೈಪುಣ್ಯವನ್ನು ಕಂಡು ಆತನಿಗೆ ಸ್ವಲ್ಪ ಸಂತೋಷವೇನೋ ಲಭಿಸಿತು. ಮತಾಂತರಗಳನ್ನು ಯುಕ್ತಿಜಾಲಗಳಿಂದ ಖಂಡಿಸಿ ಉತ್ತರವಿಲ್ಲದಂತೆ ಮಾಡಿ ಕಟ್ಟಿಹಾಕುವ ವಿಧಾನವನ್ನು ಆತನು ಗಮನಿಸಿದನು.

**ಟಿಪ್ಪಣಿ :- ವಿವೇದ = ವಿದ್ಲೃ ಲಾಭೇ, ಲಿಟ್.**

ಗುರೋರ್ಮತಂ ಸ್ವಾಭಿಮತಂ ವಿಶೇಷಾತ್
ನಿರಾಕೃತಂ ತತ್ರ ಸಮತ್ಸರೋಽಭೂತ್ |
ಸಾಧುರ್ನಿಬಂಧೋಽಯಮಿತಿ ಬ್ರುವಾಣಃ
ತಂ ಸಾಽಭ್ಯಸೂಯೋಽಪಿ ಕೃತಾಭಿನಂದಃ || ೧೧೦

ತನಗೆ ಸಂಮತವಾದ ಮೀಮಾಂಸಕರ ಗುರುಮತವನ್ನು ಅದರಲ್ಲಿ ವಿಶೇಷವಾಗಿ ನಿರಾಕರಿಸಲಾಗಿತ್ತು. ಅದನ್ನು ಕಂಡು ಆ ಪಂಡಿತನಿಗೆ ಮಾತ್ಸರ್ಯಹುಟ್ಟಿತು. ಹೊಟ್ಟೆಯಲ್ಲಿ ಹೊಟ್ಟೆಕಿಚ್ಚು ತುಂಬಿದ್ದರೂ ಆತನು ಬಾಯಲ್ಲಿ 'ನಿಬಂಧವು ಚೆನ್ನಾಗಿದೆ'ಎಂದು ಹೇಳಿ ಪದ್ಮಪಾದರನ್ನು ಅಭಿನಂದಿಸಿದನು!

ಸೇತುಂ ಗಚ್ಛಾಮ್ಯಾಲಯೇ ಪುಸ್ತಭಾರಂ
ತೇ ನ್ಯಸ್ಯೇಮಂ ವರ್ತತೇ ಮೇಽತ್ರ ಜೀವಃ |
ವಿದ್ವನ್ ಯದ್ವದ್ಗೋಗೃಹಾದೌ ಪರೇಷಾಂ
ಪ್ರೀತಿಃ ಪೂರ್ಣಾ ನಸ್ತಥಾ ಪುಸ್ತಭಾರೇ || ೧೧೧

ಅನಂತರ ಪದ್ಮಪಾದರು "ನಾನೀಗ ರಾಮಸೇತುವಿಗೆ ಹೋಗುತ್ತೇನೆ. ಈ ಪುಸ್ತಕದ ಕಟ್ಟನ್ನು ನಿಮ್ಮ ಮನೆಯಲ್ಲಿ ಇಟ್ಟುಹೋಗುತ್ತೇನೆ. ನನ್ನ ಪ್ರಾಣವೇ ಇದರಲ್ಲಿದೆ. ಇತರರಿಗೆ ಗೋವು, ಗೃಹ ಮೊದಲಾದ್ದರಲ್ಲಿ ಪ್ರೀತಿ ಇರುವಂತೆ, ಪಂಡಿತರೆ, ನಮಗೆ ಈ ಪುಸ್ತಕದಲ್ಲಿ ಪರಮಪ್ರೀತಿ ಇದೆ" ಎಂದರು.

ಇತ್ಯುಕ್ತ್ವಾ ತೈರ್ಮಾತುಲಂ ಮಸ್ಕರೀಶಃ
ಶಿಷ್ಯೈರ್ಹೃಷ್ಯನ್ ಸೇತುಮೇಷ ಪ್ರತಸ್ಥೇ |
ಪ್ರಸ್ಥಾತುಃ ಶ್ರೀಪದ್ಮಪಾದಸ್ಯ ಜಾತಂ
ಕಷ್ಟಂ ಚೈಷ್ಯತ್ಸೂಚನಾಯೈ ನಿಮಿತ್ತಮ್ || ೧೧೨

ಹೀಗೆ ಸೋದರಮಾವನಿಗೆ ಹೇಳಿ ಯತೀಂದ್ರರಾದ ಪದ್ಮಪಾದರು ಸಂತುಷ್ಟರಾಗಿ ಶಿಷ್ಯರೊಡನೆ ರಾಮಸೇತುವಿಗೆ ಪ್ರಯಾಣಮಾಡಿದರು. ಪ್ರಯಾಣಕ್ಕೆ ಹೊರಟಾಗ ಪದ್ಮಪಾದರಿಗೆ ಮುಂದಿನ ಭವಿಷ್ಯತ್ತನ್ನು ಸೂಚಿಸುವ ಕೆಟ್ಟ ಶಕುನವಾಯಿತು.

ವಾಮಂ ನೇತ್ರಂ ಗಂತುರಸ್ಪಂದತೈವ
ಬಾಹುಃ ಪುಸ್ಫೋರಾಪಿ ವಾಮಸ್ತಥೋರುಃ |
ಚುಕ್ಷಾವೋಚ್ಚೈರ್ಹಂತ ಕಶ್ಚಿತ್ಪುರಸ್ತಾತ್
ತತ್ಸರ್ವಂ ದ್ರಾಗ್ಗೋಽಗಣಿತ್ವಾ ಜಗಾಮ || ೧೧೩

ಅವರು ಹೋಗುವಾಗ ಎಡಗಣ್ಣು ಅದುರಿತು. ಎಡಭುಜವು ಹಾರಿತು. ಹಾಗೆಯೇ ವಾಮಭಾಗದ ತೊಡೆಯೂ ಸ್ಫುರಿಸಿತು. ಅಯ್ಯೊ! ಯಾವನೋ ಒಬ್ಬನು ಎದುರಿನಲ್ಲಿ ಗಟ್ಟಿಯಾಗಿ ಶೀನಿದನು! ಆ ಯತಿಗಳು ಅದೆಲ್ಲವನ್ನು ತಿಳಿದರೂ ಲೆಕ್ಕಿಸದೆ ಶೀಘ್ರವಾಗಿ ಮುಂದೆ ಹೋದರು.

ಟಿಪ್ಪಣಿ :-ಚುಕ್ಷಾವ =(ಟು)ಕ್ಷು ಶಬ್ದೇ. ಲಿಟ್.

ಗತೇಽತ್ರ ಮೇನೇ ಕಿಲ ಮಾತುಲೋಽಸ್ಯ
ಗ್ರಂಥೇ ಸ್ಥಿತೇಽಸ್ಮಿನ್ ಗುರುಪಕ್ಷಹಾನಿಃ |
ದಗ್ಧೇಽತ್ರ ಜಾಯೇತ ಮಹಾನ್ ಪ್ರಚಾರೋ
ನೋಕ್ತ್ಯಾ ನಿರಾಕರ್ತುಮಪಿ ಪ್ರಭುತ್ವಮ್ || ೧೧೪

ಅವರು ಅತ್ತ ಹೋಗಲಾಗಿ ಇತ್ತ ಸೋದರಮಾವನಿಗೆ ಚಿಂತೆ ಹುಟ್ಟಿತು. "ಈ ಗ್ರಂಥವಿದ್ದರೆ ಗುರುಮತದ ಸಿದ್ಧಾಂತಕ್ಕೆ ಹಾನಿಯೇ ಸಂಭವಿಸುತ್ತದೆ. ಇದನ್ನು ಸುಟ್ಟುಹಾಕಿದರೆ ದೊಡ್ಡಗದ್ದಲವೇ ಎದ್ದುಬಿಟ್ಟೀತು. ಉಕ್ತಿಯುಕ್ತಿಗಳಿಂದ ಇದನ್ನು ಖಂಡಿಸುವುದಕ್ಕೆ ನಮಗೆ ಸಾಮರ್ಥ್ಯವಿಲ್ಲ !

ಪಕ್ಷಸ್ಯ ನಾಶಾದ್ಗೃಹನಾಶ ಏವ ನೋ
ವರಂ ಗೃಹೇಣೈವ ದಹಾಮಿ ಪುಸ್ತಕಮ್ |
ಏವಂ ನಿರೂಪ್ಯ ನ್ಯದಧಾದ್ಧುತಾಶನಂ
ಚುಕ್ರೋಶ ಚಾಗ್ನಿರ್ದಹತೀತಿ ಮೇ ಗೃಹಮ್ || ೧೧೫

ನಮ್ಮ ಗುರುಮತದ ಪಕ್ಷವು ನಾಶವಾಗುವುದಕ್ಕಿಂತ ನಮ್ಮ ಗೃಹವು ನಾಶವಾಗುವುದೇ ಉತ್ತಮ! ಈ ಗೃಹದ ಜೊತೆಗೆ ಪುಸ್ತಕವನ್ನು ಸುಟ್ಟುಬಿಡುವೆನು!" ಎಂದು ಆಲೋಚಿಸಿ ತನ್ನ ಮನೆಗೆ ಬೆಂಕಿಯನ್ನು ಹತ್ತಿಸಿದನು. ಆಮೇಲೆ 'ಅಯ್ಯೋ, ನನ್ನ ಮನೆಯನ್ನು ಬೆಂಕಿ ಸುಡುತ್ತಿದೆ' ಎಂದು ಕೂಗಾಡಿದನು.

ಟಿಪ್ಪಣಿ :- ಗುರುಮತ = ಪ್ರಭಾಕರಗುರುವೆಂಬ ಮೀಮಾಂಸಕನ ಸಿದ್ಧಾಂತ.

ಐತಿಹ್ಯಮಾಶ್ರಿತ್ಯ ವದಂತಿ ಚೈವಂ
ತದೇವ ಮೂಲಂ ಮಮ ಭಾಷಣೇಽಪಿ |
ಯಾವತ್ಕೃತಂ ತಾವದಿಹಾಸ್ಯ ಕರ್ತುಃ
ಪಾಪಂ ತತಃ ಸ್ಯಾದ್ದ್ವಿಗುಣಂ ಪ್ರವಕ್ತುಃ || ೧೧೬

ಈ ರೀತಿಯಾದ ಐತಿಹ್ಯವನ್ನು ಜನರು ಆಡಿಕೊಳ್ಳುತ್ತಾರೆ. ನನ್ನ ಹೇಳಿಕೆಗೆ ಅದೇ ಮೂಲ. ಒಂದು ದುಷ್ಕೃತ್ಯಕ್ಕೆ ಅನುಗುಣವಾದ ಪಾಪವು ಅದರ ಕರ್ತೃವಿಗೆ ಬಂದರೆ, ಅದರ ಎರಡರಷ್ಟು ಪಾಪವು ಆಡಿಕೊಳ್ಳುತಕ್ಕವನಿಗೆ ಬರುತ್ತದೆಯಂತೆ!

ಟಿಪ್ಪಣಿ :- ಇದು ಈ ಗ್ರಂಥವನ್ನು ರಚಿಸಿದ ಕವಿಯ ಹೇಳಿಕೆ. ಯಾರ ಮೇಲೂ ಸುಳ್ಳು ಅಪವಾದವನ್ನು ಹೊರಿಸಬಾರದೆಂದು ಆಶಯ.

ಗಚ್ಛನ್ನಸೌ ಫುಲ್ಲಮುನೇರ್ಜಗಾಮ
ತಮಾಶ್ರಮಂ ಯತ್ರ ಚ ರಾಮಚಂದ್ರಃ |
ಅಶ್ವತ್ಥಮೂಲೇ ನ್ಯಧಿತ ಸ್ವಚಾಪಂ
ಸ್ವಯಂ ಕುಶಾನಾಮುಪರಿ ನ್ಯಷೀದತ್ || ೧೧೭

ಪದ್ಮಪಾದರು ಮುಂದೆಹೋಗುತ್ತ ಫುಲ್ಲಮುನಿಯ ಆಶ್ರಮವನ್ನು ಸೇರಿದರು. ಅಲ್ಲಿ ಹಿಂದೆ ಶ್ರೀರಾಮಚಂದ್ರನು ಅಶ್ವತ್ಥವೃಕ್ಷದ ಕೆಳಗೆ ತನ್ನ ಧನುಸ್ಸನ್ನಿಟ್ಟು ತಾನು ದರ್ಭೆಗಳಮೇಲೆ ಮಲಗಿದ್ದನು.

ಟಿಪ್ಪಣಿ :- ಈ ಸ್ಥಳವು ದರ್ಭಶಯನವೆಂದು ಈಗ ಖ್ಯಾತವಾಗಿರುವ ಸ್ಥಳವಾಗಿರಬೇಕು. ಫುಲ್ಲಮುನಿಯ ವೃತ್ತಾಂತವು ರಾಮಾಯಣದಲ್ಲಿಲ್ಲ. ಪದ್ಮಪಾದರ ಕಾಲದಲ್ಲಿ ಆ ಮುನಿ ಇದ್ದಿರಬಹುದು.

ತೀರ್ತ್ವಾ ಸಮುದ್ರಂ ಜನಕಾತ್ಮಜಾಯಾಃ
ಸಂದರ್ಶನೋಪಾಯಮನೀಕ್ಷಮಾಣಃ |
ವಸುಂಧರಾಯಾಂ ಪ್ರವಣಾಃ ಪ್ಲವಂಗಾ
ನ ವಾರಿರಾಶೌ ಪ್ಲವನಂ ಕ್ಷಮಂತೇ || ೧೧೮

ಸಮುದ್ರವನ್ನು ದಾಟಿಹೋಗಿ ಜಾನಕಿಯ ದರ್ಶನಕ್ಕೆ ಉಪಾಯವೇನೆಂಬುದನ್ನು ಕಾಣದೆ ಶ್ರೀರಾಮನು ಹೀಗೆ ಆಲೋಚಿಸಿದನು. "ಈ ವಾನರರು ಭೂಮಿಯ ಮೇಲೆ ಹಾರಾಡಬಲ್ಲರು. ಸಮುದ್ರದಲ್ಲಿ ಈಜಿಹೋಗಲಾರರು."

ಸಂಚಿಂತಯನ್ನಿತಿ ಕುಶಾಸನ ಸನ್ನಿವಿಷ್ಟೋ
ಜ್ಯೋತಿಸ್ತದೈಕ್ಷತ ವಿದೂರಗಮೇವ ಕಿಂಚಿತ್ |
ಸಂವ್ಯಾಪ್ನುವಜ್ಜಗದಿದಂ ಸುಖಶೀತಲಂ ಯತ್
ಸಂಪ್ರಾರ್ಥನೀಯಮನಿಶಂ ಮುನಿದೇವತಾಭಿಃ || ೧೧೯

ಹೀಗೆ ಚಿಂತಿಸುತ್ತಾ ದರ್ಭಾಸನದಲ್ಲಿರುವಾಗ ದೂರದಲ್ಲಿ ಒಂದು ಜ್ಯೋತಿಯನ್ನು ಅವನು ಕಂಡನು. ಈ ಜಗತ್ತನ್ನು ವ್ಯಾಪಿಸಿಕೊಡು ಸುಖಶೀತಲವಾಗಿ ಮುನಿದೇವತೆಗಳಿಂದಲೂ ಸದಾ ಪ್ರಾರ್ಥನೀಯವಾದ ಜ್ಯೋತಿ ಅದು.

ಆಗಚ್ಛದಾತ್ಮಾಭಿಮುಖಂ ನಿರೀಕ್ಷ್ಯ
ಸರ್ವೇ ತದುತ್ತಸ್ಥುರುದಾರವೀರ್ಯಾಃ |
ತತಃ ಪುಮಾಕಾರಮದೃಶ್ಯತೈತತ್
ಮಹಾಪ್ರಭಾಮಂಡಲಮಧ್ಯವರ್ತಿ || ೧೨೦

ಆ ಜ್ಯೋತಿಯು ತಮ್ಮ ಕಡೆಗೇ ಬರುತ್ತಿರುವುದನ್ನು ನೋಡಿ (ವಾನರರೇಮೊದಲಾದ) ಎಲ್ಲಾ ಮಹಾವೀರರೂ ಎದ್ದು ನಿಂತರು. ಅನಂತರ ಆ ಮಹಾ ಪ್ರಭಾಮಂಡಲದ ಮಧ್ಯದಲ್ಲಿ ಒಂದು ಪುರುಷಾಕೃತಿಯು ಗೋಚರಿಸಿತು.

ಮಧ್ಯೇಪ್ರಭಾಮಂಡಲಮೈಕ್ಷತಾಂಚಿತಂ
ಶಿವಾಕೃತಿಂ ಸರ್ವತಪೋಮಯಂ ಪುನಃ |
ಲೋಪಾದಿಮುದ್ರಾಸಹಿತಂ ಮಹಾಮುನಿಂ
ಪ್ರಾಬೋಧಿ ಕುಂಭೋದ್ಭವಮಾದರಾಜ್ಜನೈಃ || ೧೨೧

ಪ್ರಭಾಮಂಡಲದ ಮಧ್ಯದಲ್ಲಿ ಶ್ರೀರಾಮನು ಒಂದು ಶಿವಾಕೃತಿಯನ್ನು ಮೊದಲು ಕಂಡನು. ಅನಂತರ ಆ ತಪೋಮೂರ್ತಿಯು ಲೋಪಾಮುದ್ರಾ ಸಹಿತನಾದ ಅಗಸ್ತ್ಯಮಹರ್ಷಿ ಎಂದು ಎಲ್ಲ ಜನರೂ ತಿಳಿದರು.

ಅಗಸ್ತ್ಯದೃಶ್ಟ್ವಾ ರಘುನಂದನಸ್ತತಃ
ಸ ಖೇದಮಂತಃಕರಣೋತ್ಥಮತ್ಯಜತ್ |
ಪ್ರಾಯೋ ಮಹದ್ದರ್ಶನಮೇವ ದೇಹಿನಾಂ
ಕ್ಷಿಣೋತಿ ಖೇದಂ ರವಿವನ್ಮಹಾತಮಃ || ೧೨೨

ಅಗಸ್ತ್ಯರನ್ನು ನೋಡಿದ ಮೇಲೆ ಶ್ರೀರಾಮನಿಗೆ ತನ್ನ ಮನಸ್ಸಿನಲ್ಲಾದ ಚಿಂತೆಯು ದೂರವಾಯಿತು. ಸೂರ್ಯನು ಘೋರಾಂಧಕಾರವನ್ನು ದೂರಮಾಡುವಂತೆ ಮಹಾತ್ಮರ ದರ್ಶನವೇ ವಿಶೇಷವಾಗಿ ಜನರ ಚಿಂತೆಯನ್ನು ದೂರಮಾಡಬಲ್ಲದು. .

ಸಭಾರ್ಯಮರ್ಘ್ಯಾದಿಭಿರರ್ಚಯಿತ್ವಾ
ರಾಮಸ್ತದಂಘ್ರಿಂ ಶಿರಸಾ ನನಾಮ |
ತೂಷ್ಣೀಂ ಮುಹೂರ್ತಂ ವ್ಯಸನಾರ್ಣವಸ್ಥೋ
ಧೃತಿಂ ಸಮಾಸ್ಥಾಯ ಪುನರ್ಬಭಾಷೇ || ೧೨೩

ಪತ್ನೀಸಮೇತರಾದ ಅಗಸ್ತ್ಯಮುನಿಗಳನ್ನು ಅರ್ಘ್ಯಪಾದ್ಯಾದಿಗಳಿಂದ ಅರ್ಚಿಸಿ ಶ್ರೀರಾಮನು ಋಷಿಗಳ ಪಾದಕ್ಕೆ ತಲೆಬಾಗಿ ನಮಸ್ಕರಿಸಿದನು. ಒಂದು ಮುಹೂರ್ತಕಾಲ ಸುಮ್ಮನೆ ವ್ಯಸನವೆಂಬ ಸಮುದ್ರದಲ್ಲಿ ಮುಳುಗಿದ್ದ ಆತನು ಧೈರ್ಯವನ್ನವಲಂಬಿಸಿ ಇಂತೆಂದನು.

ದೃಷ್ಟ್ವಾ ಭವಂತಂ ಪಿತೃವತ್ಪ್ರಮೋದೇ
ಯನ್ಮಾಮಗಾ ದುಃಖಮಹಾರ್ಣವಸ್ಥಮ್ |
ಮನ್ಯೇ ಮಮಾಽತ್ಮಾನಮವಾಪ್ತಕಾಮಂ
ವಂಶೋ ಮಹಾನ್ಮೇ ತಪನಾತ್ಪ್ರವೃತ್ತಃ || ೧೨೪

"ಮಹರ್ಷಿಗಳೆ, ತಮ್ಮನ್ನು ನೋಡಿದ ಮೇಲೆ ತಂದೆಯನ್ನು ನೋಡಿದಂತೆ ಆನಂದವಾಗುತ್ತದೆ. ದುಃಖವೆಂಬ ಮಹಾಸಾಗರದಲ್ಲಿ ಮುಳುಗಿದ ನನ್ನ ಬಳಿಗೆ ನೀವು ಆಗಮಿಸಿದ್ದೀರಿ. ಈಗ ನನ್ನ ಮನಸ್ಸು ಇಷ್ಟಾರ್ಥವನ್ನು ಪಡೆಯಿತೆಂದೇ ತಿಳಿಯುತ್ತೇನೆ. ನನ್ನದಾದರೋ ಸೂರ್ಯನಿಂದ ಪ್ರವೃತ್ತವಾದ ಮಹಾವಂಶ.

ನ ತತ್ರ ಮಾದೃಗ್ಜನಿತಾ ನ ಜಾತಃ
ಪದಚ್ಯುತೋಽಹಂ ಪ್ರಥಮಂ ಸಭಾರ್ಯಃ |
ಸಲಕ್ಷ್ಮಣೋಽರಣ್ಯಮುಪಾಗತಶ್ಚ
ಮಾರೀಚಮಾಯಾನಿಹತಾಂತರಂಗಃ || ೧೨೫

"ಈ ವಂಶದಲ್ಲಿ (ಕಷ್ಟಕ್ಕೊಳಗಾದ) ನನ್ನಂಥವನು ಇನ್ನು ಹುಟ್ಟುವುದಿಲ್ಲ, ಹಿಂದೆ ಹುಟ್ಟಲಿಲ್ಲ! ನಾನು ಮೊದಲು ಸ್ಥಾನಭ್ರಷ್ಟನಾಗಿ ನನ್ನ ಪತ್ನಿ ಮತ್ತು ಲಕ್ಷ್ಮಣನೊಡನೆ ಅರಣ್ಯಕ್ಕೆ ಬಂದೆನು. ಮಾರೀಚನ ಮಾಯೆಯಿಂದ ನನ್ನ ಬುದ್ಧಿ ಕೆಟ್ಟಿತು.

ತತ್ರಾಪಿ ಭಾರ್ಯಾಮಹೃತ ಚ್ಛಲೇನ
ಸ ರಾವಣೋ ರಾಕ್ಷಸ ಪುಂಗವೋ ಮೇ |
ಸಾ ಚಾಧುನಾಽಶೋಕವನೇ ಸಮಾಸ್ತೇ
ಕೃಶಾ ವಿಯೋಗಾತ್ಸ್ವತ ಏವ ತನ್ವೀ || ೧೨೬

"ಅಲ್ಲಿಯೇ ಮಹಾರಾಕ್ಷಸನಾದ ರಾವಣನು ನನ್ನ ಪತ್ನಿಯನ್ನು ಮೋಸದಿಂದ ಅಪಹರಿಸಿದನು. ಅವಳೀಗ (ಲಂಕೆಯ) ಅಶೋಕವನದಲ್ಲಿದ್ದಾಳೆ. ಸಹಜವಾಗಿಯೇ ಕೃಶಳಾಗಿದ್ದ ಅವಳು ನನ್ನ ವಿಯೋಗದಿಂದ ಇನ್ನೂ ಕೃಶಳಾಗಿದ್ದಾಳೆ.

ತೀರ್ತ್ವಾ ಸಮುದ್ರಂ ವಿನಿಹತ್ಯ ದುಷ್ಟಂ
ಬಲೇನ ಸೀತಾಂ ಮಹತಾ ಹರಾಮಿ |
ಯಥಾ ತಥೋಪಾಯಮುದಾಹರ ತ್ವಂ
ನ ಮೇ ತ್ವದನ್ಯೋಽಸ್ತಿ ಹಿತೋಪದೇಷ್ಟಾ || ೧೨೭

ಈಗ ಸಮುದ್ರವನ್ನು ದಾಟಿ ಮಹತ್ತರವಾದ ಬಲವನ್ನು ಪ್ರದರ್ಶಿಸಿ ಆ ದುಷ್ಟನನ್ನು ಸಂಹರಿಸಿ ಸೀತೆಯನ್ನು ಕರೆತರಬೇಕೆಂದಿದ್ದೇನೆ. ಇದಕ್ಕೆ (ಸಮುದ್ರವನ್ನು ದಾಟಲು) ಉಪಾಯವೇನೆಂಬುದನ್ನು ನೀವು ಹೇಳಬೇಕು. ನಿಮ್ಮನ್ನು ಬಿಟ್ಟರೆ ನನಗೆ ಹಿತೋಪದೇಶಕನು ಇನ್ನೊಬ್ಬನಿಲ್ಲ" ಎಂದು ನಿವೇದಿಸಿದನು.

ಇತೀರಿತೋ ವಾಚಮುವಾಚ ವಿದ್ವಾನ್
ಮಾ ರಾಮ ಶೋಕಸ್ಯ ವಶಂ ಗತೋ ಭೂಃ |
ವಂಶದ್ವಯೇ ಸಂತಿ ನೃಪಾ ಮಹಾಂತಃ
ಸಂಪ್ರಾಪ್ಯ ದುಃಖಂ ಪರಿಮುಕ್ತದುಃಖಾಃ || ೧೨೮

ಆಗ ಜ್ಞಾನಿಗಳಾದ ಅಗಸ್ತ್ಯರು ಈ ಮಾತನ್ನು ಹೇಳಿದರು. "ರಾಮ ಶೋಕಕ್ಕೆ ವಶನಾಗಬೇಡ.(ಸೂರ್ಯ ಚಂದ್ರರ) ಎರಡು ವಂಶಗಳಲ್ಲಿಯೂ, ಮಹಾತ್ಮರಾದ ಅನೇಕರಾಜರು ದುಃಖಕ್ಕೆ ಒಳಗಾಗಿ ಅನಂತರ ದುಃಖದಿಂದ ವಿಮುಕ್ತರಾಗಿದ್ದಾರೆ.

ತ್ವಮಗ್ರಣೀರ್ದಾಶರಥೇ ಧನುರ್ಭೃತಾಂ
ತವಾನುಜಸ್ಯಾಪಿ ಸಮೋ ನ ಲಕ್ಷ್ಯತೇ |
ಪ್ಲವಂಗಮಾನಾಮಧಿಪಸ್ಯ ಕೋಟಿಶೋ
ಮಾ ಮುಂಚ ಮಾ ಮುಂಚ ವಚೋ ವಿನಾಥಮ್ || ೧೨೯

"ಹೇ ದಾಶರಥಿ, ಧನುರ್ಧಾರಿಗಳಲ್ಲಿ ನೀನು ಅಗ್ರಗಣ್ಯನಾಗಿದ್ದೀಯೆ. ನಿನ್ನ ತಮ್ಮ ಲಕ್ಷ್ಮಣನಿಗೂ ಸಮನಾದ ಇನ್ನೊಬ್ಬ ವೀರನು ಕಾಣಿಸುವುದಿಲ್ಲ. ಕೋಟಿಗಟ್ಟಲೆ ಇರುವ ವಾನರರಿಗೆ ಅಧಿಪತಿಯಾದ ಸುಗ್ರೀವನಿಗೂ ಸಮಾನರಾದ ಶೂರರಿಲ್ಲ. ಅನಾಥನಾದೆನೆಂಬ ದೈನ್ಯದ ನುಡಿಯನ್ನು ಹೇಳಬೇಡ; ಹೇಳಬೇಡ.

ಸಹಾಯಸಂಪತ್ತಿರಿಯಂ ತವಾಸ್ತಿ
ಹಿತೋಪದೇಷ್ಟಾऽಪ್ಯಹಮಸ್ಮಿ ಕಶ್ಚಿತ್ |
ವಾರಾಂನಿಧಿಃ ಕಿಂ ಕುರುತೇ ತವಾಯಂ
ಸ್ಮರಾಧುನಾ ಗೋಷ್ಪದಮಾತ್ರಮೇನಮ್ || ೧೩೦

"ಈ ಪ್ರಕಾರವಾದ ಸಹಾಯಸಂಪತ್ತು ನಿನಗಿದೆ. ಹಿತೋಪದೇಶಕನಾಗಿ ನಾನೂ ಒಬ್ಬನು ಬಂದಿದ್ದೇನೆ. ಈ ಸಮುದ್ರವು ನಿನಗೆ ಯಾವ ಅಡ್ಡಿಯನ್ನು ಮಾಡೀತು? ಈಗ ಇದೊಂದು ಗೋವಿನ ಹೆಜ್ಜೆಯಷ್ಟಿದೆ ಎಂದುತಿಳಿ.

ಪುರೇವ ಚಾರ್ವಬ್ಧಿಮಹಂ ಪಿಬಾಮಿ
ಶುಷ್ಕೇऽತ್ರ ತೇನ ಪ್ರತಿಯಾಹಿ ಲಂಕಾಮ್ |
ಏವಂ ಮಯಾ ಕೀರ್ತಿರುಪಾರ್ಜಿತಾ ಸ್ಯಾತ್
ಬದ್ಧೇ ತು ವಾರ್ಧೌ ತವ ಸಾರ್ಜಿತಾ ಸ್ಯಾತ್ || ೧೩೧

"ನಾನು ಹಿಂದಿನಂತೆ ಈ ಸಾಗರವನ್ನು ಕುಡಿದು ಬಿಡುತ್ತೇನೆ. ಆಗ ಇದು ಒಣಗಿಹೋಗಲು ನೀನು ಲಂಕೆಗೆ ಹೋಗು. ಆದರೆ ಕೀರ್ತಿಯು ನನಗೆ ಬರುತ್ತದೆ! ಈ ಸಾಗರದ ಮೇಲೆ ಸೇತುವನ್ನು ಕಟ್ಟಿ ಹೋದರೆ ಆ ಕೀರ್ತಿಯು ನಿನಗೆ ದಕ್ಕುವುದು.

ಸೇತುಂ ವಾರ್ಧೌ ಬಂಧಯಿತ್ವಾ ಜಹಿ ತ್ವಂ
ದುಷ್ಟಂ ಚೌರ್ಯಾದ್ಯೇನ ಸೀತಾ ಹೃತಾऽऽಸೀತ್ |
ಪ್ರಾಪ್ನೋಷಿ ತ್ವಂ ಕೀರ್ತಿಮಾಚಂದ್ರತಾರಂ
ತೇನಾತ್ರಾಬ್ಧಿಂ ಬಂಧಯ ತ್ವಂ ಕಪೀಂದ್ರೈಃ || ೧೩೨

ಆದ್ದರಿಂದ, ರಾಮ, ಈ ವಾರಿಧಿಗೆ ನೀನು ಸೇತುವೆಯನ್ನು ಕಟ್ಟಿಸಿ ಕಳ್ಳತನದಿಂದ ಸೀತೆಯನ್ನು ಅಪಹರಿಸಿದ ಆ ದುಷ್ಟನನ್ನು ಕೊಂದುಹಾಕು. ಆಗ ನೀನು ಚಂದ್ರ ನಕ್ಷತ್ರಗಳು ಇರುವವರೆಗೂ ಶಾಶ್ವತವಾದ ಕೀರ್ತಿಯನ್ನು ಗಳಿಸುವೆ. ನೀನು ಈ ಕಪೀಂದ್ರರಿಂದ ಸಮುದ್ರಕ್ಕೆ ಸೇತುವೆಯನ್ನು ಕಟ್ಟಿಸು" ಎಂದರು.

ಇತ್ಥಂ ಯತ್ರ ಪ್ರೇರಿತೋऽಗಸ್ತ್ಯವಾಚಾ
ಸೇತುಂ ರಾಮೋ ಬಂಧಯಾಮಾಸ ವಾರ್ಧೌ |
ತುಂಗೈಃ ಶೃಂಗೈರ್ವಾನರೈಸ್ತೇನ ಗತ್ವಾ
ತಂ ಹತ್ವಾऽऽಜೌ ಜಾನಕೀಮಾನಿನಾಯ || ೧೩೩

ಈ ಪ್ರಕಾರವಾಗಿ ಅಲ್ಲಿ ಅಗಸ್ತ್ಯರ ಹಿತೋಪದೇಶದಿಂದ ಪ್ರೇರಿತನಾದ ಶ್ರೀರಾಮನು ಸಮುದ್ರಕ್ಕೆ ಸೇತುವೆಯನ್ನು ಕಟ್ಟಿಸಿದನು. ಉನ್ನತವಾದ ಗಿರಿಶೃಂಗಗಳಿಂದ ವಾನರರ ಮೂಲಕ ಕಟ್ಟಿಸಿದ ಆ ಸೇತುಮಾರ್ಗದಲ್ಲಿ ಹೋಗಿ ಯುದ್ಧದಲ್ಲಿ ರಾವಣನನ್ನು ವಧಿಸಿ ಜಾನಕಿಯನ್ನು ಕರೆತಂದನು.

ತತ್ತ್ವಾದೃಕ್ಷೇ ತತ್ರ ತೀರ್ಥೇ ಸ ಭಿಕ್ಷುಃ
ಸ್ನಾತ್ವಾ ಭಕ್ತ್ಯಾ ರಾಮನಾಥಂ ಪ್ರಣಮ್ಯ ।
ತತ್ರ ಶ್ರದ್ಧೋತ್ಪತ್ತಯೇ ಮಾನುಷಾಣಾಂ
ಶಿಷ್ಯೇಭ್ಯಸ್ತದ್ವೈಭವಂ ಸಮ್ಯಗೂಚೇ ॥ ೧೩೪

ಅಂತಹ ಪವಿತ್ರವಾದ ತೀರ್ಥದಲ್ಲಿ ಪದ್ಮಪಾದಯತಿಗಳು ಸ್ನಾನಮಾಡಿ ರಾಮನಾಥ ಸ್ವಾಮಿಯನ್ನು ಭಕ್ತಿಯಿಂದ ನಮಸ್ಕರಿಸಿ, ಮನುಷ್ಯರಿಗೆ ಶ್ರದ್ಧಾಭಕ್ತಿಗಳು ಹುಟ್ಟಲೆಂದು ತಮ್ಮ ಶಿಷ್ಯರಿಗೆ ಆ ಸ್ಥಳದ ವೈಭವವನ್ನು ಚೆನ್ನಾಗಿ ವಿವರಿಸಿ ಹೇಳಿದರು.

ತನ್ಮಾಹಾತ್ಮ್ಯಂ ವರ್ಣಯಂತಂ ಮುನಿಂ ತಂ
ಪಪ್ರಚ್ಛೈನಂ ಕಶ್ಚಿದೇವಂ ವಿಪಶ್ಚಿತ್ ।
ರಾಮೇಶಾಖ್ಯಾ ಕಿಂ ಸಮಾಸೋಪಪನ್ನಾ
ಪೃಷ್ಟಸ್ತ್ರೇಧಾಽವೋಚದೇವಂ ಸಮಾಸಮ್ ॥ ೧೩೫

ರಾಮೇಶ್ವರನ ಮಾಹಾತ್ಮ್ಯವನ್ನು ವರ್ಣಿಸುತ್ತಿದ್ದ ಆ ಯತಿಗಳನ್ನು ಕುರಿತು ಒಬ್ಬ ವಿದ್ವಾಂಸನು ರಾಮೇಶ್ವರ ಎಂಬ ಹೆಸರಿನಲ್ಲಿ ಯಾವ ಸಮಾಸವು ಉಪಪನ್ನ ವಾಗುತ್ತದೆ? ಎಂದು ಕೇಳಿದನು. ಪದ್ಮಪಾದರು ಆ ಶಬ್ದದ ಸಮಾಸವನ್ನು ಮೂರು ವಿಧವಾಗಿ ಹೇಳಿದರು.

ರಘೂದ್ವಹಸ್ತತ್ಪುರುಷಂ ಪರಂ ಜಗೌ
ಶಿವೋ ಬಹುವ್ರೀಹಿಸಮಾಸಮೈರಯತ್ ।
ರಾಮೇಶ್ವರೇ ನಾಮನಿ ಕರ್ಮಧಾರಯಂ
ಪರಂ ಸಮಾಹುಃ ಸ್ಮ ಸುರೇಶ್ವರಾದಯಃ ॥ ೧೩೬

"ಶ್ರೀರಾಮಚಂದ್ರನು ಇದು ತತ್ಪುರುಷಸಮಾಸವೆಂದನು. ಶಿವನು ಬಹುವ್ರೀಹಿ ಸಮಾಸವೆಂದು ಹೇಳಿದನು. ಸುರೇಶ್ವರರೇ ಮೊದಲಾದವರು ರಾಮೇಶ್ವರ ಎಂಬ ಶಬ್ದದಲ್ಲಿ ಕರ್ಮಧಾರಯ ಸಮಾಸ ಎಂದು ಹೇಳಿದ್ದಾರೆ" ಎಂದರು.

ವಿವರಣೆ : ೧. ರಾಮಸ್ಯ ಈಶ್ವರಃ = ರಾಮೇಶ್ವರಃ. ಇದು ತತ್ಪುರುಷ ಸಮಾಸ. ರಾಮನ ಪ್ರಭುವೆಂದು ಅರ್ಥ. ೨. ರಾಮಃ ಈಶ್ವರೋ ಯಸ್ಯ ಸಃ = ರಾಮೇಶ್ವರಃ ಇದು ಬಹುವ್ರೀಹಿ. ರಾಮನೇ ಯಾರಿಗೆ ಪ್ರಭುವೋ ಅವನು ಎಂದರ್ಥ

೩. ರಾಮಶ್ಚ ಅಸೌ ಈಶ್ವರಶ್ಚ= ರಾಮೇಶ್ವರಃ ಇದು ಕರ್ಮಧಾರಯ. ರಾಮನೇ ಈಶ್ವರ ಎಂದರ್ಥ. ಶಿವ-ವಿಷ್ಣು ಇವರಿಗೆ ಭೇದವಿಲ್ಲವೆಂದು ಅಭಿಪ್ರಾಯ.

ಏವಂ ನಿಶ್ಚಿತ್ಯೋದಿತಂ ತತ್ಸಮಾಸಂ
ಶ್ರುತ್ವಾ ತತ್ರತ್ಯೋ ಬುಧೋ ಯೋಽಭ್ಯನಂದತ್ |
ಅಂಭೋಜಾಂಘ್ರಿಸ್ತೈರಥ ಸ್ತೂಯಮಾನಃ
ಕಂಚಿತ್ಕಾಲಂ ತತ್ರ ಯೋಗೀಡನೈಷೀತ್ || ೧೩೭

ಹೀಗೆ ನಿಶ್ಚಯಿಸಿ ಹೇಳಿದ ಸಮಾಸಪ್ರಕಾರಗಳನ್ನು ಕೇಳಿ ಅಲ್ಲಿದ್ದ ವಿದ್ವಾಂಸನು ಸಂತೋಷಪಟ್ಟನು. ಪದ್ಮಪಾದರು ಅವರಿಂದ ಸ್ತುತರಾಗಿ ಕೆಲವುಕಾಲ ಅಲ್ಲಿ ವಾಸವಾಗಿದ್ದರು.

ತಸ್ಮಾದಾರ್ಯಃ ಪ್ರಸ್ಥಿತೋಽಭೂತ್ ಸಶಿಷ್ಯ-
ಸ್ತೀರ್ಥಸ್ನಾನೋಪಾತ್ತಚಿತ್ತಾಮಲತ್ವಃ |
ಪಶ್ಯನ್ ದೇಶಾನ್ಮಾತುಲೀಯಂ ಜಗಾಹೇ
ಗೇಹಂ ದಾಹಂ ತಸ್ಯ ಪುಸ್ತೇನ ಸಾರ್ಧಮ್ || ೧೩೮

ಅನಂತರ ಆ ಪೂಜ್ಯರು ತೀರ್ಥಸ್ನಾನದಿಂದ ಚಿತ್ತಶುದ್ಧಿಯನ್ನು ಗಳಿಸಿದವರಾಗಿ ಶಿಷ್ಯರೊಡನೆ ಹೊರಟರು. ದಾರಿಯಲ್ಲಿ ಅನೇಕ ದೇಶಗಳನ್ನು ನೋಡುತ್ತ ತಮ್ಮ ಸೋದರಮಾವನ ಮನೆಗೆ ಹಿಂದಿರುಗಿದರು. ಅಲ್ಲಿ ತಮ್ಮ ಪುಸ್ತಕದೊಡನೆ ಅವನ ಮನೆ ಸುಟ್ಟು ಹೋಗಿತ್ತು.

ಶ್ರುತ್ವಾ ಕಿಂಚಿತ್ ಖೇದಮಾಪೇದಿವಾನ್ ಸ
ಮತ್ವಾ ಮತ್ವಾ ಧೈರ್ಯಮಾಪೇದಿವಾನ್ ಸಃ |
ಶ್ರಾವಂ ಶ್ರಾವಂ ಮಾತುಲೀಯಸ್ಯ ತೀವ್ರಂ
ದಾಹಂ ಗೇಹಸ್ಯಾನುಕಂಪಾಂ ವ್ಯಧತ್ತ || ೧೩೯

ಈ ವಿಷಯವನ್ನು ಕೇಳಿ ಪದ್ಮಪಾದರಿಗೆ ದುಃಖವಾಯಿತು. ಅದನ್ನು ಮತ್ತೆ ಮತ್ತೆ ಆಲೋಚಿಸಿ ಧೈರ್ಯವನ್ನು ತಂದುಕೊಂಡರು. ಸೋದರಮಾವನ ಮನೆಗೆ ಬೆಂಕಿಬಿದ್ದ ದಾರುಣವಾದ ಸುದ್ದಿಯನ್ನು ಕೇಳಿ ಅವರಿಗೆ ದಯೆಯು ಮೂಡಿತು.

ವಿಶ್ವಸ್ಯ ಮಾಂ ನಿಹಿತವಾನಸಿ ಪುಸ್ತಭಾರಂ
ತಂ ಚಾದಹದ್ಧುತವಹಃ ಪತಿತಃ ಪ್ರಮಾದಾತ್ |
ತಾವಾನ್ನ ಮೇ ಸದನ ದಾಹಕೃತೋಽನುತಾಪೋ
ಯಾವಾಂಸ್ತು ಪುಸ್ತಕವಿನಾಶಕೃತೋ ಮಮ ಸ್ಯಾತ್ || ೧೪೦

ಸೋದರಮಾವನಾದರೋ "ನನ್ನಲ್ಲಿ ನಂಬಿಕೆಯನ್ನಿಟ್ಟು ಪುಸ್ತಕದ ಕಟ್ಟನ್ನು ಇಟ್ಟುಹೋದಿರಿ. ಅಕಸ್ಮಾತ್ತಾಗಿ ಬೆಂಕಿ ಹತ್ತಿಕೊಂಡಿತು. ನಿಮ್ಮ ಪುಸ್ತಕವು ನಾಶವಾದ್ದರಿಂದ ನನಗೆ ತುಂಬ ದುಃಖವಾಗಿದೆ. ನನ್ನ ಮನೆ ಸುಟ್ಟುಹೋದ್ದಕ್ಕಾಗಿ ಅಷ್ಟು ಸಂತಾಪವಾಗಲಿಲ್ಲ" ಎಂದನು.

ಇತ್ಥಂ ಬ್ರುವಂತಂ ತಮಥೋ ನ್ಯಗಾದೀತ್
ಪುಸ್ತಂ ಗತಂ ಬುದ್ಧಿರವಸ್ಥಿತಾ ಮೇ |
ಉಕ್ತ್ವಾ ಸಮಾರಬ್ಧ ಪುನಶ್ಚ ಟೀಕಾಂ
ಕರ್ತುಂ ಸ ಧೀರೋ ಯತಿವೃಂದವಂದ್ಯಃ || ೧೪೧

ಹೀಗೆ ಹೇಳುತ್ತಿದ್ದ ಆತನನ್ನು ಕುರಿತು "ಪುಸ್ತಕವೇನೋ ಹೋಯಿತು. ಆದರೂ ನನ್ನ ಬುದ್ಧಿಶಕ್ತಿ ಉಳಿದುಕೊಂಡಿದೆ" ಎಂದು ಹೇಳಿ ಯತಿಗಳಿಗೆ ಪೂಜ್ಯರಾದ ಆ ಧೀರರು ಪುನಃ ಟೀಕೆಯನ್ನು ಬರೆಯಲು ಆರಂಭಿಸಿದರು.

ದೃಷ್ಟ್ವಾ ಬುದ್ಧಿಂ ಮಾತುಲಸ್ತಸ್ಯ ಭೂಯೋ
ಭೀತಃ ಪ್ರಾಸ್ಯದ್ಭೋಜನೇ ತನ್ಮನೋಘ್ನಮ್ |
ಕಂಚಿದ್ದ್ರವ್ಯಂ ಪೂರ್ವವನ್ನಾಕ್ಷಮಿಷ್ಟ
ಟೀಕಾಂ ಕರ್ತುಂ ಕೇಚಿದೇವಂ ಬ್ರುವಂತಿ || ೧೪೨

ಆ ಸೋದರಮಾವನು ಪದ್ಮಪಾದರ ಬುದ್ಧಿಶಕ್ತಿ ಏನೆಂಬುದನ್ನು ತಿಳಿದು ಮತ್ತೆ ಹೆದರಿದನು. ಅವರ ಬುದ್ಧಿಯನ್ನು ಕೆಡಿಸುವ ಯಾವುದೋ ವಿಷದ್ರವ್ಯವನ್ನು ಅವರ ಭೋಜನದಲ್ಲಿ ಸೇರಿಸಿಬಿಟ್ಟನು. ಆದ್ದರಿಂದ ಪದ್ಮಪಾದರಿಗೆ ಮೊದಲಿನಂತೆ ಟೀಕೆಯನ್ನು ಬರೆಯಲು ಸಾಧ್ಯವಾಗಲಿಲ್ಲವೆಂದೂ ಸಹ ಕೆಲವರು ಹೇಳುತ್ತಾರೆ.

ಅತ್ರಾಂತರೇಽನ್ಯೈರ್ನಿಜವಚ್ಚರದ್ಭಿಃ
ಸ್ವೈಸ್ತೀರ್ಥಯಾತ್ರಾಂ ದಯಿತೈಃ ಸತೀರ್ಥ್ಯೈಃ |
ಅರ್ಥಾದುಪೇತ್ಯಾಽಽಶ್ರಮತಃ ಕನಿಷ್ಠೈಃ
ಜ್ಞಾತಃ ಸಖೇದೈಃ ಸ ಮುನಿಃ ಸಮೈಕ್ಷಿ || ೧೪೩

ಈ ಸಮಯದಲ್ಲಿ ತನ್ನಂತೆಯೇ ತೀರ್ಥಯಾತ್ರೆಗಾಗಿ ಬಂದ ಸತೀರ್ಥ್ಯರೂ ತನಗೆ ಪ್ರಿಯರೂ ಆದ ಕೆಲವು ಯತಿಗಳು ಅಲ್ಲಿಗೆ ಬಂದರು. ಆಶ್ರಮ ದೃಷ್ಟಿಯಿಂದ ತನಗಿಂತ ಕನಿಷ್ಠರಾದ ಅವರು ಆಕಸ್ಮಿಕವಾಗಿ ಬಂದು ಈ ಸುದ್ದಿಯನ್ನು ಕೇಳಿ ಖಿನ್ನರಾಗಿ ಪದ್ಮಪಾದರನ್ನು ಕಂಡರು.

ದೃಷ್ಟ್ವಾ ಪದ್ಮಾಂಘ್ರಿಂ ಕ್ರಮಾತ್ತೇ ಪ್ರಣೇಮುಃ
ತತ್ಪಾದಾಂಭೋಜೀಯರೇಣೂನ್ ದಧಾನಾಃ |
ಅನ್ಯೋನ್ಯಂ ದ್ರಾಗಾದದುಸ್ತೇ ದದುಶ್ಚ
ಅನೇಕಾನೇಹೋಯೋಗಜೈಕ್ಯಾನ್ನಮಾಂಸಿ || ೧೪೪

ಆ ಯತಿಗಳು ಪದ್ಮಪಾದರನ್ನು ಕಂಡು ವಿಧಿವತ್ತಾಗಿ ಅವರಿಗೆ ನಮಸ್ಕರಿಸಿ ಅವರ ಪಾದಕಮಲದ ಧೂಳಿಯನ್ನು ಧರಿಸಿದರು. ಹೀಗೆ ಆ ಯತಿಗಳೆಲ್ಲರೂ ಬಹುದಿನಗಳಿಂದ ಅಗಲಿ, ಈಗ ಒಂದೆಡೆಗೆ ಸೇರಿದಾಗ ಕೆಲವರು ಅನ್ಯೋನ್ಯವಾಗಿ ನಮಸ್ಕರಿಸಿದರು. ಕೆಲವರು ನಮಸ್ಕಾರಗಳನ್ನು ಸ್ವೀಕರಿಸಿದರು.

ಟಿಪ್ಪಣಿ :- ಅನೇಹೋಯೋಗ = ಕಾಲಯೋಗ.

ವಾಣೇನಿರ್ಜಿತಪನ್ನಗೇಶ್ವರಗುರುಪ್ರಾಚೇತಸಾ ಚೇತಸಾ
ಬಿಭ್ರಾಣಾ ಚರಣಂ ಮುನೇರ್ವಿರಚಿತವ್ಯಾಪಲ್ಲವಂ ಪಲ್ಲವಮ್ |
ಧುನ್ವಂತಂ ಪ್ರಭಯಾ ನಿವಾರಿತತಮಾಶಂಕಾಪದಂ ಕಾಮದಂ
ರೇಜೇಽಂತೇವಸತಾಂ ಸಮಷ್ಟಿರಸುಹೃತ್ತ್ಯಾಹಿತಾತ್ಯಾಹಿತಾ || ೧೪೫

ತಮ್ಮ ವಾಗ್ವೈಖರಿಯಿಂದ ಆದಿಶೇಷ, ಬೃಹಸ್ಪತಿ, ಮತ್ತು ವಾಲ್ಮೀಕಿಮುನಿಗಳನ್ನು ಜಯಿಸಲು ಸಮರ್ಥವಾಗಿದ್ದ, ಅಲ್ಲದೆ ತಮಗೆ ಅಹಿತಕಾರಿಗಳಾದ ಕಾಮಕ್ರೋಧಾದಿಗಳಿಗೂ ವಿರುದ್ಧಮತೀಯರಿಗೂ ಮಹಾಭೀತಿಯನ್ನುಂಟುಮಾಡುತ್ತಿದ್ದ ಆ ಶಿಷ್ಯಸಮುದಾಯವು ಶ್ರೀಶಂಕರಮುನಿಗಳ ಪಾದವನ್ನು ಹೃದಯದಲ್ಲಿ ಧರಿಸಿ ಶೋಭಿಸುತ್ತಿತ್ತು. ಗುರುಗಳ ಚರಣಪಲ್ಲವವಾದರೋ ಮುಂದೆ ಬರತಕ್ಕ ಆಪತ್ತನ್ನು ಕೊಡವಿಬಿಡಲು ಶಕ್ತವಾದದ್ದು. ಎಲ್ಲ ಭಯಶಂಕೆಗಳನ್ನೂ ಪರಿಹರಿಸಿ ಇಷ್ಟಾರ್ಥವನ್ನು ಸಲ್ಲಿಸುವಂತಹದು.

ಶುಶ್ರಾವ ಸಾಽಂತೇವಸತಾಂ ಸಮಷ್ಟಿಃ
ಸ್ವದೇಶಕೀಯಾಂ ಸುಖದಾಂ ಸುವಾರ್ತಾಮ್ |
ಅರ್ಥಾತ್ ಸಮೀಪಾಗತತಃ ಕುತಶ್ಚಿತ್
ದ್ವಿಜೇಂದ್ರತಃ ಸೇವಿತಸರ್ವತೀರ್ಥಾತ್ || ೧೪೬

ಸಮಸ್ತ ತೀರ್ಥಯಾತ್ರೆಗಳನ್ನೂ ಮುಗಿಸಿ ಯಾವುದೋ ನಿಮಿತ್ತದಿಂದ ಸಮೀಪಕ್ಕೆ ಬಂದಿದ್ದ ಒಬ್ಬ ದ್ವಿಜೋತ್ತಮನಿಂದ ಆ ಶಿಷ್ಯರೆಲ್ಲರೂ ತಮ್ಮ ದೇಶಗಳಿಗೆ ಸಂಬಂಧಿಸಿದ ಸುಖಕರವಾದ ಒಳ್ಳೆಯ ಸುದ್ದಿಯನ್ನು ಕೇಳಿ ತಿಳಿದುಕೊಂಡರು.

ಟಿಪ್ಪಣಿ :-ಆಗತತಃ = 'ಅಪಾದಾನೇ ಚಾಹೀಯರುಹೋಃ' ಇತಿ ಪಂಚಮ್ಯಾಸ್ತಸಿಃ.

ಅಥ ಗುರುವರಮನವೇಕ್ಷ್ಯ ನಿತಾಂತಂ
ವ್ಯಥಿತಹೃದೋ ಮುನಿವರ್ಯವಿನೇಯಾಃ |
ಕಥಮಪಿ ವಿದಿತತದೀಯಸುವಾರ್ತಾಃ
ಸಮಧಿಗತಾಃ ಕಿಲ ಕೇರಲದೇಶಾನ್ || ೧೫೭

ಆಮೇಲೆ ಅವರೆಲ್ಲರೂ ಯತಿಶ್ರೇಷ್ಠರಾದ ಶ್ರೀಶಂಕರರ ಶಿಷ್ಯರಾದ್ದರಿಂದ ತಮ್ಮ ಗುರುವನ್ನು ಬಹಳ ದಿನಗಳಿಂದ ಕಾಣದೆ ಅತ್ಯಂತ ಖಿನ್ನರಾಗಿದ್ದರು. ಆಚಾರ್ಯರು ಕೇರಳದಲ್ಲಿ ಇದ್ದಾರೆಂಬ ಸಂತೋಷದ ಸುದ್ದಿಯನ್ನು ಹೇಗೋ ತಿಳಿದುಕೊಂಡು ಎಲ್ಲರೂ ಕೇರಳದೇಶಕ್ಕೆ ಬಂದರು.

ಅತ್ರಾಂತರೇ ಯತಿಪತಿಃ ಪ್ರಸುವೋಽನ್ತ್ಯಕೃತ್ಯಾಂ
ಕೃತ್ವಾ ಸ್ವಧರ್ಮಪರಿಪಾಲನಸಕ್ತಚಿತ್ತಃ |
ಆಕಾಶಲಂಘಿವರಕೇರಮಹೀರುಹೇಷು
ಶ್ರೀಕೇರಲೇಷು ಮುನಿರಾಸ್ತ ಚರನ್ ವಿರಕ್ತಃ || ೧೫೮

ಈ ಸಮಯದಲ್ಲಿ ಯತೀಂದ್ರರಾದ ಶ್ರೀಶಂಕರಾಚಾರ್ಯರು ತಮ್ಮ ತಾಯಿಯ ಅಂತ್ಯಕರ್ಮವನ್ನು ನೆರವೇರಿಸಿ ತಮ್ಮ ಯತಿಧರ್ಮವನ್ನು ಪರಿಪಾಲಿಸುತ್ತಾ ವಿರಕ್ತರಾಗಿ ಕೇರಳದೇಶಲ್ಲಿ ಇದ್ದರು. ಆ ದೇಶದಲ್ಲಿ ತೆಂಗಿನಮರಗಳು ಆಕಾಶದವರೆಗೆ ಬೆಳೆದು ವಿರಾಜಿಸುತ್ತಿದ್ದವು.

ಟಿಪ್ಪಣಿ :- ಕೇರ = ತೆಂಗು. ನಾರಿಕೇರ, ನಾಲಿಕೇರ, ನಾರಿಕೇಲಿ-ಶಬ್ದಗಳ ಸಾಮ್ಯವನ್ನು ಗಮನಿಸಬೇಕು.

ವಿಚರನ್ನಥ ಕೇರಲೇಷು ವಿಷ್ವಜ್
ನಿಜಶಿಷ್ಯಾಗಮನಂ ನಿರೀಕ್ಷ್ಯ ಮೌನೀ |
ವಿನಯೇನ ಮಹಾಸುರಾಲಯೇಶಂ
ವಿನಮನ್ನಸ್ತುತ ನಿಸ್ತುಲಾನುಭಾವಃ || ೧೫೯

ಅಗಾಧಮಹಿಮೆಯುಳ್ಳ ಆ ಯತೀಶ್ವರರು ಕೇರಳದೇಶದಲ್ಲಿ ಎಲ್ಲ ಕಡೆಯೂ ಸಂಚರಿಸುತ್ತಾ ತಮ್ಮ ಶಿಷ್ಯರ ಆಗಮನವನ್ನು ನಿರೀಕ್ಷಿಸಿ ಮಹಾಸುರಪುರಕ್ಕೆ ಬಂದು, ಆ ಪುರದ ಒಡೆಯನಾದ ಮಹಾವಿಷ್ಣುವಿಗೆ ವಿನಯದಿಂದ ನಮಸ್ಕರಿಸಿ ಸ್ತುತಿಸಿದರು.

ಸದಸತ್ತ್ವವಿಮುಕ್ತಯಾ ಪ್ರಕೃತ್ಯಾ
ಚಿದಚಿದ್ರೂಪಮಿದಂ ಜಗದ್ವಿಚಿತ್ರಮ್ |
ಕುರುಷೇ ಜಗದೀಶ ಲೀಲಯಾ ತ್ವಂ
ಪರಿಪೂರ್ಣಸ್ಯ ನ ಹಿ ಪ್ರಯೋಜನೇಚ್ಛಾ || ೧೫೦

"ಸದಸತ್ತುಗಳೆರಡೂ ಅಲ್ಲದೆ ಅನಿರ್ವಾಚ್ಯವಾದ ಮಾಯೆಯಿಂದ ಚಿದಚಿದ್ರೂಪವಾದ ಈ ವಿಚಿತ್ರ ಜಗತ್ತನ್ನು, ಹೇ ಜಗದೀಶ್ವರ, ಲೀಲೆಗಾಗಿ ಸೃಜಿಸುತ್ತೀಯೆ. ಪರಿಪೂರ್ಣನೂ ಆಪ್ತಕಾಮನೂ ಆದ ನಿನಗೆ ಇದರಿಂದ ಬೇರೆ ಯಾವ ಪ್ರಯೋಜನದ ಬಯಕೆಯೂ ಇಲ್ಲ.

ಟಿಪ್ಪಣಿ : ಚಿತ್ =ಚೇತನ. ಅಚಿತ್ = ಜಡ.

ರಜಸಾ ಸೃಜಸೀಶ ಸತ್ತ್ವವೃತ್ತಿಃ
ತ್ರಿಜಗದ್ರಕ್ಷಸಿ ತಾಮಸಃ ಕ್ಷಿಣೋಷಿ |
ಬಹುಧಾ ಪರಿಕೀರ್ತ್ಯಸೇ ಚ ಸ ತ್ವಂ
ವಿಧಿವೈಕುಂಠಶಿವಾಭಿಧಾಭಿರೇಕಃ || ೧೫೧

"ಹೇ ಪ್ರಭು, ರಜೋಗುಣದಿಂದ ಸೃಷ್ಟಿಮಾಡುತ್ತೀಯೆ. ಸತ್ತ್ವಗುಣವನ್ನಾಶ್ರಯಿಸಿ ಜಗತ್ತ್ರಯವನ್ನೂ ಪಾಲಿಸುತ್ತೀಯೆ. ತಮೋಗುಣದವನಾಗಿ ಅದೆಲ್ಲವನ್ನೂ ಲಯಮಾಡುತ್ತೀಯೆ. ಅದ್ವಿತೀಯನಾಗಿ ಏಕನಾಗಿರುವ ನೀನು ಬ್ರಹ್ಮ, ವಿಷ್ಣು, ಶಿವ - ಎಂಬ ಹೆಸರುಗಳಿಂದ ಬಹುವಿಧದಲ್ಲಿ ಕೀರ್ತಿಸಲ್ಪಟ್ಟಿದ್ದೀಯೆ.

ವಿವಿಧೇಷು ಜಲಾಶಯೇಷು ಸೋಽಯಂ
ಸವಿತೇವ ಪ್ರತಿಬಿಂಬಿತಸ್ಸ್ವಭಾವಃ |
ಬಹುರೂಪಮಿದಂ ಪ್ರವಿಶ್ಯ ವಿಶ್ವಂ
ಸ್ವಯಮೇಕೋಽಪಿ ಭವಾನ್ ವಿಭಾತ್ಯನೇಕಃ || ೧೫೨

ವಿಭಿನ್ನ ಜಲಾಶಯಗಳಲ್ಲಿ ನಾನಾಪ್ರತಿಬಿಂಬಗಳನ್ನು ಕಾಣಿಸುವ ಸೂರ್ಯನಂತೆ ಬಹುರೂಪವಾದ ಈ ವಿಶ್ವವನ್ನು ಪ್ರವೇಶಿಸಿ, ಸ್ವತಃ ನೀನು ಒಬ್ಬನೇ ಇದ್ದರೂ ಅನೇಕರಿದ್ದಂತೆ ವಿರಾಜಿಸುತ್ತೀಯೆ" ಎಂದು ಸ್ತುತಿಸಿದರು.

ಇತಿ ದೇವಮಭಿಷ್ಟುವನ್ ವಿಶಿಷ್ಟ -
ಸ್ತುತಿತೋಽಸೌ ಸುರಸದ್ಮ ಸನ್ನಿವಿಷ್ಟಃ |
ಚಿರಕಾಲ ವಿಯೋಗ ದೀನಚಿತ್ತೈಃ
ಶಿರಸಾ ಶಿಷ್ಯಗಣೈರಥೋ ವವಂದೇ || ೧೫೩

ಈ ಪ್ರಕಾರವಾಗಿ ಸ್ತುತಿವಿಶೇಷಗಳಿಂದ ಆ ದೇವರನ್ನು ಸ್ತುತಿಸಿ ಆಚಾರ್ಯರು ದೇವಾಲಯದಲ್ಲಿ ಒಂದುಕಡೆ ಕುಳಿತರು. ಅಷ್ಟುಹೊತ್ತಿಗೆ ಚಿರಕಾಲದವರೆಗೆ ವಿಯೋಗದಿಂದ ದೀನಚಿತ್ತರಾದ ಶಿಷ್ಯರ ಸಮೂಹವೇ ಅಲ್ಲಿಗೆ ಬಂದು ತಲೆಬಾಗಿ ಆಚಾರ್ಯರಿಗೆ ವಂದಿಸಿತು.

ಗುರುಣಾ ಕುಶಲಾನುಯೋಗಪೂರ್ಣಂ
ಸದಯಂ ಶಿಷ್ಯಗಣೇಷು ಸಾಂತ್ವಿತೇಷು |
ಅತಿದೀನಮನಾಃ ಶನೈರವಾದೀತ್
ಅಜಹದ್ಗದ್ಗದಿಕಂ ಸ ಪದ್ಮಪಾದಃ || ೧೫೪

ಗುರುಗಳು ಅವರೆಲ್ಲರ ಕುಶಲವನ್ನೂ ಕಾರುಣ್ಯದಿಂದ ವಿಚಾರಿಸಿ ಸಂತೈಸಿದರು. ಆಗ ಪದ್ಮಪಾದರು ಅತ್ಯಂತ ದೀನಚಿತ್ತರಾಗಿ ಗದ್ಗದಿಸುತ್ತಾ ಮೆಲ್ಲಗೆ ಇಂತೆಂದರು-

ಟಿಪ್ಪಣಿ :- ಅಜಹತೀ ಗದ್ಗದಿಕಾ ಯಸ್ಮಿನ್ ಕರ್ಮಣಿ ತದ್ಯಥಾ ತಥಾ =ಅಜಹದ್ಗದ್ಗದಿಕಂ. ಕ್ರಿಯಾವಿಶೇಷಣ.

ಭಗವನ್ನಭಿಗಮ್ಯ ರಂಗನಾಥಂ
ಪಥಿ ಪದ್ಮಾಕ್ಷಮಹಂ ನಿವರ್ತಮಾನಃ |
ಬಹುಧಾವಿಹಿತಾನುನೀತಿನೀತೋ
ಬತ ಪೂರ್ವಾಶ್ರಮ ಮಾತುಲೇನ ಗೇಹಮ್ || ೧೫೫

"ಹೇ ಭಗವನ್ - ಗುರುಗಳೆ, ದಾರಿಯಲ್ಲಿ ನಾನು ಪದ್ಮಾಕ್ಷನಾದ ಶ್ರೀರಂಗನಾಥ ಸ್ವಾಮಿಯನ್ನು ಸಂದರ್ಶಿಸಿ ಬರುತ್ತಿರುವಾಗ ನನ್ನ ಪೂರ್ವಾಶ್ರಮದ ಸೋದರಮಾವನು ಬಹುವಿಧದಲ್ಲಿ ಒತ್ತಾಯಿಸಿ ನನ್ನನ್ನು ಮನೆಗೆ ಕರೆದುಕೊಂಡು ಹೋದನು.

ಅಹಮಸ್ಯ ಪುರೋ ಭಿದಾವದೇಂದೋ-
ರಪಿ ಪೂರ್ವಾಶ್ರಮ ವಾಸನಾನುಬಂಧಾತ್ |
ಅಪಠಂ ಭವದೀಯ ಭಾಷ್ಯಟೀಕಾಂ
ಅಜಯಂ ಚಾತ್ರ ಕೃತಾನುಯೋಗಮೇನಮ್ || ೧೫೬

"ಆತನು ಭೇದವಾದಿಗಳಲ್ಲಿ ಅಗ್ರೇಸರನಾಗಿದ್ದರೂ ಪೂರ್ವಾಶ್ರಮದ ವಾಸನೆಯ ಬಲದಿಂದ ಅವನೆದುರಿಗೆ ನಾನು ನಿಮ್ಮ ಭಾಷ್ಯದ ಟೀಕೆಯನ್ನು ಓದಿದೆನು. ಆತನು ಕೇಳಿದ ಪ್ರಶ್ನೆಗೆ ಉತ್ತರವನ್ನು ಕೊಟ್ಟು ವಾದದಲ್ಲಿ ಗೆದ್ದೆನು.

ದಗ್ಧಮುದ್ರಮುಖಮುದ್ರಣಮಂತ್ರೈಃ
ಧ್ವಸ್ತತರ್ಕಗುರುಕಾಪಿಲತಂತ್ರೈಃ |
ವರ್ಮಿತೋ ನಿಗಮಸಾರಸುಧಾಕ್ತೈಃ
ಮಾತುಲಂ ತಮಜಯಂ ತವ ಸೂಕ್ತೈಃ || ೧೫೭

"ತಪ್ತಮುದ್ರಾಂಕಿತರಾದ ದ್ವೈತಿಗಳನ್ನು ಬಾಯಿಮುಚ್ಚಿಸುವ ಮಂತ್ರಗಳೂ, ತರ್ಕಶಾಸ್ತ್ರ, ಗುರುಮತ ಮತ್ತು ಸಾಂಖ್ಯ ಶಾಸ್ತ್ರಗಳನ್ನು ಧ್ವಂಸಮಾಡತಕ್ಕವೂ, ವೇದಸಾರವಾದ ಅಮೃತದಿಂದ ಸಿಕ್ತವೂ ಆದ ತಮ್ಮ ಸೂಕ್ತಿಗಳು ನನಗೆ ಕವಚವಾದವು. ನಾನು ಮಾತುಲನನ್ನು ವಾದದಲ್ಲಿ ಜಯಿಸಿದೆನು.

ಖಡ್ಗಾಖಡ್ಗಿವಿಹಾರ ಕಲ್ಪಿತರುಜಂ ಕಾಣಾದಸೇನಾಮುಖೇ
ಶಸ್ತ್ರಾಶಸ್ತ್ರಿಕೃತಂ ಶ್ರಮಂ ಚ ವಿಷಮಂ ಪಶ್ಯತ್ಪದಾನಾಂ ಪದೇ |
ಯಷ್ಟೀಯಷ್ಟಿಭವಂ ಚ ಕಾಪಿಲಬಲೇ ಖೇದಂ ಮುನೇ ತಾವಕೈಃ
ಸೂಕ್ತೈರ್ಯೌಕ್ತಿಕ ವಂಶಮೌಕ್ತಿಕಮಯೈರ್ನಾಪದ್ಯತೇ ವರ್ಮಿತಃ ||೧೫೮

"ಗುರುಗಳೆ, ಯುಕ್ತಿಗಳೆಂಬ ಬಿದಿರುಗಳಲ್ಲಿ ಹುಟ್ಟಿದ ಮುತ್ತುಗಳಂತೆ ಇರುವ ನಿಮ್ಮ ಸೂಕ್ತಿಗಳಿಂದ ಕವಚಧಾರಿಯಾದವರು (ರಕ್ಷಿತರು) ಯಾವ ವಾದಕ್ಕೂ ಜಗ್ಗುವುದಿಲ್ಲ. ವೈಶೇಷಿಕರ ಸೇನೆಯನಡುವೆ ಖಡ್ಗಗಳನ್ನು ಹಿಡಿದು ಹೋರಾಡುವಾಗ ಯಾವ ನೋವನ್ನೂ ಅನುಭವಿಸುವುದಿಲ್ಲ. ಗೌತಮೀಯರಾದ ನೈಯಾಯಿಕರ ವಾದಸ್ಥಳದಲ್ಲಿಯೂ ಶಸ್ತ್ರಾಶಸ್ತ್ರಿಯಿಂದಾಗುವ ಘೋರವಾದ ಶ್ರಮವನ್ನೂ ಗಣಿಸುವುದಿಲ್ಲ. ಸಾಂಖ್ಯರ ಸೈನ್ಯದಲ್ಲಿ ದೊಣ್ಣೆಗಳಿಂದ ಹೊಡೆದಾಡುವಾಗಲೂ ನಿಮ್ಮ ಶಿಷ್ಯರು ಯಾವ ಕಷ್ಟವನ್ನೂ ಅನುಭವಿಸುವುದಿಲ್ಲ!

ಟಿಪ್ಪಣಿ :- ಖಡ್ಗಾಖಡ್ಗಿ, ಶಸ್ತ್ರಾಶಸ್ತ್ರಿ, ಯಷ್ಟೀಯಷ್ಟಿ = 'ತತ್ರ ತೇನೇದಮಿತಿ ಸರೂಪೇ' ಎಂಬ ಸೂತ್ರದಿಂದ ಸಮಾಸ. 'ಅನ್ಯೇಷಾಮಪಿ ದೃಶ್ಯತೇ' ಎಂಬುದರಿಂದ ಪೂರ್ವಪದದೀರ್ಘ. 'ಇಚ್ ಕರ್ಮವ್ಯತಿಹಾರೇ' ಎಂಬುದರಿಂದ ಸಮಾಸಾಂತ ಇಚ್. ಪಶ್ಯತ್ಪದಃ = ಅಕ್ಷಪಾದ, ಗೌತಮ.

ಅಥ ಗೂಢಹೃದೋ ಯಥಾಪುರಂ ಮಾಂ
ಅಭಿನಂದ್ಯಾಽಽಹಿತಸತ್ಕ್ರಿಯಸ್ಯ ತಸ್ಯ |
ಅಧಿಸದ್ಮ ನಿಧಾಯ ಭಾಷ್ಯಟೀಕಾಂ
ಅಹಮಸ್ಯಾಽಽಯಮಶಂಕಿತೋ ನಿಶಾಯಾಮ್ || ೧೫೯

"ಅನಂತರ ಮೊದಲಿನಂತೆಯೇ ನನ್ನನ್ನು ಅಭಿನಂದಿಸಿ ಆತನು ಸತ್ಕರಿಸಿದನು. ಆತನ ಹೃದಯದಲ್ಲಿ ಏನೋ ಗೂಢವಾಗಿ ಇದ್ದಿರಬಹುದು. ನಾನು ಆತನ ಮನೆಯಲ್ಲಿ

ಭಾಷ್ಯಟೀಕಾಗ್ರಂಥವನ್ನು ಇಟ್ಟು ರಾತ್ರಿಕಳೆಯುವಾಗ ಮುಂದಕ್ಕೆ ಹೊರಟೆನು. ನನಗೆ ಯಾವ ಶಂಕೆಯೂ ಹುಟ್ಟಲಿಲ್ಲ.

ಟಿಪ್ಪಣಿ :- ಆಯಮ್ = ಇಣ್ ಗತೌ. ಲಙ್. ಉ.ಪು. ಏಕವಚನ.

ಯುಗಪರ್ಯಯನೃತ್ಯದುಗ್ರಫಾಲ-
ಜ್ವಲನಜ್ವಾಲ ಕರಾಲಕೀಲಜಾಲಃ|
ದಹನೋಽಧಿನಿಶೀಥಮಸ್ಯ ಧಾಮ್ನಾ
ಬತ ಟೀಕಾಮಪಿ ಭಸ್ಮಸಾದಕಾರ್ಷೀತ್ || ೧೬೦

"ಪ್ರಳಯ ಕಾಲದಲ್ಲಿ ತಾಂಡವ ನೃತ್ಯವನ್ನು ಮಾಡುವ ರುದ್ರನ ಹಣೆಗಣ್ಣಿನ ಜ್ವಾಲೆಯಂತೆ ಕರಾಳವಾದ ಜ್ವಾಲೆಗಳನ್ನುಳ್ಳ ಅಗ್ನಿಯು ರಾತ್ರಿಯಲ್ಲಿ ಆತನ ಮನೆಯನ್ನೂ ನನ್ನ ಟೀಕಾಗ್ರಂಥವನ್ನೂ ಸುಟ್ಟು ಭಸ್ಮಮಾಡಿತಂತೆ.

ಅದಹತ್ ಸ್ವಗೃಹಂ ಸ್ವಯಂ ಹತಾಶೋ
ವಿಮತಗ್ರಂಥಮಸೌ ವಿದಗ್ಧುಕಾಮಃ |
ಮತಿಮಾಂದ್ಯ ಗರಂ ಚ ಭೈಕ್ಷೇ
ವ್ಯಧಿತಾಸ್ಯೇತಿ ವಿಜೃಂಭತೇ ಸ್ಮ ವಾರ್ತಾ || ೧೬೧

"ಅಲ್ಲಿ ಕೇಳಿಬರುವ ಸುದ್ದಿ ಏನೆಂದರೆ - ಆ ಸೋದರಮಾವನು ತನಗೆ ಅಸಮ್ಮತವಾದ ನನ್ನ ಪುಸ್ತಕವನ್ನು ಸುಡಬೇಕೆಂಬ ಇಚ್ಛೆಯಿಂದ ತನ್ನ ಮನೆಯನ್ನೇ ಸುಟ್ಟುಕೊಂಡನು. ಅಲ್ಲದೆ ನನಗೆ ಬುದ್ಧಿಮಾಂದ್ಯವನ್ನುಂಟುಮಾಡುವ ಯಾವುದೋ ವಿಷವನ್ನು ಭಿಕ್ಷೆಯಲ್ಲಿ ಸೇರಿಸಿದನು. ಹೀಗೆ ವಾರ್ತೆ ಇದೆ.

ಅಧುನಾ ಧಿಷಣಾ ಯಥಾಪುರಂ ನೋ
ವಿಧಿನಾ ನಾವಿಶಯಂ ಪ್ರಸಾದಮೇತಿ |
ವಿಷಮಾ ಪುನರೀದೃಶೀ ದಶಾ ನಃ
ಕಿಮು ಯುಕ್ತಾ ಭವದಂಘ್ರಿಕಿಂಕರಾಣಾಮ್ || ೧೬೨

"ಈಗ ನನ್ನ ಬುದ್ಧಿಯು ಹಿಂದಿನಂತೆ ಸಂದೇಹಗಳನ್ನು ಕೊಡವಿಹಾಕಿ ಪ್ರಸನ್ನ ವಾಗುತ್ತಲೇ ಇಲ್ಲ. ನಮಗೆ ಈ ಬಗೆಯ ಕೆಟ್ಟ ಪರಿಸ್ಥಿತಿಯು ಉಂಟಾಯಿತು. ನಿಮ್ಮ ಪಾದಸೇವಕರಿಗೆ ಹೀಗಾಗುವುದು ಸರಿಯೆ?

ಗುರುವರ ತವ ಯಾ ಭಾಷ್ಯವರೇಣ್ಯೇ
ವ್ಯರಚಿ ಮಯಾ ಲಲಿತಾ ಕಿಲ ವೃತ್ತಿಃ|
ನಿರತಿಶಯೋಜ್ಜ್ವಲಯುಕ್ತಿಯುತಾ ಸಾ
ಪಥಿ ಕಿಲ ಹಾ ವಿನನಾಶ ಕೃಶಾನೌ || ೧೬೩

"ಹೇ ಗುರುವರ್ಯರೆ, ನಿಮ್ಮ ಶ್ರೇಷ್ಠವಾದ ಭಾಷ್ಯಕ್ಕೆ ಲಲಿತಪದಗಳಿಂದ ಕೂಡಿದ ಟೀಕೆಯನ್ನು ನಾನು ಬರೆದಿದ್ದೆನಲ್ಲ, ಅಸಾಧಾರಣವೂ ಪ್ರಖರವೂ ಆದ ಯುಕ್ತಿಗಳಿಂದ ಕೂಡಿತ್ತು ಅದು. ಅಯ್ಯೋ, ದಾರಿಯಲ್ಲಿ ಅದು ಅಗ್ನಿಯ ಪಾಲಾಗಿ ನಷ್ಟವಾಗಿ ಹೋಯಿತು.

ಪ್ರಯತೇಽಹಂ ಪುನರೇವ ಯದಾ ತಾಂ
ಪ್ರವಿಧಾತುಂ ಬಹುಧಾ ಕೃತಯತ್ನಃ |
ನ ಯಥಾಪೂರ್ವಮುಪಕ್ರಮತೇ ತಾಃ
ಪಟುಯುಕ್ತೀರ್ಭಗವನ್ಮಮ ಬುದ್ಧಿಃ || ೧೬೪

"ಹೇ ಭಗವನ್, ಅದಕ್ಕೆ ಪ್ರತಿಯಾಗಿ ಇನ್ನೊಂದು ಗ್ರಂಥವನ್ನು ರಚಿಸಬೇಕೆಂದು ನಾನು ಬಹುವಿಧವಾಗಿ ಪ್ರಯತ್ನಿಸಿದೆನು. ಹಿಂದಿನಂತೆ ಆ ಪಟುತರಯುಕ್ತಿಗಳು ನನ್ನ ಬುದ್ಧಿಗೆ ಹೊಳೆಯುವುದೇ ಇಲ್ಲ.

ಕೃಪಾಪಾರಾವಾರಂ ತವ ಚರಣಕೋಣಾಗ್ರಶರಣಂ
ಗತಾ ದೀನಾ ದೂನಾಃ ಕತಿ ಕತಿ ನ ಸರ್ವೇಶ್ವರಪದಮ್ |
ಗುರೋ ಮಂತುರ್ನಂತುಃ ಕ ಇವ ಮಮ ಪಾಪಾಂಶ ಇತಿ ಚೇತ್
ಮೃಷಾ ಮಾ ಭಾಷಿಷ್ಠಾಃ ಪದಕಮಲಚಿಂತಾವಧಿರಸೌ || ೧೬೫

ನಿಮ್ಮ ಪಾದಾಗ್ರವು ಕೃಪಾಸಾಗರವಾಗಿದೆ. ಅದಕ್ಕೆ ಶರಣಾಗತರಾದ ದೀನರೂ, ದುಃಖಿತರೂ, ಸಹ ಎಷ್ಟುಮಂದಿ ಸರ್ವೇಶ್ವರರಾಗಿ ವಿರಾಜಿಸಿಲ್ಲ? ಗುರುಗಳೆ, ನಿಮ್ಮ ಪಾದಕ್ಕೆ ನಮಸ್ಕಾರಮಾಡುತ್ತಿರುವ ನನ್ನ ಅಪರಾಧವಾದರೂ ಯಾವುದು? ಯಾವುದೋ ಹಿಂದಿನ ಪಾಪಾಂಶವಿದೆ-ಎಂದು ಇಲ್ಲದ ಸಮಾಧಾನವನ್ನು ಹೇಳಬೇಡಿರಿ! ಯಾವ ಪಾಪವಿದ್ದರೂ ನಿಮ್ಮ ಪಾದಪದ್ಮವನ್ನು ಧ್ಯಾನಮಾಡುವವರಗೆ ಮಾತ್ರ ಇದ್ದೀತು" ಎಂದು ಹೇಳಿಕೊಂಡರು.

ಇತಿ ವಾದಿನಮೇನಮಾರ್ಯಪಾದಃ
ಕರುಣಾಪೂರಕರಂಬಿತಾಂತರಂಗಃ |
ಅಮೃತಾಬ್ಧಿಸಖೈರಪಾಸ್ತಮೋಹೈ-
ರ್ವಚನೈಃ ಸಾಂತ್ವಯತಿ ಸ್ಮ ವಲ್ಗುಬಂಧೈಃ || ೧೬೬

ಆಗ ಪೂಜ್ಯಪಾದರಾದ ಆಚಾರ್ಯರ ಅಂತರಂಗವು ಕರುಣಾಪ್ರವಾಹದಿಂದ ಕಲಕಿಹೋಯಿತು. ಆ ರೀತಿಯಲ್ಲಿ ಮಾತಾಡಿದ ಪದ್ಮಪಾದರನ್ನು ನೋಡಿ ಮೋಹವನ್ನು ಕಳೆಯತಕ್ಕವೂ, ಸುಂದರ ಪದಬಂಧವುಳ್ಳವೂ, ಕ್ಷೀರಸಾಗರದಂತೆ ಮಧುರವೂ ಆದ ವಚನಗಳಿಂದ ಸಂತೈಸುತ್ತ ಹೀಗೆ ನುಡಿದರು.

ವಿಷಮೋ ಬತ ಕರ್ಮಣಾಂ ವಿಪಾಕೋ
ವಿಷಮೋಹೋಪಮದುರ್ನಿವಾರ ಏಷಃ |
ವಿದಿತಃ ಪ್ರಥಮಂ ಮಯಾಽಯಮರ್ಥಃ
ಕಥಿತಶ್ಚಾಂಗ ಸುರೇಶದೇಶಿಕಾಯ || ೧೬೭

"ಕರ್ಮಗಳ ವಿಪಾಕವು, ಅಯ್ಯೋ, ವಿಷಮವಾಗಿರುತ್ತದೆ. ವಿಷದಿಂದಾಗುವ ಮೂರ್ಛೆಯಂತೆ ಅದು ನಿವಾರಿಸಲು ಅಶಕ್ಯವಾದದ್ದು. ಈ ವಿಷಯವು ನನಗೆ ಮೊದಲೇ ತಿಳಿದಿತ್ತು. ಸುರೇಶ್ವರಾಚಾರ್ಯನಿಗೆ ಇದನ್ನು ಹೇಳಿಯೂ ಇದ್ದೆನು.

ಪೂರ್ವಂ ಶೃಂಗಕ್ಷ್ಮಾಧರೇ ಮತ್ಸಮೀಪೇ
ಪ್ರೇಮ್ಣಾ ಯಾಽಸೌ ವಾಚಿತಾ ಪಂಚಪಾದೀ |
ಸಾ ಮೇ ಚಿತ್ತಾನ್ನಾಪಯಾತ್ಯದ್ಯ ಶೋಕೋ
ಯಾತಾಚ್ಛೀಘ್ರಂ ತಾಂ ಲಿಖೇತ್ಯಾಖ್ಯದಾರ್ಯಃ || ೧೬೮

"ಹಿಂದೆ ಶೃಂಗಗಿರಿಯಲ್ಲಿದ್ದಾಗ ನನ್ನ ಬಳಿಯಲ್ಲಿ ಆ ಪಂಚಪಾದಿಕೆಯನ್ನು ಪ್ರೀತಿಯಿಂದ ಓದಿದ್ದೆಯಷ್ಟೆ. ಅದು ನನ್ನ ಬುದ್ಧಿಯಿಂದ ದೂರವಾಗಿಲ್ಲ. ಈಗ ನಿನ್ನ ಶೋಕವು ನೀಗಲಿ. ಅದನ್ನು ಬರೆದುಕೊ" ಎಂದು ಗುರುಗಳು ಹೇಳಿದರು.

ಟಿಪ್ಪಣಿ:- ಯಾತಾತ್ – ಯಾ ಧಾತು. ತಾತಙ್ ಪ್ರತ್ಯಯ, ಯಾತು ಎಂದರ್ಥ. ಆಖ್ಯತ್ – ಖ್ಯಾ ಪ್ರಕಥನೇ, ಲುಙ್. 'ಅಸ್ಯತಿವಕ್ತಿ ಖ್ಯಾತಿಭ್ಯೋಽಙ್.' ಆ -ಉಪಸರ್ಗ.

ಆಶ್ವಾಸ್ಯೇತ್ಥಂ ಜಲಜಚರಣಂ ಭಾಷ್ಯಕೃತ್ಪಂಚಪಾದೀಂ
ಆಚಖ್ಯೌ ತಾಂ ಕೃತಿಮುಪಹಿತಾಂ ಪೂರ್ವಯೈವಾಽಽನುಪೂರ್ವ್ಯಾ |
ನೈತಚ್ಚಿತ್ರಂ ಪರಮಪುರುಷೇಽವ್ಯಾಹತಜ್ಞಾನಶಕ್ತೌ
ತಸ್ಮಿನ್ ಮೂಲೇ ತ್ರಿಭುವನಗುರೌ ಸರ್ವವಿದ್ಯಾಪ್ರವೃತ್ತೇಃ || ೧೬೯

ಈ ರೀತಿಯಲ್ಲಿ ಪದ್ಮಪಾದರನ್ನು ಸಮಾಧಾನಪಡಿಸಿ, ಭಾಷ್ಯಕಾರರು ಹಿಂದೆ ಪಂಚಪಾದಿಕಾಟೀಕೆಯನ್ನು ಯಾವ ಆನುಪೂರ್ವಿಯಿಂದ ಕೇಳಿದ್ದರೋ ಅದೇ ಆನುಪೂರ್ವಿಯಿಂದ ಹೇಳುತ್ತ ಹೋದರು! ಇದೇನೂ ಆಶ್ಚರ್ಯವಲ್ಲ. ಪರಮಪುರುಷನೂ

ಅವ್ಯಾಹತವಾದ ಜ್ಞಾನಶಕ್ತಿಯುಳ್ಳವನೂ ಸಕಲ ವಿದ್ಯೆಗಳ ಉದ್ಗಮಕ್ಕೆ ಮೂಲಕಾರಣನೂ ತ್ರಿಭುವನಗುರುವೂ ಆದ ಆ ಪರಶಿವನಲ್ಲಿ ಇದು ಅಚ್ಚರಿಯಲ್ಲ.

ಟಿಪ್ಪಣಿ:- ಈಶಾನಃ ಸರ್ವವಿದ್ಯಾನಾಮೀಶ್ವರಃ ಸರ್ವಭೂತಾನಾಂ-ಇತ್ಯಾದಿ ಶ್ರುತಿ ವಚನಗಳನ್ನು ಇಲ್ಲಿ ಸ್ಮರಿಸಬಹುದು.

ಪ್ರಸಭಂ ವಿಲಿಖ್ಯ ಪಂಚಪಾದೀಂ
ಪರಮಾನಂದಭರೇಣ ಪದ್ಮಪಾದಃ |
ಉದತಿಷ್ಠದತಿಷ್ಠದಭ್ಯರೋದೀತ್
ಪುನರುದ್ಗಾಯತಿ ತು ಸ್ಮ ನೃತ್ಯತಿ ಸ್ಮ || ೧೭೦

ಪದ್ಮಪಾದರು ಪಂಚಪಾದಿಕೆಯನ್ನು ಹಠದಿಂದ ಮನಸ್ಸಿಟ್ಟು ಬರೆದುಕೊಂಡರು. ಅವರಿಗೆ ಪರಮಾನಂದವಾಯಿತು. ಗಪ್ಪನೆ ಎದ್ದುನಿಂತರು. ಸ್ವಲ್ಪಹೊತ್ತುನಿಂತುಕೊಂಡು ಆನಂದದಿಂದ ಕಣ್ಣೀರು ಸುರಿಸಿದರು. ಹಾಡಿಕೊಂಡು ಕುಣಿದಾಡಿಬಿಟ್ಟರು!

ಕವಿತಾಕುಶಲೋಽಥ ಕೇರಲಕ್ಷ್ಮಾ-
ಕಮನಃ ಕಶ್ಚನ ರಾಜಶೇಖರಾಖ್ಯಃ |
ಮುನಿವರ್ಯಮಮುಂ ಮುದಂ ವಿತೇನೇ
ನಿಜಕೌಟೀರನಿಘೃಷ್ಟಪನ್ನಖಾಗ್ರ್ಯಃ || ೧೭೧

ಕವಿತಾಕುಶಲನಾಗಿದ್ದ ರಾಜಶೇಖರನೆಂಬ ಕೇರಳದ ಪ್ರಜಾರಂಜಕರಾಜನು ಒಂದು ದಿನ ಬಂದು ಮುನಿವರೇಣ್ಯರಾದ ಆಚಾರ್ಯರ ಪಾದನಖಾಗ್ರಗಳಿಗೆ ತನ್ನ ಕಿರೀಟವು ತಾಗುವಂತೆ ಬಗ್ಗಿ ನಮಸ್ಕರಿಸಿದನು. ಆಚಾರ್ಯರಿಗೆ ಅವನನ್ನು ಕಂಡು ಸಂತೋಷವಾಯಿತು.

ಪ್ರಥತೇ ಕಿಮು ನಾಟಕತ್ರಯೀ ಸೇ-
ತ್ಯಮುನಾಸಂಯಮಿನಾ ತತೋ ನಿಯುಕ್ತಃ |
ಅಯಮುತ್ತರಮಾದದೇ ಪ್ರಮಾದಾತ್
ಅನಲೇ ಸಾಽಽಹುತಿತಾಮುಪಾಗತೇತಿ || ೧೭೨

ಅವರು ರಾಜನನ್ನು ಕುರಿತು "ನಿನ್ನ ನಾಟಕತ್ರಯವು ಪ್ರಖ್ಯಾತವಾಗಿರಬಹುದಲ್ಲವೆ?" ಎಂದು ಕೇಳಿದರು. ರಾಜಶೇಖರನು "ಯತೀಶ್ವರರೆ, ಪ್ರಮಾದದಿಂದ ಬೆಂಕಿಯು ತಗುಲಿ ನಾಟಕತ್ರಯವೂ ಆಹುತಿಯಾಗಿಬಿಟ್ಟಿತು!" ಎಂದು ಉತ್ತರ ಹೇಳಿದನು.

ಟಿಪ್ಪಣಿ:- ಶ್ರೀಶಂಕರರು ಕಾಲಟಿಯಲ್ಲಿದ್ದಾಗ ಈ ರಾಜನು ಬಂದು ಅವರೆದುರಿಗೆ ತನ್ನ ನಾಟಕಗಳನ್ನು ಓದಿ ಹೇಳಿದ್ದನು. (ಸರ್ಗ ೫ - ಶ್ಲೋ. ೨೫-೨೬)

ಮುಖತಃ ಪಠಿತಾಂ ಮುನೀಂದುನಾ ತಾಂ
ವಿಲಿಖನ್ನೇಷ ವಿಸಿಷ್ಮಿಯೇಽಥ ಭೂಪಃ |
ವದ ಕಿಂ ಕರವಾಣಿ ಕಿಂಕರೋಽಹಂ
ವರದೇತಿ ಪ್ರಣಮನ್ ವ್ಯಜಿಜ್ಞಪಚ್ಚ || ೧೭೩

ಆಗ ಶ್ರೀಶಂಕರಮುನಿಗಳು ನಾಟಕತ್ರಯವನ್ನೂ ಬಾಯಿಯಿಂದ ಹೇಳತೊಡಗಿದರು. ರಾಜನು ಅದೆಲ್ಲವನ್ನೂ ಬರೆದುಕೊಳ್ಳುತ್ತ ವಿಸ್ಮಿತನಾದನು. ಅನಂತರ ರಾಜನು ಶ್ರೀಶಂಕರರಿಗೆ ನಮಸ್ಕರಿಸಿ"ನೀವೇ ವರಗಳನ್ನು ಕೊಡಬಲ್ಲ ವರದರಾಗಿದ್ದೀರಿ. ನಾನು ನಿಮ್ಮ ಸೇವಕ. ನಿಮಗಾಗಿ ನಾನು ಏನು ಮಾಡಲಿ?" ಎಂದು ವಿಜ್ಞಾಪಿಸಿದನು.

ನೃಪ ಕಾಲಟಿನಾಮಕಾಗ್ರಹಾರಾ
ದ್ವಿಜಕರ್ಮಾನಧಿಕಾರಿಣೋಽದ್ಯ ಶಪ್ತಾಃ |
ಭವತಾಽಪಿ ತಥೈವ ತೇ ವಿಧೇಯಾ
ಬತ ಪಾಪಾ ಇತಿ ದೇಶಿಕೋಽಶಿಷತ್ತಮ್ || ೧೭೪

ಆಗ ಶ್ರೀಶಂಕರದೇಶಿಕರು "ರಾಜ, ಕಾಲಟಿಯೆಂಬ ಅಗ್ರಹಾರದಲ್ಲಿರುವ ದ್ವಿಜರಿಗೆ ವೇದಾಧ್ಯಯನಾದಿ ದ್ವಿಜಕರ್ಮಕ್ಕೆ ನೀವು ಅರ್ಹರಾಗಬಾರದು ಎಂದು ಶಾಪವನ್ನಿತ್ತಿದ್ದೇನೆ. ಅವರು ಪಾಪಿಗಳು. ಅವರು ಹಾಗೆಯೇ ಇರುವಂತೆ ನೋಡಿಕೋ" ಎಂದರು.

ಟಿಪ್ಪಣಿ:- "ಕಾಲಟಿಯಲ್ಲಿರುವ ಬ್ರಾಹ್ಮಣರು ನನ್ನ ಶಾಪದಿಂದ ವೇದಾಧ್ಯಯನಾದಿಗಳಲ್ಲಿ ಆಸಕ್ತಿಯನ್ನು ವಹಿಸುವುದಿಲ್ಲ. ನೀನು ಧರ್ಮರಕ್ಷಕನಾದರೂ ಅವರನ್ನು ವಿಚಾರಿಸದೆ ಸುಮ್ಮನಿದ್ದುಬಿಡು" ಎಂದು ಅಭಿಪ್ರಾಯ.

ಪದ್ಮಾಂಘ್ರಿ ಪ್ರತಿಪದ್ಯ ನಷ್ಟವಿವೃತಿಂ ತುಷ್ಟೇ ಪುನಃ ಕೇರಲ-
ಕ್ಷ್ಮಾಪಾಲೋ ಯತಿಸಾರ್ವಭೌಮಸವಿಧಂ ಪ್ರಾಪ್ಯ ಪ್ರಣಮ್ಯಾಂಜಸಾ |
ಲಬ್ಧ್ವಾ ತಸ್ಯ ಮುಖಾತ್ ಸ್ವನಾಟಕವರಾಣ್ಯಾನಂದಪಾಥೋನಿಧೌ
ಮಜ್ಜಂಸ್ತತ್ಪದಪದ್ಮಯುಗ್ಮಮನಿಶಂ ಧ್ಯಾಯನ್ ಪ್ರತಸ್ಥೇ ಪುರೀಮ್ ||

ಹೀಗೆ ಪದ್ಮಪಾದರು ನಷ್ಟವಾಗಿದ್ದ ತಮ್ಮ ಭಾಷ್ಯಟೀಕೆಯನ್ನು ಪಡೆದು ಸಂತುಷ್ಟರಾದರು. ಕೇರಳಾಧಿಪತಿಯಾದ ರಾಜಶೇಖರನು ಈ ಯತಿಸಾರ್ವಭೌಮರ ಬಳಿಗೆ ಬಂದು ನಮಸ್ಕರಿಸಿ ಅವರ ಮುಖದಿಂದಲೇ ತನ್ನ ಉತ್ತಮ ನಾಟಕತ್ರಯವನ್ನು ಪಡೆದುಕೊಂಡು, ಅವರ ಪಾದಕಮಲಗಳನ್ನು ಸದಾ ಧ್ಯಾನಿಸುತ್ತ ತನ್ನ ನಗರಿಗೆ ಹಿಂದಿರುಗಿದನು.

**ಇತಿ ಶ್ರೀ ಮಾಧವೀಯೇ ತತ್ತೀರ್ಥಯಾತ್ರಾಟನಾರ್ಥಕಃ |**
**ಸಂಕ್ಷೇಪಶಂಕರಜಯೇ ಸರ್ಗೋಽಜನಿ ಚತುರ್ದಶಃ ||**

**ಇಲ್ಲಿಗೆ ಶ್ರೀಮಾಧವೀಯ ಸಂಕ್ಷೇಪ ಶಂಕರವಿಜಯದಲ್ಲಿ ಪದ್ಮಪಾದರ ತೀರ್ಥಯಾತ್ರೆ ಮೊದಲಾದ್ದನ್ನು ವರ್ಣಿಸುವ ಹದಿನಾಲ್ಕನೆಯ ಸರ್ಗವು ಸಮಾಪ್ತವಾಯಿತು.**

✤ ✤ ✤

## ಪಂಚದಶಃ ಸರ್ಗಃ

## ದಿಗ್ವಿಜಯವರ್ಣನಮ್

ಶ್ರೀಶಂಕರಾಚಾರ್ಯರ ದಿಗ್ವಿಜಯಯಾತ್ರೆ. ಶ್ರೀರಾಮಸೇತುವಿನಿಂದ ಆರಂಭ. ಪಾಂಡ್ಯ, ಚೋಳ, ದ್ರಾವಿಡದೇಶಗಳಲ್ಲಿ ಪರ್ಯಟನ. ಕರ್ಣಾಟಕದಲ್ಲಿ ಕ್ರಕಚನ ಪರಾಜಯ. ಗೋಕರ್ಣದಲ್ಲಿ ನೀಲಕಂಠಾಚಾರ್ಯನನ್ನು ಜಯಿಸಿ, ಸೌರಾಷ್ಟ್ರಾದಿದೇಶಗಳಲ್ಲಿ ಪ್ರತಿವಾದಿಗಳನ್ನು ಪರಾಜಯಗೊಳಿಸಿ ಉಜ್ಜಯಿನಿಗೆ ತೆರಳುವುದು. ಭಟ್ಟಭಾಸ್ಕರನನ್ನು ವಾದದಲ್ಲಿ ಸೋಲಿಸಿ, ಜೈನಾದಿಗಳ ಮತಗಳನ್ನು ಖಂಡಿಸಿ, ಗೌಡದೇಶಕ್ಕೆ ಪ್ರಯಾಣ. ಆಚಾರ್ಯರ ಕೀರ್ತಿಯ ವಿಸ್ತರಣೆ.

ಅಥ ಶಿಷ್ಯವರ್ಯೈರ್ಯುತಃ ಸಹಸ್ರೈ-
ರನುಯಾತಃ ಸ ಸುಧನ್ವನಾ ಚ ರಾಜ್ಞಾ ।
ಕಕುಭೋ ವಿಜಿಗೀಷುರೇಷ ಸರ್ವಾಃ
ಪ್ರಥಮಂ ಸೇತುಮುದಾರಧೀಃ ಪ್ರತಸ್ಥೇ ॥ ೧

ಅನಂತರ ಮೇಧಾವಿಗಳಾದ ಶ್ರೀಶಂಕರಭಗವತ್ಪಾದರು ಸಾವಿರಾರು ಶಿಷ್ಯೋತ್ತಮರಿಂದಲೂ ಸುಧನ್ವರಾಜನಿಂದಲೂ ಸಮೇತರಾಗಿ, ಸಮಸ್ತ ದಿಕ್ಕುಗಳನ್ನೂ ಜಯಿಸಬೇಕೆಂಬ ಉದ್ದೇಶದಿಂದ ಮೊದಲು ಶ್ರೀರಾಮಸೇತುವಿನ ಕಡೆಗೆ ಪ್ರಯಾಣಮಾಡಿದರು.

ಟಿಪ್ಪಣಿ :-"ಮೊದಲು ಆಚಾರ್ಯರು ಮಧ್ಯಾರ್ಜುನವೆಂಬ ಶಿವಕ್ಷೇತ್ರಕ್ಕೆ ಹೋಗಿ, ಮಧ್ಯಾರ್ಜುನಸ್ವಾಮಿಯನ್ನು ಪೂಜಿಸಿ "ಹೇ ಭಗವನ್, ವೇದಾಂತ ಪ್ರತಿಪಾದ್ಯವಾದದ್ದು ದ್ವೈತವೆ? ಅದ್ವೈತವೆ? -ಎಂದು ಕೆಲವು ಜನರಿಗೆ ಸಂಶಯವಿದೆ. ಇದನ್ನು ಕೃಪೆಯಿಟ್ಟು ಪರಿಹರಿಸು"ಎಂದು ಪ್ರಾರ್ಥಿಸಿದರು. ಆಗ ಪರಮೇಶ್ವರನು ಲಿಂಗಾಗ್ರದಲ್ಲಿ ಆವಿರ್ಭವಿಸಿ"ಸತ್ಯಮದ್ವೈತಂ" ಎಂದು ಮೂರು ಸಲ ನುಡಿದು ಅಂತರ್ಹಿತನಾದನು. ಈ ಅದ್ಭುತವನ್ನು ಕಂಡಮೇಲೆ ಆ ಪ್ರಾಂತದ ಜನರು ಶ್ರೀಶಂಕರರೇ ಸದ್ಗುರುವೆಂದು ನಂಬಿ ಕೇವಲಾದ್ವೈತಪರಾಯಣರಾದರು" ಎಂದು ಪ್ರಾಚೀನಗ್ರಂಥದಲ್ಲಿರುವುದಾಗಿ ಡಿಂಡಿಮ ವ್ಯಾಖ್ಯಾನದಲ್ಲಿ ಬರೆದಿದೆ. ಕಾಪಾಲಿಕರೇ ಮೊದಲಾದ ಉಗ್ರವಾದಿಗಳಿಂದ ಈ ಯತಿಸಮೂಹಕ್ಕೆ ಅಪಾಯ ಒದಗೀತೆಂದು ಸುಧನ್ವರಾಜನು ಸ್ವಯಂಪ್ರೇರಿತನಾಗಿ ಹೋಗಿದ್ದಾನೆಂದು ತಿಳಿಯಬೇಕು.

ಅಭವತ್ ಕಿಲ ತಸ್ಯ ತತ್ರ ಶಾಕ್ತೈಃ
ಗಿರಿಜಾರ್ಚಾಕಪಟಾನ್ಮಧುಪ್ರಸಕ್ತೈಃ ।
ನಿಕಟಸ್ಥವಿತೀರ್ಣಭೂರಿಮೋದ-
ಸ್ಫುಟರಿಂಖತ್ಪಟುಯುಕ್ತಿಮಾನ್ ವಿವಾದಃ ॥ ೨

ರಾಮೇಶ್ವರದಲ್ಲಿ ಆಚಾರ್ಯರಿಗೂ ಶಾಕ್ತರಿಗೂ ವಾದ ನಡೆಯಿತು. ಶಾಕ್ತರು ಶಕ್ತಿದೇವತೆಯಾದ ದುರ್ಗೆಯ ಪೂಜೆಯೆಂಬ ನೆವದಿಂದ ಮದ್ಯಪಾನನಿರತರಾಗಿದ್ದರು.

ವಾದವನ್ನು ಕೇಳಲು ಬಂದಿದ್ದ ಶ್ರೋತೃಗಳಿಗೆ ಹರ್ಷವನ್ನುಂಟುಮಾಡುವ ಸ್ಫುಟಯುಕ್ತಿಗಳ ವಿಜೃಂಭಣೆಯಿಂದ ವಾದವೈಖರಿಯು ಮೆರೆಯಿತು.

ಸ ಹಿ ಯುಕ್ತಿಭರೈರ್ವಿಧಾಯ ಶಾಕ್ತಾನ್
ಪ್ರತಿ ವಾಗ್ವ್ಯಾಹರಣೇಽಪಿ ತಾನಶಕ್ತಾನ್ |
ದ್ವಿಜಜಾತಿಬಹಿಷ್ಕೃತಾನನಾರ್ಯಾನ್
ಅಕರೋಲ್ಲೋಕಹಿತಾಯ ಕರ್ಮಸೇತುಮ್ || ೩

ಆಚಾರ್ಯರು ಯುಕ್ತಿಜಾಲಗಳಿಂದ ಶಾಕ್ತರನ್ನು ಜಯಿಸಿದರು. ತಿರುಗಿಮಾತಾಡಲೂ ಬಾರದೆ ಶಾಕ್ತರು ಅಶಕ್ತರಾದರು. ಅಲ್ಲದೆ ಶಾಕ್ತರು ವಿಪ್ರವರ್ಗದಿಂದ ಬಹಿಷ್ಕೃತರಾದ ಅನಾರ್ಯವರ್ಗದವರೆಂದು ಆಚಾರ್ಯರು ಸಿದ್ಧಮಾಡಿ, ಲೋಕಹಿತಕ್ಕೋಸ್ಕರ ಒಂದು ಕರ್ಮಸೇತುವನ್ನು ನಿರ್ಮಿಸಿದರು.

ವಿವರಣೆ : ಶಾಕ್ತರು ವೇದವಿರುದ್ಧವಾದ ದಾರಿಯಲ್ಲಿ ಹೋಗತಕ್ಕವರಾದ್ದರಿಂದ ವಿಪ್ರವರ್ಗದಲ್ಲಿ ಸೇರತಕ್ಕವರಲ್ಲ - ಎಂದು ಅಭಿಪ್ರಾಯ.

ಅಭಿಪೂಜ್ಯ ಸ ತತ್ರ ರಾಮನಾಥಂ
ಸಹ ಪಾಂಡ್ಯೈಃ ಸ್ವವಶೇ ವಿಧಾಯ ಚೋಲಾನ್ |
ದ್ರವಿಡಾಂಶ್ಚ ತತೋ ಜಗಾಮ ಕಾಂಚೀಂ
ನಗರೀಂ ಹಸ್ತಿಗಿರೇರ್ನಿತಂಬಕಾಂಚೀಮ್ || ೪

ಆಮೇಲೆ ಶ್ರೀಶಂಕರರು ಶ್ರೀರಾಮೇಶ್ವರಸ್ವಾಮಿಯನ್ನು ಅರ್ಚಿಸಿ ಪಾಂಡ್ಯ, ಚೋಳ, ದ್ರವಿಡದೇಶಗಳಲ್ಲಿದ್ದ ಪರಮತೀಯರನ್ನು ಜಯಿಸಿ, ಹಸ್ತಿಶೈಲದ ನಿತಂಬಕ್ಕೆ ಕಾಂಚಿಯಂತಿದ್ದ ಕಾಂಚೀನಗರಕ್ಕೆ ಹೋದರು.

ಸುರಧಾಮ ಸ ತತ್ರ ಕಾರಯಿತ್ವಾ
ಪರವಿದ್ಯಾಚರಣಾನುಸಾರಿ ಚಿತ್ರಮ್ |
ಅಪವಾರ್ಯ ಚ ತಾಂತ್ರಿಕಾನತಾನೀತ್
ಭಗವತ್ಯಾಃ ಶ್ರುತಿಸಮ್ಮತಾಂ ಸಪರ್ಯಾಮ್ || ೫

ಅಲ್ಲಿ ಪರವಿದ್ಯೋಪಾಸನೆಗೆ ಅನುಗುಣವಾದ ಚಿತ್ರಾಕೃತಿಯ ಒಂದು ದೇವಸ್ಥಾನವನ್ನು ಕಟ್ಟಿಸಿ, ತಾಂತ್ರಿಕ ಮತದವರನ್ನು ದೂರಮಾಡಿ, ಭಗವತಿಯಾದ ಶ್ರೀಕಾಮಾಕ್ಷೀದೇವಿಗೆ ವೇದೋಕ್ತವಾದ ಪೂಜಾವಿಧಾನವನ್ನು ಗೊತ್ತುಮಾಡಿದರು.

ನಿಜಪಾದಸರೋಜಸೇವನಾಯೈ
ವಿನಯೇನ ಸ್ವಯಮಾಗತಾನಥಾಽಽಂಧ್ರಾನ್ |
ಅನುಗೃಹ್ಯ ಸ ವೇಂಕಟಾಚಲೇಶಂ
ಪ್ರಣಿಪತ್ಯಾಽಽಪ ವಿದರ್ಭರಾಜಧಾನೀಮ್ || ೬

ಅನಂತರ ತಮ್ಮ ಪಾದಕಮಲದ ಸೇವೆಗಾಗಿ ವಿನಯದಿಂದ ಆಗಮಿಸಿದ ಆಂಧ್ರರನ್ನು ಅನುಗ್ರಹಿಸಿ, ಆಚಾರ್ಯರು ಶ್ರೀ ವೇಂಕಟೇಶ್ವರನಿಗೆ ನಮಸ್ಕಾರವನ್ನು ಸಲ್ಲಿಸಿ ವಿದರ್ಭದೇಶದ ರಾಜಧಾನಿಗೆ ತೆರಳಿದರು.

ಅಭಿಗಮ್ಯ ಸ ಭಕ್ತಿಪೂರ್ವಮಸ್ಯಾಂ
ಕೃತಪೂಜಃ ಕ್ರಥಕೈಶಿಕೇಶ್ವರೇಣ |
ನಿಜಶಿಷ್ಯನಿರಸ್ತದುಷ್ಟಬುದ್ಧೀನ್
ವ್ಯದಧಾದ್ಭೈರವತಂತ್ರಸಾವಲಂಬಾನ್ || ೭

ಅಲ್ಲಿ ಕ್ರಥಕೈಶಿಕರಾಜನು ಭಕ್ತಿಪೂರ್ವಕವಾಗಿ ಬಂದು ಅವರಿಗೆ ಪೂಜೆಯನ್ನು ಸಲ್ಲಿಸಿದನು. ಆ ದೇಶದಲ್ಲಿದ್ದ ಭೈರವತಂತ್ರಾನುಗಾಮಿಗಳನ್ನು ತಮ್ಮ ಶಿಷ್ಯರಿಂದ ಪರಾಜಯಗೊಳಿಸಿ ಆ ತಾಂತ್ರಿಕರ ದುರ್ಬುದ್ಧಿಯನ್ನು ಆಚಾರ್ಯರು ಹೋಗಲಾಡಿಸಿದರು.

ಟಿಪ್ಪಣಿ :- ಕ್ರಥಕೈಶಿಕ = ವಿದರ್ಭದೇಶದ ಇನ್ನೊಂದು ಹೆಸರು.

ಅಭಿವಾದ್ಯ ವಿದರ್ಭರಾಡವಾದೀತ್
ಅಥ ಕರ್ಣಾಟವಸುಂಧರಾಮಿಯಾಸುಮ್ |
ಭಗವನ್ ಬಹುಭಿಃ ಕಪಾಲಿಜಾಲೈಃ
ಸ ಹಿ ದೇಶೋ ಭವತಾಮಗಮ್ಯರೂಪಃ || ೮

ಆಮೇಲೆ ಶ್ರೀಶಂಕರರು ಕರ್ಣಾಟಕ ದೇಶಕ್ಕೆ ಹೋಗಲು ಬಯಸಿದರು. ಆಗ ವಿದರ್ಭರಾಜನು ಅವರಿಗೆ ಅಭಿವಾದನೆ ಮಾಡಿ "ಹೇ ಭಗವನ್, ಆ ದೇಶದಲ್ಲಿ ಬಹುಮಂದಿ ಕಾಪಾಲಿಕರು ತುಂಬಿಕೊಂಡಿದ್ದಾರೆ. ಅದು ನಿಮಗೆ ಹೋಗಲು ಯೋಗ್ಯವಾದ ದೇಶವಲ್ಲ.

ನ ಹಿ ತೇ ಭಗವದ್ಯಶಃ ಸಹಂತೇ
ನಿಹಿತೇರ್ಷ್ಯಾಃ ಶ್ರುತಿಷು ಬ್ರವೀಮ್ಯತೋಽಹಮ್ |
ಅಹಿತೇ ಜಗತಾಂ ಸಮುತ್ಸಹಂತೇ
ಮಹಿತೇಷು ಪ್ರತಿಪಕ್ಷತಾಂ ವಹಂತೇ || ೯

ಆ ಕಾಪಾಲಿಕರು ಭಗವತ್ಪಾದರ ಕೀರ್ತಿಯನ್ನು ಸಹಿಸಲಾರರು. ಅವರಿಗೆ ವೇದಗಳ ವಿಷಯದಲ್ಲಿ ಈರ್ಷ್ಯೆಯುಂಟು. ಅವರು ಜಗತ್ತಿನ ಅಹಿತಕ್ಕೆ ಉದ್ಯುಕ್ತರಾಗಿದ್ದಾರೆ. ಪೂಜ್ಯರ ವಿಷಯದಲ್ಲಿ ದ್ವೇಷವನ್ನು ಅವಲಂಬಿಸಿದ್ದಾರೆ" ಎಂದು ವಿಜ್ಞಾಪಿಸಿದನು.

ಇತಿವಾದಿನಿ ಭೂಮಿಪೇ ಸುಧನ್ವಾ
ಯತಿರಾಜಂ ನಿಜಗಾವಧಿಜ್ಯಧನ್ವಾ |
ಮಯಿ ತಿಷ್ಠತಿ ಕಿಂ ಭಯಂ ಪರೇಭ್ಯಃ
ತವ ಭಕ್ತೇ ಯತಿನಾಥ ಪಾಮರೇಭ್ಯಃ || ೧೦

ಹೀಗೆ ವಿದರ್ಭರಾಜನು ಹೇಳಲಾಗಿ ಸುಧನ್ವರಾಜನು ಧನುಸ್ಸಿಗೆ ಹೆದೆಯೇರಿಸಿ "ಯತಿಶ್ರೇಷ್ಠರೆ, ಭಕ್ತನಾದ ನಾನಿರುವಾಗ ಪಾಮರರಾದ ಆ ವೈರಿಗಳಿಂದ ಯಾವ ಭೀತಿಯುಂಟಾದೀತು?"ಎಂದನು.

ಅಥ ತೀರ್ಥಕರಾಗ್ರಣೀಃ ಪ್ರತಸ್ಥೇ
ಕಿಲ ಕಾಪಾಲಿಕಜಾಲಕಂ ವಿಜೇತುಮ್ |
ನಿಶಮಯ್ಯ ತಮಾಗತಂ ಸಮಾಗಾತ್
ಕ್ರಕಚೋ ನಾಮ ಕಪಾಲಿದೇಶಿಕಾಗ್ರ್ಯಃ || ೧೧

ತರುವಾಯ ಶಾಸ್ತ್ರಕಾರರಲ್ಲಿ ಅಗ್ರಣಿಗಳಾದ ಶ್ರೀಶಂಕರರು ಆ ಕಾಪಾಲಿಕರ ಸಮುದಾಯವನ್ನು ಜಯಿಸುವುದಕ್ಕಾಗಿ ಹೊರಟೇ ಬಿಟ್ಟರು. ಅವರು ಕರ್ಣಾಟಕ ದೇಶಕ್ಕೆ ಬಂದ ಸುದ್ದಿಯನ್ನು ಕೇಳಿ ಕಾಪಾಲಿಕರ ಮುಖ್ಯ ಗುರುವಾದ ಕ್ರಕಚನೆಂಬವನು ಬಂದನು.

ಪಿತೃಕಾನನಭಸ್ಮನಾಽನುಲಿಪ್ತಃ
ಕರಸಂಪ್ರಾಪ್ತಕರೋಟಿರಾತ್ತಶೂಲಃ |
ಸಹಿತೋ ಬಹುಭಿಃ ಸ್ವತುಲ್ಯವೇಷೈಃ
ಸ ಇತಿ ಸ್ಮಾಽಽಹ ಮಹಾಮನಾಃ ಸಗರ್ವಃ || ೧೨

ಅವನಾದರೋ ಶ್ಮಶಾನದ ಬೂದಿಯನ್ನು ಮೈಗೆ ಬಳಿದುಕೊಂಡು ಕೈಗಳಲ್ಲಿ ಮನುಷ್ಯರ ತಲೆಬುರುಡೆಯನ್ನೂ, ಶೂಲವನ್ನೂ ಹಿಡಿದಿದ್ದನು. ಅವನಂತೆಯೇ ವೇಷವನ್ನು ಧರಿಸಿದ್ದ ಕಾಪಾಲಿಕರೊಡನೆ ಕೂಡಿಕೊಂಡು ಬಂದು ಉದ್ರಿಕ್ತಚಿತ್ತನಾಗಿ ಗರ್ವದಿಂದ ಇಂತೆಂದನು.

ಭಸಿತಂ ಧೃತಮಿತ್ಯದಸ್ತು ಯುಕ್ತಂ
ಶುಚಿ ಸಂತ್ಯಜ್ಯ ಶಿರಃಕಪಾಲಮೇತತ್ |
ವಹಥಾಶುಚಿ ಖರ್ಪರಂ ಕಿಮರ್ಥಂ
ನ ಕಥಂಕಾರಮುಪಾಸ್ಯತೇ ಕಪಾಲೀ || ೧೩

"ನೀವು ಭಸ್ಮವನ್ನು ಹಚ್ಚಿಕೊಂಡಿದ್ದೀರೆಂಬುದೇನೋ ಯುಕ್ತವಾದದ್ದೇ. ಆದರೆ ಶುಚಿಯಾದ ನರಕಪಾಲವನ್ನು ಬಿಟ್ಟು ಕೊಳೆ ಕೊಳೆಯಾದ ಮಣ್ಣಿನ ಚಿಪ್ಪನ್ನು ಏಕೆ ಹಿಡಿದುಕೊಂಡಿದ್ದೀರಿ? ಭೈರವನನ್ನು ಉಪಾಸನೆಮಾಡುವುದಿಲ್ಲವೇಕೆ?

ನರಶೀರ್ಷಕುಶೇಶಯೈರಲಬ್ಧ್ವಾ
ರುಧಿರಾಕ್ತೈರ್ಮಧುನಾ ಚ ಭೈರವಾರ್ಚಾಮ್ |
ಉಮಯಾ ಸಮಯಾ ಸರೋರುಹಾಕ್ಷ್ಯಾ
ಕಥಮಾಶ್ಲಿಷ್ಟವಪುರ್ಮುದಂ ಪ್ರಯಾಯಾತ್ || ೧೪

ರಕ್ತವನ್ನು ಸುರಿಸುವ ಮಾನವ ಶಿರಸ್ಸುಗಳೆಂಬ ಕಮಲಗಳಿಂದಲೂ, ಮದ್ಯದಿಂದಲೂ, ಭೈರವನ ಅರ್ಚನೆಯನ್ನು ಮಾಡದಿದ್ದರೆ ಕಮಲನೇತ್ರೆಯೂ ಸಮಾನಧರ್ಮದವಳೂ ಆದ ಉಮಾದೇವಿಯಿಂದ ಆಲಿಂಗಿತ ಶರೀರನಾದ ಭೈರವನು ಹೇಗೆ ಸಂತುಷ್ಟನಾದಾನು?" ಎಂದು ಕೇಳಿದನು.

ಇತಿ ಜಲ್ಪತಿ ಭೈರವಾಗಮಾನಾಂ
ಹೃದಯಂ ಕಾಪುರುಷೇತಿ ತಂ ವಿನಿಂದ್ಯ |
ನಿರವಾಸಯದಾತ್ಮವಿತ್ಸಮಾಜಾತ್
ಪುರುಷೈಃ ಸ್ವೈರಧಿಕಾರಿಭಿಃ ಸುಧನ್ವಾ || ೧೫

ಹೀಗೆ ಭೈರವತಂತ್ರಗಳ ರಹಸ್ಯವನ್ನು ಆತನು ಹಲುಬುತ್ತಿರಲು, ಸುಧನ್ವರಾಜನು 'ಎಲೈ ದುಷ್ಟ' ಎಂದು ನಿಂದಿಸಿ ಆತ್ಮವಿದರಾದ ಯತಿಗಳ ಸಮಾಜದಿಂದ ಹೊರಗೆ ಹೋಗುವಂತೆ ತನ್ನ ಅಧಿಕಾರಿಗಳ ಮೂಲಕ ಆ ಕ್ರಕಚನನ್ನು ತಳ್ಳಿಸಿದನು.

ಭ್ರುಕುಟೀಕುಟಿಲಾನನಶ್ಚಲೋಷ್ಠಃ
ಸಿತಮುದ್ಯಮ್ಯ ಪರಶ್ವಧಂ ಸ ಮೂರ್ಖಃ |
ಭವತಾಂ ನ ಶಿರಾಂಸಿ ಚೇದ್ವಿಭಿಂದ್ಯಾಂ
ಕ್ರಕಚೋ ನಾಹಮಿತಿ ಬ್ರುವನ್ನಯಾಸೀತ್ || ೧೬

ಆಗ ಮೂರ್ಖನಾದ ಆ ಕಾಪಾಲಿಕನು ಹುಬ್ಬು ಗಂಟಿಕ್ಕಿದನು. ಮುಖವು ಕ್ರೂರವಾಯಿತು. ಕೋಪದಿಂದ ತುಟಿಗಳು ಅದುರಿದವು. ಹರಿತವಾದ ಕೊಡಲಿಯನ್ನು ಮೇಲೆತ್ತಿ "ನಿಮ್ಮೆಲ್ಲರ ತಲೆಗಳನ್ನೂ ಕತ್ತರಿಸಿ ಹಾಕದಿದ್ದರೆ ನಾನು ಕ್ರಕಚನೇ ಅಲ್ಲ" ಎಂದು ಹೇಳುತ್ತ ನಿರ್ಗಮಿಸಿದನು.

ರುಷಿತಾನಿ ಕಪಾಲಿನಾಂ ಕುಲಾನಿ
ಪ್ರಲಯಾಂಭೋಧರಭೀಕರಾರವಾಣಿ |
ಅಮುನಾ ಪ್ರಹಿತಾನ್ಯತಿಪ್ರಸಂಖ್ಯಾ-
ನ್ಯಭಿಯಾತಾನಿ ಸಮುದ್ಯತಾಯುಧಾನಿ || ೧೭

ಅನಂತರ ಆತನು ಕಳಿಸಿದ ಕುಪಿತರಾದ ಕಾಪಾಲಿಕರ ಒಂದು ದೊಡ್ಡ ಹಿಂಡು ಪ್ರಳಯ ಕಾಲದ ಮೇಘದಂತೆ ಭೀಕರವಾಗಿ ಗರ್ಜಿಸುತ್ತ ಆಯುಧಗಳನ್ನು ಎತ್ತಿಹಿಡಿದು ಎದುರಿಗೆ ಆಗಮಿಸಿಯೇ ಬಿಟ್ಟಿತು.

ಅಥ ವಿಪ್ರಕುಲಂ ಭಯಾಕುಲಂ ತದ್
ದ್ರುತಮಾಲೋಕ್ಯ ಮಹಾರಥಃ ಸುಧನ್ವಾ |
ಕುಪಿತಃ ಕವಚೀ ರಥೀ ನಿಷಂಗೌ
ಧನುರಾದಾಯ ಯಯೌ ಶರಾನ್ ವಿಮುಂಚನ್ || ೧೮

ಆಗ ಭಯಾವಿಷ್ಟರಾದ ವಿಪ್ರರನ್ನು ಕಂಡು ಮಹಾರಥನಾದ ಸುಧನ್ವನು ಕುಪಿತನಾಗಿ ಕವಚವನ್ನೂ ಬತ್ತಳಿಕೆಯನ್ನೂ ಧರಿಸಿ ಧನುಸ್ಸನ್ನು ಹಿಡಿದು ರಥಾರೂಢನಾಗಿ ಶರಗಳನ್ನು ಬಿಡುತ್ತಾ ತ್ವರೆಯಿಂದ ಮುಂದೆ ನುಗ್ಗಿದನು.

ಅವನೀಭೃತಿ ಯೋಧಯತ್ಯರೀಂಸ್ತಾಂ-
ಸ್ತ್ವರಯೈಕತ್ರ ತತೋಽನ್ಯತೋ ನಿಯುಕ್ತಾಃ |
ಕ್ರಕಚೇನ ವಧಾಯ ಭೂಸುರಾಣಾಂ
ದ್ರುತಮಾಸೇದುರುದಾಯುಧಾಃ ಸಹಸ್ರಮ್ || ೧೯

ರಾಜನು ಆ ವೈರಿಗಳೊಡನೆ ಒಂದು ಕಡೆ ಯುದ್ಧ ಮಾಡುತ್ತಿದ್ದನು. ಕ್ರಕಚನು ಬ್ರಾಹ್ಮಣರನ್ನು ಕೊಲ್ಲುವುದಕ್ಕಾಗಿ ಪ್ರೇರಿಸಿದ ಸಾವಿರಾರು ಕಾಪಾಲಿಕರು ಆಯುಧಗಳನ್ನು ಹಿಡಿದು ಇನ್ನೊಂದು ಕಡೆಯಿಂದ ನುಗ್ಗಿಬಂದರು.

ಅವಲೋಕ್ಯ ಕಪಾಲಿ ಸಂಘಮಾರಾತ್
ಶಮನಾನೀಕನಿಕಾಶಮಾಪತಂತಮ್ |
ವ್ಯಥಿತಾಃ ಪ್ರತಿಪೇದಿರೇ ಶರಣ್ಯಂ
ಶರಣಂ ಶಂಕರಯೋಗಿನಂ ದ್ವಿಜೇಂದ್ರಾಃ || ೨೦

ಹೀಗೆ ಕಾಪಾಲಿಕರ ಸಮೂಹವು ಯಮನ ಸೈನಿಕರಂತೆ ದೂರದಲ್ಲಿ ಬರುತ್ತಿರುವುದನ್ನು ಕಂಡು ಆ ವಿಪ್ರರು ವ್ಯಥಿತರಾಗಿ ಶರಣ್ಯರಾದ ಶ್ರೀಶಂಕರಯೋಗೀಶ್ವರರಿಗೆ ಶರಣಾಗತರಾದರು.

ಅಸಿತೋಮರ ಪಟ್ಟಿಶತ್ರಿಶೂಲೈಃ
ಪ್ರಜಿಘಾಂಸೂನ್ ಭೃಶಮುಜ್ಝಿತಾಟ್ಟಹಾಸಾನ್ |
ಯತಿರಾಟ್ ಸ ಚಕಾರ ಭಸ್ಮಸಾತ್ತಾನ್
ನಿಜಹುಂಕಾರಭುವಾಽಗ್ನಿನಾ ಕ್ಷಣೇನ || ೨೧

ಖಡ್ಗ, ತೋಮರ, ಪಟ್ಟಿಶ, ತ್ರಿಶೂಲಗಳನ್ನು ಹಿಡಿದು ಅಟ್ಟಹಾಸಮಾಡುತ್ತಾ ಕೊಲ್ಲುವುದಕ್ಕಾಗಿ ಬರುತ್ತಿದ್ದ ಕಾಪಾಲಿಕರನ್ನು ನೋಡಿ, ಆ ಯೋಗೀಶ್ವರರಾದ ಶ್ರೀಶಂಕರರು ಕೋಪದಿಂದ ಹುಂಕರಿಸಲು, ಅಗ್ನಿಯು ಆವಿರ್ಭವಿಸಿ ಕ್ಷಣದಲ್ಲಿ ಅವರೆಲ್ಲರನ್ನೂ ಸುಟ್ಟು ಬೂದಿಮಾಡಿತು!

ನೃಪತಿಶ್ಚ ಶರೈಃ ಸುವರ್ಣಪುಂಖೈಃ
ವಿನಿಕೃತ್ತೈಃ ಪ್ರತಿಪಕ್ಷವಕ್ತ್ರಪದ್ಮೈಃ |
ರಣರಂಗಭುವಂ ಸಹಸ್ರಸಂಘೈಃ
ಸಮಲಂಕೃತ್ಯ ಮುದಾಽಗಮನ್ಮುನೀಂದ್ರಮ್ || ೨೨

ಇತ್ತಲಾಗಿ ಸುಧನ್ವರಾಜನು ಸುವರ್ಣ ಪುಂಖಾಂಕಿತಗಳಾದ ಶರಗಳಿಂದ ತುಂಡರಿಸಲ್ಪಟ್ಟ ಕಾಪಾಲಿಕರ ಸಾವಿರಾರು ಮುಖಕಮಲಗಳಿಂದ ರಣಭೂಮಿಯನ್ನು ಅಲಂಕರಿಸಿ ಸಂತೋಷದಿಂದ ಮುನೀಂದ್ರರ ಬಳಿಗೆ ಬಂದನು.

ತದನು ಕ್ರಕಚೋ ಹತಾನ್ ಸ್ವಕೀಯಾನ್
ಅರುಜಾಂಶ್ಚ ದ್ವಿಜಪುಂಗವಾನುದೀಕ್ಷ್ಯ |
ಅತಿಮಾತ್ರವಿದೂಯಮಾನಚೇತಾ
ಯತಿರಾಜಸ್ಯ ಸಮೀಪಮಾಪ ಭೂಯಃ || ೨೩

ಆಮೇಲೆ ಕ್ರಕಚನು ತನ್ನ ಕಡೆಯವರೆಲ್ಲ ಹತರಾದುದನ್ನೂ ದ್ವಿಜೋತ್ತಮರೆಲ್ಲರೂ ಯಾವ ತೊಂದರೆಯೂ ಇಲ್ಲದೆ ಕ್ಷೇಮವಾಗಿರುವುದನ್ನೂ ಕಂಡು ಅತ್ಯಂತ ಖಿನ್ನನಾಗಿ ಯತಿರಾಜರ ಸಮೀಪಕ್ಕೆ ಮತ್ತೆ ಬಂದನು.

ಕುಮತಾಶ್ರಯ ಪಶ್ಯ ಮೇ ಪ್ರಭಾವಂ
ಫಲಮಾಪ್ಸ್ಯಸ್ಯಧುನೈವ ಕರ್ಮಣೋಽಸ್ಯ |
ಇತಿ ಹಸ್ತತಲೇ ದಧತ್ಕಪಾಲಂ
ಕ್ಷಣಮಧ್ಯಾಯದಸೌ ನಿಮೀಲ್ಯ ನೇತ್ರೇ || ೨೪

"ಎಲೈ ಕುತ್ಸಿತಮತಾವಲಂಬಿಯೆ, ನನ್ನ ಪ್ರಭಾವವೇನೆಂಬುದನ್ನು ನೋಡು. ನಿನ್ನ ಈ ಕೃತ್ಯಕ್ಕೆ ಈಗಲೇ ಫಲವನ್ನು ಪಡೆಯುವೆ." ಎಂದು ಹೇಳಿ ತನ್ನ ಅಂಗೈಯಲ್ಲಿ ಕಪಾಲವನ್ನು ಹಿಡಿದುಕೊಂಡು ಕಣ್ಣುಮುಚ್ಚಿ ಒಂದು ಕ್ಷಣಕಾಲ ಏನನ್ನೋ ಧ್ಯಾನಿಸಿದನು.

ಸುರಯಾ ಪರಿಪೂರಿತಂ ಕಪಾಲಂ
ಝಟಿತಿ ಧ್ಯಾಯತಿ ಭೈರವಾಗಮಜ್ಞೇ |
ಸ ನಿಪೀಯ ತದರ್ಧಮರ್ಧಮಸ್ಯಾ
ನಿದಧಾರ ಸ್ಮರತಿ ಸ್ಮ ಭೈರವಂ ಚ || ೨೫

ಭೈರವತಂತ್ರವನ್ನು ಬಲ್ಲ ಆ ಕ್ರಕಚನು ಹೀಗೆ ಧ್ಯಾನಿಸಲು ಕೂಡಲೇ ಕಪಾಲವು ಮದ್ಯದಿಂದ ತುಂಬಿತು. ಆತನು ಅದರಲ್ಲಿ ಅರ್ಧವನ್ನು ಕುಡಿದು ಇನ್ನರ್ಧವನ್ನು ಅದರಲ್ಲೇ ಉಳಿಸಿ ಭೈರವನನ್ನು ಸ್ಮರಿಸಿದನು.

ಅಥ ಮರ್ತ್ಯಶಿರಃಕಪಾಲಮಾಲೀ
ಜ್ವಲನಜ್ವಾಲಜಟಾಛಟಸ್ತ್ರಿಶೂಲೀ |
ವಿಕಟಪ್ರಕಟಾಟ್ಟಹಾಸಶಾಲೀ
ಪುರತಃ ಪ್ರಾದುರಭೂನ್ಮಹಾಕಪಾಲೀ || ೨೬

ಆಗ ನರಶಿರಸ್ಸುಗಳಿಂದ ಕಪಾಲಮಾಲಿಯೂ, ಅಗ್ನಿಯಂತೆ ಬೆಳಗುವ ಕೆಂಜೆಡೆಯುಳ್ಳ ತ್ರಿಶೂಲಿಯೂ, ವಿಕಟಾಕಾರವಾಗಿ ನಗುವ ಅಟ್ಟಹಾಸಶಾಲಿಯೂ ಆದ ಮಹಾಕಪಾಲಿಯು ಎದುರಿಗೆ ಪ್ರಕಟನಾದನು!

ತವ ಭಕ್ತಜನದ್ರುಹಂ ದೃಶಾ ಸಂ -
ಜಹಿ ದೇವೇತಿ ಕಪಾಲಿನಾ ನಿಯುಕ್ತಃ |
ಕಥಮಾತ್ಮನಿ ಮೇಽಪರಾಧ್ಯಸೀತಿ
ಕ್ರಕಚಸ್ಯೈವ ಶಿರೋ ಜಹಾರ ರುಷ್ಟಃ || ೨೭

ಕಾಪಾಲಿಕನು "ಹೇ ದೇವ, ನಿನ್ನ ಭಕ್ತರಿಗೆ ದ್ರೋಹವನ್ನೆಸಗುವ ಈತನನ್ನು ನಿನ್ನಕಣ್ಣಿಂದಲೇ ಸುಟ್ಟು ಕೊಂದು ಹಾಕು" ಎಂದು ಕೇಳಿಕೊಂಡನು. ಆಗ 'ನನ್ನ ಆತ್ಮಸ್ವರೂಪನೇ ಆದ ಈತನಿಗೆ ಅಪರಾಧವನ್ನೆಸಗುವೆಯಾ?' ಎಂದು ಹೇಳಿ ಕ್ರುದ್ಧನಾದ ತ್ರಿಶೂಲಿಯು ಕ್ರಕಚನ ತಲೆಯನ್ನೇ ಕತ್ತರಿಸಿ ಹಾಕಿದನು.

ಯಮಿನಾಮೃಷಭೇಣ ಸಂಸ್ತುತಃ ಸನ್
ಅಯಮಂತರ್ಧಿಮವಾಪ ದೇವವರ್ಯಃ |
ಅಖಿಲೇಽಪಿ ಖಿಲೇ ಕುಲೇ ಖಲಾನಾಮ್
ಅಮುಮಾನರ್ಚುರಲಂ ದ್ವಿಜಾಃ ಪ್ರಹೃಷ್ಟಾಃ || ೨೮

ಆಗ ಯತಿಶ್ರೇಷ್ಠರಾದ ಆಚಾರ್ಯರು ಆ ದೇವೋತ್ತಮನನ್ನು ಸ್ತುತಿಸುತ್ತಿರಲಾಗಿ, ಆತನು ಅಂತರ್ಹಿತನಾದನು. ಈ ಪ್ರಕಾರವಾಗಿ ಖಳರ ದಂಡೆಲ್ಲವೂ ನಾಶವಾಗಲು ದ್ವಿಜರು ಆನಂದಿತರಾಗಿ ಆಚಾರ್ಯರನ್ನು ಪೂಜಿಸಿದರು.

ಯತಿರಾಡಥ ತೇಷು ತೇಷು ದೇಶೇ-
ಷ್ವಿತಿ ಪಾಷಂಡಪರಾನ್ ದ್ವಿಜಾನ್ ವಿಮಥ್ನನ್ |
ಅಪರಾಂತಮಹಾರ್ಣವೋಪಕಂಠಂ
ಪ್ರತಿಪೇದೇ ಪ್ರತಿವಾದಿದರ್ಪಹಂತಾ || ೨೯

ಅನಂತರ ಬೇರೆ ಬೇರೆ ದೇಶಗಳಲ್ಲಿ ಪಾಷಂಡ ಮತ ನಿರತರಾದ ದ್ವಿಜರನ್ನು ಖಂಡಿಸುತ್ತಾ, ಪ್ರತಿವಾದಿಗಳ ದರ್ಪವನ್ನು ವಿಧ್ವಂಸಗೊಳಿಸುವ ಆ ಯತಿರಾಜರು ಪಶ್ಚಿಮ ದಿಕ್ಕಿನಲ್ಲಿದ್ದ ಮಹಾಸಾಗರದ ತೀರಕ್ಕೆ ಬಂದರು.

ವಿಲಲಾಸ ಚಲತ್ತರಂಗಹಸ್ತೈಃ
ನದರಾಜೋಽಭಿನಯನ್ನಿಗೂಢಮರ್ಥಮ್ |
ಅವಧೀರಿತದುಂದುಭಿಸ್ವನೇನ
ಪ್ರತಿವಾದೀವ ಮಹಾನ್ ಮಹಾರವೇಣ || ೩೦

ಸಮುದ್ರರಾಜನು ಚಲಿಸುವ ಅಲೆಗಳೆಂಬ ಕೈಗಳಿಂದ ಅಭಿನಯಿಸುತ್ತಾ ದುಂದುಭಿ ಧ್ವನಿಯನ್ನು ಮೀರಿಸುವ ಮಹಾಶಬ್ದವನ್ನುಂಟುಮಾಡುತ್ತಾ, ನಿಗೂಢವಾದ ಶಾಸ್ತ್ರಾರ್ಥವನ್ನು ಘೋಷಿಸುವ ಪ್ರತಿವಾದಿಯಂತೆ ಮೆರೆಯುತ್ತಿದ್ದನು!

ಬಹುಲಭ್ರಮವಾನಯಂ ಜಡಾತ್ಮಾ
ಸುಮನೋಭಿರ್ಮಥಿತಶ್ಚ ಪೂರ್ವಮೇವ |
ಇತಿ ಸಿಂಧುಮುಪೇಕ್ಷ್ಯ ಸ ಕ್ಷಮಾವಾ-
ನಿವ ಗೋಕರ್ಣಮುದಾರಧೀಃ ಪ್ರತಸ್ಥೇ || ೩೧

(ಹಾಗಾದರೆ ಆಚಾರ್ಯರು ಅವನೊಡನೆ ವಾದಮಾಡದೆ ಏಕೆ ಉಪೇಕ್ಷಿಸಿದರು? ಎಂದರೆ) ಈ ಸಮುದ್ರರಾಜನು ಬಹಳ ಭ್ರಮೆಗಳಿಗೆ ಒಳಗಾದವನು (ಅನೇಕ ನೀರಿನ ಸುಳಿಗಳಿಂದ ಕೂಡಿದವನು), ಜಡಸ್ವರೂಪನು (ಜಲಮಯನು), ವಿದ್ವಾಂಸರಿಂದ ಹಿಂದೆಯೇ ಪರಾಜಿತನಾದವನು. (ದೇವತೆಗಳಿಂದ ಕಡೆಯಲ್ಪಟ್ಟವನು) ಎಂದು ಭಾವಿಸಿ ಕ್ಷಮಿಸಿದರೋ ಎಂಬಂತೆ ಉಪೇಕ್ಷಿಸಿ ಮೇಧಾವಿಗಳಾದ ಆಚಾರ್ಯರು ಗೋಕರ್ಣಕ್ಕೆ ನೇರವಾಗಿ ಪ್ರಯಾಣಮಾಡಿದರು!

ಟಿಪ್ಪಣಿ : ಭ್ರಮ = ನೀರಿನ ಸುಳಿ - ಭ್ರಾಂತಿ; ಜಡ =ಜಲ; ಸುಮನಸ್ = ವಿದ್ವಾಂಸ - ದೇವತೆ.

ಅವಗಾಹ್ಯ ಸರಿತ್ಪತಿಂ ಸ ತತ್ರ
ಪ್ರಿಯಮಾಸಾದ್ಯ ತುಷಾರ ಶೈಲಪುತ್ರ್ಯಾಃ |
ಸ್ತವಸತ್ತಮಮದ್ಭುತಾರ್ಥಚಿತ್ರಂ
ರಚಯಾಮಾಸ ಭುಜಂಗವೃತ್ತರಮ್ಯಮ್ || ೩೨

ಶ್ರೀಶಂಕರರು ಗೋಕರ್ಣಕ್ಕೆ ಹೋಗಿ ಸಮುದ್ರದಲ್ಲಿ ಸ್ನಾನಮಾಡಿ ಹಿಮಾಲಯಪುತ್ರಿಯಾದ ಪಾರ್ವತಿಗೆ ಪ್ರಿಯನಾದ ಶ್ರೀಮಹಾಬಲೇಶ್ವರಸ್ವಾಮಿಯ ದರ್ಶನಮಾಡಿದರು. ಭುಜಂಗ ಪ್ರಯಾತವೃತ್ತಗಳಿಂದ ರಮ್ಯವೂ ವಿಭಿನ್ನ ಅಲಂಕಾರಗಳಿಂದ ಅದ್ಭುತವೂ ಆದ ಸ್ತೋತ್ರಕದಂಬವನ್ನು ರಚಿಸಿ ದೇವರನ್ನು ಸ್ತುತಿಸಿದರು.

ಟಿಪ್ಪಣಿ :- 'ಭುಜಂಗಪ್ರಯಾತಂ ಯಕಾರೈಶ್ಚತುರ್ಭಿಃ' ಎಂದು ಈ ವೃತ್ತದ ಲಕ್ಷಣ. ನಾಲ್ಕುಯಗಣಗಳಿದ್ದರೆ ಭುಜಂಗಪ್ರಯಾತವಾಗುತ್ತದೆ.

ತದನಂತರಮಾಗಮಾಂತವಿದ್ಯಾಂ
ಪ್ರಣತೇಭ್ಯಃ ಪ್ರತಿಪಾದಯಂತಮೇನಮ್ |
ಹರದತ್ತಸಮಾಹ್ವಯೋಽಧಿಗಮ್ಯ
ಸ್ವಗುರುಂ ಸಂಗಿರತೇ ಸ್ಮ ನೀಲಕಂಠಮ್ || ೩೩

ಅನಂತರ ಕೆಲವರು ಆಚಾರ್ಯರ ಬಳಿಗೆ ಬಂದು ವಿನೀತರಾಗಿ ನಮಸ್ಕರಿಸಿದರು. ಅವರಿಗೆ ಆಚಾರ್ಯರು ವೇದಾಂತವಿದ್ಯೆಯನ್ನು ಉಪದೇಶಿಸುತ್ತಿರುವಾಗ ಇದನ್ನು ತಿಳಿದು ಹರದತ್ತನೆಂಬವನು ತನ್ನ ಗುರುವಾದ ನೀಲಕಂಠಾಚಾರ್ಯನ ಬಳಿಗೆ ಬಂದು ಈ ವಿಷಯವನ್ನು ಹೇಳಿದನು.

ಭಗವನ್ನಿಹ ಶಂಕರಾಭಿಧಾನೋ
ಯತಿರಾಗತ್ಯ ಜಿಗೀಷುರಾರ್ಯಪಾದಾನ್ |
ಸ್ವವಶೀಕೃತಭಟ್ಟಮಂಡನಾದಿಃ
ಸಹ ಶಿಷ್ಯೈರ್ಗಿರಿಶಾಲಯೇ ಸಮಾಸ್ತೇ || ೩೪

"ಭಗವನ್, ಶಂಕರ ಎಂಬ ಹೆಸರಿನ ಒಬ್ಬ ಯತಿಯು ಆರ್ಯಪಾದರಾದ ನಿಮ್ಮನ್ನು ವಾದದಲ್ಲಿ ಜಯಿಸಬೇಕೆಂದಿದ್ದಾನೆ. ಕುಮಾರಿಲಭಟ್ಟ, ಮಂಡನ - ಮೊದಲಾದವರನ್ನು ವಶಪಡಿಸಿಕೊಂಡಿರುವ ಆತನು ಶಿಷ್ಯರೊಡನೆ ಶಿವದೇವಸ್ಥಾನದಲ್ಲಿ ಇಳಿದುಕೊಂಡಿದ್ದಾನೆ." ಎಂದನು.

ಇತಿ ತದ್ವಚನಂ ನಿಶಮ್ಯ ಸಮ್ಯಕ್
ಗ್ರಥಿತಾನೇಕ ನಿಬಂಧರತ್ನಹಾರಃ |
ಶಿವತತ್ಪರಸೂತ್ರಭಾಷ್ಯಕರ್ತಾ
ಪ್ರಹಸನ್ ವಾಚಮುವಾಚ ಶೈವವರ್ಯಃ || ೩೫

ಶೈವೋತ್ತಮನಾದ ನೀಲಕಂಠನು ಅನೇಕಗ್ರಂಥರತ್ನಗಳನ್ನು ಉತ್ತಮರೀತಿಯಲ್ಲಿ ಬರೆದು ಹಾರದಂತೆ ಧರಿಸಿದ ಕೀರ್ತಿಶಾಲಿ. ಬ್ರಹ್ಮಸೂತ್ರಗಳಿಗೆ ಶಿವಪರವಾಗಿ ಭಾಷ್ಯವನ್ನು ರಚಿಸಿದವನು. ಅವನು ಹರದತ್ತನ ಮಾತನ್ನು ಕೇಳಿ ನಗುತ್ತ ಇಂತೆಂದನು.

ಟಿಪ್ಪಣಿ :- ಈತನೇ ಪ್ರಸಿದ್ಧನಾದ ಶ್ರೀಕಂಠಾಚಾರ್ಯನಾಗಿರಬಹುದು.

ಸರಿತಾಂ ಪತಿಮೇಷ ಶೋಷಯೇದ್ವಾ
ಸವಿತಾರಂ ವಿಯತಃ ಪ್ರಪಾತಯೇದ್ವಾ |
ಪಟವತ್ಖಸರವತ್ಮ್ಯ ವೇಷ್ಟಯೇದ್ವಾ
ವಿಜಯೇ ನೈವ ತಥಾಽಪಿ ಮೇ ಸಮರ್ಥಃ || ೩೬

"ಆ ಸಂನ್ಯಾಸಿಯು ಸಮುದ್ರವನ್ನಾದರೂ ಒಣಗಿಸಲಿ! ನಭೋಮಂಡಲದಿಂದ ಸೂರ್ಯನನ್ನಾದರೂ ಕೆಳಗೆ ಬೀಳಿಸಲಿ! ವಸ್ತ್ರದಂತೆ ಆಕಾಶವನ್ನಾದರೂ ಮಡಿಚಿ ಸುತ್ತಿಬಿಡಲಿ! ಆದರೂ ಅವನು ನನ್ನನ್ನು ಗೆಲ್ಲಲಾರ!

ಪರಪಕ್ಷತಮಿಸ್ರಚಂಚದರ್ಕೈಃ
ಮಮ ತರ್ಕೈರ್ಬಹುಧಾ ವಿಶೀರ್ಯಮಾಣಮ್ |
ಅಧುನೈವ ಮತಂ ನಿಜಂ ಸ ಪಶ್ಯ-
ತ್ವಿತಿ ಜಲ್ಪನ್ನಿರಗಾದನಲ್ಪಕೋಪಃ || ೩೭

ಪರಪಕ್ಷವೆಂಬ ಕತ್ತಲೆಗೆ ಸೂರ್ಯರೋ ಎಂಬಂತಿರುವ ನನ್ನ ತರ್ಕಸರಣಿಗಳಿಂದ ಆತನ ಮತವನ್ನು ಧ್ವಂಸಮಾಡಿ ಕತ್ತರಿಸಿ ಹಾಕುವುದನ್ನು ಈಗಲೇ ಅವನು ಕಾಣಲಿ!" ಎಂದು ಹೇಳುತ್ತಾ ಕುಪಿತನಾಗಿ ಹೊರಟನು.

ಸಿತಭೂತಿತರಂಗಿತಾಖಿಲಾಂಗೈಃ
ಸ್ಫುಟರುದ್ರಾಕ್ಷ ಕಲಾಪಕಮ್ರಕಂಠೈಃ ।
ಪರಿವೀತಮಧೀತ ಶೈವಶಾಸ್ತ್ರೈಃ
ಮುನಿರಾಯಾಂತಮಮುಂ ದದರ್ಶ ಶಿಷ್ಯೈಃ ॥ ೩೮

ತನ್ನ ಎಲ್ಲ ಅಂಗಗಳಿಗೂ ಬಿಳಿಯ ವಿಭೂತಿಯನ್ನು ಬಳಿದು ಕೊಂಡು, ಸ್ಫುಟವಾದ ರುದ್ರಾಕ್ಷಮಾಲೆಗಳಿಂದ ಕತ್ತನ್ನು ಅಲಂಕರಿಸಿಕೊಂಡು, ಶೈವಶಾಸ್ತ್ರಗಳನ್ನು ಅಧ್ಯಯನಮಾಡಿದ ಶಿಷ್ಯರೊಡನೆ ಬರುತ್ತಿರುವ ನೀಲಕಂಠಾಚಾರ್ಯನನ್ನು ಶ್ರೀಶಂಕರಮುನಿಗಳು ಕಂಡರು.

ಅಧಿಗತ್ಯ ಮಹರ್ಷಿಸನ್ನಿಕರ್ಷಂ
ಕವಿರಾತಿಷ್ಠಿಪದಾತ್ಮಪಕ್ಷಮೇಷಃ ।
ಶುಕತಾತಕೃತಾತ್ಮಶಾಸ್ತ್ರತಃ ಪ್ರಾಕ್
ಕಪಿಲಾಚಾರ್ಯ ಇವಾಽಽತ್ಮಶಾಸ್ತ್ರಮದ್ಧಾ ॥ ೩೯

ಆ ವಿದ್ವಾಂಸನು ಮಹರ್ಷಿಗಳಾದ ಆಚಾರ್ಯರ ಬಳಿಗೆ ಬಂದು ತನ್ನ ಪಕ್ಷವನ್ನು ಸ್ಫುಟವಾಗಿ ಸ್ಥಾಪಿಸಿದನು. ಶುಕಮುನಿಗಳ ತಂದೆಯಾದ ವ್ಯಾಸಮುನಿಗಳು ರಚಿಸಿದ ವೇದಾಂತಶಾಸ್ತ್ರಕ್ಕೂ ಮೊದಲು, ಕಪಿಲಾಚಾರ್ಯನು ರಚಿಸಿದ ಸಾಂಖ್ಯಮತದ ಆತ್ಮಶಾಸ್ತ್ರದಂತೆ ಆತನು ನಿರೂಪಿಸಿದ ಸಿದ್ಧಾಂತದ ಪರಿಸ್ಥಿತಿಯಾಗಿತ್ತು.

ವಿವರಣೆ: ಕಾಪಿಲ ಸಾಂಖ್ಯ ಶಾಸ್ತ್ರವು ವ್ಯಾಸರ ಬ್ರಹ್ಮಸೂತ್ರನಿರ್ಮಾಣದ ವರೆಗೆ ಸುಪ್ರಸಿದ್ಧವಾಗಿತ್ತು. ಅನಂತರ ಅದೇ ಪೂರ್ವಪಕ್ಷವಾಗಿ ವೇದಾಂತವು ಸಿದ್ಧಾಂತವೆನಿಸಿತು. ನೀಲಕಂಠಾಚಾರ್ಯನ ಮತವು ಸಾಂಖ್ಯಶಾಸ್ತ್ರದ ಹಾಗೆ ಪೂರ್ವಪಕ್ಷಸ್ಥಾನದಲ್ಲಿದೆ ಎಂದು ಅಭಿಪ್ರಾಯ.

ಭಗವನ್ ಕ್ಷಣಮಾತ್ರಮೀಕ್ಷ್ಯತಾಂ ತತ್
ಪ್ರಥಮಂ ತು ಸ್ಫುರದುಕ್ತಿಪಾಟವಂ ಮೇ ।
ಇತಿ ದೇಶಿಕಪುಂಗವಂ ನಿವಾರ್ಯ
ವ್ಯವದತ್ತೇನ ಸುರೇಶ್ವರಃ ಸುಧೀಶಃ ॥ ೪೦

ಆಗ ಪಂಡಿತೇಂದ್ರರಾದ ಸುರೇಶ್ವರಾಚಾರ್ಯರು ಶ್ರೀಶಂಕರರನ್ನು ಕುರಿತು, "ಗುರುಗಳೆ, ನನ್ನ ಉಕ್ತಿಪಾಟವವನ್ನು ಒಂದುಕ್ಷಣಕಾಲ ಮೊದಲು ನೋಡೋಣವಾಗಲಿ" ಎಂದು ಆಚಾರ್ಯರಿಗೆ ನಿವೇದಿಸಿ ನೀಲಕಂಠಾಚಾರ್ಯನೊಡನೆ ವಾದವನ್ನಾರಂಭಿಸಿದರು.

ಸುಮತೇ ತವ ಕೌಶಲಂ ವಿಜಾನೇ
ಸ್ವಯಮೇವೈಷ ಮುನಿಃ ಪ್ರತಿಬ್ರವೀತು |
ಇತಿ ತಂ ವಿನಿವರ್ತ್ಯ ನೀಲಕಂಠೋ
ಯತಿಕಂಠೀರವಸಂಮುಖಸ್ತದಾಽಽಸೀತ್ || ೪೧

ಹೀಗೆ ವಾದವನ್ನು ನಡೆಸುತ್ತಿದ್ದ ಸುರೇಶ್ವರರನ್ನು ಕುರಿತು ನೀಲಕಂಠನು " ಎಲೈ ಬುದ್ಧಿಶಾಲಿ, ನಿನ್ನ ವಾದಕೌಶಲವನ್ನು ಬಲ್ಲೆ. ಆದರೆ ನಿನ್ನ ಗುರುಗಳೇ ನನ್ನ ಆಕ್ಷೇಪಗಳಿಗೆ ಉತ್ತರಹೇಳಲಿ"ಎಂದು ಹೇಳಿ ಅವರನ್ನು ತಡೆದು ಶ್ರೀಶಂಕರಯತೀಶ್ವರರ ಎದುರಿಗೆ ತಿರುಗಿದನು.

ಪರಪಕ್ಷಬಿಸಾವಲೀಮರಾಲೈಃ
ವಚನೈಸ್ತಸ್ಯ ಮತಂ ಚಖಂಡ ದಂಡೀ |
ಅಥ ನೀಲಗಲಃ ಸ್ವಪಕ್ಷರಕ್ಷಾಂ
ಜಹದದ್ವೈತಮಪಾಕರಿಷ್ಣುರೂಚೇ || ೪೨

ತಾವರೆದಂಟುಗಳನ್ನು ತಿಂದುಬಿಡುವ ಹಂಸಗಳಂತಿದ್ದ ಯುಕ್ತಿವಚನಗಳಿಂದ ಆಚಾರ್ಯರು ನೀಲಕಂಠನ ಪಕ್ಷವನ್ನು ಖಂಡಿಸಿದರು. ಆತನು ಆಮೇಲೆ ತನ್ನ ಪಕ್ಷಸಾಧನೆಯನ್ನು ಬಿಟ್ಟು, ಅದ್ವೈತಸಿದ್ಧಾಂತವನ್ನು ನಿರಾಕರಿಸುವುದಕ್ಕಾಗಿ ಹೀಗೆಂದನು.

ಟಿಪ್ಪಣಿ:- ಶ್ರೀಕಂಠಾಚಾರ್ಯನು ತನ್ನ ಸೂತ್ರಭಾಷ್ಯದಲ್ಲಿ ಶಿವಪಾರಮ್ಯವನ್ನೊಪ್ಪಿ ವಿಶಿಷ್ಟಾದ್ವೈತಪಕ್ಷವನ್ನವಲಂಬಿಸಿದ್ದಾನೆ. ಅವನು ಭೇದವಾದಿ.

ಪ್ರಶಮಿಂಸ್ತದಸೀತಿ ಯಸ್ತ್ರಯೀಕೈಃ
ಕಥಿತೋಽರ್ಥಃ ಸ ನ ಯುಜ್ಯತೇ ತ್ವದಿಷ್ಟಃ |
ಅಭಿದಾ ತಿಮಿರಪ್ರಕಾಶಯೋಃ ಕಿಂ
ಘಟತೇ ಹಂತ ವಿರುದ್ಧಧರ್ಮವತ್ತ್ವಾತ್ || ೪೩

"ಯತಿಗಳೆ, ತತ್ತ್ವಮಸಿ -ಎಂಬ ವಾಕ್ಯದಲ್ಲಿ ತತ್ = ಆ ಬ್ರಹ್ಮವೇ, ಅಸಿ=ನೀನಾಗಿದ್ದೀಯೆ - ಎಂಬ ಅರ್ಥವನ್ನು ಉಪನಿಷತ್ತುಗಳು ಪ್ರತಿಪಾದಿಸುತ್ತವೆ- ಎಂಬುದು ನಿಮಗೆ ಸಂಮತವಷ್ಟೆ. ಜೀವೇಶ್ವರರಲ್ಲಿ ವಿರುದ್ಧಧರ್ಮಗಳಿರುವುದರಿಂದ ಅವರಿಗೆ ಅಭೇದವು ಯುಕ್ತವಲ್ಲ. ಅಯ್ಯೊ, ಎಲ್ಲಾದರೂ ಕತ್ತಲೆ -ಬೆಳಕು ಗಳಿಗೆ ಅಭೇದವು ಘಟಿಸುತ್ತದೆಯೆ?

ವಿವರಣೆ: ಜೀವನಲ್ಲಿ ಅಲ್ಪಜ್ಞತ್ವ, ಅಲ್ಪಶಕ್ತಿತ್ವ - ಮೊದಲಾದ ಧರ್ಮಗಳಿವೆ. ಈಶ್ವರನಲ್ಲಿ ಸರ್ವಜ್ಞತ್ವ, ಸರ್ವಶಕ್ತತ್ವ ಮೊದಲಾದ ಧರ್ಮಗಳಿವೆ. ಆದ್ದರಿಂದ ಇವರಿಗೆ ಅಭೇದವು ಯುಕ್ತವಲ್ಲ ವೆಂದು ಅಭಿಪ್ರಾಯ. ಕ = ಶಿರಸ್ಸು, ತ್ರಯೀಕ = ವೇದಶಿರಸ್ಸಾದ ಉಪನಿಷತ್ತು.

ರವಿ ತತ್ಪ್ರತಿಬಿಂಬಯೋರಿವಾಭಿದ್
ಘಟತಾಮಿತ್ಯಪಿ ತತ್ತ್ವತೋ ನ ವಾಚ್ಯಮ್ ।
ಮುಕುರೇ ಪ್ರತಿಬಿಂಬಿತಸ್ಯ ಮಿಥ್ಯಾ-
ತ್ವಗತೇರ್ವ್ಯೋಮಶಿವಾದಿದೇಶಿಕೋಕ್ತ್ಯಾ ॥ ೪೪

"ಸೂರ್ಯನಿಗೂ ಕನ್ನಡಿಯಲ್ಲಿರುವ ಸೂರ್ಯನ ಪ್ರತಿಬಿಂಬಕ್ಕೂ, ವಿರುದ್ಧಧರ್ಮಗಳಿದ್ದರೂ, ಅಭೇದವಿರುವಂತೆ ಜೀವಾತ್ಮ ಪರಮಾತ್ಮರಿಗೂ ನಿಜವಾದ ಅಭೇದವಿರಲಿ - ಎಂದು ನೀವು ಹೇಳುವಂತಿಲ್ಲ. ಏಕೆಂದರೆ, ಪ್ರತಿಬಿಂಬವು ಮಿಥ್ಯೆಯಾದದ್ದು. ಈ ಮಾತನ್ನು ವ್ಯೋಮಶಿವಾಚಾರ್ಯರೇ ಹೇಳಿದ್ದಾರೆ.

ವಿವರಣೆ : ಪ್ರತಿಬಿಂಬವು ಮಿಥ್ಯೆಯಾದ್ದರಿಂದ ಮಿಥ್ಯಾವಸ್ತುವಿನೊಡನೆ ಅಭೇದವನ್ನು ಹೇಳುವುದು ಸರಿಯಲ್ಲ. ಜೀವಾತ್ಮನು ಸತ್ಯವಸ್ತು-ಆದ್ದರಿಂದ ಅಭೇದವು ಯುಕ್ತವಲ್ಲ-ಎಂದು ಅಭಿಪ್ರಾಯ.

ಮುಕುರಸ್ಥಮುಖಸ್ಯ ಬಿಂಬವಕ್ತ್ರಾತ್
ಭಿದಯಾ ಪಾರ್ಶ್ವಗಲೋಕ ಲೋಕನೇನ ।
ಪ್ರತಿಬಿಂಬಿತಮಾನನಂ ಮೃಷಾ ಸ್ಯಾತ್
ಇತಿ ಭಾವತ್ಕಮತಾನುಗೋಕ್ತಿಕಾ ಚ ॥ ೪೫

"ಕನ್ನಡಿಯಲ್ಲಿ ಮುಖವು ಪ್ರತಿಬಿಂಬಿಸಿದಾಗ ಪಕ್ಕದಲ್ಲಿರತಕ್ಕವರು ಬಿಂಬಪ್ರತಿಬಿಂಬ ಗಳೆರಡನ್ನೂ ಕಾಣುತ್ತಾರೆ. ಆದ್ದರಿಂದ ಪ್ರತಿಬಿಂಬಿತವಾದ ಮುಖವು ಸತ್ಯವಲ್ಲ, ಮಿಥ್ಯೆಯೇ ಸರಿ -ಎಂದು ನಿಮ್ಮವರೂ ಹೇಳಿದ್ದಾರೆ.

ವಿವರಣೆ : ಪ್ರತಿಬಿಂಬಿತಮುಖವು ಸತ್ಯವಾದರೆ ಒಬ್ಬನಿಗೆ ಎರಡುಮುಖಗಳಿವೆಯೆಂದು ಹೇಳಬೇಕಾದೀತು. ಕನ್ನಡಿಯನ್ನು ತೆಗೆದು ಹಾಕಿದಾಗ ಪ್ರತಿಬಿಂಬವು ಇರಬೇಕಾದೀತು.

ನ ಚ ಮಾಯಿಕಜೀವನಿಷ್ಠ ಮೌಢ್ಯೇ-
ಶ್ವರಸಾರ್ವಜ್ಞ ವಿರುದ್ಧಧರ್ಮಬಾಧಾತ್ ।
ಉಭಯೋರಪಿ ಚಿತ್ಸ್ವರೂಪತಾಯಾ
ಅವಿಶೇಷಾದಭಿದೈವ ವಾಸ್ತವೀತಿ ॥ ೪೬

"ಇನ್ನು ಜೀವನಿಷ್ಠವಾದ ಮೌಢ್ಯವೂ ಈಶ್ವರನಿಷ್ಠವಾದ ಸರ್ವಜ್ಞತ್ವವೂ ಮಾಯಾಕಲ್ಪಿತವಾದವು. ಮಾಯಿಕವಾದ್ದರಿಂದ ಆ ವಿರುದ್ಧಧರ್ಮಗಳು ಬಾಧಿತವಾಗುತ್ತವೆ.

ಅವನ್ನು ಕಿತ್ತು ಹಾಕಿದರೆ ಜೀವೇಶ್ವರರಲ್ಲಿ ಚೈತನ್ಯಸ್ವರೂಪವೊಂದೇ ಉಳಿದುಕೊಳ್ಳುತ್ತದೆ. ಆಗ ವಿಶೇಷವೇನೂ ಇಲ್ಲದ್ದರಿಂದ ಅಭೇದವು ಸತ್ಯವೇಎಂದು ನೀವು ಹೇಳುವುದಾದರೆ, ಅದು ಯುಕ್ತವಲ್ಲ.

ನ ಹಿ ಮಾನಶತೈಃ ಸ್ಥಿತಸ್ಯ ಬಾಧಾಽ -
ಪರಥಾ ದತ್ತಜಲಾಂಜಲಿರ್ಭಿದಾ ಸ್ಯಾತ್ |
ವಿಪರೀತಹಯತ್ವ ಗೋತ್ವಬಾಧಾತ್
ಹಯಪಶ್ವೋರ್ನಿಜರೂಪ ಕೈಕ್ಯಯುಕ್ತ್ಯಾ || ೪೭

"ಏಕೆಂದರೆ, (ಜೀವನಲ್ಲಿ ಮೌಢ್ಯವೂ ಈಶ್ವರನಲ್ಲಿ ಸರ್ವಜ್ಞತ್ವವೂ ವಾಸ್ತವ ವಾಗಿಯೇ ಇವೆ) ನೂರಾರು ಪ್ರಮಾಣಗಳಿಂದ ಸಿದ್ಧವಾಗುವ ಇದು ಬಾಧಿತವಾಗುವುದಿಲ್ಲ. ಬಾಧಿತವಾದರೆ ಭೇದವೆಂಬುದಕ್ಕೆ ಸರ್ವತ್ರ ಜಲತರ್ಪಣವನ್ನು ಕೊಡಬೇಕಾದೀತು(ಭೇದವೆಂಬ ಪದಾರ್ಥವೇ ಲೋಕದಲ್ಲಿ ಇಲ್ಲವಾದೀತು.) ಕುದುರೆಯಲ್ಲಿ ಅಶ್ವತ್ವ, ಹಸುವಿನಲ್ಲಿ ಗೋತ್ವ ಎಂಬ ವಿರುದ್ಧಧರ್ಮಗಳನ್ನು ತೆಗೆದು ಹಾಕಿದರೆ, ಎರಡೂ ನಿಜರೂಪದಿಂದ (ಪಶುವಾದ್ದರಿಂದ) ಅಶ್ವ, ಗೋವು - ಎರಡೂ ಒಂದೇ ಎನ್ನ ಬೇಕಾದೀತು.

ಯದಿ ಮಾನಗತಸ್ಯ ಹಾನಮಿಷ್ಟಂ
ನ ಭವೇತ್ತರ್ಹಿ ನ ಚೇಶ್ವರೋಽಹಮಸ್ಮಿ |
ಇತಿ ಮಾನಗತಸ್ಯ ಜೀವಸರ್ವೇ-
ಶ್ವರಭೇದಸ್ಯ ನ ಹಾನಮಪ್ಯಭೀಷ್ಟಮ್ || ೪೮

"ಪ್ರತ್ಯಕ್ಷಾದಿಪ್ರಮಾಣಗಳಿಂದ ಸಿದ್ಧವಾದ ಗವಾಶ್ವಗಳ ಭೇದವನ್ನು ತಳ್ಳಿಹಾಕುವುದು ಇಷ್ಟವಲ್ಲವಾದಮೇಲೆ, 'ನಾನು ಈಶ್ವರನಲ್ಲ' ಎಂದು ಅನುಭವಸಿದ್ಧವಾದದ್ದನ್ನು ತಳ್ಳಿಹಾಕುವುದೂ ಯುಕ್ತವಲ್ಲ. ಏವಂ ಚ ಜೀವನಿಗೂ ಸರ್ವೇಶ್ವರನಿಗೂ ಪ್ರಮಾಣಸಿದ್ಧವಾದ ಭೇದವೂ ಬಾಧಿತವಾಗುತ್ತದೆಯೆಂಬುದು ಯುಕ್ತಿಸಂಮತವಾಗುವುದಿಲ್ಲ"

ಇತಿ ಯುಕ್ತಿಶತೈಃ ಸ ನೀಲಕಂಠಃ
ಕವಿರಕ್ಷೋಭಯದದ್ವಿತೀಯಪಕ್ಷಮ್ |
ನಿಗಮಾಂತವಚಃ ಪ್ರಕಾಶ್ಯಮಾನಂ
ಕಲಭಃ ಪದ್ಮವನಂ ಯಥಾ ಪ್ರಫುಲ್ಲಮ್ || ೪೯

ಈ ಪ್ರಕಾರವಾಗಿ ನೂರಾರು ಯುಕ್ತಿಗಳಿಂದ ವಿದ್ವಾಂಸನಾದ ನೀಲಕಂಠಾಚಾರ್ಯನು (ಉಪನಿಷದ್ವಚನಗಳಿಂದ) ಸ್ಪಷ್ಟವಾಗಿ ಪ್ರಕಾಶಿಸುವ ಅದ್ವೈತಸಿದ್ಧಾಂತವನ್ನು ದೂಷಿಸಿದನು.

ಅರಳಿದ ಪದ್ಮವನವನ್ನು ಆನೆಯ ಮರಿಯು ನುಗ್ಗಿ ಕಲಕಿ ರಾಚಿಬಿಡುವಂತೆ ಕ್ಷೋಭೆಗೊಳಿಸಿದನು.

ಅಥ ನೀಲಗಲೋಕ್ತದೋಷಜಾಲೋ
ಭಗವಾನೇವಮವೋಚದಸ್ತು ಕಾಮಮ್ |
ಶೃಣು ತತ್ತ್ವಮಸೀತಿ ಸಂಪ್ರದಾಯ-
ಶ್ರುತಿ ವಾಕ್ಯಸ್ಯ ಪರಾವರೇಽಭಿಸಂಧಿಮ್ || ೫೦

ಹೀಗೆ ನೀಲಕಂಠಾಚಾರ್ಯನು ಹೇಳಿದ ದೋಷರಾಶಿಗಳನ್ನು ಕೇಳಿದಮೇಲೆ ಭಗವತ್ಪಾದರು ನುಡಿದರು- "ಅದಿರಲಿ; ತತ್ತ್ವಮಸಿ- ಎಂಬ ಸಂಪ್ರದಾಯದ ಶ್ರುತಿವಾಕ್ಯಕ್ಕೆ ಅಖಂಡೈಕ ರಸವಾದ ಚೈತನ್ಯದಲ್ಲಿ ತಾತ್ಪರ್ಯವಿದೆ. ಅದನ್ನು ಕೇಳಿರಿ.

ನನು ವಾಚ್ಯಗತಾ ವಿರುದ್ಧತಾಧೀ-
ರಿಹ ಸೋಽಸಾವಿತಿವದ್ವಿರೋಧಹಾನೇ |
ಅವಿರೋಧಿ ತು ವಾಚ್ಯಮಾದದೈಕ್ಯಂ
ಪದಯುಗ್ಮಂ ಸ್ಫುಟಮಾಹ ಕೋ ವಿರೋಧಃ || ೫೧

"ತತ್, ತ್ವಂ - ಎಂಬ ಪದಗಳ ವಾಚ್ಯಾರ್ಥವನ್ನು ಗ್ರಹಿಸಿದಾಗ ವಿರೋಧಜ್ಞಾನವು ಬರುತ್ತದೆ. ಆದರೆ 'ಅವನೇ ಇವನು' ಎಂಬ ಪ್ರತ್ಯಭಿಜ್ಞಾಸ್ಥಳದಲ್ಲಿರುವಂತೆ(ಭಾಗಲಕ್ಷಣೆಯಿಂದ) ವಿರೋಧವು ಹೋಗಿಬಿಡುತ್ತದೆ. ತತ್, ತ್ವಂ -ಎಂಬ ಎರಡು ಪದಗಳು (ಭಾಗಲಕ್ಷಣೆಯಿಂದ) ಅವಿರುದ್ಧವಾದ ವಾಚ್ಯಾಂಶವನ್ನು( ಚೈತನ್ಯವನ್ನು) ಗ್ರಹಿಸಿ ಐಕ್ಯವನ್ನು ಬೋಧಿಸುತ್ತವೆ. ಆಗ ವಿರೋಧವೆಲ್ಲಿರುತ್ತದೆ?

ವಿವರಣೆ : ಚೈತ್ರನೆಂಬುವನನ್ನು ಕಂಡಾಗ 'ಕಾಶಿಯಲ್ಲಿ ನೋಡಿದ ಚೈತ್ರನೇ ಇವನು' ಎಂದಾಗುವ ಜ್ಞಾನಕ್ಕೆ ಪ್ರತ್ಯಭಿಜ್ಞೆ ಎಂದು ಹೆಸರು. ಕಾಶಿಯಲ್ಲಿ ಕಂಡಾಗ ಚೈತ್ರನ ಕಾಲ, ದೇಶ, ವೇಷಗಳು ಬೇರೆ. ಇನ್ನೊಂದು ಸ್ಥಳದಲ್ಲಿ ಕಂಡಾಗ ಕಾಲ, ದೇಶ, ವೇಷಗಳು ಬೇರೆ. ಕಾಲ, ದೇಶ, ವೇಷಗಳೆಲ್ಲವೂ ಉಪಾಧಿಗಳು. ಅವನ್ನು ಕೈಬಿಟ್ಟಾಗ ವ್ಯಕ್ತಿಯೊಬ್ಬನೇ ಆಗಿರುತ್ತಾನೆ. ಅದು ಯಥಾರ್ಥಜ್ಞಾನವೇ ಸರಿ. ಹಾಗೆಯೇ ಜೀವನ ಮೌಢ್ಯಾದಿಗಳನ್ನೂ ಈಶ್ವರನ ಸರ್ವಜ್ಞತ್ವಾದಿಗಳನ್ನೂ ಭಾಗಲಕ್ಷಣೆಯಿಂದ ತಳ್ಳಿದಾಗ ಈರ್ವರ ಚೈತನ್ಯವೂ ಒಂದೇ ಆಗಿರುತ್ತದೆ. ಆದ್ದರಿಂದ ಅವೆರಡು ಪದಾರ್ಥಗಳ ಐಕ್ಯದಲ್ಲಿ ವಿರೋಧವೇನೂ ಇಲ್ಲ.

ಅವಿರೋಧಿ ವಾಚ್ಯಮಾದದತ್ -ವಾಚ್ಯವೆಂದರೆ ವಾಚ್ಯಾಂಶವಾದ ಲಕ್ಷ್ಯವೆಂದರ್ಥ. ಇದೇ ಚೈತನ್ಯ. ಭಾಗಲಕ್ಷಣೆಯಿಂದ ಇದು ಪ್ರತೀತವಾಗುತ್ತದೆ. ಈ ಲಕ್ಷಣೆಗೆ ಭಾಗತ್ಯಾಗಲಕ್ಷಣೆಯೆಂದೂ ಜಹದಜಹಲ್ಲಕ್ಷಣೆಯೆಂದೂ ಹೆಸರಿದೆ. " ಚೈತನ್ಯವು ವಾಚ್ಯವೇ, ಲಕ್ಷಣಾ ಬೇಡ" ಎಂಬ ಪಕ್ಷಾಂತರವೂ ವೇದಾಂತಪರಿಭಾಷಾ - ಎಂಬ ಗ್ರಂಥದಲ್ಲಿದೆ. ಆಗ ವಾಚ್ಯಾಂಶವೆಂದರೆ ವಾಚ್ಯವಾಗುವ ಚೈತನ್ಯವೇ.

ಯದಿಹೋಕ್ತಮತಿಪ್ರಸಂಜನಂ ಭೋ
ನ ಭವೇನ್ನೋ ಹಿ ಗವಾಶ್ವಯೋಃ ಪ್ರಮಾಣಮ್ |
ಅಭಿದಾಘಟಕಂ ತಯೋರ್ಯತಃ ಸ್ಯಾತ್
ಉಭಯೋರ್ಲಕ್ಷಣಯಾಽಭಿದಾನುಭೂತಿಃ || ೫೨

"ನೀಲಕಂಠಾಚಾರ್ಯರೆ, ಹೀಗೆ ಹೇಳಿದರೆ ಗವಾಶ್ವಗಳಲ್ಲಿ ನೀವು ಆಪಾದಿಸಿದ ಅತಿಪ್ರಸಕ್ತಿಯೇನೂ ಬರುವುದಿಲ್ಲ. ಏಕೆಂದರೆ, ಗೋವು - ಅಶ್ವ ಎರಡೂ ಒಂದೇ ಎಂದು ಹೇಳುವ ಪ್ರಾಮಾಣಿಕವಾಕ್ಯವು ಯಾವುದೂ ಇಲ್ಲ. ಇಲ್ಲದಾಗ ಲಕ್ಷಣೆಯ ಪ್ರಸಕ್ತಿಯೂ ಇಲ್ಲ. ಅಭೇದಾನುಭವವೂ ಇಲ್ಲ.

ವಿವರಣೆ : ಜೀವೇಶ್ವರರಿಗೆ ಅಭೇದವನ್ನು ಹೇಳುವ ತತ್ತ್ವಮಸಿ ಮುಂತಾದ ವೇದವಾಕ್ಯಗಳಿವೆ. ಆದ್ದರಿಂದ ಲಕ್ಷಣಾದಿಂದ ಸಮರ್ಥಿಸುತ್ತೇವೆ. ಗೋವನ್ನು ಅಶ್ವವೆಂದೂ ಅಶ್ವವನ್ನು ಗೋವೆಂದೂ ಯಾರು ಹೇಳುವುದಿಲ್ಲ. ಆದ್ದರಿಂದ ಅಲ್ಲಿ ಲಕ್ಷಣಾಪರ್ಯಂತ ಹೋಗಕೂಡದು.

ನನು ಮೌಢ್ಯಸಮಸ್ತವಿತ್ತ್ವಧರ್ಮಾ-
ನ್ವಿತಜೀವೇಶ್ವರರೂಪತೋಽತಿರಿಕ್ತಮ್ |
ಉಭಯೋಃ ಪರಿನಿಷ್ಠಿತಂ ಸ್ವರೂಪಂ
ಬತ ನಾಸ್ತ್ಯೇವ ಯತೋಽತ್ರ ಲಕ್ಷಣಾ ಸ್ಯಾತ್ || ೫೩

"ಒಂದು ವೇಳೆ ನೀವು " ಮೌಢ್ಯವಿಶಿಷ್ಟಜೀವಸ್ವರೂಪಕ್ಕಿಂತಲೂ ಸರ್ವಜ್ಞತ್ವವಿಶಿಷ್ಟವಾದ ಈಶ್ವರಸ್ವರೂಪಕ್ಕಿಂತಲೂ ಅತಿರಿಕ್ತವಾಗಿ, ಉಭಯರಿಗೂ ಸ್ವತಃಸಿದ್ಧವಾದ ಚೈತನ್ಯಸ್ವರೂಪವೇ ಇಲ್ಲ. ಹೀಗಿರುವಾಗ ಲಕ್ಷಣೆಗೆ ಅವಕಾಶವೆಲ್ಲಿದೆ ?" ಎಂದು ಕೇಳಬಹುದು.

ಇತಿ ಚೇನ್ನ ಸಮೀಕ್ಷ್ಯಮಾಣಜೀವೇ-
ಶ್ವರರೂಪಸ್ಯ ಚ ಕಲ್ಪಿತತ್ವಯುಕ್ತ್ಯಾ |
ತದಧಿಷ್ಠಿತ ಸತ್ಯವಸ್ತುನೋಽದ್ಧಾ
ನಿಯಮೇನೈವ ಸದಾಽಭ್ಯುಪೇಯತಾಯಾಃ || ೫೪

"ಅದು ಸರಿಯಲ್ಲ; ಗೋಚರಿಸುವ ಮೌಢ್ಯಾದಿಧರ್ಮವೂ ಅದಕ್ಕೆ ವಿರುದ್ಧವಾದ ಸರ್ವಜ್ಞತ್ವಾದಿಧರ್ಮವೂ ಜೀವೇಶ್ವರರಲ್ಲಿ ಕಲ್ಪಿತವಾದವುಗಳೆಂದು ಯುಕ್ತಿಯಿಂದ ಸಿದ್ಧವಾಗುತ್ತದೆ. ಆಗ ಆ ಧರ್ಮಗಳಿಗೆ ಅಧಿಷ್ಠಾನವಾದ ಸತ್ಯವಸ್ತುವಿದೆಯೆಂದು ನಿಯತವಾಗಿ ಒಪ್ಪಲೇ ಬೇಕಾಗುತ್ತದೆ. (ಆ ಸತ್ಯವಸ್ತುವೇ ಚೈತನ್ಯ -ಪರಬ್ರಹ್ಮ).

ವಿವರಣೆ :೧. ಮೌಢ್ಯಾದಿಧರ್ಮಗಳು ಜೀವನಲ್ಲಿ ಕಲ್ಪಿತವಾದವುಗಳು. ದೃಶ್ಯ(ಜ್ಞೇಯ) ವಾದ್ದರಿಂದ. ಶುಕ್ತಿಯಲ್ಲಿ ಕಲ್ಪಿತವಾದ ರಜತದಂತೆ -ಇತ್ಯಾದಿಯುಕ್ತಿಗಳು.

೨. ಈ ಯುಕ್ತಿಗಳಿಗೆ ಪ್ರಮಾಣಭೂತವಾದ ಉಪನಿಷದ್ವಾಕ್ಯಗಳು - ಅಪ್ರಾಣೋ ಹ್ಯಮನಾಃ ಶುಭ್ರಃ, ಅಸಂಗೋ ಹ್ಯಯಂ ಪುರುಷಃ, ಪ್ರಜ್ಞಾನಂ ಬ್ರಹ್ಮ, ಅಶಬ್ದಮಸ್ಪರ್ಶಮರೂಪಮವ್ಯಯಂ, ಯತ್ತದದ್ರೇಶ್ಯಮಗ್ರಾಹ್ಯಮಗೋತ್ರಮವರ್ಣಮಚಕ್ಷುಃಶ್ರೋತ್ರಂ - ಇತ್ಯಾದಿ. ಇವುಗಳಿಂದ ಸಂಗರಹಿತವೂ ನಿರಂಜನವೂ ನಿರ್ಗುಣವೂ ಆದ ಚೈತನ್ಯವಿದೆಯೆಂದು ಸ್ಪಷ್ಟವಾಗುತ್ತದೆ.

ಭವತಾಽಪಿ ತಥಾ ಹಿ ದೃಶ್ಯದೇಹಾ-
ದ್ಯಹಮಂತಸ್ಯ ಜಡತ್ವಮಭ್ಯುಪೇಯಮ್ |
ಪರಿಶಿಷ್ಟಮುಪೇಯಮೇಕರೂಪಂ
ನನು ಕಿಂಚಿದ್ಧಿ ತದೇವ ತಸ್ಯ ರೂಪಮ್ || ೫೫

"ನೀವೂ ಸಹ 'ಅಹಂ'ಎಂದಾಗ ಆತ್ಮಪರ್ಯಂತಗೋಚರಿಸುವ ದೇಹಾದಿಗಳಿಗೆ ಜಡತ್ವವನ್ನು ಒಪ್ಪಲೇಬೇಕು. ಅವಶಿಷ್ಟವಾಗಿ ಏಕರೂಪವಾದ ಒಂದು ಸತ್ಯ ವಸ್ತುವನ್ನು(ಜೀವಾತ್ಮನನ್ನು) ಅಂಗೀಕರಿಸಬೇಕು. ಅದೇ ಕಲ್ಪಿತದೇಹಾದಿಗಳಿಗೆ ಅಧಿಷ್ಠಾನರೂಪವಾದ ವಸ್ತು.

ವಿವರಣೆ: ದೇಹೇಂದ್ರಿಯಾದಿಗಳೆಲ್ಲವನ್ನೂ ಕಲಬೆರಕೆಮಾಡಿಕೊಂಡು 'ನಾನು ಎಂದು ಲೋಕ ವ್ಯವಹಾರವಿದೆ. ದೇಹಾದಿಗಳು ಜಡವಾದ್ದರಿಂದ ಇವುಗಳಿಗೆ ಅಧಿಷ್ಠಾನವಾದ ಆತ್ಮವನ್ನೊಪ್ಪ ಬೇಕಾಗುತ್ತದೆ. 'ನಾನು ಮನುಷ್ಯ'ಎಂದು ಪ್ರತ್ಯಕ್ಷಸಿದ್ಧವಾದ್ದನ್ನು ನೀವು ತಳ್ಳಿಹಾಕುತ್ತೀರಿ. ಈ ಕಲ್ಪಿತವ್ಯವಹಾರವು ನಿಮಗೂ ಇದ್ದೇ ಇದೆ-ಎಂದು ಅಭಿಪ್ರಾಯ. 'ನಾನು'ಎಂದರೆ ಜಡವಾದ ಈ ದೇಹವಲ್ಲವೆಂಬುದು ಉಭಯ ಸಂಮತ.

ಜಗತೋಽಸತ ಏವಮೇವ ಯುಕ್ತ್ಯಾ
ತ್ವನಿರೂಪ್ಯತ್ವತ ಏವ ಕಲ್ಪಿತತ್ವಾತ್ |
ತದಧಿಷ್ಠಿತಭೂತರೂಪಮೇಷ್ಯಂ
ನನು ಕಿಂಚಿದ್ಧಿ ತದೀಶ್ವರಸ್ಯ ಸತ್ಯಮ್ || ೫೬

"ಹೀಗೆಯೇ ಅಸತ್ತಾಗಿರುವ ಜಗತ್ತು ಅನಿರ್ವಚನೀಯವೆಂಬ ಯುಕ್ತಿಯಿಂದ ಕಲ್ಪಿತವೆಂದು ಸಿದ್ಧವಾಗುತ್ತದೆ. ಈ ಕಲ್ಪಿತಜಗತ್ತಿಗೆ ಅಧಿಷ್ಠಾನಸ್ವರೂಪದ ಒಂದು ವಸ್ತುವನ್ನು ಅಂಗೀಕರಿಸಬೇಕಾಗುತ್ತದೆ. ಇದೇ ಈಶ್ವರನ ಸತ್ಯಸ್ವರೂಪ.

ವಿವರಣೆ: ಹಗ್ಗವನ್ನು ಹಾವೆಂದು ಭ್ರಮಿಸಿದಾಗ ಹಾವು ಸತ್ ಅಲ್ಲ, ಅಸತ್ ಅಲ್ಲ; ಆದ್ದರಿಂದ ಅನಿರ್ವಚನೀಯವೆಂದು ಹೇಳಬೇಕು. ಯಾವುದು ಅನಿರ್ವಚನೀಯವೋ ಅದು ಕಲ್ಪಿತ. ಹಾವು ಎಂಬ ಕಲ್ಪನೆಗೆ ಅಧಿಷ್ಠಾನ ವಾದದ್ದು ಹಗ್ಗ. ಅಂತೆಯೇ ಜಗತ್ತಿಗೆ ಅಧಿಷ್ಠಾನವಾದದ್ದು ಬ್ರಹ್ಮ.

ತದಿಹ ಶ್ರುತಿಗೋಭಯಸ್ವರೂಪೇ
ನಿರುಪಾಧೌ ನ ಹಿ ಮೌಢ್ಯಸರ್ವವಿತ್ತ್ವೇ |
ನ ಜಪಾಕುಸುಮಾತ್ತಲೋಹಿತಿಮ್ನಃ
ಸ್ಫಟಿಕೇ ಸ್ಯಾನ್ನಿರುಪಾಧಿಕೇ ಪ್ರಸಕ್ತಿಃ || ೫೭

"ಆದ್ದರಿಂದ ಶ್ರುತಿಗಮ್ಯವಾಗಿ ಲೋಕದಲ್ಲಿ ಜೀವೇಶ್ವರಸ್ವರೂಪದಲ್ಲಿರುವ ನಿರುಪಾಧಿಕವಾದ ಪರಬ್ರಹ್ಮದಲ್ಲಿ ಮೌಢ್ಯ, ಸರ್ವಜ್ಞತ್ವವೆಂಬಿವು ಇಲ್ಲವೇ ಇಲ್ಲ. ಜಪಾಕುಸುಮದ ಕೆಂಪುಬಣ್ಣವು ನಿರುಪಾಧಿಕವಾದ ಸ್ವಚ್ಛಸ್ಫಟಿಕದಲ್ಲಿ ಅಂಟಿ ಕೊಂಡಿರುವುದಿಲ್ಲ.

ಅಪಿ ಭೇದಧಿಯೋ ಯಥಾರ್ಥತಾಯಾಂ
ನ ಭಯಂ ಭೇದದೃಶಃ ಶ್ರುತಿರ್ಬ್ರವೀತು |
ವಿಪರೀತದೃಶೋ ಹ್ಯನರ್ಥಯೋಗೋ
ನ ಭಿದಾಧೀರ್ವಿಪರೀತಧೀರ್ಯತಃ ಸ್ಯಾತ್ || ೫೮

"ಅಲ್ಲದೆ ದ್ವೈತಬುದ್ಧಿಯು ಯಥಾರ್ಥವಾಗಿದ್ದರೆ, ಯಾವಾತನಿಗೆ ದ್ವೈತದೃಷ್ಟಿ ಇದೆಯೋ ಆತನಿಗೆ ಮಹತ್ತರವಾದ ಭಯವಿದೆಯೆಂದು ಶ್ರುತಿಯು ಹೇಳುತ್ತಿರಲಿಲ್ಲ. ಯಾವಾತನಿಗೆ (ಸತ್ಯಕ್ಕೆ ವಿರುದ್ಧವಾದ) ವಿಪರೀತದೃಷ್ಟಿ ಇದೆಯೋ ಆತನಿಗೆ ಅನರ್ಥವಾಗಬೇಕಾದದ್ದು ಯುಕ್ತ. (ನಿಮ್ಮ ಪಕ್ಷದಲ್ಲಿ) ದ್ವೈತಬುದ್ಧಿಯು ವಿಪರೀತದೃಷ್ಟಿಯಾಗುವುದಿಲ್ಲವಷ್ಟೆ.

ವಿವರಣೆ : ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ. (ಬೃಹ. ೪-೪-೧೯), ಯ ಉದರಮಂತರಂ ಕುರುತೇ. ಅಥ ತಸ್ಯ ಭಯಂ ಭವತಿ(ತೈ. ಬ್ರಹ್ಮ ೭) -ಅದ್ವೈತಬುದ್ಧಿ ಇಲ್ಲದವನಿಗೆ ವಿಪತ್ತಾಗುವುದೆಂದು ಇವು ತಿಳಿಸುತ್ತವೆ.

ಅಭಿದಾ ಶ್ರುತಿಗಾಽಪ್ಯತಾತ್ತ್ವಿಕೀ ಚೇತ್
ಪುರುಷಾರ್ಥಶ್ರವಣಂ ನ ತದ್ಗತೌ ಸ್ಯಾತ್ |
ಅಶಿವೋಽಹಮಿತಿ ಭ್ರಮಸ್ಯ ಶಾಸ್ತ್ರಾತ್
ವಿಧುಮಾನತ್ವಗತೇರಿವಾಸ್ತಿ ಬಾಧಃ || ೫೯

"(ಜೀವಾತ್ಮ ಪರಮಾತ್ಮರ) ಅಭೇದವು ಶ್ರುತಿಬೋಧಿತವಾದರೂ ಯಥಾರ್ಥವಲ್ಲ ವೆನ್ನುವುದಾದರೆ (ಅಭೇದಶ್ರುತಿಗೆ ಬೇರೆ ರೀತಿಯಲ್ಲಿ ಅರ್ಥಹೇಳಬೇಕೆನ್ನು ವುದಾದರೆ), ಅಭೇದಜ್ಞಾನದಿಂದ ಪುರುಷಾರ್ಥವಾದ ಮೋಕ್ಷವು ದೊರೆಯುತ್ತದೆಯೆಂಬ ವಚನವು ಇರಬಾರದಾಗಿತ್ತು. 'ನಾನು ಶಿವನಲ್ಲ' ಎಂಬುದು ಭ್ರಮೆ -ಅಜ್ಞಾನ. ಚಂದ್ರನ ಗಾತ್ರವು ಚಿಕ್ಕದು ಎಂಬ ಭ್ರಮೆಯು ಜ್ಯೌತಿಷಶಾಸ್ತ್ರಜ್ಞಾನದಿಂದ ಹೇಗೆ ಬಾಧಿತವಾಗುತ್ತದೆಯೋ ಹಾಗೆ,

(ತತ್ತ್ವಮಸಿ -ಮುಂತಾದ)ಶಾಸ್ತ್ರವಚನದಿಂದ ಈ ಭ್ರಮೆಯು ಬಾಧಿತವಾಗಿ ಹೊರಟು ಹೋಗುತ್ತದೆ.

ತದಬಾಧಿತ ಕಲ್ಪನಾಕ್ಷತಿರ್ನೋ
ಶ್ರುತಿಸಿದ್ಧಾತ್ಮಪರೈಕ್ಯಬುದ್ಧಿಬಾಧಃ |
ನಿಗಮಾತ್ ಪ್ರಬಲಂ ವಿಲೋಕ್ಯತೇ ಮಾ-
ಕರಣಂ ಯೇನ ತದೀರಿತಸ್ಯ ಬಾಧಃ || ೬೦

ಆದ್ದರಿಂದ 'ನಾನು ಶಿವನಲ್ಲ'ಎಂದು ಲೋಕದಲ್ಲಿರುವ ಅಬಾಧಿತ ಕಲ್ಪನೆಯೆಂಬುದೇ ಬಾಧಿತವಾಗಿ ಬಿಡುತ್ತದೆ ! ಶ್ರುತಿಸಿದ್ಧವಾದ ಜೀವಾತ್ಮ ಪರಮಾತ್ಮರ ಏಕತಾಬುದ್ಧಿಯು ಬಾಧಿತವಾಗುವುದಿಲ್ಲ. ವೇದೋಕ್ತವಾದ್ದನ್ನೂ ಬಾಧಿಸುವ, ವೇದಕ್ಕಿಂತಲೂ ಪ್ರಬಲವಾದ ಇನ್ನೊಂದು ಪ್ರಮಾಣವು ಕಂಡುಬರುವುದೇನು ?" ಎಂದರು.

ಟಿಪ್ಪಣಿ -: ವಿಲೋಕ್ಯತೇ ಎಂಬಲ್ಲಿ ಕಾಕುಧ್ವನಿಯಿಂದ ವಿಲೋಕ್ಯತೇ ಕಿಂ? ಎಂದು ಪ್ರಶ್ನೆ ಇದೆ. ಮಾಕರಣ =ಪ್ರಮಾಕರಣ, ಪ್ರಮಾಣ. ವಿಲೋಕ್ಯತೇ ಕಿಂ ಕರಣಂ - ಎಂದು ಪಾಠಾಂತರವಿದೆ. ಇಲ್ಲಿ 'ಶಿವ' ಎಂದರೆ ಪರಬ್ರಹ್ಮ - ಚೈತನ್ಯ ಎಂದರ್ಥ. ಸಗುಣನಾದ ಶಂಕರನೆಂದು ಅರ್ಥವಲ್ಲ.

ಆಗ ನೀಲಕಂಠಾಚಾರ್ಯರು ಹೇಳಿದರು -

ಋಷಿಭಿರ್ಬಹುಧಾ ಪರಾತ್ಮತತ್ತ್ವಂ
ಪುರುಷಾರ್ಥಸ್ಯ ಚ ತತ್ತ್ವಮಪ್ಯಥೋಕ್ತಮ್ |
ತದಪಾಸ್ಯ ನಿರೂಪಿತಪ್ರಕಾರೋ
ಭವತಾಽಸೌ ಕಥಮೇಕ ಏವ ಧಾರ್ಯಃ || ೬೧

ನೀಲಕಂಠಾಚಾರ್ಯ — (ಕಪಿಲಕಣಾದಾದಿ) ಋಷಿಗಳು ಈಶ್ವರನಿಗಿಂತ ಅನ್ಯನಾದ ಜೀವಾತ್ಮನ ಸ್ವರೂಪವನ್ನೂ ಪುರುಷಾರ್ಥವಾದ ಮೋಕ್ಷದ ಸ್ವರೂಪವನ್ನೂ ಬಹುಪ್ರಕಾರವಾಗಿ ಹೇಳಿದ್ದಾರೆ. ಅವೆಲ್ಲವನ್ನೂ ಬಿಟ್ಟು ನೀವು ಹೇಳಿದ ಪ್ರಕಾರವನ್ನು ಮಾತ್ರ ಏಕೆ ಸ್ವೀಕರಿಸಬೇಕು?

ಟಿಪ್ಪಣಿ :- ಪರಾತ್ಮತತ್ತ್ವಂ -ಪರಮಾತ್ಮಜೀವಾತ್ಮರ ಸ್ವರೂಪವನ್ನು - ಎಂದೂ ಅರ್ಥಹೇಳಬಹುದು.

ಪ್ರಬಲಶ್ರುತಿಮಾನತೋ ವಿರೋಧೇ
ಬಲಹೀನಸ್ಮೃತಿವಾಚ ಏವ ನೇಯಾಃ |
ಇತಿ ನೀತಿಬಲಾತ್ತ್ರಯೀವಿರುದ್ಧಂ
ನ ಋಷೀಣಾಂ ವಚನಂ ಪ್ರಮಾತ್ವಮೀಯಾತ್ || ೬೨

ಶ್ರೀಶಂಕರಾಚಾರ್ಯ - ಪ್ರಬಲವಾದ ಶ್ರುತಿಪ್ರಮಾಣಕ್ಕೆ ವಿರೋಧಬಂದಾಗ ದುರ್ಬಲವಾದ ಸ್ಮೃತಿವಾಕ್ಯಗಳನ್ನು ಅಂಗೀಕರಿಸಬಾರದು - ಎಂಬುದು(ಸರ್ವಸಂಮತವಾದ) ನ್ಯಾಯ. ಈ ನ್ಯಾಯಬಲದಿಂದ ವೇದವಿರುದ್ಧವಾಗಿರುವ ಆ ಋಷಿಗಳ ವಚನವು ಪ್ರಮಾಣವಾಗುವುದಿಲ್ಲ.

ವಿವರಣೆ : ಕಪಿಲಾದಿ ಮುನಿಪ್ರಣೀತಗ್ರಂಥವು ಸ್ಮೃತಿಯೆನಿಸುತ್ತದೆ. ಶ್ರುತಿಗೆ ಬೇರೆ ಪ್ರಮಾಣ ಬೇಕಿಲ್ಲ. ಅದು ಸ್ವತಃಪ್ರಮಾಣ. ಸ್ಮೃತಿಯಾದರೋ ಶ್ರುತಿಪ್ರಮಾಣವನ್ನು ಅಪೇಕ್ಷಿಸುತ್ತದೆ. ಆದ್ದರಿಂದ ಸ್ಮೃತಿಯು ಶ್ರುತಿಗಿಂತಲೂ ದುರ್ಬಲ. 'ವಿರೋಧೇ ತ್ವನಪೇಕ್ಷಂ ಸ್ಯಾದಸತಿ ಹ್ಯನುಮಾನಮ್' ಎಂದು ಜೈಮಿನಿ ಸೂತ್ರ.

ಟಿಪ್ಪಣಿ :- ನೇಯಾಃ =ನಾಂಗೀಕರ್ತವ್ಯಾಃ ಎಂದು ಡಿಂಡಿಮದಲ್ಲಿದೆ. ನ ಈಯಾಃ-ಎಂದು ಪದವಿಭಾಗ. ಈಙ್ ಗತೌ ಬಾಹುಲಕಾತ್ ಕರ್ಮಣಿ ಕ್ಯಪ್ - ಎಂದು ವ್ಯಾಖ್ಯಾನಿಸಬೇಕಾಗುತ್ತದೆ. 'ನೀ' ಧಾತುವಾದರೆ ನೇಯವೆಂಬ ರೂಪವು ಸುಲಭ. ಆಗ ವೇದವಿರುದ್ಧವಾದ ಋಷಿವಚನವನ್ನು 'ಬೇರೊಂದು ಅಭಿಪ್ರಾಯದಿಂದ ಹೊಂದಿಸಬೇಕು ಅಥವಾ ತಳ್ಳಿ ಹಾಕಬೇಕು' ಎಂದು ಅರ್ಥಹೇಳಬೇಕಾಗುತ್ತದೆ.'ಹೇಯಾಃ'ಎಂದು ಪಾಠವಿದ್ದರೆ ಸರ್ವೋತ್ತಮ.

ನನು ಯುಕ್ತಿಯುತಂ ಮಹರ್ಷಿವಾಕ್ಯಂ
ಶ್ರುತಿವದ್ಗ್ರಾಹ್ಯತಮಂ ಪರಂ ತಥಾ ಹಿ |
ಪ್ರತಿದೇಹಮಸೌ ವಿಭಿನ್ನ ಆತ್ಮಾ
ಸುಖದುಃಖಾದಿವಿಚಿತ್ರತಾವಲೋಕಾತ್ || ೬೩

ನೀಲಕಂಠಾಚಾರ್ಯ - ಆದರೆ ಮಹರ್ಷಿವಚನವು ಸರಿಯಾದ ಯುಕ್ತಿಯಿಂದ ಕೂಡಿದಾಗ, ಶ್ರುತಿಯಂತೆ ಅದು ಸರ್ವಥಾ ಗ್ರಾಹ್ಯವೇ ಆಗುತ್ತದೆಯಲ್ಲವೆ? ಹೇಗೆಂದರೆ "(ಪ್ರತಿಯೊಬ್ಬರಲ್ಲಿಯೂ,) ಸುಖದುಃಖಾದಿಗಳು ಭಿನ್ನವಾಗಿ ನಾನಾ ರೀತಿ ಇರುವುದರಿಂದ ಒಂದೊಂದು ದೇಹದಲ್ಲಿಯೂ ಇರುವ ಜೀವಾತ್ಮನು ಭಿನ್ನನೇ ಸರಿ.

ಯದಿ ಚಾಽಽತ್ಮನ ಏಕತಾ ತದಾನೀಂ
ಅತಿದುಃಖೀ ಯುವರಾಜಸೌಖ್ಯಮೀಯಾತ್ |
ಅಮುಕಃ ಸಸುಖೋಽಮುಕಸ್ತು ದುಃಖೀ-
ತ್ಯನುಭೂತಿರ್ನ ಭವೇತ್ತಯೋರಭೇದಾತ್ || ೬೪

"ಆತ್ಮನು ಒಬ್ಬನೇ ಆದರೆ ಆಗ ಅತ್ಯಂತದುಃಖಿಯಾದವನು ಯುವರಾಜನ ಸೌಖ್ಯವನ್ನು ಪಡೆಯ ಬೇಕಾದೀತು. ಒಬ್ಬನೇ ಆತ್ಮನಾದರೆ ಅವರಿಬ್ಬರ ಆತ್ಮನೂ ಅಭಿನ್ನನಾದ್ದರಿಂದ 'ಅವನು ಸುಖಿ -ಇವನು ದುಃಖಿ'ಎಂಬ ಅನುಭವವು ಬರದೇ ಹೋದೀತು"(ಇದು ಮಹರ್ಷಿಗಳು ಸೇಳಿದ ಯುಕ್ತಿ).

ಅಯಮೇವ ವಿದನ್ವಿತಶ್ಚ ಕರ್ತಾ
ನ ಹಿ ಕರ್ತೃತ್ವಮಚೇತನಸ್ಯ ದೃಷ್ಟಮ್ |
ಅತ ಏವ ಭುಜೇರ್ಭವೇತ್ಸ ಕರ್ತಾ
ಪರಭೋಕ್ತೃತ್ವಮತಿಪ್ರಸಂಗದುಷ್ಟಮ್ || ೬೫

"ಅಲ್ಲದೆ ಜ್ಞಾನವಿಶಿಷ್ಟನಾದ (ಚೇತನನಾದ) ಈ ಜೀವನೇ ಕರ್ತ. ಅಚೇತನವಾದದ್ದಕ್ಕೆ ಕರ್ತೃತ್ವವು ಎಲ್ಲಿಯೂ ಕಂಡು ಬರುವುದಿಲ್ಲ. ಆದ್ದರಿಂದ ಈ ಜೀವನೇ ಸುಖದುಃಖಾದಿಗಳ ಭೋಗಕ್ಕೆ ಕರ್ತ (ಭೋಕ್ತ) ನಾಗಿದ್ದಾನೆ. ಒಬ್ಬನು ಕರ್ತನಾಗಿ ಇನ್ನೊಬ್ಬನು ಭೋಕ್ತನಾಗುತ್ತಾನೆಂದರೆ ಅತಿಪ್ರಸಕ್ತಿದೋಷ ಬರುತ್ತದೆ.

ವಿವರಣೆ : ಜಡವಾದ ಇಟ್ಟಿಗೆ, ಕಲ್ಲು ಮೊದಲಾದದ್ದು ಕರ್ತೃವಾಗುವುದಿಲ್ಲ. ಆದ್ದರಿಂದ ಜಡವಾದ ಅಂತಃಕರಣವು ಕರ್ತೃವಲ್ಲ. ಕರ್ತನೇ ಭೋಕ್ತ ಎನ್ನುವುದು ಸರಿ. ಇಲ್ಲದಿದ್ದರೆ ಚೈತ್ರನು ಮಾಡಿದ ಪುಣ್ಯಪಾಪಗಳ ಫಲವನ್ನು ಮೈತ್ರನು ಅನುಭವಿಸಬೇಕಾಗುತ್ತದೆ. ಅಂತಃಕರಣವು ಕರ್ತೃವಾದರೆ ಜೀವನು ಹೇಗೆ ಫಲವನ್ನನುಭವಿಸುತ್ತಾನೆ ? -ಎಂದು ನೀಲಕಂಠಾಚಾರ್ಯನ ಅಭಿಪ್ರಾಯ.

ಪುರುಷಾರ್ಥ ಇಹೈಷ ದುಃಖನಾಶಃ
ಸಕಲಸ್ಯಾಪಿ ಸುಖಸ್ಯ ದುಃಖಯುಕ್ತ್ವಾತ್ |
ಅತಿಹೇಯತಯಾ ಪುಮರ್ಥತಾ ನೋ
ವಿಷಪೃಕ್ತಾನ್ನವದಿತ್ಯಭೇದ್ಯಯುಕ್ತೇಃ || ೬೬

ಮತ್ತು ಪುರುಷಾರ್ಥವಾದ ಮೋಕ್ಷವೆಂದರೆ ಸಂಪೂರ್ಣವಾಗಿ (ಮತ್ತೆ ಬರದಂತೆ)ದುಃಖವು ನಾಶವಾಗುವುದೇಸರಿ. ಈ ಲೋಕದಲ್ಲಿ ಸಮಸ್ತ ಸುಖವೂ ದುಃಖದಿಂದ ಸಂಮಿಳಿತವೇ ಆಗಿರುವುದರಿಂದ ಸುಖವು ಪುರುಷಾರ್ಥವಾದ ಮೋಕ್ಷವಲ್ಲ. ವಿಷಮಿಶ್ರವಾದ ಅನ್ನದಂತೆ ಅದು ಅತ್ಯಂತ ಹೇಯವಾದದ್ದು. ಅಭೇದ್ಯವಾದ ಈ ಯುಕ್ತಿಯು ಕಪಿಲಾದಿಮಹರ್ಷಿಗಳ ಪಕ್ಷದಲ್ಲಿದೆ" ಎಂದನು.

ಟಿಪ್ಪಣಿ :- ಆತ್ಯಂತಿಕದುಃಖಧ್ವಂಸವೇ ಮೋಕ್ಷವೆಂದು ಅಭಿಪ್ರಾಯ.

ಇತಿ ಚೇನ್ನ ಸುಖಾದಿಚಿತ್ರತಾಯಾ
ಮನಸೋ ಧರ್ಮತಯಾऽऽತ್ಮಭೇದಕತ್ವಮ್ |
ನ ಕಥಂಚನ ಯುಜ್ಯತೇ ಪುನಃ ಸಾ
ಘಟಯೇತ್ಪ್ರತ್ಯುತ ಮಾನಸೀಯಭೇದಮ್ || ೬೭

ಶ್ರೀಶಂಕರಾಚಾರ್ಯ — ನೀವು ಹೇಳುವುದು ಯುಕ್ತವಲ್ಲ. ಸುಖದುಃಖಾದಿಭೇದವು ಅಂತಃಕರಣದ (ಮನಸ್ಸಿನ) ಧರ್ಮವೇಹೊರತು ಆತ್ಮದ ಧರ್ಮವಲ್ಲ. ಆದ್ದರಿಂದ

ಜೀವಾತ್ಮರು ಅನೇಕರಾಗಿರಬೇಕೆಂದು ಎಂದಿಗೂ ಸಿದ್ಧವಾಗುವುದಿಲ್ಲ. ಅದಕ್ಕೆ ಪ್ರತಿಯಾಗಿ ಅಂತಃಕರಣವು ಬೇರೆಬೇರೆ ಎಂಬುದನ್ನು ಅದು ಸಾಧಿಸಬಲ್ಲದು.

ವಿವರಣೆ :೬೩ -೬೪ ನೇ ಶ್ಲೋಕಗಳಲ್ಲಿ ಎತ್ತಿದ ಆಕ್ಷೇಪಕ್ಕೆ ಇದು ಉತ್ತರ. ಸುಖದುಃಖಾದಿಗಳು ಅಂತಃಕರಣಧರ್ಮಗಳು; ಚಿತ್ತವೃತ್ತಿಗಳು. ಆತ್ಮಧರ್ಮಗಳಲ್ಲ.'ಕಾಮಃ ಸಂಕಲ್ಪೋ ವಿಚಿಕಿತ್ಸಾ ಶ್ರದ್ಧಾಽಶ್ರದ್ಧಾ ಧೃತಿರಧೃತಿ ರ್ಹ್ರೀರ್ಧೀರ್ಭೀರಿತ್ಯೇತತ್ ಸರ್ವಂ ಮನ ಏವ' (ಬೃಹ. ೫-೭)

ಚಿತಿಯೋಗವಿಶೇಷ ಏವ ದೇಹೇ
  ಕೃತಿಮತ್ತಾ ಘಟಕೋಽಪ್ಯಚೇತನೇ ಸ್ಯಾತ್ |
ತದಭಾವತ ಏವ ಕರ್ತೃತಾ ಸ್ಯಾತ್
  ನ ತೃಣಾದೇರಿತಿ ಕಲ್ಪನಂ ವರೀಯಃ || ೭೮

"ದೇಹ (ಸ್ಥೂಲಸೂಕ್ಷ್ಮದೇಹದ್ವಯವು) ಅಚೇತನವಾದರೂ ಚೈತನ್ಯದ ಸಂಬಂಧವಿಶೇಷವು ಅದರಲ್ಲಿ ಕರ್ತೃತ್ವವನ್ನುಂಟುಮಾಡುತ್ತದೆ. ಚೈತನ್ಯದ ಸಂಬಂಧ ವಿಶೇಷವಿಲ್ಲದಿದ್ದರಿಂದಲೇ ಹುಲ್ಲು ಮೊದಲಾದ್ದರಲ್ಲಿ ಕರ್ತೃತ್ವವಿರುವುದಿಲ್ಲ - ಎಂದು ಕಲ್ಪಿಸುವುದೇ ಯುಕ್ತವಾದದ್ದು.

ವಿವರಣೆ : ಸೂಕ್ಷ್ಮದೇಹದಲ್ಲಿ ಸೇರುವ ಅಂತಃಕರಣವು ಇಲ್ಲಿ ಮುಖ್ಯವಾಗಿ ವಿವಕ್ಷಿತ. ಚೈತನ್ಯದ ಸಂಬಂಧದಿಂದ ಅದೇ ಕರ್ತೃ, ಅದೇ ಭೋಕ್ತೃ. ವಿದ್ಯುತ್ ಸಂಬಂಧದಿಂದ ಜಡವಾದ ಯಂತ್ರದಲ್ಲಿ ಕ್ರಿಯೆ ಹುಟ್ಟುತ್ತದೆಯಲ್ಲವೆ? ಇದು ೬೫ನೆಯ ಶ್ಲೋಕದಲ್ಲಿ ಎತ್ತಿದ ಆಕ್ಷೇಪಕ್ಕೆ ಉತ್ತರ.

ವಿಷಯೋತ್ಥಸುಖಸ್ಯ ದುಃಖಯುಕ್ತ್ವೇಽಪಿ
  ಅಲಯಂ ಬ್ರಹ್ಮಸುಖಂ ನ ದುಃಖಯುಕ್ತಮ್ |
ಪುರುಷಾರ್ಥತಯಾ ತದೇವ ಗಮ್ಯಂ
  ನ ಪುನಸ್ತುಚ್ಛಕದುಃಖನಾಶಮಾತ್ರಮ್ || ೭೯

"ಶಬ್ದಾದಿ ವಿಷಯಭೋಗದಿಂದಾಗುವ ಸುಖವು ದುಃಖಮಿಶ್ರವಾಗಿದ್ದರೂ ಬ್ರಹ್ಮಾನಂದದಲ್ಲಿ ದುಃಖಲೇಶವೂ ಸುಳಿಯದು. ಏಕೆಂದರೆ, ಅದು ಶಾಶ್ವತವಾದ ಸುಖ. ಅದೇ ಮನುಷ್ಯನು ಪಡೆಯಬೇಕಾದ ಪುರುಷಾರ್ಥ. ಕೇವಲ ದುಃಖನಾಶವು ತುಚ್ಛವಾದದ್ದು. ಅದು ಪುರುಷಾರ್ಥವಲ್ಲ."

ವಿವರಣೆ : ಆನಂದಂ ಬ್ರಹ್ಮಣೋ ವಿದ್ವಾನ್ | ನ ಬಿಭೇತಿ ಕುತಶ್ಚನ —(ತೈ. ಬ್ರಹ್ಮ. ೯) ಇತ್ಯಾದಿ ಶ್ರುತಿಗಳಿಂದ ಬ್ರಹ್ಮಾನಂದದಲ್ಲಿ ದುಃಖದ ಸ್ಪರ್ಶವಿಲ್ಲ. ಕೇವಲ ಆನಂದವೇ ಇರತಕ್ಕದ್ದು. ಬ್ರಹ್ಮಾನಂದಕ್ಕೆ ನಾಶವಿಲ್ಲ. ಸಾಂಖ್ಯರು ಮತ್ತು ವೈಶೇಷಿಕರು ಆತ್ಯಂತಿಕ ದುಃಖಧ್ವಂಸವೇ ಮೋಕ್ಷವೆನ್ನುತ್ತಾರೆ. ಅದರಲ್ಲಿ ಸುಖದುಃಖಗಳೆರಡೂ ಇರುವುದಿಲ್ಲ. ಕಲ್ಲು, ಬೆಟ್ಟಗಳಂತಿರುವ ಆ ಸ್ಥಿತಿ ತುಚ್ಛವಾದದ್ದು - ಎಂದು ಅಭಿಪ್ರಾಯ.

ಇತಿ ಯುಕ್ತಿಶತೋಪಬೃಂಹಿತಾರ್ಥೈಃ
ವಚನೈಃ ಶ್ರುತ್ಯವರೋಧಸೌವಿದಲ್ಲೈಃ |
ಯತಿರಾತ್ಮಮತಂ ಪ್ರಸಾಧ್ಯ ಶೈವಂ
ಪರಕೃದ್ದರ್ಶನ ದಾರುಣೈರಜೈಷೀತ್ || ೭೦

ಈ ಪ್ರಕಾರದಲ್ಲಿ ಯತಿರಾಜರಾದ ಶ್ರೀಶಂಕರಾಚಾರ್ಯರು ನೂರಾರು ಯುಕ್ತಿಗಳಿಂದ ಸಮೇತವಾಗಿ ವಿಸ್ತೃತಾರ್ಥವುಳ್ಳ ವಚನಗಳಿಂದ ತಮ್ಮ ಸಿದ್ಧಾಂತವನ್ನು ಸ್ಥಾಪಿಸಿ, ಶೈವನಾದ ನೀಲಕಂಠಾಚಾರ್ಯನನ್ನು ಜಯಿಸಿದರು. ಆ ವಚನಗಳು ಶ್ರುತಿವನಿತೆಯರ ಅಂತಃಪುರವನ್ನು ಕಾಯುವ ಕಂಚುಕಿಗಳಂತೆ 'ಪರಕೃದ್ದರ್ಶನದಾರುಣ' ಗಳಾಗಿದ್ದವು — ಎಂದರೆ ಪರಮತವನ್ನು ಖಂಡಿಸತಕ್ಕವೂ ವೇದಾಂತದರ್ಶನಲ್ಲಿ ಅಭೇದ್ಯಗಳೂ ಆಗಿದ್ದವು. ಕಂಚುಕಿಯ ಪಕ್ಷದಲ್ಲಿ - ಪರಕೀಯಜನರನ್ನು ದಂಡಿಸತಕ್ಕವರೂ ನೋಡಲು ಭೀಕರರೂ ಆದವರು.

ಟಿಪ್ಪಣಿ :- ಪರಂ ಕೃಣೋತೀತಿ ಪರಕೃತ್. ಕೃಞ್ ಹಿಂಸಾಯಾಂ ಕರ್ತರಿ ಕ್ವಿಪ್.

ವಿಜಿತೋ ಯತಿಭೂಭೃತಾ ಸ ಶೈವಃ
ಸಹ ಗರ್ವೇಣ ವಿಸೃಜ್ಯ ಚ ಸ್ವಭಾಷ್ಯಮ್ |
ಶರಣಂ ಪ್ರತಿಪೇದಿವಾನ್ ಮಹರ್ಷಿಂ
ಹರದತ್ತಪ್ರಮುಖೈಃ ಸಹಾಽಽತ್ಮಶಿಷ್ಯೈಃ || ೭೧

ಯತಿರಾಜರಿಂದ ಪರಾಜಿತನಾದ ಆ ಶೈವನು ತನ್ನ ಗರ್ವದೊಡನೆ ತನ್ನ ಭಾಷ್ಯವನ್ನೂ ಪರಿತ್ಯಜಿಸಿ, ಹರದತ್ತನೇ ಮೊದಲಾದ ತನ್ನ ಶಿಷ್ಯರೊಡನೆ ಮಹರ್ಷಿಗಳಾದ ಶ್ರೀಶಂಕರರಿಗೆ ಶರಣಾಗತನಾದನು.

ಯಮಿನಾಮೃಷಭೇಣ ನೀಲಕಂಠಂ
ಜಿತಮಾಕರ್ಣ್ಯ ಮನೀಷಿಧುರ್ಯವರ್ಯಮ್ |
ಸಹಸೋದಯನಾದಯಃ ಕವೀಂದ್ರಾಃ
ಪರಮದ್ವೈತಮುಷಶ್ಚಕಂಪಿರೇ ಸ್ಮ || ೭೨

ಮಹಾವಿದ್ವಾಂಸರಲ್ಲಿ ಅಗ್ರಗಣ್ಯನಾದ ನೀಲಕಂಠಾಚಾರ್ಯನು ಯತಿಶ್ರೇಷ್ಠರಾದ ಶ್ರೀಶಂಕರಭಗವತ್ಪಾದರಿಂದ ಪರಾಜಿತನಾದನೆಂಬುದನ್ನು ಕೇಳಿ, ಅದ್ವೈತವನ್ನು ಖಂಡಿಸುತ್ತಿದ್ದ ಉದಯನನೇ ಮೊದಲಾದ ವಿಪಶ್ಚಿದ್ವರ್ಯರು (ಹೆದರಿ)ನಡುಗಿಹೋದರು.

ವಿಷಯೇಷು ವಿತತ್ಯ ನೈಜಭಾಷ್ಯಾ-
ಣ್ಯಥ ಸೌರಾಷ್ಟ್ರ ಮುಖೇಷು ತತ್ರ ತತ್ರ |
ಬಹುಧಾ ವಿಬುಧೈಃ ಪ್ರಶಸ್ಯಮಾನೋ
ಭಗವಾನ್ ದ್ವಾರವತೀಂ ಪುರೀಂ ವಿವೇಶ || ೭೩

ಅನಂತರ ಭಗವತ್ಪಾದರು ತಮ್ಮ ಭಾಷ್ಯಗಳನ್ನು ಸೌರಾಷ್ಟ್ರವೇ ಮೊದಲಾದ ಬೇರೆ ಬೇರೆ ದೇಶಗಳಲ್ಲಿ ಪ್ರಚುರಪಡಿಸಿದರು. ವಿದ್ವಾಂಸರು ಅವರನ್ನು ಬಹುಬಗೆಯಲ್ಲಿ ಸತ್ಕರಿಸಿದರು. ಆಮೇಲೆ ಆಚಾರ್ಯರು ದ್ವಾರಕಾನಗರವನ್ನು ಪ್ರವೇಶಿಸಿದರು.

ಭುಜಯೋರತಿತಪ್ತಶಂಖಚಕ್ರಾ-
ಕೃತಿಲೋಹಾಹತಸಂಭೃತವ್ರಣಾಂಕಾಃ |
ಶರದಂಡಸಹೋದರೋರ್ಧ್ವಪುಂಡ್ರಾಃ
ತುಲಸೀಪರ್ಣಸನಾಥಕರ್ಣದೇಶಾಃ || ೭೪

ಅಲ್ಲಿ ಚೆನ್ನಾಗಿ ಕಾದ ಶಂಖಚಕ್ರಾಕೃತಿಯ ಲೋಹಮುದ್ರೆಗಳನ್ನು ಒತ್ತಿದ್ದರಿಂದ ಭುಜಗಳಲ್ಲಾದ ವ್ರಣದ ಚಿಹ್ನೆಯುಳ್ಳವರೂ ಬಾಣದಂಡಗಳಂತಿರುವ ಊರ್ಧ್ವಪುಂಡ್ರಗಳನ್ನು ಧರಿಸಿದವರೂ ಆದ ಪಾಂಚರಾತ್ರಾಗಮದ ವೈಷ್ಣವರು ಕಿವಿಗಳಲ್ಲಿ ತುಳಸೀದಳವನ್ನು ಸಿಕ್ಕಿಸಿಕೊಂಡು ಬಂದರು!

ಶತಶಃ ಸಮವೇತ್ಯ ಪಾಂಚರಾತ್ರಾ-
ಸ್ತ್ವಮೃತಂ ಪಂಚಭಿದಾವಿದಾಂ ವದಂತಃ |
ಮುನಿಶಿಷ್ಯವರ್ಯೈರತಿಪ್ರಗಲ್ಭೈಃ
ಮೃಗರಾಜೈರಿವ ಕುಂಜರಾಃ ಪ್ರಭಗ್ನಾಃ || ೭೫

ಆ ವೈಷ್ಣವರು 'ಪಂಚಭೇದಗಳನ್ನರಿತವರಿಗೇ ಅಮೃತವಾದ ಮೋಕ್ಷವು ದೊರೆಯುತ್ತದೆ' ಎಂದು ಹೇಳುತ್ತಿದ್ದರು. ನೂರಾರು ಸಂಖ್ಯೆಯಲ್ಲಿ ವಾದಕ್ಕಾಗಿ ಬಂದ ಅವರನ್ನು ಅತ್ಯಂತಪ್ರಗಲ್ಭರಾದ ಆಚಾರ್ಯಶಿಷ್ಯರೇ ವಾದದಲ್ಲಿ ಸೋಲಿಸಿದರು. ಸಿಂಹಗಳು ಆನೆಗಳನ್ನು ಭಗ್ನಗೊಳಿಸಿದಂತೆ ಪಾಂಚರಾತ್ರಾಗಮದವರನ್ನು ಪರಾಜಯಗೊಳಿಸಿದರು.

ಟಿಪ್ಪಣಿ :- ಪಂಚಭೇದಗಳು - ಜೀವೇಶ್ವರಭೇದ, ಜೀವರಲ್ಲಿ ಪರಸ್ಪರಭೇದ, ಜೀವರಿಗೂ ಅಚಿತ್ ಆದ ಜಡಪದಾರ್ಥಗಳಿಗೂ ಭೇದ, ಈಶ್ವರನಿಗೂ ಜಡಪದಾರ್ಥಗಳಿಗೂ ಭೇದ, ಅಚಿದ್ವಸ್ತುಗಳಲ್ಲಿಯೇ ಪರಸ್ಪರಭೇದ.

ಇತಿ ವೈಷ್ಣವ ಶೈವ ಶಾಕ್ತಸೌರ-
ಪ್ರಮುಖಾನಾತ್ಮವಶಂವದಾನ್ವಿಧಾಯ |
ಅತಿವೇಲವಚೋಝುರೀನಿರಸ್ತ-
ಪ್ರತಿವಾದ್ಯುಜ್ಜಯಿನೀಂ ಪುರೀಮಯಾಸೀತ್ || ೭೬

ಹೀಗೆ ವೈಷ್ಣವ, ಶೈವ, ಶಾಕ್ತ, ಸೌರ- ಮೊದಲಾದ ವಿಭಿನ್ನಮತದವರನ್ನು ಜಯಿಸಿ ಸ್ವಾಧೀನಪಡಿಸಿಕೊಂಡು, ಅಪಾರವಾದ ವಾಗ್‌ಝುರಿಯಿಂದ ಪ್ರತಿವಾದಿಗಳನ್ನು ಪರಾಜಯಗೊಳಿಸುತ್ತಾ ಆಚಾರ್ಯರು ಉಜ್ಜಯಿನೀನಗರಿಗೆ ಹೋದರು.

ಸಪದಿ ಪ್ರತಿನಾದಿತಃ ಪಯೋದ-
ಸ್ವನಶಂಕಾಕುಲಗೇಹಕೇಕಿಜಾಲೈಃ |
ಶಶಭೃನ್ಮುಕುಟಾರ್ಹಣಾಮೃದಂಗ-
ಧ್ವನಿರಶ್ರೂಯತ ತತ್ರ ಮೂರ್ಛಿತಾಶಃ || ೭೭

ಒಡನೆಯೇ ಅಲ್ಲಿ ಚಂದ್ರಮೌಳಿಯಾದ ಮಹಾಕಾಲನ ಪೂಜಾಸಮಯದಲ್ಲಿ ಬಾರಿಸುವ ಮೃದಂಗ ಧ್ವನಿಯು ಕೇಳಿಸಿತು. ದಿಗ್ವ್ಯಾಪಿಯಾದ ಆ ಮೃದಂಗಧ್ವನಿಯು ಮೋಡದಿಂದ ಹೊರಡುವ ಗುಡುಗೆಂಬ ಶಂಕೆಯಿಂದ ಕುತೂಹಲಗೊಂಡು ಮನೆಯಲ್ಲಿ ಸಾಕಿದ ನವಿಲು ಹಿಂಡುಗಳು ಪ್ರತಿಧ್ವನಿಸುತ್ತಿದ್ದವು!

ಟಿಪ್ಪಣಿ :- ಗುಡುಗನ್ನು ಕೇಳಿ ನವಿಲು ಹರ್ಷದಿಂದ ಕೇಕಾಧ್ವನಿಯನ್ನು ಮಾಡುತ್ತದೆ.

ಮಕರಧ್ವಜವಿದ್ವಿಡಾಪ್ತಿವಿದ್ವಾನ್
ಶ್ರಮಹೃತ್ಪುಷ್ಪಸುಗಂಧವನ್ಮರುದ್ಭಿಃ |
ಅಗರೂದ್ಭವಧೂಪಧೂಪಿತಾಶಂ
ಸ ಮಹಾಕಾಲನಿವೇಶನಂ ವಿವೇಶ || ೭೮

ಮದನಾಂತಕನಾದ ಶಿವನ ಸಾಕ್ಷಾತ್ಕಾರವಿಧಿಯನ್ನು ಬಲ್ಲ ಆಚಾರ್ಯರು ಮಹಾಕಾಲಸ್ವಾಮಿಯ ಮಂದಿರವನ್ನು ಪ್ರವೇಶಿಸಿದರು. ಆ ಮಂದಿರವು ಪುಷ್ಪಸೌರಭವನ್ನು ಹೊತ್ತ ಗಾಳಿಯಿಂದ ಆಯಾಸವನ್ನು ಪರಿಹರಿಸತಕ್ಕದ್ದೂ ಅಗರುಧೂಪದ ಹೊಗೆಯಿಂದ ಎಲ್ಲದಿಕ್ಕಿನಲ್ಲಿ ಧೂಪಿತವೂ ಆಗಿತ್ತು.

ಭಗವಾನಭಿವಂದ್ಯ ಚಂದ್ರಮೌಲಿಂ
ಮುನಿವೃಂದೈರಭಿವಂದ್ಯ ಪಾದಪದ್ಮಃ |
ಶ್ರಮಹಾರಿಣಿ ಮಂಡಪೇ ಮನೋಜ್ಞೇ
ಸ ವಿಶಶ್ರಾಮ ವಿಸೃತ್ವರಪ್ರಭಾವಃ || ೭೯

ಭಗವತ್ಪಾದರು ಚಂದ್ರಮೌಳೀಶ್ವರನಿಗೆ ನಮಸ್ಕರಿಸಿ ಶ್ರಮಪರಿಹಾರಕವಾದ ಒಂದು ಸುಂದರಮಂಟಪದಲ್ಲಿ ವಿಶ್ರಮಿಸಿದರು. ಅವರ ಮಹಿಮೆಯು ಸರ್ವತ್ರಹರಡಿದ್ದುದರಿಂದ ಅನೇಕಮುನಿಗಳು ಆಗಮಿಸಿ ಆಚಾರ್ಯರ ಪಾದಪದ್ಮಗಳಿಗೆ ವಂದನೆಗಳನ್ನರ್ಪಿಸುತ್ತಿದ್ದರು.

ಕವಯೇ ಕಥಯಾಸ್ಮದೀಯವಾರ್ತಾ-
ಮಿಹ ಸೌಮ್ಯೇತಿ ಸ ಭಟ್ಟಭಾಸ್ಕರಾಯ |
ವಿಸಸರ್ಜ ವಶಂವದಾಗ್ರಗಣ್ಯಂ
ಮುನಿರಭ್ಯರ್ಣಗತಂ ಸನಂದನಾರ್ಯಮ್ || ೮೦

ಅನಂತರ ಶ್ರೀಶಂಕರಯತಿಗಳು ಬಳಿಯಲ್ಲಿದ್ದ ತಮ್ಮ ಶಿಷ್ಯೋತ್ತಮರಾದ ಪದ್ಮಪಾದರನ್ನು ಕುರಿತು"ಸೌಮ್ಯ, ವಿದ್ವಾಂಸನಾದ ಭಟ್ಟಭಾಸ್ಕರನಿಗೆ ನಾವು ಬಂದ ವಾರ್ತೆಯನ್ನರುಹು" ಎಂದು ಹೇಳಿ ಅವರನ್ನು ಕಳಿಸಿಕೊಟ್ಟರು.

ಟಿಪ್ಪಣಿ :- ವಶಂವದ =ಅಧೀನ, ಶಿಷ್ಯ. 'ಪ್ರಿಯವಶೇ ವದಃ ಖಚ್'ಇತಿ ಖಚ್. ಮುಮಾಗಮ.

ಅಭಿರೂಪಕುಲಾವತಂಸಭೂತಂ
ಬಹುಧಾ ವ್ಯಾಕೃತ ಸರ್ವವೇದರಾಶಿಮ್ |
ತಮಯತ್ನನಿರಸ್ತದುಃಸಪತ್ನಂ
ಪ್ರತಿಪದ್ಯೇತ್ಥಮುವಾಚ ವಾವದೂಕಃ || ೮೧

ಭಟ್ಟಭಾಸ್ಕರನಾದರೋ ವಿದ್ವದ್ಗೋಷ್ಠಿಗೆ ಕಿರೀಟಪ್ರಾಯನಾದವನು. ಸಮಸ್ತವೇದರಾಶಿಯನ್ನು ಬಹುವಿಧದಲ್ಲಿ ವ್ಯಾಖ್ಯಾನಮಾಡಿದವನು. ಬಹುಸುಲಭವಾಗಿ ಪ್ರತಿವಾದಿಗಳನ್ನು ಪರಾಭವಗೊಳಿಸಿದವನು. ವಾಗ್ವಿಶಾರದರಾದ ಪದ್ಮಪಾದರು ಆತನನ್ನು ಸಂದರ್ಶಿಸಿ ಇಂತೆಂದರು.

ಟಿಪ್ಪಣಿ :- ಅಭಿರೂಪ=ವಿದ್ವಾಂಸ. 'ಪ್ರಾಪ್ತರೂಪ ಸ್ವರೂಪಾಭಿರೂಪಾ ಬುಧಮನೋಜ್ಞಯೋಃ' -ಅಮರಕೋಶ.

ಜಯತಿ ಸ್ಮ ದಿಗಂತಗೀತಕೀರ್ತಿಃ
ಭಗವಾನ್ ಶಂಕರಯೋಗಿಚಕ್ರವರ್ತೀ |
ಪ್ರಥಯನ್ ಪರಮಾದ್ವಿತೀಯತತ್ತ್ವಂ
ಶಮಯಂಸ್ತತ್ಪರಿಪಂಥಿವಾದಿದರ್ಪಮ್ || ೮೨

" ಭಗವಾನ್ ಶಂಕರಯೋಗಿಚಕ್ರವರ್ತಿಗಳು ದಿಗಂತವಿಶ್ರಾಂತಕೀರ್ತಿಗಳಾಗಿ ವಿಜಯಶಾಲಿಗಳಾಗಿದ್ದಾರೆ. ಶ್ರೇಷ್ಠವಾದ ಅದ್ವೈತಸಿದ್ಧಾಂತವನ್ನು ಪ್ರಚುರಗೊಳಿಸುತ್ತ ಅದಕ್ಕೆ ವಿರೋಧಿಗಳಾದ ವಾದಿಗಳ ದರ್ಪವನ್ನು ಇಳಿಸುತ್ತ ವಿರಾಜಿಸುತ್ತಿದ್ದಾರೆ!

ಸ ಜಗಾದ ಬುಧಾಗ್ರಣೀರ್ಭವಂತಂ
ಕುಮತೋತ್ಪ್ರೇಕ್ಷಿತಸೂತ್ರವೃತ್ತಿಜಾಲಮ್ |
ಅಭಿಭೂಯ ವಯಂ ತ್ರಯೀಶಿಖಾನಾಂ
ಸಮವಾದಿಷ್ಮ ಪರಾವರೇಽಭಿಸಂಧಿಮ್ || ೮೩

"ಆ ಪಂಡಿತೋತ್ತಮರು ನಿಮಗೆ ಈ ಮಾತನ್ನು ಹೇಳಿಕಳಿಸಿದ್ದಾರೆ. ಏನೆಂದರೆ- ಕುತ್ಸಿತಮತದವರು ಶಾರೀರಕಸೂತ್ರಗಳಿಗೆ ಉತ್ಪ್ರೇಕ್ಷಿಸಿಹೇಳಿದ ವೃತ್ತಿಗಳೆಲ್ಲವನ್ನೂ ನಾವು ತಿರಸ್ಕರಿಸಿ, ಉಪನಿಷತ್ತುಗಳಿಗೆ ಅದ್ವಯ ಪರತತ್ತ್ವದಲ್ಲಿ ತಾತ್ಪರ್ಯವೆಂದು ಸ್ಥಾಪಿಸಿದ್ದೇವೆ.

ತದಿದಂ ಪರಿಗೃಹ್ಯತಾಂ ಮನೀಷಿನ್
ಮನಸಾಽಽಲೋಚ್ಯ ನಿರಸ್ಯ ದುರ್ಮತಂ ಸ್ವಮ್ |
ಅಥವಾಽಸ್ಮದುದಗ್ರತರ್ಕವಜ್ರ-
ಪ್ರತಿಘಾತಾತ್ ಪರಿರಕ್ಷ್ಯತಾಂ ಸ್ವಪಕ್ಷಃ || ೮೪

"ಆದ್ದರಿಂದ, ವಿದ್ವಾಂಸರೆ, ಇದೆಲ್ಲವನ್ನೂ ಮನಸ್ಸಿನಲ್ಲಿ ಸರಿಯಾಗಿ ಪರ್ಯಾಲೋಚಿಸಿ ನಿಮ್ಮ ತಪ್ಪು ಗ್ರಹಿಕೆಯನ್ನು ತ್ಯಜಿಸಿ, ನಮ್ಮ ಸಿದ್ಧಾಂತವನ್ನು ಒಪ್ಪಿಕೊಳ್ಳಬೇಕು. ಅಥವಾ ಕಠೋರವಾದ ನಮ್ಮ ತರ್ಕವೆಂಬ ವಜ್ರಾಯಧದ ಹೊಡೆತದಿಂದ ನಿಮ್ಮ ಪಕ್ಷವನ್ನು ರಕ್ಷಿಸಿಕೊಳ್ಳಬೇಕು!" ಎಂದು ಹೇಳಿದ್ದಾರೆ.

ಟಿಪ್ಪಣಿ :- ಇಂದ್ರನು ವಜ್ರಾಯುಧದಿಂದ ಪರ್ವತಗಳ ಪಕ್ಷಗಳನ್ನು(ರೆಕ್ಕೆಗಳನ್ನು)ಕತ್ತರಿಸಿದನಷ್ಟೆ. ಇಲ್ಲಿ ವಜ್ರ, ಪಕ್ಷ - ಎಂಬ ಶಬ್ದಗಳಿಂದ ಅದು ಸೂಚಿತವಾಗಿದೆ.

ಇತಿ ತಾಮವಹೇಲಪೂರ್ವವರ್ಣಾಂ
ಗಿರಮಾಕರ್ಣ್ಯ ತದಾ ಸ ಲಬ್ಧವರ್ಣಃ|
ಯಶಸಾಂ ನಿಧಿರೀಷದಾತ್ತರೋಷಃ
ತಮುವಾಚ ಪ್ರಹಸನ್ ಯತೀಂದ್ರಶಿಷ್ಯಮ್ || ೮೫

ಈ ಪ್ರಕಾರವಾಗಿ ಅಸಡ್ಡೆಯಿಂದಾಡಿದ ಆ ನುಡಿಯನ್ನು ಕೇಳಿ, ವಿದ್ವಾಂಸನೂ ಯಶೋನಿಧಿಯೂ ಆದ ಭಟ್ಟಭಾಸ್ಕರನಿಗೆ ಸ್ವಲ್ಪ ಕೋಪವೇ ಬಂದಿತು. (ತಿರಸ್ಕಾರದಿಂದ) ನಗುತ್ತಲೇ ಆತನು ಯತೀಂದ್ರ ಶಿಷ್ಯರಾದ ಪದ್ಮಪಾದರಿಗೆ ಹೀಗೆ ಹೇಳಿದನು.

ಧ್ರುವಮೇಷ ನ ಶುಶ್ರುವಾನುದಂತಂ
ಮಮ ದುರ್ವಾದಿವಚಸ್ತತೀರ್ನುದಂತಮ್ |
ಪರಕೀರ್ತಿಬಿಸಾಂಕುರಾನದಂತಂ
ವಿದುಷಾಂ ಮೂರ್ಧಸು ನಾನಟತ್ಪದಂ ತಮ್ || ೮೬

"ನಿಜವಾಗಿಯೂ ನಿಮ್ಮ ಗುರುಗಳು ನನ್ನ ವೃತ್ತಾಂತವನ್ನು ಕೇಳಿಲ್ಲ! ಈತನು(ನಾನು) ದುರ್ವಾದಿಗಳ ವಚೋರಾಶಿಯನ್ನು ದೂರಕ್ಕೆ ತಳ್ಳಿ ಎಸೆಯತಕ್ಕವನು, ಪರವಾದಿಗಳ ಕೀರ್ತಿಯೆಂಬ ತಾವರೆಯ ದಂಟನ್ನು ಮೊಳಕೆ ಸಹಿತ ನುಂಗಿ ನೊಣೆಯತಕ್ಕವನು, ವಿದ್ವಾಂಸರ ತಲೆಯನ್ನು ಮೆಟ್ಟಿ ಅದರಮೇಲೆ ಹೆಜ್ಜೆಯೂರಿ ಮತ್ತೆಮತ್ತೆ ಕುಣಿಯತಕ್ಕವನು- ಎಂಬ ನನ್ನ ಸುದ್ದಿಯನ್ನು ಅವರು ಕೇಳಿಲ್ಲ!

ಟಿಪ್ಪಣಿ :- ನಾನಟತ್ = ನಟಧಾತುವಿನಮೇಲೆ ಯಙ್‌ಲುಗಂತ ಶತೃಪ್ರತ್ಯಯ.

ಮಮ ವಲ್ಗತಿ ಸೂಕ್ತಿಗುಂಫವೃಂದೇ
ಕಣಭುಗ್‌ಜಲ್ಪಿತಮಲ್ಪತಾಮುಪೈತಿ |
ಕಪಿಲಸ್ಯ ಪಲಾಯತೇ ಪ್ರಲಾಪಃ
ಸುಧಿಯಾಂ ಕ್ವೈವ ಕಥಾಽಧುನಾತನಾನಾಮ್ || ೮೭

ನನ್ನ ಸೂಕ್ತಿರಚನಾಜಾಲವು ಹೊಮ್ಮಿತೆಂದರೆ, ಕಣಾದನು ಹಲುಬುವುದು ಅಲ್ಪವಾಗುವುದು! ಕಪಿಲನ ಹರಟೆಯು ಪಲಾಯನಮಾಡುವುದು! ಇನ್ನು ಈ ಕಾಲದ ವಿದ್ವಾಂಸರ ಕಥೆಗೆ ಯಾವ ಗತಿ ಬಂದೀತು !" ಎಂದನು.

ಇತಿ ವಾದಿನಮಬ್ರವೀತ್ ಸನಂದಃ
ಕುಶಲೋಽಥೈನಮವಿಜ್ಞ ಮಾಽವಮಂಸ್ಥಾಃ |
ನ ಹಿ ದಾರಿತಭೂಧರೋಽಪಿ ಟಂಕಃ
ಪ್ರಭವೇದ್ವಜ್ರಮಣಿಪ್ರಭೇದನಾಯ || ೮೮

ಆಗ ವಾಗ್ವಿಶಾರದರಾದ ಪದ್ಮಪಾದರು (ಸನಂದನ) "ಏನೋ ಗೊತ್ತಿಲ್ಲದೆ ಇಂತಹ ಅವಜ್ಞೆಯ ಮಾತನ್ನಾಡಬಾರದು. ಚಾಣವು ಬೆಟ್ಟವನ್ನು ಸೀಳಿದ್ದರೂ ವಜ್ರಮಣಿಯನ್ನು ಭೇದಿಸಲಾರದು" ಎಂದರು.

ಸ ತಮೇವಮುದೀರ್ಯ ತೀರ್ಥಕೀರ್ತೇಃ
ಉಪಕಂಠಂ ಪ್ರತಿಪದ್ಯ ಸದ್ವಿದಗ್ರ್ಯಃ |
ಸಕಲಂ ತದವೋಚದಾನುಪೂರ್ವ್ಯಾ
ಸ ಮಹಾತ್ಮಾಽಪಿ ಯತೀಶಮಾಸಸಾದ || ೮೯

ಹೀಗೆ ಭಟ್ಟಭಾಸ್ಕರನಿಗೆ ಹೇಳಿ, ಪಂಡಿತೋತ್ತಮರಾದ ಪದ್ಮಪಾದರು ಪವಿತ್ರಕೀರ್ತಿಗಳಾದ ತಮ್ಮ ಗುರುಗಳ ಬಳಿಗೆಬಂದು ಆ ವಿದ್ವಾಂಸನೊಡನೆ ನಡೆದ ಮಾತು ಕಥೆಗಳನ್ನು ಅನುಪೂರ್ವೀಸಹಿತವಾಗಿ ನಿವೇದಿಸಿದರು. ಅಷ್ಟರಲ್ಲಿ ಮಹಾತ್ಮನಾದ ಭಟ್ಟಭಾಸ್ಕರನೂ ಯತೀಶ್ವರರಾದ ಶ್ರೀಶಂಕರರ ಬಳಿಗೆ ಆಗಮಿಸಿದನು.

ಅಥ ಭಾಸ್ಕರಮಸ್ಕರಿಪ್ರವೀರೌ
ಬಹುಧಾಕ್ಷೇಪಸಮರ್ಥನಪ್ರವೀಣೌ |
ಬಹುಭಿರ್ವಚನೈರುದಾರವೃತ್ತೈಃ
ವ್ಯದಧಾತಾಂ ವಿಜಯೈಷಿಣೌ ವಿವಾದಮ್ || ೯೦

ಅನಂತರ ಭಟ್ಟಭಾಸ್ಕರನಿಗೂ ಶ್ರೀಶಂಕರಯತೀಶರಿಗೂ ವಾದವು ಪ್ರಾರಂಭಿಸಿತು. ಉಭಯರೂ ಬಹುವಿಧವಾಗಿ ಆಕ್ಷೇಪಗಳನ್ನು ಎತ್ತುವುದರಲ್ಲಿಯೂ ಸಮರ್ಥಿಸಿಕೊಳ್ಳುವುದರಲ್ಲಿಯೂ ಗಟ್ಟಿಗರು. ಅವರಿಬ್ಬರೂ ಮುಂದೆಹೇಳುವ ವಿಶಾಲಾರ್ಥದ ವೃತ್ತಪದ್ಯಗಳಲ್ಲಿರುವಂತೆ ಒಬ್ಬರನ್ನೊಬ್ಬರು ಗೆಲ್ಲಬೇಕೆಂಬ ಉದ್ದೇಶವುಳ್ಳವರಾಗಿ ವಾದವನ್ನು ನಡೆಸಿದರು.

ಅನಯೋರತಿಚಿತ್ರಶಬ್ದಶಯ್ಯಾಂ
ದಧತೋರ್ದುರ್ನಯ ಭೇದಶಕ್ತಯುಕ್ತ್ಯೋಃ |
ಪಟುವಾದಮೃಧೇಽಂತರಂ ತಟಸ್ಥಾಃ
ಶ್ರುತವಂತೋಽಪಿ ನ ಕಿಂಚನಾನ್ವವಿಂದನ್ || ೯೧

ದುರ್ವಾದವನ್ನು ಕತ್ತರಿಸಲು ಸಮರ್ಥವಾದ ಯುಕ್ತಿಗಳನ್ನು ಬಳಸಿ ವಿಚಿತ್ರವಾದ ಶಬ್ದರಚನೆಯನ್ನು ಹೆಣೆಯುತ್ತಿದ್ದ ಅವರಿಬ್ಬರಿಗೂ ಅದ್ಭುತವಾದ ವಾದಯುದ್ಧವೇ ನಡೆಯ ತೊಡಗಿತು. ಹತ್ತಿರದಲ್ಲಿ ಕುಳಿತಿದ್ದ ತಟಸ್ಥರು ಅದೆಲ್ಲವನ್ನು ಕೇಳುತ್ತಿದ್ದರೂ ಉಭಯರ ವಾದಗಳಲ್ಲಿದ್ದ ವ್ಯತ್ಯಾಸವೇನೆಂಬುದನ್ನು ಸ್ವಲ್ಪವೂ ಗುರುತಿಸಲಾರದೆ ಹೋದರು!

ಅಥ ತಸ್ಯ ಯತಿಃ ಸಮೀಕ್ಷ್ಯ ದಾಕ್ಷ್ಯಂ
ನಿಜಪಕ್ಷಾಬ್ಜಶರಜ್ಜಡಾಬ್ಜಭೂತಮ್ |
ಬಹುಧಾऽऽಕ್ಷಿಪದಸ್ಯ ಪಕ್ಷಮಾರ್ಯೋ
ವಿಬುಧಾನಾಂ ಪುರತೋऽಪ್ರಭಾತಕಕ್ಷ್ಯಮ್ || ೯೨

ಹೀಗೆ ವಾದವು ನಡೆಯುತ್ತಿದ್ದಾಗ ಭಟ್ಟಭಾಸ್ಕರನ ದಕ್ಷತೆಯು ಶರತ್ಕಾಲದ ಜಡಕಮಲದಂತೆ ಅರಳಿದರೂ ಆಚಾರ್ಯರ ವಾದವೆಂಬ ಶುಕ್ಲಪಕ್ಷದ ಚಂದ್ರನೆದುರಿಗೆ ಕುಗ್ಗಿಮಾಸುತ್ತಿತ್ತು. ಇದನ್ನು ಗಮನಿಸಿದ ಪೂಜ್ಯರಾದ ಶ್ರೀಶಂಕರಯತಿಗಳು ಇನ್ನೂ ಬಹುವಿಧವಾದ ಆಕ್ಷೇಪಗಳನ್ನೆತ್ತಿ ಆತನ ಪಕ್ಷವನ್ನು ವಿದ್ವಾಂಸರೆದುರಿಗೆ ದೂಷಿಸಿದರು. ಅವರ ಆಕ್ಷೇಪಗಳಿಗೆ ಭಾಸ್ಕರನ ಪಕ್ಷದಲ್ಲಿ ಉತ್ತರವು ಹೊಳೆಯಲಿಲ್ಲ.

ವಿವರಣೆ :ಶರತ್ಕಾಲದಲ್ಲಿ ಕಮಲವು ಅರಳುತ್ತದೆ. ಚಂದ್ರನು ಹುಟ್ಟಿದಾಗ ಮತ್ತೆ ಬಾಡುತ್ತದೆ. ಶರತ್ಕಾಲದ ಚಂದ್ರನಲ್ಲಿ ಪ್ರಕಾಶವು ಅಧಿಕವಾಗಿರುತ್ತದೆ. ಕಮಲವು ಜಡವಾದ್ದರಿಂದ ಸ್ವತಃ ಅರಳುವ ಶಕ್ತಿ ಇಲ್ಲ. ಪ್ರಭಾತವಾಗಿದ್ದರೆ ಅರಳುತ್ತಿತ್ತು. ಪ್ರಭಾತವಾಗಲೇಇಲ್ಲ - ಎಂಬ ಆಶಯವನ್ನು ಅಪ್ರಭಾತಕಕ್ಷ್ಯಂ - ಎಂಬ ಶಬ್ದವು ಸೂಚಿಸುತ್ತದೆ. ನಿಜಪಕ್ಷ, ಪಕ್ಷ ಎಂಬಲ್ಲಿ ಶ್ಲೇಷದಿಂದ ಶುಕ್ಲಪಕ್ಷ, ಕಮಲದಳ -ಎಂಬ ಅರ್ಥವನ್ನೂ ಗ್ರಹಿಸಬೇಕು. ವಿಬುಧಾನಾಂ ಪುರತಃ ಎಂಬುದಕ್ಕೆ ನೆರೆದಿದ್ದ ವಿದ್ವಾಂಸರಿಗೂ ಉತ್ತರ ಹೊಳೆಯಲಿಲ್ಲ - ಎಂಬ ಅರ್ಥವನ್ನೂಹೇಳಬಹುದು. ಅಬ್ಜಶಬ್ದಕ್ಕೆ ಚಂದ್ರ, ಕಮಲ -ಎಂದು ಅರ್ಥದ್ವಯವಿದೆ. ಅಬ್ಜದ ಎದುರಿಗೆ ಅಬ್ಜವು ಸೋತಿತು - ಎಂದು ವ್ಯಂಗ್ಯಾರ್ಥವೂ ಇದೆ. ಜಡ =ಜಲ ಮತ್ತು ಜಾಡ್ಯ ಉಳ್ಳದ್ದು. ಕಾವ್ಯದೃಷ್ಟಿಯಿಂದ ಸುಂದರವಾದ ಶ್ಲೋಕವಿದು.

ಅಥ ಭಾಸ್ಕರ ವಿತ್ಸ್ವಪಕ್ಷಗುಪ್ತ್ಯೈ
ವಿಧುತೋ ವಾಗ್ಮಿವರಃ ಪ್ರಗಲ್ಭಯುಕ್ತ್ಯಾ |
ಶ್ರುತಿಶೀರ್ಷವಚಃ ಪ್ರಕಾಶ್ಯಮೇವಂ
ಕವಿರದ್ವೈತಮಪಾಕರಿಷ್ಣುರೂಚೇ || ೯೩

ಭಾಸ್ಕರಪಂಡಿತನು ಶ್ರೇಷ್ಠನಾದ ವಾಗ್ಮಿಯಾಗಿದ್ದರೂ ಆಚಾರ್ಯರ ಪ್ರಬಲಯುಕ್ತಿಗಳಿಂದ ತಿರಸ್ಕೃತನಾಗಿ ತನ್ನ ಪಕ್ಷವನ್ನು ಸಮರ್ಥಿಸಿಕೊಳ್ಳಲಾರದೆ ಹೋದನು. ಆದಕಾರಣ ಉಪನಿಷತ್ತುಗಳಿಂದ ಅದ್ವೈತವು ಪ್ರಕಾಶಿತವಾಗುತ್ತದೆಯೆಂಬ (ಆಚಾರ್ಯರ) ಪಕ್ಷವನ್ನು ಖಂಡಿಸುವುದಕ್ಕಾಗಿ ಆ ವಿದ್ವಾಂಸನು ಹೀಗೆಂದನು.

ಟಿಪ್ಪಣಿ :- ಭೇದಾಭೇದವಾದವು ಭಾಸ್ಕರನ ಪಕ್ಷ. ಪರಮಾತ್ಮನಿಗಿಂತ ಭಿನ್ನರಾದ ಜೀವಾತ್ಮರು ಅನಂತಸಂಖ್ಯೆಯಲ್ಲಿದ್ದಾರೆ. ಮುಕ್ತಿದಶೆಯಲ್ಲಿ ಜೀವನು ಪರಮಾತ್ಮನಲ್ಲಿ ಸೇರಿ ಹೋಗುವುದರಿಂದ ಭೇದವು ನಶಿಸಿ ಅಭೇದಉಂಟಾಗುತ್ತದೆ ಯೆಂದು ಈ ವಾದದ ಸಾರಾಂಶ.

ಪ್ರಶಮಿಂಸ್ತ್ವದುದೀರಿತಂ ನ ಯುಕ್ತಂ
ಪ್ರಕೃತಿರ್ಜೀವ ಪರಾತ್ಮಭೇದಿಕೇತಿ |
ನ ಭಿನತ್ತಿ ಹಿ ಜೀವಗೇಶಗಾ ವೋ-
ಭಯಭಾವಸ್ಯ ತದುತ್ತರೋದ್ಭವತ್ವಾತ್ || ೯೪

ಯತಿಗಳೇ, ಪ್ರಕೃತಿಯು (ಮಾಯೆಯು) ಜೀವನಿಗೂ ಪರಮಾತ್ಮನಿಗೂ ಭೇದವನ್ನುಂಟುಮಾಡುತ್ತದೆ - ಎಂದು ನೀವು ಹೇಳುವುದು ಯುಕ್ತಿಯುಕ್ತವಲ್ಲ. ಪ್ರಕೃತಿಯು(ಮಾಯೆಯು)ಜೀವನಲ್ಲಾಗಲಿ ಈಶ್ವರನಲ್ಲಾಗಲಿ ಮೊದಲೇ ಇದ್ದಿರಬೇಕಷ್ಟೆ. ಆದರೆ ಜೀವಭಾವ, ಈಶ್ವರಭಾವಗಳೆರಡೂ ಪ್ರಕೃತಿಯ ಅನಂತರ ಉದ್ಭವಿಸಿರುವುದರಿಂದ ನಿಮ್ಮ ಸಿದ್ಧಾಂತವು ಸರಿಯಲ್ಲ.

ವಿವರಣೆ: ಪ್ರಕೃತಿಗೆ ಆಶ್ರಯನಾಗಿ ಜೀವನೋ ಈಶ್ವರನೋ ಮೊದಲೇ ಇರಬೇಕು. ಆಗಲೇ ಜೀವೇಶ್ವರಭೇದವು ಸಿದ್ಧವಾಗಿಬಿಟ್ಟಿರುತ್ತದೆ, ಹೊಸದಾಗಿ ಭೇದವನ್ನುಂಟುಮಾಡಬೇಕಾದ್ದಿಲ್ಲ. ಆಶ್ರಯವಿಲ್ಲದೆ ಪ್ರಕೃತಿ ಇರುವುದಿಲ್ಲ. ನಿಮ್ಮ ಸಿದ್ಧಾಂತದಂತೆ ಪ್ರಕೃತಿಗೆ ಆಶ್ರಯವನ್ನು ಹೇಳಲು ಸಾಧ್ಯವಿಲ್ಲ - ಎಂದುಅಭಿಪ್ರಾಯ.

(ಮುಂದೆ ಪ್ರಶ್ನೋತ್ತರಗಳು ಒಂದೊಂದು ಶ್ಲೋಕದಲ್ಲಿ ಸಂಮಿಶ್ರವಾಗುವುದರಿಂದ, ಯಾರ ಹೇಳಿಕೆ ಯಾವು ದೆಂಬುದನ್ನು ವಿಭಾಗಿಸಿ ಬರೆಯಲಾಗುವುದು)

ಮುನಿರೇವಮಿಹೋತ್ತರಂ ಬಭಾಷೇ
ಮುಕುರೋ ವಾ ಪ್ರತಿಬಿಂಬಬಿಂಬಭೇದೀ |
ಕಥಮೀರಯ ವಕ್ತ್ರಮಾತ್ರಗಶ್ಚೇತ್
ಚಿತಿಮಾತ್ರಾಶ್ರಿದಿಯಂ ತಥೇತಿ ತುಲ್ಯಮ್ || ೯೫

ಆಗ ಶಂಕರಮುನಿಗಳು ಹೀಗೆ ಉತ್ತರವನ್ನಿತ್ತರು -

ಶ್ರೀಶಂಕರ - ಕನ್ನಡಿಯು ಬಿಂಬಪ್ರತಿಬಿಂಬಭಾವಗಳನ್ನುಂಟುಮಾಡುತ್ತದೆಯಷ್ಟೆ? ಆಗ ಕನ್ನಡಿಯು ಬಿಂಬವನ್ನಾಶ್ರಯಿಸಿಕೊಂಡಿರುತ್ತದೆಯೋ ಅಥವಾ ಪ್ರತಿಬಿಂಬವನ್ನಾಶ್ರಯಿಸಿಕೊಂಡಿರುತ್ತದೆಯೋ ಎಂಬುದನ್ನು ಹೇಳಿರಿ. ಅವೆರಡೂ ಅಲ್ಲದ ಮುಖವನ್ನಾಶ್ರಯಿಸಿಕೊಂಡು ಆ ಭೇದಗಳನ್ನುಂಟುಮಾಡುತ್ತದೆಯೆಂದಾದರೆ, ಹಾಗೆಯೇ ಪ್ರಕೃತಿಯು

ಚಿನ್ಮಾತ್ರವಾದ ಪರಬ್ರಹ್ಮದಲ್ಲಿದ್ದು ಜೀವೇಶ್ವರಭಾವಗಳನ್ನುಂಟು ಮಾಡುತ್ತದೆ -ಎಂಬುದು ಸಮಾನವಾಗಿದೆ.

ವಿವರಣೆ : ಮುಖವು ಸ್ವತಃ ಬಿಂಬವೂ ಅಲ್ಲ, ಪ್ರತಿಬಿಂಬವೂ ಅಲ್ಲ . ಅದು ಕನ್ನಡಿಯಲ್ಲಿ ಪ್ರತಿಬಿಂಬಿಸಿದಾಗ ಮುಖವನ್ನು ಬಿಂಬವೆಂದೂ ಕನ್ನಡಿಯಲ್ಲಿ ಕಾಣುವುದನ್ನು ಪ್ರತಿಬಿಂಬವೆಂದೂ ಹೇಳುತ್ತಾರೆ. ಕನ್ನಡಿಯು ಮುಖಕ್ಕೆ ಸಂಬಂಧಿಸಿದ್ದು. ಆಮೇಲೆ ಹೇಗೆ ಬಿಂಬಪ್ರತಿಬಿಂಬಭಾವಗಳನ್ನುಂಟುಮಾಡುತ್ತದೆಯೋ ಹಾಗೆ ಪ್ರಕೃತಿಯೆಂಬ ಅನಿರ್ವಚನೀಯ ಮಾಯೆಯು ಚಿನ್ಮಾತ್ರಗತವಾಗಿದ್ದು ಜೀವ - ಈಶ್ವರ ಎಂಬ ಭೇದವನ್ನುಂಟುಮಾಡುತ್ತದೆ. ಬಿಂಬವು ಈಶ್ವರ, ಪ್ರತಿಬಿಂಬವು ಜೀವ - ಎಂದಿಟ್ಟುಕೊಳ್ಳಬೇಕು. ಪರಬ್ರಹ್ಮವೇ ಪ್ರಕೃತಿಗೆ ಆಶ್ರಯ ಎಂದು ಅಭಿಪ್ರಾಯ. 'ಜೀವೇಶಾವಾಭಾಸೇನ ಕರೋತಿ, ಮಾಯಾ ಚಾವಿದ್ಯಾ ಚ ಸ್ವಯಮೇವ ಭವತಿ' (ನೃಸಿಂಹೋತ್ತರ ತಾಪಿನೀ. ಖಂಡ -೯)

ಟಿಪ್ಪಣಿ :-ಚಿತಿಮಾತ್ರಾಶ್ರಿತ್ = ಆಶ್ರಯತೀತಿ ಆಶ್ರಿತ್. ಕ್ವಿಪ್ ಪ್ರತ್ಯಯ.

ಚಿತಿಮಾತ್ರಗತ ಪ್ರಕೃತ್ಯುಪಾಧೇಃ
ಜಹತೋ ಬಿಂಬಪರಾತ್ಮಪಕ್ಷಪಾತಮ್ |
ಪ್ರತಿಬಿಂಬಿತಜೀವಪಕ್ಷಪಾತೋ
ಮುಕುರಸ್ಯೇವ ವಿರುಧ್ಯತೇ ನ ಜಾತು || ೯೬

ಉಪಾಧಿಯಾದ ಈ ಪ್ರಕೃತಿಯು ಚಿನ್ಮಾತ್ರದಲ್ಲಿದ್ದರೂ ಬಿಂಬವಾದ ಪರಮಾತ್ಮನಲ್ಲಿ ತನ್ನ ಪ್ರಭಾವವನ್ನು ತ್ಯಜಿಸಿ, ಪ್ರತಿಬಿಂಬವಾದ ಜೀವನಲ್ಲಿ ತನ್ನ ಪ್ರಭಾವವನ್ನು ತೋರಿಸಿ ಪಕ್ಷಪಾತಮಾಡುತ್ತದೆ. ಕನ್ನಡಿಯ ಹಾಗೆಯೇ ಇದು ಎಂದಿಗೂ ವಿರುದ್ಧವಾದ್ದಲ್ಲ.

ವಿವರಣೆ :ಕನ್ನಡಿಯು ಬಿಂಬವಾದ ಮುಖದಲ್ಲಿ ಯಾವ ವಿಕಾರವನ್ನೂ ಉಂಟುಮಾಡುವುದಿಲ್ಲ. ಕನ್ನಡಿಗೆ ಅನುಗುಣವಾಗಿ ಪ್ರತಿಬಿಂಬವು ದೊಡ್ಡದೂ ಚಿಕ್ಕದೂ ಉದ್ದನೆಯದೂ ಆಗಿ ವಿಕಾರವನ್ನು ಪಡೆಯುತ್ತದೆ. ಭೂತಗನ್ನಡಿಯಾದರೆ ಇನ್ನೂ ನಾನಾವಿಧ ವಿಕಾರಗಳು ಪ್ರತಿಬಿಂಬದಲ್ಲುಂಟಾಗುತ್ತವೆ. ಬಿಂಬವಾದ ಮುಖವು ಮಾತ್ರ ಒಂದೇ ರೀತಿ ಇರುತ್ತದೆ. ಹಾಗೆಯೇ ಪ್ರಕೃತಿಯ ಪಕ್ಷಪಾತದಿಂದ ಕಾಮ, ಕ್ರೋಧ, ಸುಖ, ದುಃಖಾದಿಗಳು ಜೀವನಲ್ಲಿ ತೋರುತ್ತವೆ. ಶುದ್ಧಚೇತನ್ಯದಲ್ಲಿ ಮತ್ತು ಬಿಂಬವಾದ ಈಶ್ವರನಲ್ಲಿ ಅವು ತೋರುವುದಿಲ್ಲ. ಚಿತ್, ಚಿತಿ =ಶುದ್ಧಚೈತನ್ಯ, ಪರಬ್ರಹ್ಮ. ಈಶ್ವರ= ಸಗುಣಬ್ರಹ್ಮ. ಪ್ರಕೃತಿ, ಮಾಯೆ, ಅವ್ಯಕ್ತ, ಅವಿದ್ಯೆ- ಇವು ಸಮಾನಾರ್ಥಕಪದಗಳು. ಸಂದರ್ಭವಶದಿಂದ ಪ್ರಕೃತಿ ಮೊದಲಾದ ಶಬ್ದಗಳಿಗೆ ಅರ್ಥಭೇದವೂ ಆಗಬಹುದು.

ಅವಿಕಾರಿನಿರಸ್ತಸಂಗಬೋಧೈ-
ಕರಸಾತ್ಮಾಶ್ರಯತಾ ನ ಯುಜ್ಯತೇಽಸ್ಯಾಃ |
ಅತ ಏವ ವಿಶಿಷ್ಟಸಂಶ್ರಿತತ್ವಂ
ಪ್ರಕೃತೇಃ ಸ್ಯಾದಿತಿ ನಾಪಿ ಶಂಕನೀಯಮ್ || ೯೭

ಭಟ್ಟಭಾಸ್ಕರ - ವಿಕಾರರಹಿತವೂ ಅಸಂಗವೂ ಜ್ಞಾನೈಕರಸವೂ ಆದ ಪರಬ್ರಹ್ಮದಲ್ಲಿ(ಮಲಿನವಾದ) ಪ್ರಕೃತಿಯು ಇದೆಯೆನ್ನುವುದು ಹೊಂದುವುದಿಲ್ಲ. ಆದ್ದರಿಂದ ಅಂತಃಕರಣ ವಿಶಿಷ್ಟಜೀವನಲ್ಲಿ ಈ ಪ್ರಕೃತಿ ಇದೆಯೆನ್ನುವುದೇ ಯುಕ್ತವಾಗಿದೆ.

ನ ಹಿ ಮಾನಕಥಾ ವಿಶಿಷ್ಟಗತ್ವೇ
ಭವದಾಪಾದಿತ ಈಕ್ಷ್ಯತೇ ತಥಾ ಹಿ |
ಅಹಮಜ್ಞ ಇತಿ ಪ್ರತೀತಿರೇಷಾ
ನ ಹಿ ಮಾನತ್ವಮಿಹಾಶ್ನುತೇ ತಥಾ ಚೇತ್ || ೯೮

ಶ್ರೀಶಂಕರ - ಈ ಶಂಕೆಗೆ ಅವಕಾಶವಿಲ್ಲ. ನೀವು ಆಪಾದಿಸುವಂತೆ ಅಂತಃಕರಣವಿಶಿಷ್ಟನಾದ ಜೀವನಲ್ಲಿ ಪ್ರಕೃತಿ (ಮಾಯೆ)ಇದೆಯನ್ನುವುದಕ್ಕೆ ಯಾವ ಪ್ರಮಾಣವೂ ಇಲ್ಲ

ಭಟ್ಟಭಾಸ್ಕರ- 'ನಾನು ಅಜ್ಞಾನಿ' ಎಂದು ಜನರಿಗಾಗುವ ಪ್ರತೀತಿಯೇ ಜೀವನಲ್ಲಿ ಮಾಯೆ ಇದೆಯನ್ನುವುದಕ್ಕೆ ಪ್ರಮಾಣವಾಗುತ್ತದೆ.

ಅನುಭವ್ಯಹಮಿತ್ಯಪಿ ಪ್ರತೀತೇಃ
ಅನುಭೂತೇಶ್ಚ ವಿಶಿಷ್ಟನಿಷ್ಠತಾ ಸ್ಯಾತ್ |
ಅಜಡಾನುಭವಸ್ಯ ನೋ ಜಡಾಂತಃ-
ಕರಣಸ್ಥತ್ವಮಿತೀಷ್ಟತಾ ನ ತಸ್ಯಾಃ || ೯೯

ಶ್ರೀಶಂಕರ - ಅದು ಸರಿಯಲ್ಲ. ಹಾಗಾದರೆ 'ನಾನು ಜ್ಞಾನಿ' - ಎಂದೂ ಪ್ರತೀತಿಯಾಗುವುದರಿಂದ ಈ ಅನುಭೂತಿಯೂ ಅಂತಃಕರಣವಿಶಿಷ್ಟಜೀವನಲ್ಲಿದೆ ಎಂದು ಹೇಳಬೇಕಾದೀತು. ಜಡವಲ್ಲದ ಚೇತನಸ್ವರೂಪವಾದ ಅನುಭೂತಿಯು ಜಡವಾದ ಅಂತಃಕರಣದಲ್ಲಿದೆ ಎನ್ನುವುದು ಒಪ್ಪತಕ್ಕದ್ದಲ್ಲ.

ವಿವರಣೆ :-ಅಜ್ಞಾನಿ ಎಂಬುದಕ್ಕೆ ವಿರುದ್ಧವಾಗಿ ಜ್ಞಾನಿ ಎಂಬ ಪ್ರತೀತಿಯೂ ಬರುವುದರಿಂದ ಭಟ್ಟಭಾಸ್ಕರನು ತೋರಿಸಿದ್ದು ಪ್ರಮಾಣವಲ್ಲ - ಎಂದು ಅಭಿಪ್ರಾಯ. ಜ್ಞಾನ-ಅಜ್ಞಾನಗಳ ಸಂಬಂಧವನ್ನು ಅಂತಃಕರಣವಿಶಿಷ್ಟಜೀವನಲ್ಲಿ ಹೇಳಿದ್ದರೂ ವಿಶೇಷಣವಾದ ಅಂತಃಕರಣಕ್ಕೆ ಮಾತ್ರ ಅದು ಅನ್ವಯಿಸುತ್ತದೆ ಯೆಂದು ತಿಳಿಯಬೇಕು. ವಿಶೇಷ್ಯಕ್ಕೆ ಹೇಳಿದ ಧರ್ಮಗಳು ಕೆಲವು ಕಡೆ ವಿಶೇಷಣಕ್ಕೆ ಮಾತ್ರ ಅನ್ವಯಿಸುತ್ತವೆ.

ಉದಾ:

೧. 'ವಿಷಮಿಶ್ರವಾದ ಆಹಾರವು ಮಾರಕವಾಗುತ್ತದೆ'. ಇಲ್ಲಿ ಮಾರಕತ್ವವು ವಿಶೇಷಣವಾದ ವಿಷಕ್ಕೆ ಮಾತ್ರ ಅನ್ವಯಿಸುತ್ತದೆ. ಆಹಾರಕ್ಕಲ್ಲ.

೨. 'ಆಯುಧಧಾರಿಗಳು ಒಳಗೆ ಹೋಗಕೂಡದು.' ಇಲ್ಲಿ ಪ್ರವೇಶನಿಷೇಧವು ಆಯುಧಗಳಿಗೆ ಅನ್ವಯಿಸುತ್ತದೆ, ಜನರಿಗಲ್ಲ.

ನನು ದಾಹಕತಾ ಯಥಾಗ್ನಿಯೋಗಾತ್
ಅಧಿಕೂಟಂ ವ್ಯಪದಿಶ್ಯತೇ ತಥೈವ |
ಅನುಭೂತಿಮದಾತ್ಮಯೋಗತೋಽಂತಃ-
ಕರಣೇ ಸಾ ವ್ಯಪದಿಶ್ಯತೇಽನುಭೂತಿಃ || ೧೦೦

ಭಟ್ಟಭಾಸ್ಕರ - ಅಗ್ನಿಸಂಯೋಗದಿಂದ ಕಬ್ಬಿಣದ ಗುಂಡು ಬಿಸಿಯಾದಾಗ'ಕಬ್ಬಿಣದ ಗುಂಡು ಸುಡುತ್ತದೆ - ಇದರಲ್ಲಿ ಸುಡುವ ಶಕ್ತಿ ಇದೆ' ಎಂದು ಹೇಳುತ್ತಾರಲ್ಲವೆ? ಹಾಗೆಯೇ ಅನುಭೂತಿಯು (ಜ್ಞಾನವು) ಜೀವಾತ್ಮನಿಷ್ಠವಾದರೂ ಜೀವಾತ್ಮನೊಡನೆ ತಾದಾತ್ಮ್ಯ ಸಂಬಂಧವಿರುವ ಅಂತಃಕರಣದಲ್ಲಿ ಅನುಭೂತಿಯನ್ನು ಆರೋಪಿಸಿಕೊಂಡು 'ನಾನು ಜ್ಞಾನಿ' ಎಂಬ ವ್ಯವಹಾರವು ಬರಬಹುದು.

ವಿವರಣೆ : ಸುಡುವ ಶಕ್ತಿಯು ಕಬ್ಬಿಣದ ಗುಂಡಿನಲ್ಲಿ ಆರೋಪಿತವಾಗಿರುವಂತೆ ಅನುಭೂತಿಯು ಅಂತಃಕರಣದಲ್ಲಿ ಆರೋಪಿತವಾಗಿದೆ - ಎಂದು ಅಭಿಪ್ರಾಯ. ಭಟ್ಟಭಾಸ್ಕರನು ಭೇದವಾದಿಯಾಗಿ ಜೀವಾತ್ಮನಲ್ಲಿ ಪ್ರಕೃತಿ ಇದೆಯೆಂದು ವಾದಿಸುತ್ತಿರುವುದರಿಂದ, ಈ ಶ್ಲೋಕದಲ್ಲಿರುವ ಆತ್ಮಶಬ್ದಕ್ಕೆ ಜೀವಾತ್ಮನೆಂದು ಅರ್ಥ.

ಇತಿ ಚೇನ್ನೈವಮಿಹಾಪಿ ತಸ್ಯ ಮಾಯಾ-
ಶ್ರಯಚಿನ್ಮಾತ್ರಯುತೇ ತಥೋಪಚಾರಃ |
ನ ಪುನಸ್ತದುಪಾಧಿಯೋಗತೋಽಂತಃ-
ಕರಣಸ್ಯೇತಿ ಸಮಾಽನ್ಯಥಾಗತಿರ್ಹಿ || ೧೦೧

ಶ್ರೀಶಂಕರ - ಅದಾಗದು. 'ನಾನು ಅಜ್ಞಾನಿ' ಎಂಬ ಅನುಭವದಲ್ಲಿಯೂ ಅದೇ ಸಮಾಧಾನ ಉಂಟು. ಮಾಯಾಶ್ರಯವಾದ ಚಿನ್ಮಾತ್ರದ ಸಂಬಂಧವಿರುವ ಅಂತಃಕರಣದಲ್ಲಿ 'ನಾನು ಅಜ್ಞಾನಿ' ಎಂಬ ಅನುಭವವು ಆರೋಪಿತವಾಗಿದೆ. ಚಿದ್ವಸ್ತುವಿಗೆ ಉಪಾಧಿಯಾದ ಪ್ರಕೃತಿಯ (ಮಾಯೆಯ) ಸಂಬಂಧದಿಂದ ಅಲ್ಲ. ಹೀಗೆ ಆರೋಪವೆಂಬ ಅನ್ಯಥಾ ಗತಿಯು ಉಭಯಪಕ್ಷಗಳಲ್ಲಿಯೂ ಸಮಾನವಾಗಿದೆಯಲ್ಲವೆ?

ವಿವರಣೆ : ಭಾಸ್ಕರನ ಪಕ್ಷದಲ್ಲಿ ಅನುಭೂತಿಯುಕ್ತ ಜೀವಾತ್ಮ ಸಂಬಂಧದಿಂದ ಅಂತಃಕರಣದಲ್ಲಿ ಜ್ಞಾನದ ಆರೋಪ, ಆಚಾರ್ಯರ ಪಕ್ಷದಲ್ಲಿ ಮಾಯಾಶ್ರಯಚಿತ್‌ಸಂಬಂಧದಿಂದ ಅಂತಃಕರಣದಲ್ಲಿ ಅಜ್ಞಾನದ ಆರೋಪ. ತದುಪಾಧಿ = ಆಚಾರ್ಯರ ಮತದಿಂದ ಚಿದ್ವಸ್ತುವಿನ ಉಪಾಧಿ. ಭಾಸ್ಕರನ ಮತದಂತೆ ಜೀವಾತ್ಮನ ಉಪಾಧಿ.

ನ ಚ ತತ್ರ ಹಿ ಬಾಧಕಸ್ಯ ಸತ್ತ್ವಾತ್
ಇಯಮಸ್ತು ಪ್ರಕೃತೇರ್ನ ಸಾऽಸ್ಯ ಬಾಧಾತ್ |
ಇತಿ ವಾಚ್ಯಮಿಹಾಪಿ ತಜ್ಜಚಿತ್ತೇ
ತದುಪಾಶ್ರಿತ್ಯಯುಜೇಶ್ಚ ಬಾಧಕತ್ವಾತ್ || ೧೦೨

ಭಟ್ಟಭಾಸ್ಕರ - ಜಡವಾದ ಅಂತಃಕರಣದಲ್ಲಿ ಜಡವಲ್ಲದ ಅನುಭೂತಿಯುಂಟಾಗುತ್ತದೆಯೆಂಬುದು ಉಪಪನ್ನವಾಗುವುದಿಲ್ಲ. ಅನುಪಪತ್ತಿಯೆಂಬ ಬಾಧಕವಿರುವುದರಿಂದ ಅನುಭೂತಿಯನ್ನು ಅಂತಃಕರಣದಲ್ಲಿ ಆರೋಪಿಸುವುದೇ ಗತಿಯೆಂದು ಒಪ್ಪಬಹುದು. ಆದರೆ ಜಡವಾದ ಅಂತಃಕರಣದಲ್ಲಿ ಪ್ರಕೃತಿಜನ್ಯವಾದ (ಜಡವಾದ)ಅಜ್ಞಾನವಿದೆ - ಎಂದರೆ ಯಾವ ಬಾಧೆಯೂ ಇಲ್ಲ. ಆದ್ದರಿಂದ ನನ್ನ ಪಕ್ಷದಲ್ಲಿ ಅಜ್ಞಾನವನ್ನು ಆರೋಪಿಸಬೇಕೆಂಬ ಅನ್ಯಥಾಗತಿ ಇಲ್ಲ.

ಶ್ರೀಶಂಕರ -ಹಾಗೆ ಹೇಳಲಾಗುವುದಿಲ್ಲ. ಅವಿದ್ಯಾ (ಪ್ರಕೃತಿ) ಜನ್ಯವಾದ ಅಂತಃಕರಣವನ್ನು ಅವಿದ್ಯೆಯು (ಅಜ್ಞಾನವು)ಆಶ್ರಯಿಸಿಕೊಂಡಿದೆಯೆನ್ನುವುದು ದೋಷವಾಗುತ್ತದೆ.

ವಿವರಣೆ : ಮಣ್ಣಿನಿಂದ ಹುಟ್ಟಿದ ಗಡಿಗೆಯನ್ನು ಮಣ್ಣು ಆಶ್ರಯಿಸಿಕೊಂಡಿದೆ ಎನ್ನುವುದು ಸರಿಯಲ್ಲ. ಆದ್ದರಿಂದ ನಿಮ್ಮ ಪಕ್ಷದಲ್ಲಿಯೂ ಅಜ್ಞಾನದ ಆರೋಪವು ಬೇಕು ಎಂದು ಅಭಿಪ್ರಾಯ. ತದುಪಾಶ್ರಿತ್ಯ ಯುಜೇಃ = ಅಂತಃ ಕರಣವನ್ನು ಆಶ್ರಯಿಸಿಕೊಂಡು, ಯುಜಿಃ = ಯೋಗ ಹೊಂದಿರುವುದು.

ಇನ್ನೊಂದು ಬಗೆಯಲ್ಲಿ ಅರ್ಥವನ್ನು ಹೇಳಬಹುದೆಂದು ತೋರುತ್ತದೆ - "ಅವಿದ್ಯಾಜನ್ಯಚಿತ್ತದಲ್ಲಿ (ನೀವು ಹೇಳುವಂತೆ ಅಜ್ಞಾನವು ಸಹಜವಾಗಿದ್ದರೆ) ಅವಿದ್ಯಾ ಸಂಬಂಧರಾಹಿತ್ಯವಾಗುವುದೇ ದೋಷವಾಗುತ್ತದೆ." ತದುಪಾಶ್ರಿತಿ+ಅಯುಜಿ ಎಂದು ಪದವಿಭಾಗ. ಭಾಸ್ಕರನ ಮತದಂತೆ ಚಿತ್ತದಲ್ಲಿ ಅಜ್ಞಾನವು ಸಹಜವಾಗಿರುತ್ತದೆ. ಯಾವುದೇ ಒಂದು ಜ್ಞಾನವು ಹುಟ್ಟಿದಾಗ, ಅಜ್ಞಾನವು ತೊಲಗುವುದು ಹೇಗೆ? ಜ್ಞಾನ - ಅಜ್ಞಾನಗಳು ಒಂದೇಕಾಲದಲ್ಲಿ ಒಂದು ಕಡೆ ಇರಲಾರವು.

ಅಧಿಸುಪ್ತ್ಯಪಿ ಚಿತ್ತವರ್ತಿ ತತ್‌ಸ್ಯಾತ್
ಯದಿ ಚಾಜ್ಞಾನಮಿದಂ ಹೃದಾಶ್ರಿತಂ ಸ್ಯಾತ್ |
ತದಿಹಾಸ್ತಿ ನ ಮಾನಮುಕ್ತರೀತ್ಯಾ
ಪ್ರಕೃತೇರ್ದೃಶ್ಯವಿಶಿಷ್ಟನಿಷ್ಠತಾಯಾಮ್ || ೧೦೩

ಅಲ್ಲದೆ ಅಜ್ಞಾನವು ಸಹಜವಾಗಿ ಚಿತ್ತದಲ್ಲಿರುವುದಾದರೆ ಸುಷುಪ್ತಿಕಾಲದಲ್ಲಿಯೂ ಅದು ಚಿತ್ತದಲ್ಲಿ ಇರಲೇ ಬೇಕಾಗುತ್ತದೆ. (ಆಗ ಸುಷುಪ್ತಿಕಾಲದಲ್ಲಿಯೂ 'ನಾನು ಅಜ್ಞ'ಎಂಬ ಅನುಭವವೇಕೆ ಬರುವುದಿಲ್ಲ?). ಆದ್ದರಿಂದ ಪ್ರಕೃತಿಯು ದೃಶ್ಯವಾದ(ಜ್ಞೇಯವಾದ) ಅಂತಃಕರಣದಿಂದ ವಿಶಿಷ್ಟನಾದ ಜೀವನಲ್ಲಿದೆಯೆಂಬುದಕ್ಕೆ ಯಾವ ಪ್ರಮಾಣವೂ ಇಲ್ಲ.

ಟಿಪ್ಪಣಿ :- ಪ್ರಕೃತಿ, ಮಾಯೆ, ಅಜ್ಞಾನ, ಅವಿದ್ಯೆ - ಈ ಶಬ್ದಗಳನ್ನು ಒಂದೇ ಅರ್ಥದಲ್ಲಿ ಬಳಸಲಾಗಿದೆ.

ನನು ನ ಪ್ರತಿಬಂಧಿಕೈವ ಸುಪ್ತಾ-
ವಿತಿ ಸಾ ದೂರತ ಏವ ಚಿದ್ಗತೇತಿ |
ಪ್ರತಿಬಂಧಕಶೂನ್ಯತಾ ತು ಸುಪ್ತೇಃ
ಪರಮಾತ್ಮೈಕ್ಯಗತೇಃ ಸತೇತಿ ವಾಕ್ಯಾತ್ || ೧೦೪

ಭಟ್ಟಭಾಸ್ಕರ - ಸುಷುಪ್ತಿಯಲ್ಲಿ ಜೀವಬ್ರಹ್ಮೈಕ್ಯಕ್ಕೆ ಪ್ರತಿಬಂಧಕವಾದ ಅವಿದ್ಯೆಯೇ ಇರುವುದಿಲ್ಲ. ಇನ್ನು ಅದು ಚಿದ್ಗತವಾಗಿದೆಯೆಂಬುದು ದೂರಾಪಾಸ್ತವಾಗುತ್ತದೆ. 'ಸತಾ ಸೋಮ್ಯ ತದಾ ಸಂಪನ್ನೋ ಭವತಿ. ಸ್ವಮಪೀತೋ ಭವತಿ' (ಛಾಂ. ೬-೮-೧) ಎಂಬ ಶ್ರುತಿವಚನವು ಸುಷುಪ್ತಿಯಲ್ಲಿ ಜೀವನು ಪರಮಾತ್ಮನಲ್ಲಿ ಸೇರಿಹೋಗುತ್ತಾನೆ - ಎಂದು ತಿಳಿಸುವುದರಿಂದ ಐಕ್ಯಪ್ರತಿಬಂಧಕವಾದ ಅವಿದ್ಯೆ ಆಗ ಇರುವುದಿಲ್ಲವೆಂದು ಸ್ಪಷ್ಟವಾಗಿದೆ.

ವಿವರಣೆ :- ಚಿದ್ಗತವಾಗಿದ್ದರೆ ಆಗ ಅವಿದ್ಯೆ ಇರಬೇಕಾಗಿತ್ತು. ಇಲ್ಲದ್ದರಿಂದ 'ನಾನು ಅಜ್ಞ' ಎಂಬ ಜ್ಞಾನವೂ ಹುಟ್ಟುವುದಿಲ್ಲ.

ನ ಚ ತತ್ರ ಚ ತತ್‌ಸ್ಥಿತಿಪ್ರತೀತಿಃ
ಸತಿ ಸಂಪದ್ಯ ವಿದುರ್ನ ಹೀತಿ ವಾಕ್ಯಾತ್ |
ಶ್ರುತಿಗೀಸ್ತದಧಿಕ್ಷಿಪತ್ಯಭಾವ-
ಪ್ರತಿಪತ್ತೇರ್ನ ಚ ನಿಹ್ನವೋಽತ್ರ ನೇತಿ || ೧೦೫

ಆದರೆ ಇಲ್ಲೊಂದು ಶಂಕೆ ಬರಬಹುದು. 'ಸತಿ ಸಂಪದ್ಯ ನ ವಿದುಃ ಸತಿ ಸಂಪದ್ಯಾಮಹ ಇತಿ' (ಛಾಂ. ೬-೯-೨) ಎಂಬ ಶ್ರುತಿವಚನವೂ ಇದೆ. ಪರಮಾತ್ಮನಲ್ಲಿ ಜೀವರು ಸೇರಿಹೋದರೂ ಅದು ಅವರಿಗೆ 'ತಿಳಿಯುವುದಿಲ್ಲ - ಎಂದು ಅದರ ಅರ್ಥ. -ತಿಳಿಯುವುದಿಲ್ಲ' ಎಂಬುದೇ ಆಗ ಅಜ್ಞಾನವಿದೆ ಎಂಬುದಕ್ಕೆ ಪ್ರಮಾಣವಾಗುತ್ತದೆ - ಎಂದು ಶಂಕಿಸಬಹುದು. ಹಾಗಲ್ಲ. ಅದು ಸರ್ವವಿಧಜ್ಞಾನದ ಅಭಾವವನ್ನು ಬೋಧಿಸುತ್ತದೆ. 'ನ ವಿದುಃ' ಎಂಬಲ್ಲಿ ಅಭಾವವಾಚಕವಾದ ನ ಶಬ್ದವು ಇಲ್ಲದೇ ಇಲ್ಲ. (ಇದ್ದೇ ಇದೆ).

ವಿವರಣೆ : ಪರಮಾತ್ಮನಲ್ಲಿ ಸೇರಿದ್ದು ನನಗೆ ಗೊತ್ತಿಲ್ಲ - ಎಂಬ ತಿಳಿವಳಿಕೆ ಇದ್ದರೆ ಅದು ಅಜ್ಞಾನವಾಗುತ್ತದೆ. ಅಜ್ಞಾನವೆಂದರೆ ತಪ್ಪುತಿಳಿವಳಿಕೆ. ಸುಷುಪ್ತಿಯಲ್ಲಿ ಈ ತಪ್ಪು ತಿಳಿವಳಿಕೆಯೂ ಇಲ್ಲವೆಂದು ಅಭಿಪ್ರಾಯ.

ಕಿಮು ನಿತ್ಯಮನಿತ್ಯಮೇವ ಚೈತತ್
ಪ್ರಥಮೋ ನೇಹ ಸಮಸ್ತಿ ಯುಕ್ತ್ಯಭಾವಾತ್ |
ಅನಿವರ್ತಕ ಸತ್ತ್ವತೋಽಸ್ಯ ನಾಂತ್ಯೋ
ನ ಹಿ ಭಿಂದ್ಯಾದವಿರೋಧಿ ಚಿತ್ಪ್ರಕಾಶಃ || ೧೦೬

ಯತಿಗಳೆ, ಪ್ರಕೃತಿಯೆಂಬ ಈ ಅಜ್ಞಾನವು ನಿಮ್ಮ ಮತದಲ್ಲಿ ನಿತ್ಯವೆ ? ಅನಿತ್ಯವೆ? ನಿತ್ಯವೆಂಬುದಕ್ಕೆ ಯಾವ ಪ್ರಮಾಣವೂ ಇಲ್ಲವಾದ್ದರಿಂದ ನಿತ್ಯವೆಂಬ ಮೊದಲನೆಯ ಪಕ್ಷವು ಸರಿಯಲ್ಲ. ಅದನ್ನು ನಿವೃತ್ತಿಗೊಳಿಸುವ ವಸ್ತುವಿಲ್ಲವಾದ್ದರಿಂದ ಅನಿತ್ಯವೆಂಬ ಎರಡನೆಯ ಪಕ್ಷವೂ ಸರಿಯಲ್ಲ. ನಿಮ್ಮ ಮತದಂತೆ ಚಿತ್ತದಲ್ಲಿರುವ ಅಜ್ಞಾನಕ್ಕೆ ಚೈತನ್ಯಪ್ರಕಾಶವು ವಿರುದ್ಧವಾಗುವುದಿಲ್ಲ.

ವಿವರಣೆ: ಚಿದ್ವಸ್ತುವಿನಲ್ಲಿ ಪ್ರಕೃತಿ (ಅಜ್ಞಾನ)ಯಿದ್ದರೆ ಚಿತ್‌ಪ್ರಕಾಶವೆಂಬ ಜ್ಞಾನವು ಅದಕ್ಕೆ ವಿರೋಧಿಯಲ್ಲವೆಂದಾಯಿತು. ಆದ್ದರಿಂದ ಅದು ಅಜ್ಞಾನವನ್ನು ಹೋಗಲಾಡಿಸಲಾರದು.

ನ ಚ ತಚ್ಛ್ರಮಯೇಜ್ಜಡಪ್ರಕಾಶೋಽ-
ಪ್ಯವಿರೋಧಾತ್ ಸುತರಾಂ ಜಡತ್ವತೋಽಸ್ಯ |
ತದಿಹಾಪ್ರತಿಬಂಧಕತ್ವಮಸ್ಯ
ಪ್ರಭವೇತ್ ಕಿಂತ್ವಿಹ ತದ್ಭ್ರಮಾಗ್ರಹಾದಿ || ೧೦೭

ಇನ್ನು ಅಂತಃಕರಣದಲ್ಲಿ ಹುಟ್ಟುವ ವೃತ್ತಿಜ್ಞಾನವು ಅಜ್ಞಾನವೆಂಬ ಅವಿದ್ಯೆಯನ್ನು ನಾಶಪಡಿಸಲಾರದು. ವೃತ್ತಿಜ್ಞಾನ, ಅವಿದ್ಯೆ - ಇವು ಜಡವಾದ್ದರಿಂದ ಅವುಗಳಿಗೆ ಪರಸ್ಪರವಿರೋಧವಿಲ್ಲ. ಏವಂಚ ಜೀವ ಬ್ರಹ್ಮೈಕ್ಯ ಜ್ಞಾನಕ್ಕೆ ಪ್ರತಿಬಂಧಕವಾದ ಅಜ್ಞಾನವನ್ನು ಹೋಗಲಾಡಿಸತಕ್ಕದ್ದೇ ಇಲ್ಲವೆಂದಾಗಿ ಬಿಟ್ಟೀತು. ಆದ್ದರಿಂದ ಐಕ್ಯಜ್ಞಾನಕ್ಕೆ ಪ್ರತಿಬಂಧಕವಾದದ್ದು ಭ್ರಮೆ, ಅಗ್ರಹಣ ಅಥವಾ ಅವುಗಳಿಂದಾದ ಸಂಸ್ಕಾರವೆನ್ನುವುದೇ ಸರಿ.

ವಿವರಣೆ : ಅಜ್ಞಾನ ಅಥವಾ ಅವಿದ್ಯೆ ಎನ್ನುವುದು ವೇದಾಂತಿಗಳ ಮತದಲ್ಲಿ ಒಂದು ಭಾವಪದಾರ್ಥ. ಆತ್ಮಜ್ಞಾನದಿಂದ ಅದು ನಿವೃತ್ತವಾಗುತ್ತದೆಯೆಂದು ಅವರ ಸಿದ್ಧಾಂತ. ಅದು ಭಾವಪದಾರ್ಥವಾದರೆ ಅದನ್ನು ಹೋಗಲಾಡಿಸತಕ್ಕದ್ದೇ ಇಲ್ಲವಾದ್ದರಿಂದ ಮೋಕ್ಷವು ಸಿದ್ಧಿಸುವುದಿಲ್ಲವೆಂದು ಭಟ್ಟಭಾಸ್ಕರನ ಆಕ್ಷೇಪ. ಭ್ರಮೆ -ಮೊದಲಾದುದರ ವಿಚಾರವು ಮುಂದೆ ಬರುತ್ತದೆ.

ಇತಿ ಚೇದಿದಮೀರಯ ಭ್ರಮಃ ಕೋ
ಮನುಜೋಽಹಂ ತ್ವಿತಿ ಶೇಮುಷೀತಿ ಚೇನ್ನ |
ಅತಿವಿಸ್ಮೃತಿಶೀಲತಾ ತವಾಹೋ
ಗದಿತುಃ ಸರ್ವಪದಾರ್ಥಸಂಕರಸ್ಯ || ೧೦೮

ಶ್ರೀಶಂಕರ - ಒಳ್ಳೆಯದು. ನಿಮ್ಮ ಮತದಲ್ಲಿ ಭ್ರಮೆಯೆಂದರೇನು ? ಅದನ್ನು ಮೊದಲು ಹೇಳಿರಿ.

ಭಟ್ಟಭಾಸ್ಕರ -ನಾನು ಮನುಷ್ಯ - ಎಂಬ ಬುದ್ಧಿಯೇ ಭ್ರಮೆ.

ಶ್ರೀಶಂಕರ- ಆಹಾ! ಸರ್ವಸಂಕರವಾದಿಗಳಾದ ನಿಮಗೆ ಬಹಳ ಮರೆವು ಇದೆಯೆಂದು ಹೇಳಬೇಕಾಯಿತು !

ವಿವರಣೆ : ಭಾಸ್ಕರನು ಭೇದಾಭೇದವಾದಿ. 'ಜೀವೇಶ್ವರರಿಗೆ ಭೇದವೂ ಇದೆ- ಅಭೇದವೂ ಇದೆ, ಈಶ್ವರನು ನಿರಾಕಾರನೂ ಹೌದು -ಸಾಕಾರನೂ ಹೌದು, ಕಾರ್ಯಕಾರಣಗಳಿಗೆ ಭೇದವೂ ಇದೆ - ಅಭೇದವೂ ಇದೆ ' ಎಂದು ವಿರುದ್ಧ ಧರ್ಮಗಳ ಸಾಂಕರ್ಯವನ್ನು ಪ್ರತಿಪಾದಿಸುವುದರಿಂದ ಆತನನ್ನು ಸರ್ವಸಂಕರವಾದಿಯೆಂದು ಉಪಹಾಸಮಾಡಲಾಗಿದೆ. ಆತನ ಅಖ್ಯಾತಿವಾದದಲ್ಲಿ ಭ್ರಮೆಯೆಂಬ ಪದಾರ್ಥವೇ ಇಲ್ಲ - ಎಂದು ಅಭಿಪ್ರಾಯ.

ಪ್ರಮಿತಿತ್ವಮುಪಾಶ್ರಯನ್ ಪ್ರತೀತೇಃ
ಅಮುಕಃ ಖಂಡ ಇತಿ ಸ್ವಶಾಸ್ತ್ರಸಿದ್ಧಾತ್ |
ಭಿದಭಿದ್ದ್ವಯಗೋಚರತ್ವಹೇತೋಃ
ಧಿಯಮೇತಾಂ ತು ಕಿಮಿತ್ಯುಪೇಕ್ಷಸೇ ತ್ವಮ್ || ೧೦೯

ನಿಮ್ಮ ಶಾಸ್ತ್ರದಲ್ಲಿ ಸರ್ವವೂ ಭೇದಾಭೇದಗಳಿಗೆ ವಿಷಯವಾಗುತ್ತದೆಯೆಂದು ನಿರ್ಣಯಿಸಿದ್ದೀರಿ. ಆದ್ದರಿಂದ 'ಅದು ಕೊಂಬು ಮುರಿದ ಹೋರಿ' ಎಂಬ ಜ್ಞಾನವೂ ನಿಮಗೆ ಪ್ರಮೆಯೇ ಆಗುತ್ತದೆ. ಹೀಗಿರುವಾಗ 'ನಾನು ಮನುಷ್ಯ' ಎಂಬ ಪ್ರತೀತಿಯೂ ಪ್ರಮೆಯೇ ಆಗುತ್ತದೆ. ಇದನ್ನೇಕೆ ಉಪೇಕ್ಷಿಸಿ ಭ್ರಮೆ ಎನ್ನುತ್ತೀರಿ?

ವಿವರಣೆ : ಹಗ್ಗವನ್ನು ಹಾವೆಂದು ತಿಳಿಯುವುದು ಈ ಮತದಲ್ಲಿ ಭ್ರಮೆಯಲ್ಲ. ಹಗ್ಗದಲ್ಲಿ ಹಾವಿಗೆ ಸದೃಶವಾದ ಉದ್ದ, ವಕ್ರತೆಗಳು ಪ್ರತ್ಯಕ್ಷವಾಗಿ ಕಾಣುತ್ತವೆ. ಇದು ಪ್ರಮೆಯೇ ಸರಿ. ಆಮೇಲೆ ಹಾವಿನ ಸ್ಮರಣೆ ಬರುತ್ತದೆ. ಅದೂ ಯಥಾರ್ಥವಾದದ್ದೇ. ಇವೆರಡರ ಸಂಮಿಶ್ರಣದಿಂದ ಹಗ್ಗವನ್ನು ಹಾವೆಂದು ತಿಳಿಯುತ್ತೇವೆ. ಹಗ್ಗವೆಂಬ ಅಂಶವು ತೋರದೇ ಇರುವುದು ಅಖ್ಯಾತಿ. ಖ್ಯಾತಿಯೆಂದರೆ ಜ್ಞಾನ. ಇದೇ ಅಖ್ಯಾತಿವಾದ (ಅಥವಾ ಯಥಾರ್ಥಖ್ಯಾತಿವಾದ) ಹಗ್ಗದ ಜ್ಞಾನವಾಗಲಿಲ್ಲ. ಹಾವಿನ ಸ್ಮರಣೆ ಬಂದಿತು. ಇಲ್ಲಿ ಭ್ರಮೆ ಯಾವುದು? ನಾನು ಮನುಷ್ಯ - ಎಂಬಲ್ಲಿ ಶರೀರವನ್ನು ಮನುಷ್ಯನೆಂದು ತಿಳಿದದ್ದು ಸರಿ. ನಾನು ಎಂಬ ಶಬ್ದಕ್ಕೆ ಶರೀರಾತಿರಿಕ್ತನಾದ ಜೀವಾತ್ಮನೆಂಬ ಅರ್ಥವು ಹೊಳೆಯಲಿಲ್ಲ. ದೇಹಾದಿಸಂಘವಿಶಿಷ್ಟವೇ ನಾನು ಎಂದು ತಿಳಿದಿದ್ದಾನೆ. ಒಂದು ಅಂಶ ಸರಿಯಾದದ್ದು. ಇನ್ನೊಂದು ಅಂಶಹೊಳೆದಿಲ್ಲ. ಬಂದಿರುವ ಜ್ಞಾನ ಯಾವುದೂ ತಪ್ಪಾದದ್ದಲ್ಲ -ಎಂದು ಅಖ್ಯಾತಿವಾದಿಗಳ ಮತ.

ಅನುಮಾನಮಿದಂ ತಥಾಚ ಸಿದ್ಧಂ
ವಿಮತಾ ಧೀಃ ಪ್ರಮಿತಿರ್ಭಿದಾಭಿದತ್ವಾತ್ |
ಇಹ ಚಾರು ನಿದರ್ಶನಂ ಭವೇತ್ ಸಾ
ತವ ಖಂಡೋಽಯಮಿತಿ ಪ್ರತೀತಿರೇಷಾ || ೧೧೦

ಏವಂ ಚ ನಿಮ್ಮ ಮತದಂತೆ ಈ ರೀತಿಯಲ್ಲಿ ಅನುಮಾನ ಪ್ರಕಾರವು ಸಿದ್ಧವಾಗುತ್ತದೆ. 'ನಾನು ಮನುಷ್ಯ - ಎಂಬ ವಿವಾದಾಸ್ಪದವಾದ ಬುದ್ಧಿಯು ಪ್ರಮೆಯೇ ಹೌದು. ಭೇದಾಭೇದಗಳಿಗೆ

ವಿಷಯವಾದ್ದರಿಂದ. ಈ ಕೊಂಬುಮುರಿದದ್ದು ಹೋರಿ -ಎಂಬ ಬುದ್ಧಿಯ ಹಾಗೆ'. ಕೊಂಬು ಮುರಿದದ್ದು ಹೋರಿ ಎಂಬ ಸ್ಥಳವೇ ನಿಮಗೆ ಸರಿಯಾದ ದೃಷ್ಟಾಂತ ವಾಗುತ್ತದೆ.

ವಿವರಣೆ : ಮುಂಡಶಬ್ದಕ್ಕೆ ವೇದದಲ್ಲಿ ಕೊಂಬು ಹುಟ್ಟದಿರುವ ಹೋರಿ ಎಂಬ ಅರ್ಥವಿದೆ. ಅದಕ್ಕೆ ಅನುಗುಣವಾಗಿ ಖಂಡವೆಂದರೆ ಕೊಂಬುಮುರಿದಿರುವ ಹೋರಿ ಎಂದರ್ಥ. ಈ ಶ್ಲೋಕಗಳಲ್ಲಿ ಗೋಶಬ್ದವನ್ನು ಪುಲ್ಲಿಂಗದಲ್ಲಿ ಪ್ರಯೋಗಿಸಿರುವುದರಿಂದ ಎತ್ತು - ಹೋರಿ ಎಂದರ್ಥ. ಕೊಂಬಿಲ್ಲದ ಗೋವನ್ನು ನೋಡಿ ಒಬ್ಬನಿಗೆ ಇದು ಕೊಂಬು ಮುರಿದ ಹೋರಿ ಎಂಬ ಭ್ರಮೆ ಬರುತ್ತದೆ. ಆಮೇಲೆ ಇನ್ನೂ ಕೊಂಬು ಹುಟ್ಟದಿರುವ ಹೋರಿ ಎಂದು ಗೊತ್ತಾಗುತ್ತದೆ. ಭಾಸ್ಕರನ ಮತದಂತೆ ಮೊದಲು ಹುಟ್ಟಿದ ಭ್ರಮೆಯೂ ಪ್ರಮೆಯಾಗಿ ಬಿಡುತ್ತದೆ.

ನನು ಸಂಹನನಾತ್ಮಧೀಃ ಪ್ರಮಾಣಂ
ನ ಭವತ್ಯೇವ ನಿಷಿದ್ಧ್ಯಮಾನಗತ್ವಾತ್ |
ಇದಮಿತಿ ಪ್ರತಿಪನ್ನರೂಪ್ಯಧೀವತ್
ಪ್ರಬಲಾ ಸತ್ಪ್ರತಿಪಕ್ಷತೇತಿ ಚೇನ್ನ || ೧೧೧

ಭಟ್ಟಭಾಸ್ಕರ - ದೇಹವು ಪರಮಾತ್ಮನೆಂಬ ಜ್ಞಾನವು ಪ್ರಮಾಣ ಭೂತವಾದ್ದಲ್ಲ. 'ಅಹಂ ಬ್ರಹ್ಮಾಸ್ಮಿ' ಎಂದು ಉತ್ತರಕಾಲದಲ್ಲುಂಟಾಗುವ ಜ್ಞಾನದಿಂದ ಅದು ಬಾಧಿತವಾಗಿಬಿಡುತ್ತದೆ. ಇದು ಬೆಳ್ಳಿ ಎಂಬ ಬುದ್ಧಿಯು, ಇದು ಶುಕ್ತಿಎಂಬ ಜ್ಞಾನದಿಂದ ಬಾಧಿತವಾಗುವಂತೆ ನಾನು ಮನುಷ್ಯನೆಂಬ ಬುದ್ಧಿಯು ಬಾಧಿತವಾದ್ದರಿಂದ ಪ್ರಮಾಣವಲ್ಲ. ನೀವು ಹೇಳಿದ ಅನುಮಾನದಲ್ಲಿ ಈ ರೀತಿಯಾಗಿ ಪ್ರಬಲವಾದ ಸತ್ಪ್ರತಿಪಕ್ಷತೆ ಇರುವುದರಿಂದ ನೀವು ಹೇಳಿದ್ದು ಹೇತ್ವಾಭಾಸವೇ ಸರಿ.

ವಿವರಣೆ : ಮೊದಲು ಬಂದ ಜ್ಞಾನವು ಭ್ರಮೆಯೆಂದು ನಾವು ಹೇಳದಿದ್ದರೂ ಉತ್ತರಕಾಲದಲ್ಲಾದ ಜ್ಞಾನದಿಂದ ಬಾಧಿತವಾದಾಗ ಪ್ರಮಾಣವಾಗುವುದಿಲ್ಲ. ಉದ್ದಿಷ್ಟಫಲವನ್ನು ಕೊಡುವ ಕಾರ್ಯಕಾರಿಯಲ್ಲ - ಎಂದು ಅಭಿಪ್ರಾಯ. ಯಸ್ಯ ಸಾಧ್ಯಾಭಾವ ಸಾಧಕಂ ಹೇತ್ವಂತರಂ ವಿದ್ಯತೇ ಸಃ ಸತ್ಪ್ರತಿಪಕ್ಷಃ - ಎಂದು ಸತ್ಪ್ರತಿಪಕ್ಷದ ಲಕ್ಷಣ. ಯಾವ ವಿಷಯವನ್ನು ಸಾಧಿಸುವದಕ್ಕಾಗಿ ವಾದಿಯು ಒಂದು ಹೇತುವನ್ನು ಹೇಳುತ್ತಾನೋ ಅದಕ್ಕೆ ವಿರುದ್ಧವಾದ್ದನ್ನು ಸಾಧಿಸಬಲ್ಲ ಇನ್ನೊಂದು ಹೇತುವಿದ್ದರೆ ವಾದಿಯು ಹೇಳಿದ ಹೇತು ಸತ್ಪ್ರತಿಪಕ್ಷವೆನಿಸುತ್ತದೆ. ಇದು ಹೇತ್ವಾಭಾಸ - ದುಷ್ಟಹೇತು. ಗ್ರಂಥವು ವಿಸ್ತಾರವಾಗುವುದರಿಂದ ಈ ಪ್ರಕರಣದಲ್ಲಿ ವಿವರಣೆಯನ್ನು ಸಂಕ್ಷೇಪವಾಗಿ ಬರೆಯಲಾಗುವುದು.

ವ್ಯಭಿಚಾರಯುತತ್ವತೋಽಸ್ಯ ಖಂಡಃ
ಪಶುರಿತ್ಯತ್ರ ತದನ್ಯಧೀಸ್ಥಮುಂಡೇ |
ಇತರತ್ರ ನಿಷಿಧ್ಯಮಾನಖಂಡೋ-
ಲ್ಲಿಖಿತತ್ವೇನ ನಿರುಕ್ತಹೇತುಮತ್ತ್ವಾತ್ || ೧೧೨

ಶ್ರೀಶಂಕರ - ಅಲ್ಲ, ನೀವು ಹೇಳಿದ ಹೇತುವೇ 'ಖಂಡಃ ಪಶುಃ' ಎಂಬಲ್ಲಿ ವ್ಯಭಿಚರಿತವಾದ್ದರಿಂದ ಸವ್ಯಭಿಚಾರವೆಂಬ ದುಷ್ಟಹೇತುವಾಗಿದೆ. ಹೇಗೆಂದರೆ, 'ಈ ಪಶುವು ಖಂಡವಲ್ಲ, ಕಿಂತು ಮುಂಡ' ಎಂಬಲ್ಲಿ ಮುಂಡವೆಂಬ ಜ್ಞಾನವು ಬಂದಾಗ ಖಂಡ ಎಂಬ ಅಂಶವು ನಿಷಿದ್ಧವಾದರೂ ಇದು ಪಶುವೆಂಬ ಅಭೇದಬುದ್ಧಿ ಇದ್ದೇ ಇರುತ್ತದೆ. ಅದು ಪ್ರಮಾಣವೂ ಆಗಿದೆ. ನೀವು ಹೇಳಿದ ಹೇತುವು ಸಾಧ್ಯವಲ್ಲದ ಸ್ಥಳದಲ್ಲಿದೆ.

ವಿವರಣೆ : 'ನಾನು ಮನುಷ್ಯ' ಎಂದರೆ ದೇಹಾದಿ ಸಂಘಾತ ವುಳ್ಳ ಜೀವಾತ್ಮನಾದ ನಾನು ಮನುಷ್ಯ ಎಂದರ್ಥ. ನಾನು ಬ್ರಹ್ಮ -ಎಂದು ಗೊತ್ತಾದಾಗ ನಾನು ಮನುಷ್ಯನಲ್ಲ ಎಂದು ಮಾತ್ರ ತಿಳಿಯುತ್ತದೆ. ಏವಂಚ 'ನಾನು ದೇಹಾದಿ ಸಂಘಾತವುಳ್ಳ ಜೀವಾತ್ಮನಾದ ಬ್ರಹ್ಮ', ಎಂದು ಅರ್ಥವಾಗುತ್ತದೆ. ಈ ಜ್ಞಾನವು ಪ್ರಮಾಣವಾಗಿಬಿಡುತ್ತದೆ ಎಂದು ಅಭಿಪ್ರಾಯ. ಸಾಧ್ಯವಿಲ್ಲದ ಸ್ಥಳದಲ್ಲಿ ಹೇತುವಿರುವುದಕ್ಕೆ ವ್ಯಭಿಚಾರವೆಂದು ಹೆಸರು.

ನನು ಹೇತುರಯಂ ವಿವಕ್ಷ್ಯತೇಽತ್ರ
ಪ್ರತಿಪನ್ನೋಪಧಿಕೇ ನಿಷೇಧಗತ್ವಮ್ ।
ಇತಿ ಚೇನ್ನ ವಿವಕ್ಷಿತಸ್ಯ ಹೇತೋಃ
ವ್ಯಭಿಚಾರಾತ್ ಪುನರಪ್ಯಮುತ್ರ ಚೈವ ॥ ೧೧೩

ಭಟ್ಟಭಾಸ್ಕರ -(ನಿಷೇಧವು ಸಮುದಾಯಕ್ಕೆ ಅನ್ವಯಿಸುವುದಿಲ್ಲ) ಮೊದಲು ಪ್ರತೀತವಾದ ಧರ್ಮಕ್ಕೆ ಯಾವುದು ಆಶ್ರಯವೋ ಅದರಲ್ಲಿ ಮಾತ್ರ ಧರ್ಮದ ನಿಷೇಧವು ತೋರುತ್ತದೆಯೆಂಬುದು ಇಲ್ಲಿ ವಿವಕ್ಷಿತ.

ವಿವರಣೆ : ನಾನು ಮನುಷ್ಯ - ಎಂಬಲ್ಲಿ ಪ್ರತೀತವಾಗುವ ಮನುಷ್ಯತ್ವವೆಂಬ ಉಪಾಧಿಗೆ (ಧರ್ಮಕ್ಕೆ) ಆಶ್ರಯವಾದದ್ದು ಆತ್ಮ. ನಾನು ಬ್ರಹ್ಮ ಎಂದು ಗೊತ್ತಾದಾಗ ಈ ಮನುಷ್ಯತ್ವವು ಆತ್ಮನಲ್ಲಿ ನಿಷಿದ್ಧವಾಗುವುದರಿಂದ ನಾನು ಮನುಷ್ಯ ಎಂಬ ಜ್ಞಾನವು ಪ್ರಮಾಣವಲ್ಲ - ಯಥಾರ್ಥವಲ್ಲವೆಂದು ಅಭಿಪ್ರಾಯ. ಪ್ರತೀತವಾದ ಉಪಧಿಯು- ಧರ್ಮವಿಶೇಷವು ಯಾವುದರಲ್ಲಿ ಕಾಣಿಸುವುದೋ ಅದು. ಪ್ರತಿಪನ್ನೋಪಧಿಕವೆಂದು ಬಹುವ್ರೀಹಿ ಸಮಾಸ. ತೋರುವ ಧರ್ಮಕ್ಕೆ ಯಾವುದು ಆಶ್ರಯವಾಗಿದೆಯೋ ಅದು. ಉಪಧಿ, ಉಪಾಧಿ ಎಂದು ಎರಡು ರೂಪಗಳುಂಟು.

ಶ್ರೀಶಂಕರ -ಹಾಗೆ ಹೇಳಿದರೂ 'ಖಂಡೋ ಗೌಃ' ಎಂಬಲ್ಲಿ ವ್ಯಭಿಚಾರವಿದ್ದೇ ಇದೆ!

ಟಿಪ್ಪಣಿ :- ನಾಯಂ ಖಂಡೋ ಗೌಃ, ಕಿಂತು ಮುಂಡೋ ಗೌಃ - ಎಂಬುದು ವಿವಕ್ಷಿತ ಸ್ಥಳ.

ನನು ಗೋತ್ವ ಉಪಾಧಿಕೇ ತ್ವಮುಷ್ಯ
ಪ್ರತಿಪನ್ನಸ್ಯ ಹಿ ತತ್ರ ನೋ ನಿಷೇಧಃ ।
ಅಪಿ ತು ಪ್ರಥಮಾನಮುಂಡ ಇತ್ಯತ್ರ
ತಥಾ ಚ ವ್ಯಭಿಚಾರಿತಾ ನ ಹೇತೋಃ ॥ ೧೧೪

ಭಟ್ಟಭಾಸ್ಕರ - ಅದು ಹೇಗೆ? 'ಖಂಡವು ಗೋವಲ್ಲ, ಮುಂಡವು ಗೋವು' ಎಂಬ ನಿಷೇಧಘಟಿತವಾಕ್ಯದಲ್ಲಿ ಪ್ರತೀತವಾದ ಧರ್ಮವು ಗೋತ್ವ. ಇದಕ್ಕೆ ಆಶ್ರಯವಾಗಿರುವುದು ಸ್ಪಷ್ಟವಾಗಿ ತೋರುವ ಮುಂಡ. ಅದರಲ್ಲಿ ಖಂಡತ್ವವು ನಿಷಿದ್ಧವಾಗುತ್ತದೆ. ಮುಂಡವು ಗೋವು ಎಂಬುದು ಸಾಧ್ಯವೇ ಆದ್ದರಿಂದ ನಿಷೇಧವೆಂಬ ಹೇತು ವ್ಯಭಿಚರಿತವಾಗಿಲ್ಲ.(ಸಾಧ್ಯವಿಲ್ಲದ ಸ್ಥಳದಲ್ಲಿ ಹೇತುವಿಲ್ಲ.)

ಇತಿ ಚೇನ್ನ ವಿಕಲ್ಪನಾಸಹತ್ವಾತ್
ಕಿಮು ಖಂಡಸ್ಯ ತು ಕೇವಲೇ ನಿಷೇಧಃ |
ಉತ ಗೋತ್ವಸಮನ್ವಿತೇ ಸ ಮುಂಡೇ
ಪ್ರಥಮೋ ನೋ ಘಟತೇ ಪ್ರಸಕ್ತ್ಯಭಾವಾತ್ || ೧೧೫

ಶ್ರೀಶಂಕರ - ಅದು ಸರಿಯಲ್ಲ. ನಿಷೇಧವನ್ನು ವಿಕಲ್ಪಿಸಿದಾಗ ನಿಮ್ಮ ಹೇಳಿಕೆ ತಡೆದು ಕೊಳ್ಳುವುದಿಲ್ಲ. ಹೇಗೆಂದರೆ, 'ಖಂಡವು ಗೋವಲ್ಲ, ಮುಂಡವು ಗೋವು' ಎಂಬಲ್ಲಿ ಖಂಡತ್ವದ ನಿಷೇಧವು ಕೇವಲ ಮುಂಡದಲ್ಲಿಯೇ ? ಅಥವಾ ಗೋತ್ವವಿಶಿಷ್ಟಮುಂಡದಲ್ಲಿಯೆ? ಮುಂಡದಲ್ಲಿ ಖಂಡತ್ವವು ಎಂದೂ ಪ್ರಸಕ್ತವೇ ಆಗಿಲ್ಲವಾದ್ದರಿಂದ ಅಪ್ರಸಕ್ತವಾದ ಅದನ್ನು ನಿಷೇಧಿಸಬೇಕಾದ್ದಿಲ್ಲ. ಆದ್ದರಿಂದ ಪ್ರಥಮಪಕ್ಷವು ಸರಿಯಲ್ಲ.

ನ ಹಿ ಜಾತ್ವಪಿ ಖಂಡಕೇ ಪ್ರಸಕ್ತಃ
ಪರಮುಂಡಸ್ತ್ವಿತಿ ಸಂಪ್ರಸಕ್ತ್ಯಭಾವಃ |
ಚರಮೋಽಪಿ ನ ಗೋತ್ವಯುಕ್ತ ಮುಂಡೇ
ಖಲು ಖಂಡಸ್ಯ ನಿಷೇಧಕಾಲ ಏವ || ೧೧೬

ಸ್ವವಿಶೇಷಣಭೂತಗೋತ್ವ ಏವ
ಸ್ಫುಟಮೇತಸ್ಯ ನಿಷೇಧನಂ ಶ್ರುತಂ ಸ್ಯಾತ್ |
ತದಿಹೋದಿತಹೇತುಸತ್ವತೋಽಸ್ಯ
ವ್ಯಭಿಚಾರೋ ದೃಢವಜ್ರಲೇಪ ಏವ || ೧೧೭

ಇನ್ನು ಗೋತ್ವವಿಶಿಷ್ಟ ಮುಂಡದಲ್ಲಿ ನಿಷೇಧವೆಂಬ ಎರಡನೆಯ ಪಕ್ಷವಾದರೆ, ಈ ನಿಷೇಧವು ವಿಶೇಷಣವಾದ ಗೋತ್ವಕ್ಕೆ ಸ್ಪಷ್ಟವಾಗಿ ಅನ್ವಯಿಸಿಬಿಡುತ್ತದೆ. (ಅದು ಯುಕ್ತವಲ್ಲ.) ಆದ್ದರಿಂದ ನಾವು ಮೊದಲು ಹೇಳಿದಂತೆ 'ಖಂಡೋ ಗೌಃ'ಎಂಬ ಸ್ಥಳದಲ್ಲಿ ವ್ಯಭಿಚಾರದೋಷವು ವಜ್ರಲೇಪವಾಗಿದೆ.

ಟಿಪ್ಪಣಿ :- 'ಮುಂಡೋ ಗೌಃ' ಎಂಬುದು ಯಥಾರ್ಥಜ್ಞಾನ. ಪ್ರಕೃತದಲ್ಲಿ ಅದು ಸಾಧ್ಯವಲ್ಲದಿದ್ದರೂ ಹೇತುವಾಗಿ ಹೇಳಿದ ನಿಷೇಧವಿದೆ. ಆದ್ದರಿಂದ ಈ ಹೇತು ವ್ಯಭಿಚರಿತ. ವಿಶೇಷ್ಯದಲ್ಲಿ ನಿಷೇಧವು ಬಾಧಿತವಾದಾಗ ವಿಶೇಷಣದಲ್ಲಿ ಅನ್ವಯಿಸುತ್ತದೆ. ಉದಾ: ಕೊಳೆ ಬಟ್ಟೆಯನ್ನು ಧರಿಸಬಾರದು. ಇಲ್ಲಿ ನಿಷೇಧವು ಕೊಳೆಗೆ ಮಾತ್ರ, ಬಟ್ಟೆಗಲ್ಲ.

ನನು ಭಾತಿತರಾಮುಪಾಧಿರತ್ರಾ-
ದಲದೇತದ್ವ್ಯವಹರ್ತೃತೇತಿ ಚೇನ್ನ |
ಅಹಮೋಽನುಭವೇನ ಸಾಧನ-
ವ್ಯಾಪಕಭಾವಾದವಗತ್ಯನಂತರಂ ಚ || ೧೧೮

ಭಟ್ಟಭಾಸ್ಕರ - 'ನಾನು ಮನುಷ್ಯನಲ್ಲ, ನಾನು ಬ್ರಹ್ಮ' ಎಂದು ನಿಷೇಧವಿದ್ದರೂ 'ಅಹಂ ಮನುಷ್ಯಃ' ಎಂಬ ಪ್ರತೀತಿಯು ಪ್ರಮಾಣವಾಗಿ ಉಳಿದು ಬಿಡುತ್ತದೆ- ಎಂದು ನನ್ನ ಪಕ್ಷದಲ್ಲಿ ಆಪಾದಿಸಿದ್ದೀರಿ. ಆದರೆ ಬ್ರಹ್ಮಸಾಕ್ಷಾತ್ಕಾರವಾದಮೇಲೆ ನಾನು ಮನುಷ್ಯನೆಂಬ ಪ್ರತೀತಿಯೇ ಇರುವುದಿಲ್ಲ. ನಿಮ್ಮ ಪ್ರಕಾರ ನಿಷೇಧವೆಂಬ ಹೇತುವಿರುತ್ತದೆ, ಸಾಧ್ಯವೇ ಇರುವುದಿಲ್ಲ. ಆದ್ದರಿಂದ ಅನುಚ್ಛಿನ್ನ ಮನುಷ್ಯತ್ವ ವ್ಯವಹಾರವು ಉಪಾಧಿಯಾಗಿದೆ. ಸಾಧನವಾದ ನಿಷೇಧವಿದ್ದರೂ ಅದನ್ನು ವ್ಯಾಪಿಸಿಕೊಂಡು ಮನುಷ್ಯತ್ವವ್ಯವಹಾರವಿಲ್ಲ. ಸೋಪಾಧಿಕವಾದ್ದರಿಂದ ನೀವು ಹೇಳಿರುವುದು ಹೇತ್ವಾಭಾಸವೇ ಸರಿ.

ಶ್ರೀಶಂಕರ - ಅಲ್ಲ; ಬ್ರಹ್ಮಸಾಕ್ಷಾತ್ಕಾರವಾದಮೇಲೂ ಪ್ರಾರಬ್ಧಕರ್ಮವಶದಿಂದ ನಾನು ಮನುಷ್ಯನೆಂಬ ವ್ಯವಹಾರವಿರಬಹುದು. ಏವಂಚ ಅನುಚ್ಛಿನ್ನ ಮನುಷ್ಯತ್ವವ್ಯವಹಾರವು ಸಾಧನವ್ಯಾಪಕವೇ ಆಗುವುದರಿಂದ ಅದು ಉಪಾಧಿಯಲ್ಲ. ಹೇತ್ವಾಭಾಸದ ಪ್ರಸಂಗವೇ ಇಲ್ಲ.

ವಿವರಣೆ : ಸಾಧ್ಯವ್ಯಾಪಕತ್ವೇ ಸತಿ ಸಾಧನಾವ್ಯಾಪಕತ್ವಮುಪಾಧಿಃ - ಎಂದು ಉಪಾಧಿಯ ಲಕ್ಷಣ. ಈ ಉಪಾಧಿ ಇದ್ದರೆ ಹೇತುವು ವ್ಯಾಪ್ಯತ್ವಾಸಿದ್ಧವೆಂಬ ಹೇತ್ವಾಭಾಸವಾಗುತ್ತದೆ. ಇದರ ತಾತ್ಪರ್ಯವನ್ನು ತಿಳಿಸುವುದಕ್ಕಾಗಿ ಮೇಲ್ಕಂಡ ಅನುವಾದವನ್ನೇ ವಿಸ್ತರಿಸಲಾಗಿದೆ.

ನನು ತದ್ವ್ಯವಹಾರಸಂಭಿದಾಯಾ
ಇಹ ತರ್ಕೇನ ಕಮಿತ್ಯನೇನ ಮುಕ್ತೌ |
ಶ್ರುತಿವಾಕ್ಯಗತೇನ ಸಂಪ್ರತೀತೇಃ
ವ್ಯವಹರ್ತುರ್ನ ಕಥಂ ಭಿದೇತಿ ಚೇನ್ನ || ೧೧೯

ಭಟ್ಟಭಾಸ್ಕರ - ಬ್ರಹ್ಮಸಾಕ್ಷಾತ್ಕಾರವಾದಮೇಲೆ ವ್ಯವಹಾರವೆಲ್ಲಿರುತ್ತದೆ? "ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್, ತತ್ ಕೇನ ಕಂ ಜಿಘ್ರೇತ್, ತತ್ ಕೇನ ಕಂ ಪಶ್ಯೇತ್" (ಬೃಹ. ೨-೪-೧೪) ಇತ್ಯಾದಿ ಶ್ರುತಿವಾಕ್ಯಗಳಿಂದ ಆಗ ವ್ಯವಹಾರವೂ ಇಲ್ಲ, ವ್ಯವಹರ್ತೃವೂ ಇಲ್ಲ.

ವಿವರಣೆ : ಪ್ರಾರಬ್ಧಕರ್ಮವು ಕಳೆದು ಹೋದಮೇಲೆ ವ್ಯವಹಾರವಿರುವುದಿಲ್ಲ.'ಅಹಂ ಮನುಷ್ಯಃ' ಎಂಬ ಜ್ಞಾನವೂ ಇರುವುದಿಲ್ಲವೆಂದು ಅಭಿಪ್ರಾಯ.

ತದಿದಂ ಘಟತೇ ಮತೇಽಸ್ಮದೀಯೇ
ತದಬೋಧೋಲ್ಲಸಿತತ್ವತೋಽಖಿಲಸ್ಯ |
ತದಬೋಧಲಯೇ ಲಯೋಪಪತ್ತೇಃ
ಜಗತಃ ಸತ್ಯತಯಾ ಭಿದಾ ನ ತೇ ಸ್ಯಾತ್ || ೧೨೦

ಶ್ರೀಶಂಕರ - ನಿಮ್ಮ ಹೇಳಿಕೆ ಸರಿಯಲ್ಲ. ಇದೆಲ್ಲವೂ ನಮ್ಮ ಅದ್ವೈತಸಿದ್ಧಾಂತದಲ್ಲಿ ಮಾತ್ರ ಸಂಭವಿಸತಕ್ಕದ್ದು. ಬ್ರಹ್ಮವನ್ನು ಅರಿಯದೇ ಇರುವುದರಿಂದ ಈ ಪ್ರಪಂಚದ ವ್ಯವಹಾರವು ಘಟಿಸುತ್ತದೆ. ಇದೆಲ್ಲವೂ ಅಜ್ಞಾನದ ಫಲ. ಅಜ್ಞಾನವು ಲಯಿಸಿದಾಗ ಮುಕ್ತನಿಗೆ ಜಗತ್ತೇ ಲಯಿಸುತ್ತದೆಯೆಂಬುದು ಅದ್ವೈತಸಿದ್ಧಾಂತದಲ್ಲಿ ಉಪಪನ್ನವಾಗುತ್ತದೆ. ನಿಮ್ಮ ಭೇದಾಭೇದವಾದದಲ್ಲಿ ಜಗತ್ತು ಸತ್ಯವೆಂದು ನಂಬುತ್ತೀರಿ. ವ್ಯವಹಾರದ ಉಚ್ಛೇದವು ನಿಮ್ಮ ಮತದಲ್ಲಿ ಆಗುವುದೇ ಇಲ್ಲ.

ನನು ಪಂಚಸು ತು ಸ್ಥಲೇಷು ಭೇದೋ
ಹ್ಯಭಿದಾ ನೋ ತು ಶರೀರದೇಹಿನೋಸ್ತೇ |
ಪ್ರಥಿತಸ್ಥಲಪಂಚಕೇತರತ್ವಾತ್
ಫಲಿತಾ ಹ್ಯತ್ರ ತಥಾ ಚ ಹೇತ್ವಸಿದ್ಧಿಃ || ೧೨೧

ಭಟ್ಟಭಾಸ್ಕರ - ನಮ್ಮ ಮತದಂತೆ ಪ್ರಸಿದ್ಧವಾದ ಐದು ಸ್ಥಳಗಳಲ್ಲಿ ಮಾತ್ರ ಭೇದಾಭೇದಗಳನ್ನು ಒಪ್ಪಿದ್ದೇವೆ. ದೇಹದೇಹಿಗಳಿಗೆ ಅವನ್ನು ಒಪ್ಪಿಲ್ಲ. ದೇಹದೇಹಿಭಾವವು ಆ ಪಂಚಸ್ಥಳಗಳಲ್ಲಿ ಸೇರುವುದಿಲ್ಲ. ಆದ್ದರಿಂದ 'ಭೇದಾಭೇದಗಳಿಗೆ ವಿಷಯವಾದ್ದರಿಂದ' ಎಂದು ನೀವು ಹೇಳಿದ ಹೇತುವೇ ಅಸಿದ್ಧವಾಗುತ್ತದೆ.

ವಿವರಣೆ: ಆ ಪಂಚಸ್ಥಳಗಳು ಇವು - ಜಾತಿವ್ಯಕ್ತಿಭಾವ, ಗುಣಗುಣಿಭಾವ, ಕಾರ್ಯಕಾರಣಭಾವ, ವಿಶಿಷ್ಟಸ್ವರೂಪತೆ (ಸಂಯೋಗ ಸಂಬಂಧದಿಂದ ವಿಶೇಷಣ ವಿಶೇಷ್ಯಭಾವ) ಮತ್ತು ಅಂಶಾಂಶಿಭಾವ. ದೇಹದೇಹಿಭಾವವು ಈ ಪಂಚಕದಲ್ಲಿ ಸೇರುವುದಿಲ್ಲ. ದೇಹಿ = ಆತ್ಮ. ಏವಂಚ 'ನಾನು ಮನುಷ್ಯ' ಎಂಬ ಬುದ್ಧಿಯು ಬಾಧಿತವಾಗುವುದರಿಂದ ಪ್ರಮಾಣವಲ್ಲವೆಂದು ಅಭಿಪ್ರಾಯ.

ಇತಿ ಚೇನ್ನ ವಿಕಲ್ಪನಾಸಹತ್ವಾತ್
ಮಿಲಿತಾನಾಂ ಭಿದಭೇದತಂತ್ರತಾ ಕಿಮ್ |
ಉತ ವಾ ಪೃಥಗೇವ ತತ್ರ ನಾದ್ಯೋ
ಮಿಲಿತಾಃ ಪಂಚ ನ ಹಿ ಕ್ವಚಿದ್ಯತಃ ಸ್ಯುಃ || ೧೨೨

ಶ್ರೀಶಂಕರ - ಹಾಗಲ್ಲ; ಈ ವಿಭಾಗವು ವಿಕಲ್ಪಿತಪ್ರಶ್ನೆಗಳನ್ನು ತಡೆದುಕೊಳ್ಳಲಾರದು. ಹೇಗೆಂದರೆ, ಈ ಪಂಚಸ್ಥಳಗಳು ಒಟ್ಟಿಗೆ ಸೇರಿದಾಗ ಭೇದಾಭೇದಗಳೊ? ಅಥವಾ ಯಾವುದಾದರೊಂದಿದ್ದರೆ ಭೇದಾಭೇದಗಳೊ? ಮೊದಲನೆಯ ಪಕ್ಷವು ಸರಿಯಲ್ಲ. ಪಂಚಸ್ಥಳಗಳು ಒಟ್ಟಿಗೆ ಎಲ್ಲಿಯೂ ಕೂಡುವುದಿಲ್ಲ.

ಚರಮೋಽಪಿ ನ ಯುಜ್ಯತೇ ತದಾಙ್ಗಾಽ-
ಙ್ಗಿಕಭಾವಸ್ಯ ಚ ತಂತ್ರತಾ ನ ಕಿಂ ಸ್ಯಾತ್ |
ನ ಚ ಯೋಜಕಗೌರವಂ ಚ ದೋಷಃ
ಪ್ರಕೃತೇ ತಸ್ಯ ತವಾಪಿ ಸಂಮತತ್ವಾತ್ || ೧೨೩

ಎರಡನೆಯ ಪಕ್ಷವೂ ಯುಕ್ತವಲ್ಲ. ಆಗ ಅಂಗಾಂಗಿಭಾವವೂ ಭೇದಾಭೇದಗಳಿಗೆ ಏಕೆ ಪ್ರಯೋಜಕವಾಗುವುದಿಲ್ಲ? ಅಂಗಾಂಗಿಭಾವವನ್ನು ಹೊಸದಾಗಿ ಕಲ್ಪಿಸಬೇಕಾದ್ದೇನೂ ಇಲ್ಲ. ದೇಹಾತ್ಮಗಳಿಗೆ ಈ ಸಂಬಂಧವನ್ನು ನೀವೂ ಅಂಗೀಕರಿಸಿದ್ದೀರಿ.

ವಿವರಣೆ : ದೇಹದೇಹಿಭಾವವೆಂದರೆ ಅಂಗಾಂಗಿಭಾವವೇ. ದೇಹವು ಅಂಗ. ಆತ್ಮನು ಅಂಗಿ. ಇಲ್ಲಿ ನೀವು ಭೇದಾಭೇದವನ್ನು ಅಂಗೀಕರಿಸದಿದ್ದರೆ ಸರ್ವವೂ ಭೇದಾಭೇದಗಳಿಗೆ ವಿಷಯವೆಂಬ ನಿಮ್ಮಸಿದ್ಧಾಂತವೇ ಕುಸಿದು ಹೋಗುತ್ತದೆ- ಎಂದು ಆಶಯ.

ಅಪಿ ಚಾನ್ಯತಮಸ್ಯ ಜಾತಿ ತದ್ವತ್
ಪ್ರಭೃತೀನಾಂ ಘಟಕತ್ವ ಆಗ್ರಹಶ್ಚೇತ್ |
ಅಪಿ ಸೋಽತ್ರ ನ ದುರ್ಲಭಶ್ಚಿದಾತ್ಮಾ-
ಙ್ಗಕಯೋಃ ಕಾರಣಕಾರ್ಯಭಾವಭಾವಾತ್ || ೧೨೪

ಇನ್ನು ಪಂಚಸ್ಥಳಗಳಲ್ಲಿ ಯಾವುದಾದರೊಂದು ಮಾತ್ರ ಭೇದಾಭೇದಗಳಿಗೆ ಪ್ರಯೋಜಕವೆಂದು ಆಗ್ರಹಪಡುವುದಾದರೆ ಅದೂ ದುರ್ಲಭವಲ್ಲ. ದೇಹಾತ್ಮಗಳಿಗೆ ಕಾರ್ಯಕಾರಣಭಾವವಿದೆ.

ವಿವರಣೆ : ಆತ್ಮನು ಕಾರಣ. ದೇಹವು ಕಾರ್ಯ. ಆದ್ದರಿಂದ ಇಲ್ಲಿ ಭೇದಾಭೇದಗಳು ನಿಮ್ಮ ಮತದಂತೆ ಇರಬಹುದು.

ನ ಚ ವಾಚ್ಯಮಿದಂ ಪರಾತ್ಮಜತ್ವಾತ್
ಸಕಲಸ್ಯಾಪಿ ನ ಜೀವಕಾರ್ಯತೇತಿ |
ತದಭೇದತ ಏವ ಸರ್ವಕಸ್ಯಾ-
ಪ್ಯುಪಪತ್ತೇರಿಹ ಜೀವಕಾರ್ಯತಾಯಾಃ || ೧೨೫

ಭಟ್ಟಭಾಸ್ಕರ - ಸಕಲವೂ ಪರಮಾತ್ಮನಿಂದ ಜನಿಸಿದೆ. ದೇಹವು ಜೀವಾತ್ಮನ ಕಾರ್ಯವಲ್ಲ. (ಆದ್ದರಿಂದ ದೇಹದೇಹಿಗಳಿಗೆ ಕಾರ್ಯಕಾರಣಭಾವವಿಲ್ಲ.)

ಶ್ರೀಶಂಕರ -ಹಾಗೆ ಹೇಳಲಾಗುವುದಿಲ್ಲ. ಜೀವನಿಗೂ ಪರಮಾತ್ಮನಿಗೂ ಅಭೇದವಿರುವುದರಿಂದ ದೇಹದೇಹಿಗಳಿಗೆ ಕಾರ್ಯಕಾರಣಭಾವವಿದ್ದೇ ಇದೆ. ಸಕಲವೂ ಜೀವಾತ್ಮನ ಕಾರ್ಯವಾಗುತ್ತದೆ.

ವಿವರಣೆ : ಭಟ್ಟಭಾಸ್ಕರನ ಸಿದ್ಧಾಂತದಲ್ಲಿ ಜೀವನು ಪರಮಾತ್ಮನಿಗಿಂತ ಸಂಸಾರಾವಸ್ಥೆಯಲ್ಲಿ ಭಿನ್ನನಾಗಿರುತ್ತಾನೆ. ಆತ್ಮಜ್ಞಾನವಾದಮೇಲೆ ಪರಮಾತ್ಮನಲ್ಲಿ ಸೇರಿ ಅಭಿನ್ನನಾಗುತ್ತಾನೆ. ಅದು ಭೇದಾಭೇದವಾದವಾದ್ದರಿಂದ ಈ ಬಗೆಯ ದೋಷವು ಸಂಭವಿಸುತ್ತದೆ.

ತದಸಿದ್ಧಿಮುಖಾನುಮಾನದೋಷಾನ್
ಉದಯಾದುಕ್ತನಯಸ್ಯ ನಿರ್ಮಲತ್ವಮ್ |
ಭ್ರಮಧೀಪ್ರಮಿತಿತ್ವವೇದಿನೋಽತಃ
ತವ ನ ಭ್ರಾಂತಿಪದಾರ್ಥ ಏವ ಸಿಧ್ಯೇತ್ || ೧೨೬

ಶ್ರೀಶಂಕರ — ಆದ್ದರಿಂದ ನಾವು ಹಿಂದೆ ಹೇಳಿದ ಅನುಮಾನಪ್ರಕಾರದಲ್ಲಿ ಅಸಿದ್ಧಿ, ವ್ಯಭಿಚಾರ - ಮೊದಲಾದ ಯಾವ ದೋಷವೂ ಇಲ್ಲ. ಅದು ಶುದ್ಧವಾದ ಅನುಮಾನ ಪ್ರಕಾರವೇ ಹೌದು. ಭ್ರಮೆಯನ್ನು ಪ್ರಮೆಯೆಂದು ತಿಳಿದಿರುವ ನಿಮ್ಮ ಪಕ್ಷದಲ್ಲಿ ಭ್ರಾಂತಿಯೆಂಬ ಒಂದು ಪದಾರ್ಥವೇ ಸಿದ್ಧಿಸುವುದಿಲ್ಲ.

ಅಪಿ ಚ ಭ್ರಮ ಏಷ ಕಿಂ ತವಾಂತಃ-
ಕರಣಸ್ಯೇತಿ ಚಿದಾತ್ಮನೋಽಥವಾಽಸೌ |
ಪರಿಣಾಮ ಇಹಾಽಽದಿಮೋ ನ ತಸ್ಯಾಽಽ-
ತ್ಮಗತತ್ವಾನುಭವಸ್ಯ ಭಂಗಪತ್ತೇಃ || ೧೨೭

ಒಂದು ವೇಳೆ ಭ್ರಮೆಯೆಂಬುದನ್ನು ನೀವು ಒಪ್ಪಿದರೂ ಪರಿಣಾಮವಾದಿಗಳಾದ ನಿಮ್ಮ ಪಕ್ಷದಲ್ಲಿ ದೋಷವಿದ್ದೇ ಇದೆ. ಹೇಗೆಂದರೆ, ಈ ಭ್ರಮೆಯು ಅಂತಃಕರಣದ ಪರಿಣಾಮವೋ ಅಥವಾ ಚಿದಾತ್ಮನ ಪರಿಣಾಮವೊ? ಅಂತಃಕರಣದ ಪರಿಣಾಮವೆನ್ನುವುದು ಸರಿಯಲ್ಲ.

ನಾನು ಮನುಷ್ಯ ಎಂಬ ಭ್ರಮೆಯು ಆತ್ಮನಲ್ಲಿದೆಯೆಂದು ಅನುಭವ ಇದೆ. ಈ ಅನುಭವಕ್ಕೆ ಭಂಗವಾದೀತು.

ನನು ರಕ್ತತಮಪ್ರಸೂನಯೋಗಾತ್
ಸ್ಫಟಿಕೇ ಸಂಸ್ಫುರಣಂ ಯಥಾಽಽರುಣಿಮ್ನಃ |
ಭ್ರಮಸಂಯುತಚಿತ್ತಯೋಗತೋಽಸ್ಯ
ಭ್ರಮಣಸ್ಯಾನುಭವಸ್ತಥಾಽಽತ್ಮನಿ ಸ್ಯಾತ್ || ೧೨೮

ಭಟ್ಟಭಾಸ್ಕರ — ಕೆಂಪು ಹೂವಿನ (ಜಪಾಕುಸುಮದ)ಸಂಬಂಧವುಂಟಾದಾಗ ಸ್ಫಟಿಕದಲ್ಲಿ ಕೆಂಪು ಬಣ್ಣವಿರುವಂತೆ ತೋರುತ್ತದೆಯಲ್ಲವೆ? ಹಾಗೆಯೇ ಭ್ರಮಯುಕ್ತವಾದ ಚಿತ್ತದ (ಅಂತಃಕರಣದ) ಸಂಬಂಧವಿರುವುದರಿಂದ ಆತ್ಮನಲ್ಲಿ ಭ್ರಮೆಯಿರುವಂತೆ ಅನುಭವ ಬರಬಹುದು.

ಇತಿ ಚೇದಯಮಿರಯಾಽಽತ್ಮಯೋಗೋ
ಭ್ರಮಣಸ್ಯಾಽಽಶ್ರಿತ ಏಷ ಸನ್ನಸನ್ವಾ |
ಪ್ರಥಮೋ ಘಟತೇ ನ ಸಂಸೃಜೇಸ್ತೇಽ-
ಪರಥಾಖ್ಯಾತಿವದಸ್ಯ ಶೂನ್ಯಕತ್ವಾತ್ || ೧೨೯

ಶ್ರೀಶಂಕರ — ಒಳ್ಳೆಯದು. ಭ್ರಮೆಗೆ ಆತ್ಮನೊಡನೆ ಸಂಬಂಧವಾಗುತ್ತದೆ ಎಂದು ಹೇಳುತ್ತೀರಲ್ಲ. ಈ ಸಂಬಂಧವು ಸತ್ಯವೆ? ಅಸತ್ಯವೆ? - ಎಂಬುದನ್ನು ಹೇಳಿರಿ. ಸತ್ಯವೆಂಬ ಮೊದಲನೆಯ ಪಕ್ಷವು ಸರಿಯಲ್ಲ. ಅನ್ಯಥಾಖ್ಯಾತಿವಾದದಲ್ಲಿ ಈ ಸಂಬಂಧವು ಸತ್ಯವಾಗಬಹುದು. ಹಾಗೆ ನಿಮ್ಮ ಪಕ್ಷದಲ್ಲಲ್ಲ. ಸಂಬಂಧವೇ ಶೂನ್ಯವಾಗಿದೆ.

ವಿವರಣೆ : ಅಪರಥಾಖ್ಯಾತಿಎಂದರೆ ಅನ್ಯಥಾಖ್ಯಾತಿ. ಇದನ್ನು ನೈಯಾಯಿಕರು ಒಪ್ಪಿದ್ದಾರೆ. ಇವರ ಮತದಲ್ಲಿ ಹಗ್ಗವೇ ಹಾವಾಗಿ ಅನ್ಯಥಾ ತೋರುವುದು ಭ್ರಮೆ. ಆತ್ಮನು ಜ್ಞಾನಾಶ್ರಯನಾದ್ದರಿಂದ ಭ್ರಮೆಯೂ ಆತ್ಮನಲ್ಲಿಹುಟ್ಟುತ್ತದೆ. ಭಾಸ್ಕರನ ಮತದಲ್ಲಿ ಜ್ಞಾನವು ಅಂತಃಕರಣದಲ್ಲಿ ಹುಟ್ಟುವುದರಿಂದ ಭ್ರಮೆಗೂ ಆತ್ಮನಿಗೂ ಸಂಬಂಧವಿಲ್ಲವೆಂದು ಅಭಿಪ್ರಾಯ. ಅಪರಥಾಖ್ಯಾತಾವಿವ ಅಪರಥಾಖ್ಯಾತಿವತ್. ವತಿಪ್ರತ್ಯಯ. ವೈಧರ್ಮ್ಯೇ ದೃಷ್ಟಾಂತ. ಇನ್ನೊಂದು ರೀತಿಯಲ್ಲಿಯೂ ಅರ್ಥವನ್ನು ಹೇಳಬಹುದು -ಅಪರಥಾ =ಇತರ ಮತಗಳಿಗಿಂತ ಬೇರೆ ವಿಧದಲ್ಲಿ, ಅಖ್ಯಾತಿವದಸ್ಯ =ಅಖ್ಯಾತಿಯೇ ಭ್ರಮೆಯೆಂದು ಹೇಳತಕ್ಕ, ತೇ = ನಿನ್ನ ಮತದಲ್ಲಿ.

ಟಿಪ್ಪಣಿ :- ಸಂಸೃಜಿ =ಸಂಸರ್ಗ. 'ಇಕ್ ಕೃಷ್ಯಾದಿಭ್ಯಃ' ಎಂಬ ವಾರ್ತಿಕದಿಂದ ಭಾವಾರ್ಥದಲ್ಲಿ ಇಕ್ ಪ್ರತ್ಯಯ.

ಚರಮೋಽಪಿ ನ ಯುಜ್ಯತೇಽಪರೋಕ್ಷ-
ಪ್ರಥನಸ್ಯಾನುಪಪದ್ಯಮಾನತಾಯಾಃ |
ಪರಿಣಾಮವಿಶೇಷ ಆತ್ಮನೋಽಸೌ
ಭ್ರಮ ಇತ್ಯೇಷ ನ ಯುಜ್ಯತೇಽಂತ್ಯಪಕ್ಷಃ || ೧೩೦

ಭ್ರಮೆಗೆ ಆತ್ಮಸಂಬಂಧವು ಅಸತ್ಯ (ಅಸತ್) ಎನ್ನುವುದೂ ಸರಿಯಲ್ಲ. 'ನಾನು ಮನುಷ್ಯ' ಇತ್ಯಾದಿ ಭ್ರಮೆಯು ಪ್ರತ್ಯಕ್ಷವಾಗಿ ಅನುಭವಕ್ಕೆ ಬರುತ್ತಿರುವಾಗ, ಆತ್ಮಸಂಬಂಧವು ಅಸತ್ ಎನ್ನುವುದು ಉಪಪನ್ನವಾಗುವುದಿಲ್ಲ. ಈ ಭ್ರಮೆಯು ಆತ್ಮನ ಪರಿಣಾಮವಿಶೇಷವೆನ್ನುವ ಪಕ್ಷವೂ ಅಯುಕ್ತವಾದದ್ದು.

ಅಸಭಾಗತಯಾಽಽತ್ಮನೋ ನಿರಸ್ತೇ-
ತರಯುಕ್ತೇಃ ಪರಿಣತ್ಯಯೋಗ್ಯತಾಯಾಃ |
ಪರಿಣತ್ಯಯುಜೇಶ್ಚ ಯೋಗ್ಯತಾಯಾಂ
ಅಪಿ ಬುದ್ಧ್ಯಾಕೃತಿತಶ್ಚಿದಾತ್ಮನೋಽಸ್ಯ || ೧೩೧

ನಿಃಸಂಗನಾದ ಆತ್ಮನು ಅವಯವರಹಿತನಾದರಿಂದ ಪರಿಣಾಮಯೋಗ್ಯತೆ ಇಲ್ಲ. ಆದ್ದರಿಂದ ಅವನಲ್ಲಿ ಯಾವ ಪರಿಣಾಮವೂ ಆಗುವುದಿಲ್ಲ. ಒಂದುವೇಳೆ ಪರಿಣಾಮಯೋಗ್ಯತೆ ಇದೆಯೆಂದು ಒಪ್ಪಿದರೂ ಚಿದಾತ್ಮನು ತನ್ನ ಶುದ್ಧಜ್ಞಾನಸ್ವರೂಪದಿಂದ ಭ್ರಮಜ್ಞಾನರೂಪನಾಗಿ ಪರಿಣಮಿಸುತ್ತಾನೆಂಬುದು ಯುಕ್ತವಲ್ಲ.

ನ ಹಿ ನಿತ್ಯಚಿದಾಶ್ರಯಪ್ರತೀಚಃ
ಪರಿಣಾಮಃ ಪುನರನ್ಯಚಿತ್ಸ್ವರೂಪಃ |
ಗುಣಯೋಃ ಸಮುದಾಯಗತ್ಯಯೋಗಾದ್
ಗುಣತಾವಾಂತರಜಾತಿತಃ ಸಜಾತ್ಯೋಃ || ೧೩೨

ನಿತ್ಯಜ್ಞಾನಾಶ್ರಯನಾದ ಪ್ರತ್ಯಗಾತ್ಮನಿಗೆ ಭ್ರಮಜ್ಞಾನರೂಪವಾದ ಪರಿಣಾಮ ವಾಗುವುದಿಲ್ಲ. ಏಕೆಂದರೆ, ಒಳಭೇದಗಳುಳ್ಳ ಎರಡು ಸಜಾತೀಯಗುಣಗಳು ಒಟ್ಟಿಗೆ ಏಕಕಾಲದಲ್ಲಿ ಸೇರಿಕೊಳ್ಳುವುದಿಲ್ಲ.

ಟಿಪ್ಪಣಿ :- ಉದಾಹರಣೆಗೆ, ಎರಡು ಬಗೆಯ ಬಿಳಿಯಬಣ್ಣಗಳು ಏಕಕಾಲದಲ್ಲಿ ಒಟ್ಟಿಗೆ ಸೇರಿಕೊಂಡಿರುವುದಿಲ್ಲ.

ಯುಗಪತ್ಸಮವೈತಿ ನೋ ಹಿ ಶೌಕ್ಲ್ಯ-
ದ್ವಯಕಂ ಯತ್ರ ಚ ಕುತ್ರಚಿದ್ಯದೇತತ್ |
ನನು ಚಿನ್ನ ಗುಣೋ ಗುಣೇ ತಥಾಚ
ಪ್ರಸರೇನ್ನೋದಿತ ದುಷ್ಟತೇತಿ ಚೇನ್ನ || ೧೩೩

ಭಟ್ಟಭಾಸ್ಕರ — ಚಿದ್ರೂಪನಾದ ಆತ್ಮನು ನನ್ನ ಮತದಲ್ಲಿ ಗುಣವಲ್ಲ, ಅವನು ದ್ರವ್ಯ. ಆದ್ದರಿಂದ ನೀವು ಹೇಳಿದ ದೋಷಪ್ರಸಕ್ತಿ ಇಲ್ಲ. ಭ್ರಮೆ ಬರಬಹುದು.

ಕಟಕಾಶ್ರಯಭೂತದೀಪ್ತಹೇಮ್ನೋ
ರುಚಕಾಧಾರಕಭಾರವತ್ತಥೈವ |
ಅವಿನಾಶಿಚಿದಾಶ್ರಯಸ್ಯ ಭೂಯೋಽ-
ನ್ಯಚಿದಾಧಾರತಯಾ ಸ್ಥಿತೇರಯೋಗಾತ್ || ೧೩೪

ಶ್ರೀಶಂಕರ — ಇಲ್ಲ; ಬಳೆಯ ಆಕಾರದಲ್ಲಿ ಬೆಳಗುವ ಚಿನ್ನವು ದ್ರವ್ಯ. ಅದು ಬಳೆಗೆ ಆಧಾರವಾಗಿದೆ. ಅದೇ ಸಮಯದಲ್ಲಿ ಚಿನ್ನವು ಕಂಠಾಭರಣವಾಗಿ ಪರಿಣಾಮ ಹೊಂದಿ ಬಳೆ, ಕಂಠಾಭರಣ - ಇವೆರಡಕ್ಕೂ ಆಧಾರವಾಗುವುದಿಲ್ಲವಷ್ಟೆ. ಹಾಗೆಯೇ ನಿತ್ಯಜ್ಞಾನಾಶ್ರಯವಾದ ಚಿದ್ವಸ್ತು ಭ್ರಮೆಯ ರೂಪದಲ್ಲಿ ಪರಿಣಾಮ ಹೊಂದಿ ನಿತ್ಯಜ್ಞಾನ - ಭ್ರಮೆ ಇವೆರಡಕ್ಕೂ ಆಶ್ರಯವಾಗುವುದಿಲ್ಲ.

ನ ಚ ಸಂಸ್ಕೃತಿರಗ್ರಹೋಽಪ್ಯವಿದ್ಯಾ
ಭ್ರಮಶಬ್ದಾರ್ಥನಿರುಕ್ತ್ಯಸಂಭವೇಽಪಿ |
ಭ್ರಮಸಂಜ್ಞಿತವಸ್ತ್ವಸಂಭವೇನ
ಭ್ರಮಸಂಪಾದಿತಸಂಸ್ಕೃತೇರಯೋಗಾತ್ || ೧೩೫

ಭಟ್ಟಭಾಸ್ಕರ — ಇರಲಿ; ಭ್ರಮೆಯೆಂಬುದನ್ನು ನಿರ್ವಚನಮಾಡಲಾಗದಿದ್ದರೂ ಅದರ ಸಂಸ್ಕಾರವಾಗಲಿ ಅಥವಾ ಚಿದ್ರೂಪದ ಅಗ್ರಹಣವಾಗಲಿ ಅವಿದ್ಯೆ ಎನ್ನುತ್ತೇನೆ.

ಟಿಪ್ಪಣಿ :- ಏವಂಚ ಅವಿದ್ಯೆ, ಅಜ್ಞಾನ - ಎಂದು ನೀವು ಹೇಳುವ ಸಂಸಾರಕಾರಣವಾದ ಪ್ರತ್ಯೇಕಪದಾರ್ಥವಿಲ್ಲವೆಂದು ಅಭಿಪ್ರಾಯ.

ಶ್ರೀಶಂಕರ — ನಿಮ್ಮ ಮತದಲ್ಲಿ ಭ್ರಮೆಯೇ ಇಲ್ಲದಾಗ ಅದರಿಂದಾದ ಸಂಸ್ಕಾರವೆಲ್ಲಿಂದ ಬರುತ್ತದೆ ?

ಅಪಿ ನಾಗ್ರಹಣಂ ಚಿತೇರಭಾವ-
ಶ್ಚಿತಿರೂಪಗ್ರಹಣಸ್ಯ ನಿತ್ಯತಾಯಾಃ |
ತದಸಂಭವತೋ ನ ವೃತ್ತ್ಯಭಾವಃ
ತದಭಾವೇಽಪಿ ಚಿದಾತ್ಮನೋಽವಭಾಸಾತ್ || ೧೩೬

ಇನ್ನು ಅಗ್ರಹಣವೆಂದರೇನು? ಚಿತ್ ಸ್ವರೂಪದ ಅಭಾವವೆಂದರ್ಥವೆ? ಚಿತಿಯೇ ಗ್ರಹಣ (ಜ್ಞಾನಸ್ವರೂಪ)ವಾಗಿದೆ. ಅದು ನಿತ್ಯವಾದ್ದರಿಂದ ಅದಕ್ಕೆ ಅಭಾವವೆಂಬುದೇ ಇಲ್ಲ. ವೃತ್ತಿಜ್ಞಾನವು ಗ್ರಹಣವೆಂದೂ ಅದಕ್ಕೆ ಅಭಾವವಿದೆಯೆಂದೂ ಹೇಳುವುದಾದರೆ, ವೃತ್ತಿಜ್ಞಾನವಿಲ್ಲದಿದ್ದರೂ ಚಿದಾತ್ಮನು ನಿತ್ಯಪ್ರಕಾಶನಾದ್ದರಿಂದ ಒಂದೇ ಸಮನೆ ಬೆಳಗುತ್ತಲೇ ಇರುತ್ತಾನೆ.

ವಿವರಣೆ : ಅಂತಃಕರಣದಲ್ಲಿ ಹುಟ್ಟುವ ಘಟಜ್ಞಾನ, ಪಟಜ್ಞಾನ, - ಮೊದಲಾದವು ವೃತ್ತಿಜ್ಞಾನಗಳು. ಅವುಗಳಿಗೆ ನಾಶ ಉಂಟು. ಏವಂಚ ಭ್ರಮೆ, ಸಂಸ್ಕಾರ, ಅಗ್ರಹಣ - ಇವು ಮೂರು ಭಾಸ್ಕರನ ಮತದಲ್ಲಿ ಸಿದ್ಧಿಸುವುದಿಲ್ಲ. ಆದ್ದರಿಂದ ಸಂಸಾರಕ್ಕೆ ಕಾರಣವಾದ ಅವಿದ್ಯೆ, ಅಜ್ಞಾನ, ಪ್ರಕೃತಿ, ಮಾಯೆ - ಎಂಬ ಹೆಸರಿನ ಒಂದು ಭಾವಪದಾರ್ಥವನ್ನು ಒಪ್ಪಿಕೊಳ್ಳಲೇ ಬೇಕೆಂದು ಅಭಿಪ್ರಾಯ. ಹಾಗಾದರೆ ಅವಿದ್ಯೆಯನ್ನು ಹೋಗಲಾಡಿಸತಕ್ಕದ್ದು ಯಾವುದು ? ಎಂಬ ಮೂಲ ಪ್ರಶ್ನೆ ಉಳಿದುಕೊಳ್ಳುತ್ತದೆ. ಅದನ್ನೇ ಭಟ್ಟಭಾಸ್ಕರನು ಮುಂದಿನ ಶ್ಲೋಕದಲ್ಲಿ ಎತ್ತುತ್ತಾನೆ.

ನ ಚ ಭಂಜಕಮೀಕ್ಷ್ಯತೇ ನ ತಸ್ಯೋ-
ಪಗಮೇ ದುಃಖಜಡಾನೃತಾತ್ಮಕಸ್ಯ |
ಇತಿ ವಾಚ್ಯಮಖಂಡವೃತ್ತಿರೂಢೇ-
ಶ್ಚರಬೋಧಸ್ಯ ನಿವರ್ತಕತ್ವಯೋಗಾತ್ || ೧೩೭

ಭಟ್ಟಭಾಸ್ಕರ — ದುಃಖ ಜಡ ಅನೃತಾತ್ಮಕವಾದ ಅವಿದ್ಯೆಯನ್ನೊಪ್ಪಿದರೆ, ಅದನ್ನು ನಿವೃತ್ತಿಗೊಳಿಸತಕ್ಕದ್ದೇ ಇರುವುದಿಲ್ಲ.

ಟಿಪ್ಪಣಿ :- ಇದಕ್ಕೆ ಕಾರಣವನ್ನು ಹಿಂದೆ ೧೧೬-೧೧೭ ನೆಯ ಶ್ಲೋಕಗಳಲ್ಲಿ ಹೇಳಿದೆ. ಆಗ ಮೋಕ್ಷವೇ ಇಲ್ಲವಾಗುತ್ತದೆ - ಎಂದು ಅಭಿಪ್ರಾಯ.

ಶ್ರೀಶಂಕರ— ಇದೆ; ಅಖಂಡವಾದ ಚಿತ್ತವೃತ್ತಿಯಲ್ಲಿ ಬೆಳಗುವ ಪರಬ್ರಹ್ಮಚೈತನ್ಯವು ಅವಿದ್ಯೆಯನ್ನು ನಿವೃತ್ತಿಗೊಳಿಸುತ್ತದೆ.

ವಿವರಣೆ : ಕೇವಲ ಅಂತಃಕರಣವೃತ್ತಿಯಾದ ಜ್ಞಾನವಾಗಲಿ ಕೇವಲ ಚೈತನ್ಯವಾಗಲಿ ಅವಿದ್ಯಾ(ಅಜ್ಞಾನ)ನಿವರ್ತಕವಲ್ಲವೆಂಬುದು ನಿಜ. ಆದರೆ ಅಖಂಡಾಕಾರಚಿತ್ತವೃತ್ತಿಸಂಬದ್ಧವಾದ ಚೈತನ್ಯವು ಅವಿದ್ಯೆಯನ್ನು ನಿವೃತ್ತಿಗೊಳಿಸಬಲ್ಲದು. ಇದೇ ವಿಷಯವನ್ನು ಪ್ರಾಚೀನರು ಒಂದು ದೃಷ್ಟಾಂತದ ಮೂಲಕ ವಿವರಿಸಿದ್ದಾರೆ-

ತೃಣಾದೇರ್ಭಾಸಿಕಾಽ ಪ್ಯೇಷಾ ಸೂರ್ಯದೀಪ್ತಿಸ್ತೃಣಂ ದಹೇತ್ |
ಸೂರ್ಯಕಾಂತಮುಪಾರುಹ್ಯ ತನ್ನ್ಯಾಯಂ ತತ್ರ ಯೋಜಯೇತ್ ||

ತಾತ್ಪರ್ಯ — ಸೂರ್ಯನ ಪ್ರಭೆಯು ಹುಲ್ಲುಕಡ್ಡಿ ಮೊದಲಾದ್ದನ್ನು ಬೆಳಗುತ್ತದೆ. ಆದರೆ ಅದನ್ನು ಸುಡುವುದಿಲ್ಲ. ಕೇವಲ ಸೂರ್ಯಕಾಂತಮಣಿಯೂ ಹುಲ್ಲನ್ನು ಸುಡಲಾರದು. ಆದರೆ ಸೂರ್ಯಪ್ರಭೆಯು ಸೂರ್ಯಕಾಂತಮಣಿಯಲ್ಲಿ ಬಿದ್ದು ಕೇಂದ್ರೀಕೃತವಾದಾಗ ಹುಲ್ಲನ್ನು ಸುಟ್ಟುಹಾಕುತ್ತದೆ. ಈ ಬಗೆಯಲ್ಲಿ ಅಖಂಡಾಕಾರಚಿತ್ತಸಂಬಂಧ್ಧವಾದ ಚೈತನ್ಯವು ಅವಿದ್ಯೆಯನ್ನು ನಾಶಪಡಿಸುತ್ತದೆ.

ಅಪಿ ಚೇಷ್ಟತದನ್ಯಹೇತುಧೀಜೇ
ಜಗತಃ ಕೃತ್ಯಕೃತೀ ನ ತೇ ಘಟೇತೇ |
ಸಕಲವ್ಯವಹಾರಸಂಕರತ್ವಾತ್
ತದಲಂ ಜೀವನಿಕಾಽಪಿ ದುರ್ಲಭಾ ತೇ || ೧೩೮

ಶ್ರೀಶಂಕರ — ಅಲ್ಲದೆ ಜಗತ್ತಿನ ವ್ಯವಹಾರವೆಲ್ಲವೂ ಇಷ್ಟವಾದ್ದರಲ್ಲಿ ಪ್ರವೃತ್ತಿ, ಅನಿಷ್ಟವಾದ್ದರಲ್ಲಿ ನಿವೃತ್ತಿ - ಇವನ್ನೊಳಗೊಂಡಿದೆ. ನಿಮ್ಮ ಭೇದಾಭೇದವಾದದಲ್ಲಿ ಇಷ್ಟಾನಿಷ್ಟಗಳು ಸಂಕರವಾಗಿಬಿಡುವುದರಿಂದ ಪ್ರವೃತ್ತಿ ನಿವೃತ್ತಿಗಳೇ ವ್ಯವಸ್ಥಿತವಾಗದೆ ಲೋಕವ್ಯವಹಾರವು ಹೇಗೆ ನಡೆಯುತ್ತದೆ? ನಿಮ್ಮ ವಾದವನ್ನೊಪ್ಪಿದರೆ ಜೀವನ ವೃತ್ತಿಯೂ ನಿಮಗೆ ನಡೆಯದೇ ಹೋದೀತು !(ನಿಮ್ಮದು ಹುರುಳಿಲ್ಲದ ವಾದ.) ಇಷ್ಟು ಸಾಕು.

ಟಿಪ್ಪಣಿ :- ಈ ವಾದದಿಂದ ಮೂಲಾವಿದ್ಯೆಯನ್ನು ಸ್ಥಾಪಿಸಿದಂತಾಗುತ್ತದೆ. ಅದು ನಶ್ವರವೂ ಮಿಥ್ಯೆಯೂ ಆದ್ದರಿಂದ ಅದ್ವೈತಕ್ಕೆ ಹಾನಿ ಇಲ್ಲ. ಲೋಕವ್ಯವಹಾರವು ನಡೆಯದಿದ್ದರೆ ಜೀವನವೂ ನಡೆಯದು.

ಇತಿಯುಕ್ತಿಶತೈರಮರ್ತ್ಯಕೀರ್ತಿಃ
ಸುಮತೀಂದ್ರಂ ತಮತಂದ್ರಿತಂ ಸ ಜಿತ್ವಾ |
ಶ್ರುತಿಭಾವವಿರೋಧಿಭಾವಭಾಜಂ
ವಿಮತಗ್ರಂಥಮಮಂಥರಂ ಮಮಂಥ || ೧೩೯

ಆಚಾರ್ಯರು ಈ ಪ್ರಕಾರವಾದ ನೂರಾರು ಯುಕ್ತಿಗಳಿಂದ ಪಂಡಿತಾಗ್ರಣಿಯೂ ಎಚ್ಚರಿಕೆಯಿಂದ ವಾದಮಾಡತಕ್ಕವನೂ ಆದ ಭಟ್ಟಭಾಸ್ಕರನನ್ನು ವಾದದಲ್ಲಿ ಜಯಿಸಿ ಶಾಶ್ವತಕೀರ್ತಿಶಾಲಿಗಳಾದರು. ಶ್ರುತಿಗಳಿಗೆ ವಿರುದ್ಧವಾದ ಅಭಿಪ್ರಾಯವನ್ನು ಪ್ರತಿಪಾದಿಸುತ್ತಿದ್ದ ಪ್ರತಿವಾದಿಗಳ ಗ್ರಂಥಗಳನ್ನು ಶೀಘ್ರವಾಗಿ ಮಥಿಸಿಬಿಟ್ಟರು.

ಇತಿ ಭಾಸ್ಕರದುರ್ಮತೇಽಭಿಭೂತೇ
ಭಗವತ್ಪಾದಕಥಾಸುಧಾ ಪ್ರಸಸ್ರೇ |
ಘನವಾರ್ಷಿಕವಾರಿವಾಹಜಾಲೇ
ವಿಗತೇ ಶಾರದಚಂದ್ರಚಂದ್ರಿಕೇವ || ೧೪೦

ಹೀಗೆ ಭಟ್ಟಭಾಸ್ಕರನ (ಭೇದಾಭೇದವಾದಿಯಾದ)ದುರ್ಮತವು ಬಿದ್ದುಹೋಗಲು, ಭಗವತ್ಪಾದರ ಕಥಾಮೃತವು ಎಲ್ಲೆಲ್ಲಿಯೂ ವ್ಯಾಪಿಸಿತು. ದಟ್ಟವಾದ ಮಳೆಗಾಲದ ಮೋಡಗಳ ರಾಶಿಯು ಚದರಿಹೋಗಲಾಗಿ ಶರತ್ಕಾಲದ ಚಂದ್ರನ ಬೆಳದಿಂಗಳಂತೆ ಆಚಾರ್ಯರ ಕಥಾಮೃತವು ಹರಡಿತು.

ಟಿಪ್ಪಣಿ :- ಪ್ರ-ಸೃ = ಪ್ರಸರಣಾನುಕೂಲವ್ಯಾಪರಾನುಕೂಲ ವ್ಯಾಪಾರವು ಧಾತ್ವರ್ಥ. ಸಕರ್ಮಕವಾದ್ದರಿಂದ ಕರ್ಮಕರ್ತರಿ ಲಿಟ್. ಆತ್ಮನೇಪದ.

ಸ ಕಥಾಭಿರವಂತಿಷು ಪ್ರಸಿದ್ಧಾನ್
ವಿಬುಧಾನ್ ಬಾಣಮಯೂರದಂಡಿಮುಖ್ಯಾನ್ |
ಶಿಥಿಲೀಕೃತದುರ್ಮತಾಭಿಮಾನಾನ್
ನಿಜಭಾಷ್ಯಶ್ರವಣೋತ್ಸುಕಾಂಶ್ಚಕಾರ || ೧೪೧

ಅನಂತರ ಅವಂತಿದೇಶದಲ್ಲಿ ಪ್ರಸಿದ್ಧಪಂಡಿತರಾದ ಬಾಣ, ಮಯೂರ, ದಂಡಿ - ಇವರೇ ಮೊದಲಾದವರನ್ನು ವಾದಕಥೆಗಳಿಂದ ಸೋಲಿಸಿದರು. ಆ ಪಂಡಿತರು ತಮಗಿದ್ದ ತಪ್ಪು ತಿಳುವಳಿಕೆಯಿಂದಾದ ಅಭಿಮಾನವನ್ನು ತೊರೆದು ಶ್ರೀಶಾಂಕರಭಾಷ್ಯಶ್ರವಣದಲ್ಲಿ ಉತ್ಸುಕರಾದರು.

ಪ್ರತಿಪದ್ಯ ತು ಬಾಹ್ಲಿಕಾನ್ ಮಹರ್ಷೌ
ವಿನಯಿಭ್ಯಃ ಪ್ರವಿವೃಣ್ವತಿ ಸ್ವಭಾಷ್ಯಮ್ |
ಅವದನ್ನಸಹಿಷ್ಣವಃ ಪ್ರವೀಣಾಃ
ಸಮಯೇ ಕೇಚಿದಥಾಽರ್ಹತಾಭಿಧಾನೇ || ೧೪೨

ಆಮೇಲೆ ಶ್ರೀಶಂಕರ ಮಹರ್ಷಿಗಳು ಬಾಹ್ಲಿಕದೇಶಕ್ಕೆ ಪ್ರಯಾಣಬೆಳೆಸಿ ಶಿಷ್ಯರಾಗಿ ಬಂದವರಿಗೆ ತಮ್ಮ ಭಾಷ್ಯವನ್ನು ವಿವರಿಸಿ ಪ್ರವಚನಮಾಡುತ್ತಿದ್ದರು. ಆಗ ಅದನ್ನು ಸಹಿಸಲಾರದೆ ಆರ್ಹತ(ಜೈನ) ಮತದಲ್ಲಿ ಪ್ರವೀಣರಾದ ಕೆಲವರು ಬಂದು ಆಚಾರ್ಯರೆದುರಿಗೆ ತಮ್ಮ ಸಿದ್ಧಾಂತವನ್ನೆತ್ತಿ ಈ ರೀತಿ ಹೇಳಿದರು.

ನನು ಜೀವಮಜೀವಮಾಶ್ರವಂ ಚ
ಶ್ರಿತವತ್ಸಂವರನಿರ್ಜರೌ ಚ ಬಂಧಃ |
ಅಪಿ ಮೋಕ್ಷ ಉಪೈಷಿ ಸಪ್ತಸಂಖ್ಯಾನ್
ನ ಪದಾರ್ಥಾನ್ ಕಥಮೇವ ಸಪ್ತಭಂಗ್ಯಾ|| ೧೪೩

"ಯತಿಗಳೆ, ನಮ್ಮ ಜೈನ ಸಿದ್ಧಾಂತದಲ್ಲಿ ಜೀವ, ಅಜೀವ, ಆಸ್ರವ, ಸಂವರ, ನಿರ್ಜರ, ಬಂಧ, ಮೋಕ್ಷ - ಎಂಬ ಸಪ್ತಪದಾರ್ಥಗಳಿವೆ. ಸಪ್ತಭಂಗೀನಯದಿಂದ ಉಪಲಕ್ಷಿತವಾದ ಇವುಗಳನ್ನು ನೀವೇಕೆ ಅಂಗೀಕರಿಸುವುದಿಲ್ಲ ?" ಎಂದರು.

ಟಿಪ್ಪಣಿ :- ಜೈನಮತದ ಸಂಕ್ಷಿಪ್ತ ವಿವರಣೆಯನ್ನು ಅನುಬಂಧದಲ್ಲಿ ಬರೆಯಲಾಗಿದೆ.

ಕಥಯಾಽರ್ಹತ ಜೀವಮಸ್ತಿಕಾಯಂ
ಸ್ಫುಟಮೇವಂವಿಧ ಇತ್ಯುವಾಚ ಮೌನೀ |
ಅವದತ್ಸ ಚ ದೇಹತುಲ್ಯಮಾನೋ
ದೃಢಕರ್ಮಾಷ್ಟಕವೇಷ್ಟಿತಶ್ಚ ವಿದ್ವನ್ || ೧೪೪

ಆಚಾರ್ಯರು ಅವರಲ್ಲೊಬ್ಬ ಪಂಡಿತನನ್ನು ಕುರಿತು "ಆರ್ಹತರೆ, ನಿಮ್ಮ ಮತದಲ್ಲಿ ಜೀವನು ಅಸ್ತಿಕಾಯ ಎನ್ನುವಿರಲ್ಲ, ಜೀವನ ಸ್ವರೂಪವೇನೆಂಬುದನ್ನು ಸ್ಪಷ್ಟವಾಗಿ ಹೇಳಿರಿ" ಎಂದರು. ಆ ಪಂಡಿತನು " ವಿದ್ವಾಂಸರೆ, ಜೀವನು ಆಯಾ ದೇಹದಷ್ಟೇ ಪ್ರಮಾಣವುಳ್ಳವನು, ಅಷ್ಟಕರ್ಮಗಳಿಂದ ಜೀವನು ದೃಢವಾಗಿ ಬದ್ಧನಾಗಿರುತ್ತಾನೆ" ಎಂದನು.

ಟಿಪ್ಪಣಿ :- ಅಷ್ಟಕರ್ಮಮೊದಲಾದ್ದರ ವಿವರಣೆ ಅನುಬಂಧದಲ್ಲಿದೆ.

ಅಮಹಾನನಣುರ್ಘಟಾದಿವತ್ಸ್ಯಾತ್
ಸ ನ ನಿತ್ಯೋಽಪಿ ಚ ಮಾನುಷಾಚ್ಚ ದೇಹಾತ್ |
ಗಜದೇಹಮಯನ್ವಿಶೇನ್ನ ಕೃತ್ಸ್ನಂ
ಪ್ರವಿಶೇಚ್ಚ ಪ್ಲುಷಿದೇಹಮಪ್ಯಕೃತ್ಸ್ನಃ || ೧೪೫

ಶ್ರೀಶಂಕರಾಚಾರ್ಯ— ಜೀವನು ಮಹಾನ್ (ವಿಭು) ಅಲ್ಲ, ಅಣುವೂ ಅಲ್ಲ, (ಮಧ್ಯಮ ಪರಿಮಾಣ)ನೆಂದಾಯಿತು. ಆ ಪಕ್ಷದಲ್ಲಿ ಘಟಾದಿಗಳಂತೆ ಅನಿತ್ಯನೆಂದಾಗುತ್ತದೆ. ಅಲ್ಲದೆ ಮನುಷ್ಯದೇಹವನ್ನು ತ್ಯಜಿಸಿ(ಜನ್ಮಾಂತರದಲ್ಲಿ)ಆನೆಯಾಗಿ ಹುಟ್ಟಿದಾಗ ಆ ದೊಡ್ಡದೇಹವನ್ನು ಪೂರ್ತಿಯಾಗಿ ಜೀವನು ವ್ಯಾಪಿಸಲಾರ! ಹಾಗೆಯೇ ಒಂದು ಗೆದ್ದಲುಹುಳುವಿನ ಜನ್ಮಬಂದಾಗ ಆ ಚಿಕ್ಕದೇಹವನ್ನು ಪೂರ್ತಿಯಾಗಿ ಪ್ರವೇಶಿಸಲಾರ ! ಜೀವನು ದೇಹಪ್ರಮಾಣವುಳ್ಳವನೆಂಬುದು ಹೇಗೆ ಸಂಗತವಾಗುತ್ತದೆ?

ಟಿಪ್ಪಣಿ :- ಮನುಷ್ಯಜನ್ಮದಲ್ಲಿಯೇ ಬಾಲ್ಯ, ಕೌಮಾರ, ಯೌವನಾವಸ್ಥೆಗಳಲ್ಲಿ ದೇಹಪ್ರಮಾಣವು ಬೆಳೆಯುತ್ತಿರುವಾಗ ಜೀವನು ಅದನ್ನು ವ್ಯಾಪಿಸುವುದು ಹೇಗೆ? - ಎಂಬ ಪ್ರಶ್ನೆಯೂ ಇದ್ದೇ ಇದೆ.

ಉಪಯಾಂತಿ ಚ ಕೇಚನ ಪ್ರತೀಕಾಃ
ಮಹತಾ ಸಂಹನನೇನ ಸಂಗಮೇಽಸ್ಯ |
ಅಪಯಾಂತ್ಯಧಿಜಗ್ಮುಷೋಽಲ್ಪದೇಹಂ
ತದಯಂ ದೇಹಸಮಃ ಸಮಶ್ರುತೇಶ್ಚ || ೧೪೬

ಜೈನಪಂಡಿತ — ಜೀವನಿಗೆ ದೊಡ್ಡದೇಹದ ಸಂಬಂಧವು ಒದಗಿದಾಗ ಕೆಲವು ಅವಯವಗಳು (ಜೀವಭಾಗಗಳು) ಸೇರಿಕೊಂಡು ಅವನ ಪ್ರಮಾಣವು ದೊಡ್ಡದಾಗುತ್ತದೆ. ಚಿಕ್ಕದೇಹವನ್ನು ಸೇರುವಾಗ ಕೆಲವು ಜೀವಾವಯವಗಳು ಕಳಚಿಕೊಂಡು ಅವನ ಪ್ರಮಾಣವು ಚಿಕ್ಕದಾಗುತ್ತದೆ. ಜೀವಾತ್ಮನು ದೇಹದ ಸಮಪ್ರಮಾಣನೆಂದು ನಮ್ಮಗ್ರಂಥದಲ್ಲಿ ಉಕ್ತವಾಗಿದೆ.

ಟಿಪ್ಪಣಿ :- ಶ್ಲೋಕದಲ್ಲಿರುವ ಶ್ರುತಿಶಬ್ದಕ್ಕೆ ಶ್ರುತವೆಂದೂ ಅರ್ಥಹೇಳಬಹುದು.'ಶ್ರುತ' ಎಂಬುದು, ವೈದಿಕರಿಗೆ ಶ್ರುತಿಯಿದ್ದಂತೆ, ಜೈನರಿಗೆ ಪ್ರಮಾಣಗ್ರಂಥವಾಗಿದೆ. ಜೀವನು ದೇಹಸಮಪ್ರಮಾಣನೆಂದು ಶ್ರುತವು ಹೇಳಿದೆ ಎಂದರ್ಥ. ಶ್ರುತವು ಈಗ ಉಪಲಬ್ಧವಿಲ್ಲ.

ಉಪಯಂತ ಇಮೇ ತಥಾಽಪಯಂತೋ
ಯದಿ ವರ್ಷ್ಮೇವ ನ ಜೀವತಾಂ ಭಜೇಯುಃ |
ಪ್ರಭವೇಯುರನಾತ್ಮನಃ ಕಥಂ ತೇ
ಕಥಮಾತ್ಮಾವಯವಾಃ ಪ್ರಯಂತು ತಸ್ಮಿನ್ || ೧೪೭

ಶ್ರೀಶಂಕರಾಚಾರ್ಯ— ಜೀವಾವಯವಗಳು ಬಂದು ಸೇರಿಕೊಳ್ಳುತ್ತವೆ ಹಾಗೆಯೇ ನಿರ್ಗಮಿಸುತ್ತವೆ - ಎಂದರೆ ಅವುಗಳಿಗೆ ಹುಟ್ಟುಸಾವುಗಳು ಇವೆ ಎಂದಾಯಿತು. ಆಗ ಈ ದೇಹದಂತೆಯೇ ಅವು ಜೀವಾತ್ಮಗಳಲ್ಲ ವೆಂದಾಯಿತು. ಅವು ಅನಾತ್ಮವಾದ ಈ ದೇಹವನ್ನು ವ್ಯಾಪಿಸುವುದಕ್ಕಾಗಿ ಹೇಗೆ ಹುಟ್ಟಿಬರುತ್ತವೆ? ಮತ್ತು ಅನಾತ್ಮವಾದ ದೇಹದಲ್ಲಿ ಅಡಕವಾಗುವುದಕ್ಕಾಗಿ ಆತ್ಮದ ಅವಯವರೂಪದಿಂದ ಹೇಗೆ ಬಂದು ಸೇರಿಕೊಳ್ಳುತ್ತವೆ?

ಜನಿತಾರಹಿತಾಃ ಕ್ಷಯೇಣ ಹೀನಾಃ
ಸಮುಪಾಯಾಂತ್ಯಪಯಾಂತಿ ಚಾಽಽತ್ಮನಸ್ತೇ |
ಅಮುಕೋಪಚಿತಃ ಪ್ರಯಾತಿ ಕೃತ್ಸ್ನಂ
ತ್ವಮುಕೈಶ್ಚಾಪಚಿತಃ ಪ್ರಯಾತ್ಯಕೃತ್ಸ್ನಮ್ || ೧೪೮

ಜೈನಪಂಡಿತ — ಆತ್ಮನ ಅವಯವಗಳಿಗೆ ಜನ್ಮವೂ ಇಲ್ಲ, ನಾಶವೂ ಇಲ್ಲ. ಅವು ನಿತ್ಯವಾದವು. ಕೆಲವು ಅವಯವಗಳು ಬಂದು ಸೇರಿದಾಗ ಜೀವಾತ್ಮನು

ದೊಡ್ಡಪ್ರಮಾಣದವನಾಗಿ ಗಜಾದಿದೇಹವನ್ನು ಪೂರ್ತಿಯಾಗಿ ವ್ಯಾಪಿಸುತ್ತಾನೆ. ಕೆಲವು ಅವಯವಗಳು ಸೇರದಿದ್ದಾಗ ಚಿಕ್ಕಗಾತ್ರದವನಾಗಿ ಗೆದ್ದಲುದೇಹವನ್ನು ಸ್ವಲ್ಪವೇ ಪ್ರವೇಶಿಸುತ್ತಾನೆ.

ಕಿಮಚೇತನತೋತ ಚೇತನತ್ವಂ
ವದ ತೇಷಾಂ ಚರಮೇ ವಿರುದ್ಧಮತ್ಯಾ |
ವಪುರುನ್ಮಥಿತಂ ಭವೇತ್ತು ಪೂರ್ವೇ
ಬತ ಕಾರ್ತ್ಸ್ನ್ಯೇನ ವಪುರ್ನ ಚೇತಯೇಯುಃ || ೧೪೯

ಶ್ರೀಶಂಕರಾಚಾರ್ಯ — ಆ ಜೀವಾವಯಗಳಿಗೆ ಚೈತನ್ಯವಿಲ್ಲವೊ ಅಥವಾ ಚೈತನ್ಯವಿದಯೊ, ಹೇಳಿರಿ. ಎರಡನೆಯ ಪಕ್ಷದಂತೆ ಚೈತನ್ಯವಿದೆಯಾದರೆ, ಈ ಚೇತನಗಳಿಗೆ ಅನ್ಯೋನ್ಯವಿರುದ್ಧಬುದ್ಧಿಯುಂಟಾದಾಗ ದೇಹವನ್ನು ಅತ್ತಿಂದಿತ್ತ ಎಳೆದು ಕಿತ್ತಾಡಿ ಬಿಡುತ್ತವೆ. ಆಗ ದೇಹವು ಧ್ವಂಸವಾಗಿ ಹೋದೀತು. ಚೈತನ್ಯವಿಲ್ಲವಾದರೆ ದೇಹದಲ್ಲಿ ಪೂರ್ತಿಯಾಗಿ ಚೇತನ ಕ್ರಿಯೆಯನ್ನೇ ಹುಟ್ಟಿಸಲಾರದೆ ಹೋಗುತ್ತವೆ.

ಚಲಯಂತಿ ರಥಂ ಯಥೈಕಮತ್ಯಾ
ಬಹವೋ ವಾಜಿನ ಏವಮಪ್ರತೀತಾಃ |
ಇತರೇತರಮಂಗಮೇಜಯಂತು
ಜ್ಞಪತೇ ಚೇತನತಾಮಪಿ ಪ್ರಪದ್ಯ || ೧೫೦

ಜೈನಪಂಡಿತ — ಒಂದು ರಥಕ್ಕೆ ಬಹಳ ಕುದುರೆಗಳನ್ನು ಕಟ್ಟಿದ್ದರೂ ಅವು ಐಕಮತ್ಯದಿಂದ ರಥವನ್ನು ಎಳೆದುಕೊಂಡು ಹೋಗುತ್ತವೆಯಷ್ಟೆ. ಹಾಗೆಯೇ, ವಿದ್ವಾಂಸರೆ, ಈ ಜೀವಾವಯವಗಳಿಗೆ ಚೈತನ್ಯವಿದ್ದರೂ ವಿರುದ್ಧಾಭಿಪ್ರಾಯವಿಲ್ಲದೆ, ಅನ್ಯೋನ್ಯವಾಗಿ ಶರೀರವನ್ನು ನಡೆಸಿಕೊಂಡು ಹೋಗಬಹುದು.

ಟಿಪ್ಪಣಿ :- ಜ್ಞಪತಿ = ವಿದ್ವದಗ್ರಗಣ್ಯ. ಈ ಶ್ಲೋಕದಲ್ಲಿ 'ಅಪ್ರತೀತಾಃ' ಎಂಬ ಶಬ್ದಕ್ಕೆ ಬದಲಾಗಿ 'ಅಪ್ರತೀಪಾಃ' ಎಂದು ಮೂಲಪಾಠವಿದ್ದಿರಬಹುದು.

ಬಹವೋಽಪಿ ನಿಯಾಮಕಸ್ಯ ಸತ್ತ್ವಾತ್
ಸುಮತೇ ತತ್ರ ಭಜೇಯುರೈಕಮತ್ಯಮ್ |
ಕಥಮತ್ರ ನಿಯಾಮಕಸ್ಯ ತದ್ವತ್
ವಿರಹಾತ್ ಕಸ್ಯಚಿದಪ್ಯದೋ ಘಟೇತ || ೧೫೧

ಶ್ರೀಶಂಕರಾಚಾರ್ಯ— ಪ್ರಾಜ್ಞರೆ, ರಥದಲ್ಲಿ ನಿಯಾಮಕನಾದ ಸಾರಥಿ ಇರುವುದರಿಂದ, ಬಹಳ ಅಶ್ವಗಳಿದ್ದರೂ ಅವು ಐಕಮತ್ಯವನ್ನು ಪಡೆಯಲು ಸಾಧ್ಯವಿದೆ. ಆದರೆ ಶರೀರದಲ್ಲಿ ಆ ರೀತಿಯಾಗಿ ನಿಯಾಮಕನೊಬ್ಬನೂ ಇಲ್ಲದ್ದರಿಂದ ಜೀವಾವಯವಗಳಿಗೆ ಒಗ್ಗಟ್ಟು ಹೇಗೆ ಬರುತ್ತದೆ?

ಉಪಯಾಂತಿ ನ ಚಾಪಯಾಂತಿ ಜೀವಾ -
ವಯವಾಃ ಕಿಂತು ಮಹತ್ತರೇ ಶರೀರೇ |
ವಿಕಸಂತಿ ಚ ಸಂಕುಚಂತ್ಯನಿಷ್ಟೇ
ಯತಿವರ್ಯಾತ್ರ ನಿದರ್ಶನಂ ಜಲೌಕಾ || ೧೫೨

ಜೈನಪಂಡಿತ — ಯತಿವರ್ಯರೆ, ಜೀವಾತ್ಮನ ಅವಯವಗಳು ಹೊಸದಾಗಿ ಬಂದು ಸೇರುವುದೂ ಇಲ್ಲ. ಬಿಟ್ಟು ಹೋಗುವುದೂ ಇಲ್ಲ! ಮತ್ತೇನೆಂದರೆ. ದೇಹವು ದೊಡ್ಡದಾಗಿದ್ದಾಗ ಅದಕ್ಕೆ ಅನುಗುಣವಾಗಿ ಹಿಗ್ಗುತ್ತವೆ. ಅನಿಷ್ಟವಾದ ಚಿಕ್ಕದೇಹದಲ್ಲಿ ಕುಗ್ಗುತ್ತವೆ! ಜಿಗಣೆಯೇ ಇದಕ್ಕೆ ಉದಾಹರಣೆ.

ಟಿಪ್ಪಣಿ :- ಇದು ಪಕ್ಷಾಂತರ ವನ್ನಲಂಬಿಸಿ ಹೇಳಿದ ಸಮಾಧಾನ. ಜೈನಗ್ರಂಥಗಳಲ್ಲಿ ದೀಪದ ದೃಷ್ಟಾಂತವಿದೆ. ದೀಪಪ್ರಭೆ ತನ್ನ ಆವರಣಕ್ಕೆ ಅನುಗುಣವಾಗಿ ಹರಡುವಂತೆ ಜೀವನು ದೇಹವನ್ನು ಪೂರ್ತಿಯಾಗಿ ವ್ಯಾಪಿಸುತ್ತಾನೆ- ಎಂದು ಅಭಿಪ್ರಾಯ. ಚಿಕ್ಕದೇಹದ ಜಿಗಣೆಯು ರಕ್ತವನ್ನು ಕುಡಿದು ಉಬ್ಬುತ್ತದೆ. ಆಮೇಲೆ ಕುಗ್ಗುತ್ತದೆ.

ಯದಿ ಚೈವಮಮೀ ಸವಿಕ್ರಿಯತ್ವಾತ್
ಘಟವತ್ತೇ ಚ ವಿನಶ್ವರಾ ಭವೇಯುಃ |
ಇತಿ ನಶ್ವರತಾಂ ಪ್ರಯಾತಿ ಜೀವೇ
ಕೃತನಾಶಾಕೃತಸಂಗಮೌ ಭವೇತಾಮ್ || ೧೫೩

ಶ್ರೀಶಂಕರಾಚಾರ್ಯ— ಉಬ್ಬುವುದು ಕುಗ್ಗುವುದು ವಿಕಾರಗಳಾದ್ದರಿಂದ ಜೀವರಿಗೆ ವಿಕಾರವುಂಟೆಂದಾಗುತ್ತದೆ. ಸವಿಕಾರಪದಾರ್ಥಗಳು ಘಟದಂತೆ ನಶ್ವರಗಳಾದ್ದರಿಂದ ಜೀವರಿಗೂ ನಾಶವಿರಬೇಕಾಗುತ್ತದೆ. ಜೀವನು ನಶ್ವರನಾದರೆ ಕೃತನಾಶ, ಅಕೃತಾಭ್ಯಾಗಮ ಎಂಬ ಎರಡು ದೋಷಗಳು ಬರುತ್ತವೆ.

ವಿವರಣೆ : ಕೃತನಾಶ = ಈ ಜನ್ಮದಲ್ಲಿ ಮಾಡಿದ ಪುಣ್ಯಪಾಪಕರ್ಮಗಳ ನಾಶ. ಅಕೃತಾಭ್ಯಾಗಮ = ಮಾಡದೆ ಇರುವ ಪುಣ್ಯಪಾಪಕರ್ಮಗಳ ಪ್ರಾಪ್ತಿ. ಜೀವನು ನಾಶವಾಗಿ ಬೇರೊಬ್ಬನು ಹುಟ್ಟುತ್ತಾನೆಂದರೆ ಈ ದೋಷಗಳು ಗಂಟುಬೀಳುತ್ತವೆ.

ಅಪಿ ಚೈವಮಲಾಬುವದ್ಭವಾಬ್ಧೌ
ನಿಜಕರ್ಮಾಷ್ಟಕಭಾರಮಗ್ನಜಂತೋಃ ।
ಸತತೋರ್ಧ್ವಗತಿಸ್ಸ್ವರೂಪ ಮೋಕ್ಷಃ
ತವ ಸಿದ್ಧಾಂತ ಸಮರ್ಥಿತೋ ನ ಸಿಧ್ಯೇತ್ ॥ ೧೫೪

ಅದೂ ಅಲ್ಲದೆ ತಾನು ಮಾಡಿದ ಅಷ್ಟವಿಧಕರ್ಮಗಳ ಭಾರದಿಂದ ಜೀವನು ಸಂಸಾರಸಾಗರದಲ್ಲಿ(ಕಲ್ಲನ್ನು ತೂಗುಹಾಕಿದ) ಸೋರೆಬುರುಡೆಯಂತೆ ಮುಳುಗಿರುತ್ತಾನೆಂದೂ ಅವನಿಗೆ ಸತತವಾದ ಊರ್ಧ್ವಗತಿಯುಂಟಾಗುವುದೇ ಮೋಕ್ಷವೆಂದೂ ನಿಮ್ಮ ಸಿದ್ಧಾಂತದಲ್ಲಿದೆ. ಜೀವನು ನಶ್ವರನಾದರೆ ಅದು ಸಿದ್ಧಿಸದೇ ಹೋಗುತ್ತದೆ.

ವಿವರಣೆ : ಪೂರ್ವಕರ್ಮಗಳ ಸಂಬಂಧವಿಲ್ಲದಾಗ ಜೀವನು ಸಂಸಾರದಲ್ಲಿ ಬದ್ಧನಾಗಲು ಕಾರಣವಿಲ್ಲ. ಪೂರ್ವಕರ್ಮಗಳೇ ಇಲ್ಲದ್ದರಿಂದ ಕರ್ಮಬಂಧವು ಕಳಚಿದಮೇಲೆ ಮೋಕ್ಷ ಎಂಬುದೂ ಕೂಡುವುದಿಲ್ಲ. ಜೀವನು ಊರ್ಧ್ವಗಾಮಿಯಾಗಿ ಹೋಗುತ್ತಲೇ ಇರುವುದು ಮೋಕ್ಷವೆಂದೂ ಲೋಕಾಕಾಶದ ಮೇಲ್ಗಡೆ ಸಿದ್ಧಶಿಲೆಯಲ್ಲಿ ವಿಶ್ರಮಿಸುವುದು ಮೋಕ್ಷವೆಂದೂ ಜೈನಮತದಲ್ಲಿ ಎರಡು ಪಕ್ಷಗಳಿವೆ. ಜೀವನು ನಶ್ವರನಾದರೆ ಇದೂ ಹೊಂದುವುದಿಲ್ಲ.

ಅಪಿ ಸಾಧನಭೂತಸಪ್ತಭಂಗೀ -
ನಯಮಪ್ಯಾರ್ಹತ ನಾಽಽದ್ರಿಯಾಮಹೇ ತೇ ।
ಪರಮಾರ್ಥಸತಾಂ ವಿರೋಧಭಾಜಾಂ
ಸ್ಥಿತಿರೇಕತ್ರ ಹಿ ನೈಕದಾ ಘಟೇತ ॥ ೧೫೫

ಆರ್ಹತರೆ, ನೀವು ಪ್ರಮೇಯವನ್ನು ಸಾಧಿಸುವುದಕ್ಕಾಗಿ ಬಳಸುವ ಸಪ್ತಭಂಗೀನಯವನ್ನೂ ನಾವು ಮನ್ನಿಸುವುದಿಲ್ಲ. ಪರಮಾರ್ಥವಾಗಿ ಇರುವ ಸತ್ತ್ವಾದಿ ಧರ್ಮಗಳಿಗೂ ವಿರುದ್ಧವಾದ ಅಸತ್ತ್ವಾದಿಧರ್ಮಗಳಿಗೂ ಒಂದೇ ಧರ್ಮಿಯಲ್ಲಿ ಯುಗಪತ್ ಸ್ಥಿತಿಯು ಎಂದಿಗೂ ಹೊಂದುವುದಿಲ್ಲ-ಎಂದರು.

ವಿವರಣೆ : ಸ್ಯಾದಸ್ತಿ, ಸ್ಯಾನ್ನಾಸ್ತಿ - ಇತ್ಯಾದಿ ರೀತಿಯಲ್ಲಿ ಸಪ್ತಭಂಗೀನಯದಿಂದ ಒಂದೇ ವಸ್ತುವನ್ನು ಅನೇಕರೀತಿಯಲ್ಲಿ ಪ್ರತಿಪಾದಿಸುತ್ತಾರೆ. ಇದು ಜೈನರ ಅನೇಕಾಂತವಾದ. ಈ ವಾದವನ್ನು ಇತರ ಯಾವ ದಾರ್ಶನಿಕರೂ ಒಪ್ಪಿಲ್ಲ.

ಇತಿ ಮಾಧ್ಯಮಿಕೇಷು ಭಗ್ನದರ್ಪೇ -
ಷ್ವಥ ಭಾಷ್ಯಾಣಿ ಸ ನೈಮಿಶೇ ವಿತತ್ಯ ।
ದರದಾನ್ ಭರತಾಂಶ್ಚ ಶೂರಸೇನಾನ್
ಕುರುಪಾಂಚಾಲಮುಖಾನ್ ಬಹೂನಜೈಷೀತ್ ॥ ೧೫೬

ಜೀವರು ಮಧ್ಯಮ ಪ್ರಮಾಣದವರೆಂದು ವಾದಿಸುವ ಮಾಧ್ಯಮಿಕರಾದ ಜೈನರ ದರ್ಪವು ಈ ಪ್ರಕಾರದಲ್ಲಿ ಭಗ್ನವಾಯಿತು. ಅನಂತರ ಆಚಾರ್ಯರು ತಮ್ಮ ಭಾಷ್ಯಗಳನ್ನು ನೈಮಿಶ ಪ್ರಾಂತದಲ್ಲಿ ಪ್ರಚುರಗೊಳಿಸಿ, ದರದ, ಭರತ, ಶೂರಸೇನ, ಕುರು, ಪಾಂಚಾಲಾದಿ ದೇಶಗಳಲ್ಲಿದ್ದ ಬಹುಮಂದಿ ಪ್ರತಿವಾದಿಗಳನ್ನು ಜಯಿಸಿದರು.

ಟಿಪ್ಪಣಿ :- ಬೌದ್ಧರಲ್ಲಿ ಮಾಧ್ಯಮಿಕರೆಂಬ ಒಂದು ಪಂಗಡವಿದೆ. ಈ ಶ್ಲೋಕದಲ್ಲಿ ಮಾಧ್ಯಮಿಕರೆಂದರೆ ಅವರಲ್ಲ.

ಪಟುಯುಕ್ತಿನಿಕೃತ್ತಸರ್ವಶಾಸ್ತ್ರಂ
ಗುರುಭಟ್ಟೋದಯನಾದಿಕೈರಜಯ್ಯಮ್ ।
ಸ ಹಿ ಖಂಡನಕಾರಮೂಢದರ್ಪಂ
ಬಹುಧಾ ವ್ಯುದ್ಯ ವಶಂವದಂ ಚಕಾರ ॥ ೧೫೭

ಖಂಡನ ಖಂಡಖಾದ್ಯವೆಂಬ ಗ್ರಂಥವನ್ನು ಬರೆದ ಶ್ರೀಹರ್ಷನು ತನಗೆ ಸಂಮತವಲ್ಲದ ಸರ್ವಶಾಸ್ತ್ರಗಳನ್ನೂ ಯುಕ್ತಿಪಾಟವದಿಂದ ಖಂಡಿಸಿದವನು. ಪ್ರಾಭಾಕರ ಗುರು, ಭಟ್ಟಪಾದ, ಉದಯನಾದಿಗಳಿಂದಲೂ ಅವನನ್ನು ವಾದದಲ್ಲಿ ಜಯಿಸಲು ಸಾಧ್ಯವಾಗಿರಲಿಲ್ಲ. ಪಾಂಡಿತ್ಯದ ದರ್ಪದಿಂದ ಮೆರೆಯುತ್ತಿದ್ದ ಆ ಖಂಡನಕಾರನೊಡನೆ ಆಚಾರ್ಯರು ವಿಶೇಷವಾಗಿ ವಾದಿಸಿ ಆತನನ್ನು ಜಯಿಸಿ ವಶಪಡಿಸಿಕೊಂಡರು.

ಟಿಪ್ಪಣಿ :- ಶ್ರೀಹರ್ಷನು ಅದ್ವೈತಸಿದ್ಧಾಂತದವನು. ಅದರಲ್ಲಿಯೇ ಯಾವುದೋ ಪ್ರಕ್ರಿಯಾಭೇದದಿಂದ ವಾದವು ನಡೆಯಿತೆಂದು ಗ್ರಂಥಕಾರರ ಆಶಯವಿರಬಹುದು.

ತದನಂತರಮೇಷ ಕಾಮರೂಪಾ -
ನಧಿಗತ್ಯಾಭಿನವೋಪಶಬ್ದಗುಪ್ತಮ್ ।
ಅಜಯತ್ಕಿಲ ಶಾಕ್ತಭಾಷ್ಯಕಾರಂ
ಸ ಚ ಭಗ್ನೋ ಮನಸೇದಮಾಲುಲೋಚೇ ॥ ೧೫೮

ಆಮೇಲೆ ಶ್ರೀಶಂಕರಾಚಾರ್ಯರು ಕಾಮರೂಪದೇಶಕ್ಕೆ ಹೋಗಿ ಶಾಕ್ತಭಾಷ್ಯಕಾರನಾದ ಅಭಿನವಗುಪ್ತ ಎಂಬವನನ್ನು ವಾದದಲ್ಲಿ ಜಯಿಸಿದರು. ಸೋತುಹೋದ ಅಭಿನವಗುಪ್ತನು ಮನಸ್ಸಿನಲ್ಲಿ ಹೀಗೆ ಆಲೋಚಿಸಿದನು.

ನಿಗಮಾಬ್ಜವಿಕಾಸಿಬಾಲಭಾನೋಃ
ನ ಸಮೋಽಮುಷ್ಯ ವಿಲೋಕ್ಯತೇ ತ್ರಿಲೋಕ್ಯಾಮ್ ।
ನ ಕಥಂಚನ ಮದ್ವಶಂವದೋಽಸೌ
ತದಮುಂ ದೈವತಕೃತ್ಯಯಾ ಹರೇಯಮ್ ॥ ೧೫೯

"ವೇದಗಳೆಂಬ ಕಮಲಗಳನ್ನು ಅರಳಿಸುವ ಬಾಲಸೂರ್ಯನಾದ ಈ ಆಚಾರ್ಯನಿಗೆ ಸಮನಾದ ವಿದ್ವಾಂಸನು ಮೂರು ಲೋಕದಲ್ಲಿಯೂ ಕಂಡು ಬರುವುದಿಲ್ಲ ! ಈತನು ಎಂದಿಗೂ ನನಗೆ ವಶನಾಗತಕ್ಕವನಲ್ಲ. ಆದ್ದರಿಂದ ದೈವತಕೃತ್ಯವಾದ ಅಭಿಚಾರದಿಂದ ಈತನನ್ನು ನಾನು ಮುಗಿಸಬೇಕು!"

ಇತಿ ಗೂಢಮಸೌ ವಿಚಿಂತ್ಯ ಪಶ್ಚಾತ್
ಸಹ ಶಿಷ್ಯೈಃ ಸಹಸಾ ಸ್ವಶಾಕ್ತಭಾಷ್ಯಮ್ |
ಪರಿಹೃತ್ಯ ಜನಾಪವಾದಭೀತ್ಯಾ
ಯಮಿನಃ ಶಿಷ್ಯ ಇವಾನ್ವವರ್ತತೈಷಃ || ೧೬೦

ಹೀಗೆ ಅವನು ಗುಪ್ತವಾಗಿ ಆಲೋಚಿಸಿ, ಶಿಷ್ಯರೊಡನೆ ತನ್ನ ಶಾಕ್ತಭಾಷ್ಯವನ್ನೂ ವಿಸರ್ಜಿಸಿದನು. ಜನರಿಂದ ಅಪಕೀರ್ತಿ ಬರುತ್ತದೆಯೆಂದು ಹೆದರಿ, ಶ್ರೀಶಂಕರಯತಿಗಳಿಗೆ ತಾನೂ ಒಬ್ಬ ಶಿಷ್ಯನೆಂಬಂತೆ ನಟಿಸುತ್ತಾ ಅಭಿನವಗುಪ್ತನು ಆಚಾರ್ಯರ ಜೊತೆಗೆ ಹೋದನು.

ನಿಜಶಿಷ್ಯಪದಂ ಗತಾನುದೀಚ್ಯಾನ್
ಇತಿ ಕೃತ್ವಾಽಥ ವಿದೇಹಕೌಸಲಾದ್ಯೈಃ |
ವಿಹಿತಾಪಚಿತಿಸ್ತಥಾಽಙ್ಗ ವಂಗೇ -
ಷ್ವಯಮಾಸ್ತೀರ್ಯ ಯಶೋ ಜಗಾಮ ಗೌಡಾನ್ || ೧೬೧

ಆಚಾರ್ಯರು ಉತ್ತರದೇಶದವರನ್ನು ಗೆದ್ದು ತಮ್ಮ ಶಿಷ್ಯರನ್ನಾಗಿ ಮಾಡಿಕೊಂಡರಲ್ಲದೆ, ವಿದೇಹ ಕೋಸಲಾದಿ ದೇಶಗಳಲ್ಲಿದ್ದ ವಿದ್ವಾಂಸರಿಂದ ಪೂಜಿತರಾದರು. ಅನಂತರ ಅಂಗದೇಶ ವಂಗದೇಶಗಳಲ್ಲಿ ತಮ್ಮ ಕೀರ್ತಿಯನ್ನು ಹರಡಿ ಗೌಡದೇಶಕ್ಕೆ ಪ್ರಯಾಣಮಾಡಿದರು.

ಅಭಿಭೂಯ ಮುರಾರಿಮಿಶ್ರವರ್ಯಂ
ಸಹಸಾ ಚೋದಯನಂ ವಿಜಿತ್ಯ ವಾದೇ |
ಅವಧೂಯ ಚ ಧರ್ಮಗುಪ್ತಮಿಶ್ರಂ
ಸ್ವಯಶಃ ಪ್ರೌಢಮಗಾಪಯತ್ಸ ಗೌಡಾನ್ || ೧೬೨

ಭಗವತ್ಪಾದರು ಗೌಡದೇಶದಲ್ಲಿದ್ದ ಮುರಾರಿಮಿಶ್ರನನ್ನೂ ಉದಯನನನ್ನೂ ವಾದದಲ್ಲಿ ಜಯಿಸಿ, ಧರ್ಮಗುಪ್ತಮಿಶ್ರನನ್ನು ಸೋಲಿಸಿ, ಗಾಢವಾದ ತಮ್ಮ ಕೀರ್ತಿಯನ್ನು ಗೌಡದೇಶದವರು ಹಾಡಿಹೊಗಳುವಂತೆ ಮಾಡಿದರು.

ಪೂರ್ವಂ ಯೇನ ವಿಮೋಹಿತಾ ದ್ವಿಜವರಾಸ್ತ್ವಸ್ಯಾಸತೋಽರೀನ್ ಕಲೌ
ಬುದ್ಧಸ್ಯ ಪ್ರಬಿಭೇದ ಮಸ್ಕರಿವರಸ್ತಾನ್ ಭಾಸ್ಕರಾದೀನ್ ಕ್ಷಣಾತ್ |
ಶಾಸ್ತ್ರಾಮ್ನಾಯವಿನಿಂದಕೇನ ಕುಧಿಯಾ ಕೂಟಪ್ರವಾದಾಗ್ರಹಾ-
ನ್ನಿಷ್ಣಾತೋ ನಿಗಮಾಗಮಾದಿಷು ಮತಂ ದಕ್ಷಸ್ಯ ಕೂಟಗ್ರಹೇ || ೧೬೩

ಕಲಿಯುಗದಲ್ಲಿ ಹಿಂದೆ ತಪ್ಪುತಿಳಿವಳಿಕೆಗೆ ಒಳಗಾಗಿ ವೇದಶಾಸ್ತ್ರಗಳನ್ನು ನಿಂದಿಸುತ್ತಿದ್ದ ಬುದ್ಧನಿಂದ ಬಹುಮಂದಿ ದ್ವಿಜೋತ್ತಮರು ಮೋಹಗೊಂಡಿದ್ದರು. (ಬೌದ್ಧಮತಕ್ಕೆ ಸೇರಿದ್ದರು). ಅಸನ್ಮಾರ್ಗದ ಆ ಬೌದ್ಧಮತವನ್ನು ಖಂಡಿಸಿ ಅದಕ್ಕೆ ವೈರಿಗಳಾಗಿದ್ದ ಭಟ್ಟಭಾಸ್ಕರನೇ ಮೊದಲಾದವರನ್ನು ಶ್ರೀಶಂಕರಯತಿಶ್ರೇಷ್ಠರು ಸುಲಭವಾಗಿ ಒಂದುಕ್ಷಣದಲ್ಲಿ ಖಂಡಿಸಿ ತಳ್ಳಿದರು. ಏಕೆಂದರೆ, ಭಾಸ್ಕರಾದಿಪಂಡಿತರು 'ಕೂಟಪ್ರವಾದಾಗ್ರಹ' ರಾಗಿದ್ದರು - ಎಂದರೆ -ವೈದಿಕಸಿದ್ಧಾಂತವನ್ನೇ ತಪ್ಪಾಗಿ ಪ್ರತಿಪಾದಿಸುತ್ತಿದ್ದರು. ಹಾಗೆಯೇ ನಿಗಮಾಗಮಾದಿಗಳಲ್ಲಿ ನಿಷ್ಣಾತರಾದ ಆಚಾರ್ಯರು ಮಿಥ್ಯಾಸಿದ್ಧಾಂತದಲ್ಲಿ ದಕ್ಷನಾದ ಬುದ್ಧನ ಮತವನ್ನೂ ಖಂಡಿಸಿದರು.

ಶಾಕ್ತೈಃ ಪಾಶುಪತೈರಪಿ ಕ್ಷಪಣಕೈಃ ಕಾಪಾಲಿಕೈರ್ವೈಷ್ಣವೈ -
ರಪ್ಯನ್ಯೈರಖಿಲೈಃ ಖಿಲಂ ಖಲು ಖಲೈರ್ದುರ್ವಾದಿಭಿರ್ವೈದಿಕಮ್ |
ಮಾರ್ಗಂ ರಕ್ಷಿತುಮುಗ್ರವಾದಿವಿಜಯಂ ನೋ ಮಾನಹೇತೋರ್ವ್ಯಧಾತ್
ಸರ್ವಜ್ಞೋ ನ ಯತೋಽಸ್ಯ ಸಂಭವತಿ ಸಂಮಾನಗ್ರಹಗ್ರಸ್ತತಾ ||೧೬೪

ಶಾಕ್ತರು, ಪಾಶುಪತರು, ಕ್ಷಪಣಕರು, ಕಾಪಾಲಿಕರು, ವೈಷ್ಣವರು ಮೊದಲಾದ ಸಮಸ್ತ ದುರ್ವಾದಿಗಳಿಂದಲೂ ದೂಷಿತವಾಗಿದ್ದ, ಪರಿಶುದ್ಧ ವೈದಿಕಮಾರ್ಗವನ್ನು ರಕ್ಷಿಸುವುದಕ್ಕಾಗಿ ಸರ್ವಜ್ಞರಾದ ಭಗವತ್ಪಾದರು ಉಗ್ರವಾದ ವಾದಕೇಳಿಯನ್ನೇ ನಡೆಸಿದರು. ತಮಗೆ ಕೀರ್ತಿಬರಬೇಕೆಂದು ಅವರು ವಾದವನ್ನು ನಡೆಸಲಿಲ್ಲ. ಅವರಿಗೆ ಕೀರ್ತಿಯ ದುರಾಸೆಯೇ ಇರಲಿಲ್ಲ.

ದಿಷ್ಟೇ ಪಂಕಜವಿಷ್ಟರೇಣ ಜಗತಾಮಾದ್ಯೇನ ತತ್ಸೂನುಭಿಃ
ನಿರ್ದಿಷ್ಟೇ ಸನಕಾದಿಭಿಃ ಪರಿಚಿತೇ ಪ್ರಾಚೇತಸಾದ್ಯೈರಪಿ |
ಶ್ರೌತಾದ್ವೈತಪಥೇ ಪರಾತ್ಮಭಿದುರಾನ್ ದುರ್ವಾದಿನಃ ಕಂಟಕಾನ್
ಪ್ರೋದ್ಧೃತ್ಯಾಥ ಚಕಾರ ತತ್ರ ಕರುಣೋ ಮೋಕ್ಷಾಧ್ವಗಕ್ಷುಣ್ಣತಾಮ್ ||

ಉಪನಿಷತ್‌ಪ್ರತಿಪಾದಿತವಾದ ಅದ್ವೈತಮಾರ್ಗವು ಜಗತ್ತಿಗೆ ಆದಿಪುರುಷನೂ ಕಮಲಾಸನನೂ ಆದ ಬ್ರಹ್ಮದೇವನಿಂದ ಉಪದಿಷ್ಟವಾಯಿತು. ಆತನ ಮಾನಸಪುತ್ರರಾದ ಸನಕ ಸನಂದನಾದಿಗಳಿಂದ ಅದು ಸ್ಪಷ್ಟವಾಗಿ ತೋರಿಸಲ್ಪಟ್ಟಿತು. ಪ್ರಾಚೇತಸನಾದ

ವಾಲ್ಮೀಕಿಯೇ ಮೊದಲಾದ ಋಷಿಗಳು ಆ ಮಾರ್ಗದಲ್ಲಿ ಸಂಚರಿಸಿ ಪರಿಚಯ ಮಾಡಿಸಿದರು. ಇಂತಹ ಅದ್ವೈತಮಾರ್ಗದಲ್ಲಿ ಪರಮಾತ್ಮನನ್ನೇ ಚುಚ್ಚುವ ಭೇದವಾದಿಗಳಾದ ದುರ್ವಾದಿಗಳೆಂಬ ಮುಳ್ಳುಗಳು ತುಂಬಿಕೊಂಡವು. ಕರುಣಾಶಾಲಿಗಳಾದ ಆಚಾರ್ಯರು ಆ ಮುಳ್ಳುಗಳನ್ನೆಲ್ಲ ತೆಗೆದೆಸೆದು ಅದ್ವೈತಮಾರ್ಗವನ್ನು ಮುಮುಕ್ಷುಗಳಾದ ಪಥಿಕರಿಗೆ ಸಂಚರಿಸಲು ಯೋಗ್ಯವಾದ್ದನ್ನಾಗಿ ಮಾಡಿದರು.

ಟಿಪ್ಪಣಿ :- ಪ್ರಾಚೇತಸನೆಂದರೆ ವಾಲ್ಮೀಕಿಮುನಿಯೆಂದು ಡಿಂಡಿಮದಲ್ಲಿ ಬರೆದಿದೆ. ಯೋಗವಾಸಿಷ್ಠವು ವಾಲ್ಮೀಕಿರಚಿತವೆಂದು ಪ್ರಸಿದ್ಧಿಯಿದೆ. ವರುಣಪುತ್ರನಾದ ಭೃಗುವೆಂದೂ ಹೇಳಬಹುದು.'ಭೃಗುರ್ವೈ ವಾರುಣಿಃ| ವರುಣಂ ಪಿತರಮುಪಸಸಾರ' (ಭೃಗುವಲ್ಲೀ). ಪ್ರಾಚೇತಸ = ವರುಣನ ಮಗ

ಶಾಂತಿರ್ದಾಂತಿ ವಿರಾಗತೇ ಹ್ಯುಪರತಿಃ ಕ್ಷಾಂತಿಃ ಪರೈಕಾಗ್ರತಾ
ಶ್ರದ್ಧೇತಿ ಪ್ರಥಿತಾಭಿರೇಧಿತತನೌ ಷಡ್ವಕ್ತ್ರವನ್ಮಾತೃಭಿಃ |
ಭಿಕ್ಷುಕ್ಷೋಣಿಪತೌ ಪಿಚಂಡಿಲತರೋಚ್ಚಂಡಾತಿಕಂಡೂಚ್ಚಲ -
ತ್ಪಾಖಂಡಾಸುರಖಂಡನೈಕರಸಿಕೇ ಬಾಧಾ ಬುಧಾನಾಂ ಕುತಃ || ೧೬೭

ಷಣ್ಮುಖಸ್ವಾಮಿಯ ದೇಹವನ್ನು ಕೃತ್ತಿಕೆಯೇ ಮೊದಲಾದ ಷಣ್ಮಾತೃಕೆಯರು ಪೋಷಿಸಿ ಬೆಳೆಸಿದರು. ಹಾಗೆಯೇ ಶಾಂತಿ, ದಾಂತಿ, ವಿರಕ್ತಿ, ಉಪರತಿ, ತಿತಿಕ್ಷೆ, ಏಕಾಗ್ರತೆ(ಸಮಾಧಾನ), ಶ್ರದ್ಧೆ - ಎಂಬ ಪ್ರಸಿದ್ಧರಾದ ಮಾತೃಕೆಯರಿಂದ ಶ್ರೀಶಂಕರಯತೀಶ್ವರರು ಪೋಷಿತರಾಗಿದ್ದರು. ಅವರು ಮುಂದೆ ಬಂದು, ಭಾರಿಹೊಟ್ಟೆಯವರೂ ಪ್ರಚಂಡರೂ ಆಗಿ ವಾದಯುದ್ಧ ಕುತೂಹಲದಿಂದ ಎದ್ದುಬರುವ ಪಾಖಂಡರೆಂಬ ಅಸುರರನ್ನು, ಷಣ್ಮುಖಸ್ವಾಮಿಯಂತೆ ಖಂಡಿಸಿ ತುಂಡರಿಸುವುದರಲ್ಲಿ ಉದ್ಯುಕ್ತರಾದಾಗ ವಿದ್ವಾಂಸರಿಗೂ- ದೇವತೆಗಳಿಗೂ ಬಾಧೆ ಎಲ್ಲಿಂದ ಬಂದೀತು?

ವಿವರಣೆ : ಷಣ್ಮುಖನಿಂದ ದೇವತೆಗಳಿಗೆ ತಾರಕಾಸುರನೇ ಮೊದಲಾದವರ ಪೀಡೆ ತೊಲಗಿತು. ಹಾಗೆ ಆಚಾರ್ಯರಿಂದ ವೈದಿಕರಿಗೆ ಪಾಖಂಡವಾದಿಗಳ ಪೀಡೆ ತೊಲಗಿತು -. ಎಂದು ಅಭಿಪ್ರಾಯ. ಪಾಖಂಡ =ವೇದವಿರುದ್ಧವಾಗಿ ವಾದಿಸತಕ್ಕವನು. ಈ ಶ್ಲೋಕದಲ್ಲಿ ಶಮದಮಾದಿಷಟ್ಕವು ಕವಿಗೆ ವಿವಕ್ಷಿತವೆಂದು ತೋರುತ್ತದೆ. ಆದರಲ್ಲಿ ವಿರಕ್ತಿ ಸೇರುವುದಿಲ್ಲ. ಅದನ್ನು ಸೇರಿಸಿದ್ದರಿಂದ ಏಳು ಸಂಖ್ಯೆಯಾಗಿದೆ. ಉಳಿದ ಅಧಿಕಾರಸಂಪತ್ತಿಗೆ ಅದು ಉಪಲಕ್ಷಣವೆಂದು ತಿಳಿಯಬೇಕು. ನಿತ್ಯಾನಿತ್ಯವಸ್ತುವಿವೇಕ ಶಮಾದಿಷಟ್ಕಸಂಪತ್, ವೈರಾಗ್ಯ, ಮುಮುಕ್ಷುತಾ - ಇವು ನಾಲ್ಕು ವೇದಾಂತಾಭ್ಯಾಸಕ್ಕೆ ಬೇಕಾದ ಅಧಿಕಾರವನ್ನು ನೀಡುತ್ತವೆ.

ಯತ್ರಾಽಽರಂಭಜಕಾಹಲಾಕಲಕಲೈರ್ಲೋಕಾಯತೋ ವಿದ್ರುತಃ
ಕಾಣಾಃ ಕಾಣಭುಜಾಸ್ತು ಸೈನ್ಯರಜಸಾ ಸಾಂಖ್ಯೈರ್ಧೃತಾಽಸಾಂಖ್ಯಧೀಃ |
ಯುದ್ಧ್ವಾ ತೇಷು ಪಲಾಯಿತೇಷು ಸಹಸಾ ಯೋಗಾಃ ಸಹೈವಾದ್ರವನ್
ಕೋ ವಾ ವಾದಿಭಟಃ ಪಟುರ್ಭುವಿ ಭವೇದ್ವಸ್ತುಂ ಪುರಸ್ತಾನ್ಮುನೇಃ ||

ವಾದಯುದ್ಧದಲ್ಲಿ ಶ್ರೀಶಂಕರಮುನಿಗಳ ಎದುರಿಗೆ ನಿಲ್ಲಲು ಸಮರ್ಥನಾದ ವಾದಿಯೋಧನು ಈ ಜಗತ್ತಿನಲ್ಲಿಯಾವನಿದ್ದಾನೆ? ವಾದಯುದ್ಧಾರಂಭದಲ್ಲಿ ಕಹಳೆಯ ಕಲಕಲಧ್ವನಿಯನ್ನು ಕೇಳಿಯೇ ಚಾರ್ವಾಕನು ಹೆದರಿ ಓಡಿಹೋದನು ! ಸೈನ್ಯದ ಧೂಳಿಯು ಮುಸುಕಲು ಕಣಾದಮಾರ್ಗದವರು (ವೈಶೇಷಿಕರು) ಕಣ್ಣುಕಾಣದೆ ಕಾಣೆಯಾದರು! ಸಾಂಖ್ಯರು ಹೋರಾಡಿ ಸಾಂಖ್ಯಮತವನ್ನೂ ಯುದ್ಧಬುದ್ಧಿಯನ್ನೂ ತೊರೆದರು. ಅವರು ಪಲಾಯನಮಾಡಿದಾಗ ಅವರ ಜೊತೆಗೆ ಯೋಗಮಾರ್ಗಿಗಳಾದ ಪಾತಂಜಲರೂ ಓಡಿಹೋದರು!

ಟಿಪ್ಪಣಿ :- ಅಸಾಂಖ್ಯಧೀಃ = ಇಲ್ಲಿ ಸಂಖ್ಯಶಬ್ದಕ್ಕೆ ಯುದ್ಧವೆಂಬ ಅರ್ಥವೂ ಇದೆ. ಸಾಂಖ್ಯ= ಯುದ್ಧಸಂಬಂಧಿ. ಯೋಗಾಃ = ಯೋಗಃ ಏಷಾಮಸ್ತೀತಿ ಯೋಗಾಃ, ಅರ್ಶಆದ್ಯಚ್ ಪ್ರತ್ಯಯ.

ಉಚ್ಚಂಡೇ ಪಣಬಂಧಬಂಧುರತರೇ ವಾಚಂಯಮಕ್ಷ್ಮಾಪತೇಃ
ಪೂರ್ವಂ ಮಂಡನಖಂಡನೇ ಸಮುದಭೂದ್ಯೋ ಡಿಂಡಿಮಾಡಂಬರಃ |
ಜಾತಾಃ ಶಬ್ದಪರಂಪರಾಸ್ತತ ಇಮಾಃ ಪಾಖಂಡದುರ್ವಾದಿನಾಂ
ಅದ್ಯ ಶ್ರೋತ್ರತಟಾಟವೀಷು ದಧತೇ ದಾವಾನಲಜ್ವಾಲತಾಮ್ ||

ಹಿಂದೆ ಪಣಬಂಧದಿಂದ ಬಹುಸುಂದರವೂ ಪ್ರಚಂಡವೂ ಆದ ಮಂಡನ ಪಂಡಿತನ ಖಂಡನಸಮಯದಲ್ಲಿ, ಶ್ರೀಶಂಕರಯತೀಶ್ವರರ ಯಾವ ವಾದಡಿಂಡಿಮದ ಆಡಂಬರಧ್ವನಿ ಮೊಳಗಿತೋ ಅದು ಈಗಲೂ ಪ್ರತಿಧ್ವನಿಸುತ್ತಲೇ ಇದೆ. ಅದರ ಶಬ್ದತರಂಗಗಳೇ ಈಗ ದುರ್ವಾದಿಗಳಾದ ಪಾಖಂಡರ ಕಿವಿಗಳೆಂಬ ಕಾಡುಗಳಲ್ಲಿ ಕಾಳ್ಗಿಚ್ಚಿನ ಜ್ವಾಲೆಗಳಾಗಿಬಿಟ್ಟಿವೆ!

ಟಿಪ್ಪಣಿ :- ವಾಚಂಯಮ = 'ವಾಚಂಯಮಪುರಂದರೌಚ' ಎಂಬ ಸೂತ್ರದಿಂದ ನಿಪಾತಿತವಾಗಿದೆ.

ಬುದ್ಧೋ ಯುದ್ಧಸಮುದ್ಯತಃ ಕಿಲ ಪುನಃ ಸ್ಥಿತ್ವಾ ಕ್ಷಣಾದ್ವಿದ್ರುತಃ
ಕೋಣೇ ದ್ರಾಕ್ಕಣಭುಗ್ವ್ಯಲೀಯತ ತಮಃಸ್ತೋಮಾವೃತೋ ಗೌತಮಃ |
ಭಗ್ನೋऽಸೌ ಕಪಿಲಃ ಪಲಾಯತ ತತಃ ಪಾತಂಜಲಾಶ್ಚಾಂಜಲಿಂ
ಚಕ್ರುಸ್ತಸ್ಯ ಯತೀಶಿತುಶ್ಚತುರತಾ ಕೇನೋಪಮೀಯೇತ ಸಾ || ೧೬೯

ಬೌದ್ಧನು ವಾದಯುದ್ಧಕ್ಕೆ ಸಜ್ಜಾಗಿ ಆಚಾರ್ಯರೆದುರಿಗೆ ಬಂದೇನೋ ನಿಂತನು. ಆದರೆ ಒಂದು ಕ್ಷಣದಲ್ಲಿಯೇ ಓಡಿಹೋದನು! ಕಣಾದನು ಯಾವುದೋ ಮೂಲೆಯಲ್ಲಿ ತ್ವರೆಯಿಂದ ಅಡಗಿಕೊಂಡನು! ಗೌತಮನಿಗೆ ಗಾಢಾಂಧಕಾರವು ಕವಿದು ಹೋಯಿತು! ಸೋತು ಹೋದ ಕಪಿಲನು ಪಲಾಯನಮಾಡಿದನು. ಆಮೇಲೆ ಪಾತಂಜಲರು ಅಂಜಲಿಬದ್ಧರಾಗಿ ಶರಣಾಗತರಾದರು! ಯತೀಶ್ವರರ ಆ ವಾದಚಾತುರ್ಯವನ್ನು ಯಾವನು ಯಾವುದರೊಡನೆ ಹೋಲಿಸಿಯಾನು?

ಟಿಪ್ಪಣಿ :- ಪಲಾಯತ = ಪರಾ ಉಪಸರ್ಗ. ಅಯಧಾತುವಿನ ಲಙ್ ರೂಪ.'ಉಪಸರ್ಗಸ್ಯಾಯತೌ' ಎಂಬ ಸೂತ್ರದಿಂದ ರೇಫಕ್ಕೆಲಕಾರಾದೇಶ.

ಹಸ್ತಗ್ರಾಹಂ ಗೃಹೀತಾಃ ಕತಿಚನ ಸಮರೇ ವೈದಿಕಾ ವಾದಿಯೋಧಾಃ
ಕಾಣಾದಾದ್ಯಾಃ ಪರೇ ತು ಪ್ರಸಭಮಭಿಹತಾ ಹಂತ ಲೋಕಾಯತಾದ್ಯಾಃ |
ಗಾಢಂ ಬಂದೀಕೃತಾಸ್ತೇ ಸುಚಿರಮಥ ಪುನಃ ಸ್ವಸ್ವರಾಜ್ಯೇ ನಿಯುಕ್ತಾಃ
ಸೇವಂತೇ ತಂ ವಿಚಿತ್ರಾ ಯತಿಧರಣಿಪತೇಃ ಶೂರತಾ ವಾ ದಯಾ ವಾ ||

ವಾದಯುದ್ಧದಲ್ಲಿ, ವೇದ ಪ್ರಾಮಾಣ್ಯವನ್ನೊಪ್ಪುವ ವೈಶೇಷಿಕರೇ ಮೊದಲಾದ ಕೆಲವು ವಾದಿಯೋಧರನ್ನು ಕೈಯಿಂದ ಸೆರೆಹಿಡಿಯಲಾಯಿತು. (ವೇದಪ್ರಾಮಾಣ್ಯವನ್ನು ಒಪ್ಪದಿರುವ) ಚಾರ್ವಾಕರೇ ಮೊದಲಾದ ಇತರರನ್ನು, ಅಬ್ಬಾ, ಬಲವಾಗಿ ಬಡಿದು ಸೋಲಿಸಲಾಯಿತು. ಅನಂತರ ಅವರೆಲ್ಲರನ್ನೂ ಬಹಳ ಕಾಲ ಬಂದಿಗಳನ್ನಾಗಿಡಲಾಯಿತು. ಆಮೇಲೆ ಅವರು ತಮ್ಮತಮ್ಮ ಸ್ವರಾಜ್ಯದಲ್ಲಿ ನಿಯುಕ್ತರಾಗಿ ಆಚಾರ್ಯರ ಸೇವೆಯಲ್ಲಿ ನಿರತರಾದರು! ನಮ್ಮ ಯತಿಮಹಾರಾಜರ ಶೌರ್ಯವೋ ದಯೆಯೋ, ಅಂತೂ ಇದು ವಿಚಿತ್ರವಾದದ್ದು!

ವಿವರಣೆ: ವೇದಪ್ರಾಮಾಣ್ಯವನ್ನು ಒಪ್ಪತಕ್ಕ ಪ್ರತಿವಾದಿಗಳನ್ನು ಜಯಿಸಲು ಹೆಚ್ಚಿನ ಕಾಠಿಣ್ಯವು ಬೇಕಾಗಲಿಲ್ಲ. ವೇದಪ್ರಾಮಾಣ್ಯವನ್ನು ಅಂಗೀಕರಿಸದವರಲ್ಲಿ ಮಾತ್ರ ಅಧಿಕಕಾಠಿಣ್ಯವು ಬೇಕಾಯಿತು.'ಆಚಾರ್ಯರ ಸೇವೆಯಲ್ಲಿ ನಿರತರಾದರು - ಎಂದರೆ ಪರಾಜಿತರಾದ ಅವರೆಲ್ಲರೂ ತಮ್ಮ ಶಾಸ್ತ್ರಗಳನ್ನು ಬೋಧಿಸುತ್ತಿದ್ದರೂ ಅವುಗಳ ಪರಮತಾತ್ಪರ್ಯವು ಸೋಪಾನಕ್ರಮದಿಂದ ಅದ್ವೈತವೇ ಎಂದು ನಂಬಿದರು-ಎಂದು ತಾತ್ಪರ್ಯ. ಹಸ್ತಗ್ರಾಹಂ = 'ಹಸ್ತೇ ವರ್ತಿಗ್ರಹೋಃ' ಎಂಬ ಸೂತ್ರದಿಂದ ಣಮುಲ್‌ಪ್ರತ್ಯಯ.

ಶಾಂತ್ಯಾದ್ಯರ್ಣವವಾಡವಾನಲಶಿಖಾ ಸತ್ಯಾಭ್ರವಾತ್ಯಾ ದಯಾ -
ಜ್ಯೋತ್ಸ್ನಾದರ್ಶನಿಶಾಽಥ ಶಾಂತಿನಲಿನೀರಾಕಾಶಶಾಂಕದ್ಯುತಿಃ |
ಆಸ್ತಿಕ್ಯದ್ರುಮದಾವಪಾವಕನವಜ್ವಾಲಾವಲೀ ಸತ್ಕಥಾ -
ಹಂಸೀಪ್ರಾವೃಡಖಂಡಿ ದಂಡಿಪತಿನಾ ಪಾಖಂಡವಾಙ್ಮಂಡಲೀ || ೧೭೧

ಯತಿಪತಿಗಳಾದ ಶ್ರೀಶಂಕರಭಗವತ್ಪಾದರು ಸಮಸ್ತಪಾಖಂಡರ ವಾಗಾಡಂಬರವನ್ನು ತುಂಡರಿಸಿ ಚೆಲ್ಲಿದರು. ಆ ಜನರ ವಾಗಾಡಂಬರವಾದರೋ ಶಾಂತಿ ದಾಂತಿ ಮುಂತಾದ ಸದ್ಗುಣಗಳ ಸಾಗರವನ್ನು ಬತ್ತಿಸುವ ಬಡಬಾಗ್ನಿಯ ಜ್ವಾಲೆಯಾಗಿತ್ತು. ಸತ್ಯವೆಂಬ ಮೇಘವನ್ನು ಹಾರಿಸುವ ಬಿರುಗಾಳಿಯಾಗಿತ್ತು. ದಯೆಯೆಂಬ ಬೆಳದಿಂಗಳಿಗೆ ಅಮಾವಾಸ್ಯೆಯ ರಾತ್ರಿಯಾಗಿತ್ತು. ಆ ಜನರ ವಾಗಾಡಂಬರವು ಶಾಂತಿಯೆಂಬ ತಾವರೆಗಿಡವನ್ನು ಬಾಡಿಸುವ ಹುಣ್ಣಿಮೆಯ ಚಂದ್ರನ ಬೆಳಕು. ಆಸ್ತಿಕತೆಯೆಂಬ ವೃಕ್ಷವನ್ನು ಸುಟ್ಟುಹಾಕುವ ಕಾಳ್ಗಿಚ್ಚಿನ ನೂತನಜ್ವಾಲೆ. ಸತ್ಕಥೆಗಳೆಂಬ ಹಂಸಪಕ್ಷಿಗಳ ಹಾರಾಟವನ್ನಡಗಿಸುವ ಮಳೆಗಾಲ!

ಅದ್ವೈತಾಮೃತವರ್ಷಿಭಿಃ ಪರಗುರುವ್ಯಾಹಾರಧಾರಾಧರೈಃ
ಕಾಂತೈರ್ಹಂತ ಸಮಂತತಃ ಪ್ರಸೃಮರೈರುತ್ಪತ್ತತಾಪತ್ರಯೈಃ |
ದುರ್ಭಿಕ್ಷಂ ಸ್ವಪರೈಕತಾಫಲಗತಂ ದುರ್ಭಿಕ್ಷುಸಂಪಾದಿತಂ
ಶಾಂತಂ ಸಂಪ್ರತಿ ಖಂಡಿತಾಶ್ಚ ನಿಬಿಡಾಃ ಪಾಖಂಡಚಂಡಾತಪಾಃ ||೧೭೨

ಆಹಾ! ಪರಮಗುರುವರ್ಯರಾದ ಶ್ರೀಶಂಕರಾಚಾರ್ಯರ ಉಪದೇಶಗಳೆಂಬ ಮೇಘಗಳು ಸುಂದರವಾಗಿ ಶೋಭಿಸುತ್ತ ಅದ್ವೈತಾಮೃತವನ್ನು ಯಥೇಚ್ಛವಾಗಿ ಸುರಿಸಿದವು. ಅವು ಎಲ್ಲೆಲ್ಲಿಯೂ ವ್ಯಾಪಿಸಿ ತಾಪತ್ರಯಗಳ ತಾಪವನ್ನು ನೀಗಿಸಿದವು. ಜೀವಾತ್ಮಪರಮಾತ್ಮರ ಏಕತೆಯೆಂಬ ಫಲಕ್ಕೆ ದುಷ್ಟ ಭಿಕ್ಷುಗಳು ತಂದೊಡ್ಡಿದ ದುರ್ಭಿಕ್ಷವು ಈಗ ಶಾಂತವಾಯಿತು! ಪಾಖಂಡರ ಬೋಧನೆಗಳೆಂಬ ದಟ್ಟವೂ ಉಗ್ರವೂ ಆದ ಬಿಸಿಲಿನ ಝಳ ಅಡಗಿತು!

ಟಿಪ್ಪಣಿ :- ಅಮೃತಶಬ್ದಕ್ಕೆ ನೀರು ಎಂಬ ಅರ್ಥವೂ ಇದೆ. ತಾಪತ್ರಯ -ಆಧ್ಯಾತ್ಮಿಕ, ಆಧಿಭೌತಿಕ ಮತ್ತು ಆಧಿದೈವಿಕ. ತಾಪ= ಸೆಕೆಯೆಂದೂ ಅರ್ಥವಿದೆ.

ಶಾಂತಾನಾಂ ಸುಭಟಾಃ ಕಪಾಲಿಕಪತದ್ಗ್ರಾಹಗ್ರಹವ್ಯಾಪೃತಾಃ
ಕಾಣಾದಪ್ರತಿಹಾರಿಣಃ ಕ್ಷಪಣಕಕ್ಷೋಣೀಶವೈತಾಲಿಕಾಃ |
ಸಾಮಂತಾಶ್ಚ ದಿಗಂಬರಾನ್ವಯಭುವಶ್ಚಾರ್ವಾಕವಂಶಾಂಕುರಾ
ನವ್ಯಾಃ ಕೇಚಿದಲಂ ಮುನೀಶ್ವರಗಿರಾ ನೀತಾಃ ಕಥಾಶೇಷತಾಮ್ ||೧೭೩

ಹೀಗೆ ಶಾಂತರಾಗಿ ಅಡಗಿಹೋದ ಪಾಖಂಡರಲ್ಲಿ ಕೆಲವು ಯೋಧರು ಕಾಪಾಲಿಕರ ಎಂಜಲು ತಟ್ಟೆ(ಪೀಕದಾನಿ)ಯನ್ನು ಹಿಡಿಯುವ ಕೆಲಸದಲ್ಲಿ ತೊಡಗಿದವರು. ಕೆಲವರು ವೈಶೇಷಿಕರ ಮನೆಯ ಬಾಗಿಲು ಕಾಯತಕ್ಕವರು. ಇನ್ನು ಕೆಲವರು ಕ್ಷಪಣಕರಾಜನ ಹೊಗಳುಭಟ್ಟರು. ಅನ್ಯರು ಜೈನರ ಸಾಮಂತರಾಗಿದ್ದವರು. ಇನ್ನೂ ಕೆಲವು ಚಾರ್ವಾಕವಂಶದ ನವ್ಯರೂ ಇದ್ದರು. ಅವರೆಲ್ಲರೂ ಶ್ರೀಶಂಕರ ಮುನೀಶ್ವರರ ವಾಗ್ವಿಶೇಷದಿಂದ ನಾಮಾವಶೇಷವಾಗಿ ಹೋದರು.

ಟಿಪ್ಪಣಿ :- ವಾದದಲ್ಲಿ ಸೋತು ಹೋದವರು ಮೊದಲು ವೈದಿಕಮತವನ್ನು ತ್ಯಜಿಸಿದವರು. ಆಮೇಲೆ ಕಾಪಾಲಿಕಾದಿ ಮತಗಳನ್ನವಲಂಬಿಸಿದವರಾಗಿದ್ದರು - ಎಂದು ಶ್ಲೋಕದ ತಾತ್ಪರ್ಯವೆಂದು ತೋರುತ್ತದೆ. ಪತದ್‌ಗ್ರಾಹ -'ವಿಭಾಷಾ ಗ್ರಹಃ' ಎಂಬ ಸೂತ್ರದಿಂದ ಣಪ್ರತ್ಯಯ. ಅಚ್‌ಬಂದರೆ ಪತದ್‌ಗ್ರಹ. ಪೀಕದಾನಿ ಎಂದರ್ಥ. 'ಪ್ರತಿಗ್ರಾಹಃಪತದ್‌ಗ್ರಹಃ' (ಅಮರಕೋಶ)

ಇತಿ ಸಕಲದಿಶಾಸು ದ್ವೈತವಾರ್ತಾನಿವೃತ್ತೌ
ಸ್ವಯಮಥ ಪರಿತಸ್ತ್ರಾರಾಯಮದ್ವೈತವರ್ತ್ಮ |
ಪ್ರತಿದಿನಮಪಿ ಕುರ್ವನ್ ಸರ್ವಸಂದೇಹಮೋಕ್ಷಂ
ರವಿರಿವ ತಿಮಿರೌಘೇ ಸಂಪ್ರಶಾಂತೇ ಮಹಃ ಸ್ವಮ್ || ೧೭೪

ಈ ಪ್ರಕಾರವಾಗಿ (ಭರತಖಂಡದ) ಸರ್ವದಿಕ್ಕುಗಳಲ್ಲಿಯೂ ದ್ವೈತದ ಸುದ್ದಿಯೇ ನಿವೃತ್ತವಾಯಿತು. ಕತ್ತಲೆಯು ಕಳೆದು ಶಾಂತವಾದಮೇಲೆ ಸೂರ್ಯನು ತನ್ನ ಕಿರಣಗಳನ್ನು ಎಲ್ಲೆಡೆಯೂ ಪ್ರಸರಿಸುವಂತೆ, ಶ್ರೀಶಂಕರಾಚಾರ್ಯರು ತಮ್ಮ ಸಿದ್ಧಾಂತದಲ್ಲಿ ಜನರಿಗುಂಟಾಗುವ ಸಮಸ್ತಸಂದೇಹಗಳನ್ನು ಪ್ರತಿದಿನವೂ ಪರಿಹರಿಸುತ್ತಾ, ಅದ್ವೈತಮಾರ್ಗವನ್ನು ಸರ್ವತ್ರ ಪ್ರಚುರಗೊಳಿಸಿದರು.

ಟಿಪ್ಪಣಿ :- ಷಣ್ಮತಸ್ಥಾಪನೆಯ ವಿಷಯವು ಪ್ರಾಚೀನಶಂಕರಜಯದಲ್ಲಿದೆಯೆಂದು ಡಿಂಡಿಮ ವ್ಯಾಖ್ಯಾನದಲ್ಲಿ ಬರೆದಿದೆ.

ಇತಿ ಶ್ರೀ ಮಾಧವೀಯೇ ತತ್ತದಾಶಾಜಯಕೌತುಕೀ ।
ಸಙ್ಕ್ಷೇಪಶಂಕರಜಯೇ ಸರ್ಗಃ ಪಂಚದಶೋಽಭವತ್ ॥

ಇಲ್ಲಿಗೆ ಶ್ರೀ ಮಾಧವೀಯ ಸಂಕ್ಷೇಪ ಶಂಕರವಿಜಯದಲ್ಲಿ ದಿಗ್ವಿಜಯವನ್ನು ವರ್ಣಿಸುವ ಹದಿನೈದನೆಯ ಸರ್ಗವು ಸಮಾಪ್ತವಾಯಿತು.

✤ ✤ ✤

## ಷೋಡಶಃ ಸರ್ಗಃ

## ಶ್ರೀಶಾರದಾ ಸರ್ವಜ್ಞ ಪೀಠಾರೋಹಣಮ್

ಶ್ರೀಶಂಕರಾಚಾರ್ಯರಿಗೆ ಪ್ರಾಪ್ತವಾದ ಭಗಂದರ ರೋಗದ ನಿವಾರಣೆ. ಶ್ರೀಗೌಡಪಾದರ ಸಂದರ್ಶನ. ಸರ್ವಜ್ಞಪೀಠದ ವೃತ್ತಾಂತವನ್ನರಿತು ಕಾಶ್ಮೀರಕ್ಕೆ ಪ್ರಯಾಣ. ಸರ್ವಜ್ಞಪೀಠಾರೋಹಣ. ಬದರೀಕ್ಷೇತ್ರವಾಸ. ಕೈಲಾಸಕ್ಕೆ ನಿರ್ಗಮನ.

ಅಥ ಯದಾ ಜಿತವಾನ್ಯತಿಶೇಖರೋಽ-
ಭಿನವಗುಪ್ತಮನುತ್ತಮಮಾಂತ್ರಿಕಮ್ ।
ಸ ತು ತದಾಽಪಜಿತೋ ಯತಿಗೋಚರಂ
ಹತಮನಾಃ ಕೃತವಾನಪಗೋರಣಮ್ ॥ ೧

ಯತಿಶ್ರೇಷ್ಠರಾದ ಆಚಾರ್ಯರು (ಶಾಕ್ತನಾದ) ಅಭಿನವಗುಪ್ತನೆಂಬ ಪ್ರಸಿದ್ಧ ಮಾಂತ್ರಿಕನನ್ನು ವಾದದಲ್ಲಿ ಜಯಿಸಿದ್ದರಷ್ಟೇ. ಪರಾಜಿತನಾದ ಆ ಮಾಂತ್ರಿಕನ ಮನಸ್ಸು ಕೆಟ್ಟುಹೋಯಿತು. ಈ ಯತಿಯನ್ನು ಹೇಗಾದರೂ ಕೊಲ್ಲಬೇಕೆಂದು ಆತನು ಸಂಚುಮಾಡಿದನು.

ಟಿಪ್ಪಣಿ:- ಅಪಗೋರಣ = ವಧೋದ್ಯಮ.

ಸ ತತೋಽಭಿಚಚಾರ ಮೂಢಬುದ್ಧಿಃ
ಯತಿಶಾರ್ದೂಲಮಮುಂ ಪ್ರರೂಢರೋಷಃ ।
ಅಚಿಕಿತ್ಸ್ಯತಮೋ ಭಿಷಗ್ಭಿರಸ್ಮಾತ್
ಅಜನಿಷ್ಟಾಸ್ಯ ಭಗಂದರಾಖ್ಯರೋಗಃ ॥ ೨

ಒಳಗೊಳಗೇ ರೋಷವನ್ನು ತುಂಬಿಕೊಂಡಿದ್ದ ಆ ಮೂಢನು ಬುದ್ಧಿಗೆಟ್ಟು ಶ್ರೀಶಂಕರಯತಿಗಳಿಗೆ ಅಭಿಚಾರಕ್ರಿಯೆಯಿಂದ ಮಾಟಮಾಡಿದನು. ಅದರಿಂದ ಆಚಾರ್ಯರಿಗೆ ಭಗಂದರವೆಂಬ ರೋಗವು(Fistula) ಪ್ರಾಪ್ತವಾಯಿತು. ಅದು ವೈದ್ಯರ ಚಿಕಿತ್ಸೆಗೆ ಬಗ್ಗದ ರೋಗವಾಗಿತ್ತು.

ಅಚಿಕಿತ್ಸ್ಯಭಗಂದರಾಖ್ಯರೋಗ-
ಪ್ರಸರಚ್ಛೋಣಿತ ಪಂಕಿಲಸ್ವಶಾಟ್ಯಾಃ ।
ಅಜುಗುಪ್ಸವಿಶೋಧನಾದಿರೂಪಾಂ
ಪರಿಚರ್ಯಾಮಕೃತಾಸ್ಯ ತೋಟಕಾರ್ಯಃ ॥ ೩

ಅಚಿಕಿತ್ಸ್ಯವಾದ ಆ ರೋಗದಿಂದ ರಕ್ತವು ಸೋರಿ ಆಚಾರ್ಯರ ಕಾವಿಶಾಟಿಯು ಕಶ್ಮಲವಾಗುತ್ತಿತ್ತು. ತೋಟಕಾಚಾರ್ಯರು ಸ್ವಲ್ಪವೂ ಜುಗುಪ್ಸೆ ಪಡದೆ ಆ ವಸ್ತ್ರಗಳನ್ನು ಒಗೆದು ಸ್ವಚ್ಛಮಾಡಿ ಗುರುಗಳ ಪರಿಚರ್ಯೆಯನ್ನು ಮಾಡುತ್ತಿದ್ದರು.

ಭಗಂದರವ್ಯಾಧಿನಿಪೀಡಿತಂ ಗುರುಂ
ನಿರೀಕ್ಷ್ಯ ಶಿಷ್ಯಾಃ ಸಮಬೋಧಯನ್ ಶನೈಃ |
ನೋಪೇಕ್ಷಣೀಯೋ ಭಗವನ್ ಮಹಾಮಯಃ
ತ್ವಪೀಡಿತಃ ಶತ್ರುರಿವರ್ಧಿಮಾಪ್ನುಯಾತ್ || ೪

ತಮ್ಮ ಗುರುಗಳು ಭಗಂದರ ವ್ಯಾಧಿಯಿಂದ ಪೀಡಿತರಾಗಿರುವುದನ್ನು ಕಂಡು ಶಿಷ್ಯರು ಅವರನ್ನು ಕುರಿತು ಮೆಲ್ಲಗೆ ಹೇಳಿದರು "ಭಗವನ್, ಇದು ದೊಡ್ಡ ವ್ಯಾಧಿ; ಉಪೇಕ್ಷಿಸಬಾರದು. ಸುಮ್ಮನಿದ್ದರೆ ಉಪೇಕ್ಷಿತನಾದ ಶತ್ರುವಿನಂತೆ ಇನ್ನೂ ಪ್ರಬಲವಾಗಬಹುದು.

ಮಮತ್ವಹಾನಾದ್ಭವತಾ ಶರೀರಕೇ
ನ ಗಣ್ಯತೇ ವ್ಯಾಧಿಕೃತಾರ್ತಿರೀದೃಶೀ |
ಪಶ್ಯಂತ ಏವಾಂತಿಕವರ್ತಿನೋ ವಯಂ
ಭೃಶಾತುರಾಃ ಸ್ಮಃ ಸಹಸಾ ವ್ಯಥಾಸಹಾಃ || ೫

"ನಿಮಗೆ ದೇಹದಮೇಲೆ ಮಮತ್ವವಿಲ್ಲದ್ದರಿಂದ, ಈ ವ್ಯಾಧಿಯಿಂದಾದ ಇಷ್ಟು ಯಾತನೆಯನ್ನೂ ಲೆಕ್ಕಿಸದೆ ಇದ್ದೀರಿ. ಬಳಿಯಲ್ಲಿದ್ದು ಕಣ್ಣಿಂದ ನೋಡುತ್ತಲೇ ಇರುವ ನಾವು ಬಹಳ ಚಿಂತೆಗೆ ಒಳಗಾಗಿದ್ದೇವೆ. ಈ ವ್ಯಥೆಯನ್ನು ನಾವು ತಡೆದು ಕೊಳ್ಳಲಾರೆವು.

ಚಿಕಿತ್ಸಕಾ ವ್ಯಾಧಿನಿದಾನಕೋವಿದಾಃ
ಸಂಪ್ರುಚ್ಛನೀಯಾ ಭಗವನ್ನಿತಸ್ತತಃ |
ಪ್ರತ್ಯಕ್ಷವತ್ಸಂಪ್ರತಿ ಸಂತಿ ಪೂರುಷಾ
ಜೀವಾತು ವೇದೇ ಗದಿತಾರ್ಥಸಿದ್ಧಿದಾಃ || ೬

"ಭಗವನ್, ರೋಗದ ಮೂಲವನ್ನು ಕಂಡು ಹಿಡಿಯುವುದರಲ್ಲಿ ಕೋವಿದರಾದ ವೈದ್ಯರು ಎಲ್ಲಿದ್ದಾರೆಂದು ಅಲ್ಲಲ್ಲಿ ವಿಚಾರಿಸಬೇಕಾಗಿದೆ. ಜೀವನೌಷಧವನ್ನು ತಿಳಿಸುವ ಆಯುರ್ವೇದದಲ್ಲಿ ಪಾರಂಗತರಾಗಿ ಅರ್ಥಸಿದ್ಧಿಯನ್ನು ಸಾಧಿಸಬಲ್ಲ ನಿಷ್ಣಾತರಾದ ಜನರು ಈಗಲೂ ಪ್ರತ್ಯಕ್ಷವಾಗಿದ್ದಾರೆ.

ಉಪೇಕ್ಷಮಾಣೇಽಪಿ ಗುರಾವನಾಸ್ಥಯಾ
ಶರೀರಕಾದೌ ಸುಖಮಾತ್ಮನೀಶ್ವರೈಃ |
ನೋಪೇಕ್ಷಣೀಯಂ ಗುರುದುಃಖದೃಶ್ವಭಿಃ
ದುಃಖಂ ವಿನೇಯೈರಿತಿ ಶಾಸ್ತ್ರನಿಶ್ಚಯಃ || ೭

"ತಮ್ಮ ಶರೀರಸಂಬಂಧಿಯಾದ ಸುಖದಲ್ಲಿ ಅನಾಸಕ್ತಿಯಿಂದ ಗುರುಗಳು ಉದಾಸೀನರಾದರೂ ಅವರ ಕಷ್ಟವನ್ನು ಕಣ್ಣಿಂದ ನೋಡುತ್ತಿರುವ ಸಮರ್ಥರಾದ ಶಿಷ್ಯರು ಮಾತ್ರ ಅದನ್ನು ಉಪೇಕ್ಷಿಸ ಕೂಡದೆಂದು ಶಾಸ್ತ್ರವು ನಿರ್ಣಯಿಸಿ ಹೇಳಿದೆ.

ಸ್ವಸ್ಥೇ ಭವತ್ಪಾದಸರೋರುಹದ್ವಯೇ
ಸ್ವಸ್ಥಾ ವಯಂ ಯನ್ಮಧುಪಾಯಿವೃತ್ತಯಃ |
ತಸ್ಮಾದ್ಭವೇತ್ತಾವಕವಿಗ್ರಹೋ ಯಥಾ
ಸ್ವಸ್ಥಸ್ತಥಾ ವಾಂಛತಿ ಪೂಜ್ಯ ನೋ ಮನಃ || ೮

ನಿಮ್ಮ ಪಾದಕಮಲಯುಗಳವು ಸ್ವಾಸ್ಥ್ಯದಲ್ಲಿದ್ದರೆ ಅದರ ಮಧುವನ್ನು ಕುಡಿದು ಬದುಕಿರುವ ನಮಗೂ ಸ್ವಾಸ್ಥ್ಯವಿರುತ್ತದೆ. ಆದ್ದರಿಂದ, ಪೂಜ್ಯರೆ, ನಿಮ್ಮ ದೇಹವು ಆರೋಗ್ಯವಾಗಿರಬೇಕೆಂದು ನಮ್ಮ ಮನಸ್ಸು ಬಯಸುತ್ತದೆ" ಎಂದರು.

ವ್ಯಾಧಿರ್ಹಿ ಜನ್ಮಾಂತರಪಾಪಪಾಕೋ
ಭೋಗೇನ ತಸ್ಮಾತ್ ಕ್ಷಪಣೀಯ ಏಷಃ |
ಅಭುಜ್ಯಮಾನಃ ಪುರುಷಂ ನ ಮುಂಚೇತ್
ಜನ್ಮಾಂತರೇಽಪೀತಿ ಹಿ ಶಾಸ್ತ್ರವಾದಃ || ೯

ಆಗ ಆಚಾರ್ಯರು ಹೇಳಿದರು:"ವ್ಯಾಧಿಯು ಜನ್ಮಾಂತರದಲ್ಲಿ ಮಾಡಿದ ಪಾಪಕರ್ಮದ ಫಲ. ಅದನ್ನುಭೋಗಿಸಿ ತೀರಿಸಬೇಕು. ಭೋಗಿಸದಿದ್ದರೆ ಅದು ಇನ್ನೊಂದು ಜನ್ಮದಲ್ಲಾದರೂ ಬಿಡದೆ ಅಂಟಿಕೊಳ್ಳುವುದೆಂದು ಶಾಸ್ತ್ರವು ಹೇಳಿದೆಯಲ್ಲವೆ?

ವ್ಯಾಧಿರ್ದ್ವಿಧಾಽಸೌ ಕಥಿತೋ ಹಿ ವಿದ್ಭಿಃ
ಕರ್ಮೋದ್ಭವೋ ಧಾತುಕೃತಸ್ತಥೇತಿ |
ಆದ್ಯಕ್ಷಯಃ ಕರ್ಮಣ ಏವ ಲೀನಾತ್
ಚಿಕಿತ್ಸಯಾ ಸ್ಯಾಚ್ಚರಮೋದಿತಸ್ಯ || ೧೦

"ರೋಗವು ಎರಡು ವಿಧವಾಗಿದೆಯೆಂದು ವಿದ್ವಾಂಸರು ಹೇಳಿದ್ದಾರೆ. ಒಂದು ನಮ್ಮ ಕರ್ಮಶೇಷದಿಂದ ಬರತಕ್ಕದ್ದು. ಇನ್ನೊಂದು ವಾತಾದಿದೋಷದಿಂದ ಆಗತಕ್ಕದ್ದು.

ಕರ್ಮಜನ್ಯವಾದ ಮೊದಲನೆಯದು ಕರ್ಮಫಲವು ಮುಗಿದ ಮೇಲೆಯೇ ಕ್ಷಯಿಸುತ್ತದೆ. ವಾತಾದಿದೋಷಜನ್ಯವಾದ ಎರಡನೆಯದು ಚಿಕಿತ್ಸೆಯಿಂದ ಗುಣವಾಗುತ್ತದೆ.

ಸಂಕ್ಷೀಯತಾಂ ಕರ್ಮಣ ಏವ ಸಂಕ್ಷಯಾತ್
ವ್ಯಾಧಿಃ ಪ್ರವೃತ್ತೋ ನ ಚಿಕಿತ್ಸ್ಯತೇ ಮಯಾ |
ಪತೇಚ್ಛರೀರಂ ಯದಿ ತನ್ನಿಮಿತ್ತತಃ
ಪತತ್ವವಶ್ಯಂ ನ ಬಿಭೇಮಿ ಕಿಂಚನ || ೧೧

ಈಗ ಬಂದಿರುವ ಈ ವ್ಯಾಧಿಯು ಕರ್ಮಫಲವು ಕ್ಷಯಿಸಿದ ಮೇಲೆಯೇ ಹೋಗಲಿ. ಅದಕ್ಕೆ ನಾನು ಚಿಕಿತ್ಸೆ ಮಾಡುವುದಿಲ್ಲ! ಆ ನಿಮಿತ್ತದಿಂದ ಶರೀರವು ಬಿದ್ದುಹೋಗುವುದಾದರೆ ಅವಶ್ಯವಾಗಿ ಬಿದ್ದುಹೋಗಲಿ! ನಾನು ಸ್ವಲ್ಪವೂ ಹೆದರುವುದಿಲ್ಲ!" ಎಂದು ನುಡಿದರು.

ಸತ್ಯಂ ಗುರೋ ತೇ ನ ಶರೀರಲೋಭಃ
ಸ್ಪೃಹಾಲುತಾ ನಸ್ತು ಚಿರಾಯ ತಸ್ಮೈ |
ತ್ವಜ್ಜೀವನೇನೈವ ಹಿ ಜೀವನಂ ನಃ
ಪಾಥಶ್ಚರಾಣಾಂ ಜಲಮೇವ ತದ್ಧಿ || ೧೨

ಅದಕ್ಕೆ ಶಿಷ್ಯರು "ನಿಮಗೆ ದೇಹದಲ್ಲಿ ಆಸೆ ಇಲ್ಲವೆಂಬುದು ಸತ್ಯವೇ ಹೌದು, ಗುರುಗಳೆ, ಆದರೆ ನೀವು ಬಹುಕಾಲ ಇರಬೇಕೆಂದು ನಮಗೆ ಆಸೆ ಇದೆ. ನೀವು ಜೀವಿಸಿರುವುದರಿಂದ ನಾವು ಜೀವ ಹಿಡಿದಿದ್ದೇವೆ. ಜಲಚರ ಜಂತುಗಳಿಗೆ ಜಲವೇ ಗತಿಯಲ್ಲವೆ?

ಟಿಪ್ಪಣಿ:- ಸ್ಪೃಹಾಲುತಾ = ಚುರಾದಿಧಾತುವಿಗೆ ಣಿಚ್‌ಪ್ರತ್ಯಯವು ವಿಕಲ್ಪವೆಂಬ ಪಕ್ಷದಲ್ಲಿ, ಣಿಚ್ ಬರದಿದ್ದಾಗ ಈ ರೂಪವು ಸಾಧ್ಯ. ಸ್ಪೃಹಯಾಲು, ಸ್ಪೃಹಯಾಲುತಾ-ಎಂಬವು ಸಹಜವಾಗಿ ಆಗಬೇಕಾದ ರೂಪಗಳು.

ಸ್ವಯಂ ಕೃತಾರ್ಥಾಃ ಪರತುಷ್ಟಿಹೇತೋಃ
ಕುರ್ವಂತಿ ಸಂತೋ ನಿಜದೇಹರಕ್ಷಾಮ್ |
ತಸ್ಮಾಚ್ಛರೀರಂ ಪರಿರಕ್ಷಣೀಯಂ
ತ್ವಯಾऽಪಿ ಲೋಕಸ್ಯ ಹಿತಾಯ ವಿದ್ವನ್ || ೧೩

ಕೃತಾರ್ಥರಾದ ಸಜ್ಜನರು (ತಾವು ಮಾಡಬೇಕಾದ ಕಾರ್ಯವಿಲ್ಲದಿದ್ದರೂ) ಅನ್ಯರಿಗೆ ಸಂತೋಷವಾಗಲೆಂದು ದೇಹರಕ್ಷಣೆಯನ್ನು ಮಾಡಿಕೊಳ್ಳುತ್ತಾರೆ. ಆದ್ದರಿಂದ ನೀವೂ ಸಹ ಲೋಕಹಿತಕ್ಕಾಗಿ ದೇಹವನ್ನು ರಕ್ಷಿಸಿಕೊಳ್ಳಬೇಕಾಗುತ್ತದೆ. (ವಿದ್ವಾಂಸರಾದ ನಿಮಗೆ ನಾವು ಹೇಳಬೇಕಾದ್ದೇನಿದೆ? ಪೂಜ್ಯರೆ,)" ಎಂದು ಹೇಳ ತೊಡಗಿದರು.

ನಿರ್ಬಂಧತೋ ಗುರುವರಃ ಪ್ರದದಾವನುಜ್ಞಾಂ
ದಿಗ್ಭ್ಯೋ ಭಿಷಗ್ವರಸಮಾನಯನಾಯ ತೇಭ್ಯಃ |
ನತ್ವಾ ಗುರುಂ ಪ್ರತಿದಿಶಂ ಪ್ರಯಯುಃ ಪ್ರಹೃಷ್ಟಾಃ
ಶಿಷ್ಯಾಃ ಪ್ರವಾಸಕುಶಲಾ ಹರಿಭಕ್ತಿಭಾಜಃ || ೧೪

ಈ ರೀತಿಯಲ್ಲಿ ಶಿಷ್ಯರ ನಿರ್ಬಂಧಕ್ಕೆ ಒಳಗಾಗಿ ಶ್ರೀಶಂಕರಗುರುಗಳು ಉತ್ತಮ ವೈದ್ಯರನ್ನು ಬೇರೆ ಸ್ಥಳಗಳಿಂದ ಕರೆತರಲು ಅವರಿಗೆ ಅನುಮತಿಯನ್ನಿತ್ತರು. ಅದರಿಂದ ಸಂತೋಷಗೊಂಡ ಪ್ರವಾಸಕುಶಲರಾದ ಶಿಷ್ಯರು ಗುರುಗಳಿಗೆ ನಮಸ್ಕರಿಸಿ ಶ್ರೀಹರಿಯನ್ನು ಭಕ್ತಿಯಿಂದ ಧ್ಯಾನಿಸುತ್ತ ಹೊರಟರು.

ಪ್ರಾಯೋ ನೃಪಂ ಕವಿಜನಾ ಭಿಷಜೋ ವದಾನ್ಯಂ
ವಿತ್ತಾರ್ಥಿನಃ ಪ್ರತಿದಿನಂ ಕುಶಲಾ ಜುಷಂತೇ |
ತಸ್ಮಾದಮೀ ನೃಪಪುರೇಷು ನಿರೀಕ್ಷಣೀಯಾ
ಇತ್ಯೇವ ಚೇತಸಿ ಮನೋರಥಮಾದಧಾನಾಃ || ೧೫

ಅವರು ಮನಸ್ಸಿನಲ್ಲಿ "ಪಂಡಿತರೂ ಚಿಕಿತ್ಸಾಕುಶಲರೂ ಆದ ವೈದ್ಯರು ಹಣದ ಆಸೆಯಿಂದ ಪ್ರಾಯೇಣ ರಾಜನನ್ನು ಆಶ್ರಯಿಸಿಕೊಂಡು ಪ್ರತಿದಿನ ಅರಮನೆಗೆ ಹೋಗಿ ಬರುತ್ತಾರೆ. ಆದ್ದರಿಂದ ರಾಜಧಾನಿಗಳಲ್ಲಿ ಅವರನ್ನು ಹುಡುಕಿ ಗೊತ್ತುಮಾಡಬೇಕು" ಎಂದು ನಿರ್ಧರಿಸಿಕೊಂಡರು.

ತೇಽತೀತ್ಯ ದೇಶಾನ್ ಬಹುಲಾನ್ ಸ್ವಕಾರ್ಯ-
ಸಿದ್ಧ್ಯೈ ಕ್ವಚಿದ್ರಾಜಪುರೇ ಭಿಷಗ್ಭಿಃ |
ಅವಾಪ್ಯ ಸಂದರ್ಶನ ಭಾಷಣಾನಿ
ಸಮಾನಯಂಸ್ತಾನ್ ಗುರುವರ್ಯಪಾರ್ಶ್ವಮ್ || ೧೬

ಆದ್ದರಿಂದ ಆ ಶಿಷ್ಯರು ತಮ್ಮ ಕಾರ್ಯಸಿದ್ಧಿಗಾಗಿ ಅನೇಕ ದೇಶಗಳಿಗೆ ಹೋಗಿ, ಕಡೆಗೆ ಒಂದು ರಾಜಧಾನಿಯಲ್ಲಿ ವೈದ್ಯರನ್ನು ಕಂಡು ಮಾತನಾಡಿ ಅವರನ್ನು ತಮ್ಮ ಗುರುವರ್ಯರ ಬಳಿಗೆ ಕರೆತಂದರು.

ತತೋ ದ್ವಿಜೇಂದ್ರೈರ್ನಿಜಸೇವಕೈಸ್ತಾನ್
ಸಂತೋಷಿತಾನ್ ಸ್ವಾಭಿಮತಾರ್ಥದಾನೈಃ |
ಯದತ್ರ ಕರ್ತವ್ಯಮುದೀರ್ಯತಾಂ ತತ್
ಕುರ್ಮಃ ಸ್ವಶಕ್ತ್ಯೇತಿ ವದಾನ್ ಜಗೌ ಸಃ || ೧೭

ಆಚಾರ್ಯರ ಸೇವೆಯಲ್ಲಿ ನಿರತರಾಗಿದ್ದ ಕೆಲವು ದ್ವಿಜೋತ್ತಮರು ಆ ವೈದ್ಯರು ಕೇಳಿದಷ್ಟು ಧನವನ್ನು ಕೊಟ್ಟು ಅವರನ್ನು ಸಂತೋಷಪಡಿಸಿದರು. ಸಂತೃಪ್ತರಾದ ವೈದ್ಯರು ಶ್ರೀಶಂಕರಾಚಾರ್ಯರನ್ನು ಕಂಡು"ಈಗ ನಾವು ಮಾಡಬೇಕಾದ್ದೇನೆಂದು ಹೇಳಿರಿ. ಯಥಾಶಕ್ತಿಯಾಗಿ ಚಿಕಿತ್ಸೆ ಮಾಡುತ್ತೇವೆ" ಎಂದರು. ಆಗ ಆಚಾರ್ಯರು ಇಂತೆಂದರು-

ಟಿಪ್ಪಣಿ:- ವದಾನ್ = ವದಂತೀತಿ ವದಾಃ ಪಚಾದಿ ತ್ವಾದಚ್ ಪ್ರತ್ಯಯ. ಜಗೌ= ಗೈ ಶಬ್ದೇ; ಲಿಟ್.

ಉಪಗುದಂ ಭಿಷಜಃ ಪರಿಬಾಧತೇ
ಗದ ಉದೇತ್ಯ ತನುಂ ತನುಮಧ್ಯಗಃ |
ಯದಿದಮಸ್ಯ ವಿಧೇಯಮಿದಂ ಧ್ರುವಂ
ವದತ ರೋಗತಮಸ್ತಿಮಿರಾರಯಃ || ೧೮

"ವೈದ್ಯರೆ, ಗುದಸ್ಥಾನದಲ್ಲಿ ಈ ರೋಗವು ಕಾಣಿಸಿಕೊಂಡಿದೆ. ಇದು ದೇಹ ಮಧ್ಯದಲ್ಲಿದ್ದರೂ ಪ್ರಬಲಿಸಿ ದೇಹದಲ್ಲೆಲ್ಲ ಯಾತನೆಯನ್ನು ಕೊಡುತ್ತಿದೆ. ಇದಕ್ಕೆ ಏನೇನು ಮಾಡಬೇಕೋ ಅದೆಲ್ಲವನ್ನೂ ನಿಶ್ಚಯಿಸಿ ಹೇಳಿರಿ. ನೀವು ರೋಗವೆಂಬ ಕತ್ತಲೆಗೆ ಸೂರ್ಯರಾಗಿದ್ದೀರಿ!

ಚಿರಮುಪೇಕ್ಷಿತವಾನಹಮೇತಕಂ
ದುರಿತಜೋಽಯಮಿತಿ ಪ್ರತಿಭಾತಿ ಮೇ |
ತದಪಿ ಶಿಷ್ಯಗಣೈರ್ನಿರಹಿಂಸ್ಯಹಂ
ಪ್ರಹಿತವಾನ್ ಭವದಾನಯನಾಯ ತಾನ್ || ೧೯

ಇದೊಂದನ್ನು ನಾನು ಬಹುಕಾಲ ಉಪೇಕ್ಷಿಸಿದೆನು. ಇದು ಜನ್ಮಾಂತರದ ಪಾಪಶೇಷವೆಂದು ನನಗೆ ಕಾಣುತ್ತದೆ. ಈ ಶಿಷ್ಯಜನರು ಚಿಕಿತ್ಸೆಮಾಡಬೇಕೆಂದು ಪೀಡಿಸಿದ್ದರಿಂದ ನಿಮ್ಮನ್ನು ಕರೆತರುವಂತೆ ಹೇಳಿ ಕಳಿಸಿದ್ದೇನೆ" ಎಂದರು.

ನಿಗದಿತೇ ಮುನಿನೇತಿ ಭಿಷಗ್ವರಾ
ವಿದಧಿರೇ ಬಹುಧಾ ಗದಸತ್ಕ್ರಿಯಾಃ |
ನ ಚ ಶಶಾಮ ಗದೋ ಬಹುತಾಪದೋ
ವಿಮನಸಃ ಪಟವೋ ಭಿಷಜೋಽಭವನ್ || ೨೦

ಶ್ರೀಶಂಕರಮುನಿಗಳು ಹೀಗೆ ನುಡಿದಮೇಲೆ ಆ ವೈದ್ಯಶ್ರೇಷ್ಠರು ವ್ಯಾಧಿಯನ್ನು ಪರೀಕ್ಷಿಸಿ, ಅದಕ್ಕೆ ಬಹುವಿಧದಲ್ಲಿ ಚಿಕಿತ್ಸೆಗಳನ್ನು ನಡೆಸಿದರು. ವ್ಯಾಧಿಯು ಬಹಳ ಯಾತನೆಯನ್ನು ಕೊಡತೊಡಗಿತೇ ಹೊರತು ಶಾಂತವಾಗಲಿಲ್ಲ. ನಿಪುಣರಾದ ಆ ವೈದ್ಯರು ವಿಷಣ್ಣರಾದರು.

ಅಥ ಮುನಿರ್ವಿಮನಸ್ತ್ವಸಮನ್ವಿತಾನ್
ಇದಮವೋಚತ ಸಿದ್ಧಭಿಷಗ್ವರಾನ್ ।
ಅಟತ ಗೇಹಮಗಾತ್ಸಮಯೋ ಬಹು -
ರ್ಗದಹೃತೇ ಭವತಾಮಿತ ಈಯುಷಾಮ್ ॥ ೨೧

ಸಿದ್ಧಮಾರ್ಗದ ಆ ವೈದ್ಯೋತ್ತಮರು ರೋಗವನ್ನು ಗುಣಪಡಿಸಲಾರದೆ ಖಿನ್ನರಾಗಿರಲು, ಆಚಾರ್ಯರು ಅವರನ್ನು ನೋಡಿ ಹೇಳಿದರು:"ಈ ವ್ಯಾಧಿಯನ್ನು ಶಮನ ಮಾಡುವುದಕ್ಕಾಗಿ ನೀವು ಬಂದು ಬಹಳ ಕಾಲವಾಯಿತು. ಇನ್ನು ನೀವು ಮನೆಗೆ ತೆರಳಿರಿ.

ದಿನಚಯಂ ಗಣಯನ್ ಪಥಿಲೋಚನಃ
ಪ್ರಿಯಜನೋ ನಿವಸೇದ್ವಿರಹಾತುರಃ ।
ನರಪತಿರ್ಭವತಾಂ ಶರಣಂ ಧ್ರುವಂ
ಸ ಚ ವಿದೇಶಗಮಂ ಶ್ರುತವಾನ್ಯದಿ ॥ ೨೨

"ನಿಮ್ಮ ವಿರಹದಿಂದ ನೊಂದಿರುವ ಪ್ರಿಯಜನರು ದಿನಗಳನ್ನೆಣಿಸುತ್ತ ದಾರಿಯನ್ನು ನೋಡುತ್ತ ಕಾದಿರುತ್ತಾರೆ. ನಿಮಗೆ ಆಶ್ರಯವನ್ನಿತ್ತ ರಾಜನು ನೀವು ವಿದೇಶಕ್ಕೆ ಹೋಗಿದ್ದೀರೆಂಬುದನ್ನು ಕೇಳಿದರೆ, ನಿಶ್ಚಯವಾಗಿ ಕೋಪಿಸಿಕೊಳ್ಳುತ್ತಾನೆ.

ರುಷಿತವಾನ್ನ ಚ ವೋ ವಿತರೇನ್ನೃಪಃ
ಫಣಿತಜೀವಿತಮಕ್ಷತಶಾಸನಃ ।
ತುರಗವನ್ನೃಪತಿಶ್ಚಲಮಾನಸೋ
ಭಿಷಜಮನ್ಯಮಸೌ ವಿದಧೀತ ವಾ ॥ ೨೩

"ಆತನು ನಿಮಗೆ ಹೇಳಿದ ಗೊತ್ತಾದ ವೇತನವನ್ನು ಕೊಡದೆ ನಿಲ್ಲಿಸಬಹುದು. ರಾಜನಾದವನು ತನ್ನ ಆಜ್ಞೆಯನ್ನು ತಪ್ಪದೆ ಜಾರಿಗೊಳಿಸುತ್ತಾನೆ. ರಾಜರ ಮನಸ್ಸು ಕುದುರೆಯ ಹಾಗೆ ಒಂದೇ ದಿಕ್ಕಿಗೆ ನೋಡುತ್ತದೆ! ಅವನು ಬೇರೊಬ್ಬ ವೈದ್ಯನನ್ನಾದರೂ ನೇಮಿಸಿಕೊಳ್ಳಬಹುದು.

ಜನಪದೋ ವಿರಲೋ ಗದಹಾರಕೈ -
ರ್ಬಹುಲರುಗ್ಣಜನಃ ಪ್ರಕೃತೇರತಃ ।
ಮೃಗಯತೇ ಭವತೋ ಭವತಾಂ ಗೃಹೇ
ಗದಿಜನಃ ಸಹಿತುಂ ಗದಮಕ್ಷಮಃ ॥ ೨೪

"ಈಗ ದೇಶದಲ್ಲಿ ರೋಗವನ್ನು ಗುಣಪಡಿಸುವ ವೈದ್ಯರು ವಿರಳರಾಗಿದ್ದಾರೆ. ಸಹಜವಾಗಿ ಜನರು ಬಹುವಿಧ ರೋಗಗಳಿಗೆ ಈಡಾಗಿರುತ್ತಾರೆ. ಯಾತನೆಯನ್ನು ಸಹಿಸಲಾರದೆ ರೋಗಿಗಳು ನಿಮ್ಮನ್ನು ಹುಡುಕುತ್ತ ನಿಮ್ಮ ಮನೆಗಳಿಗೆ ಬರುತ್ತಾರೆ.

ಪಿತೃಕೃತಾ ಜನಿರಸ್ಯ ಶರೀರಿಣಃ
ಸಮವನಂ ಗದಹಾರಿಷು ತಿಷ್ಠತಿ |
ಜನಿತಮಪ್ಯಫಲಂ ಭಿಷಜಂ ವಿನಾ
ಭಿಷಗಸೌ ಹರಿರೇವ ತನೂಭೃತಃ || ೨೫

ಮನುಷ್ಯನಿಗೆ ಜನ್ಮವನ್ನು ತಂದೆ ಕೊಟ್ಟಿರುತ್ತಾನೆ. ಅವನ ದೇಹದ ರಕ್ಷಣೆಯು ವೈದ್ಯರ ಕೈಯಲ್ಲಿದೆ. ವೈದ್ಯನಿಲ್ಲದಿದ್ದರೆ ಶರೀರವು ಹುಟ್ಟಿದ್ದೂ ವ್ಯರ್ಥವಾದೀತು. ಆದ್ದರಿಂದ ಚಿಕಿತ್ಸಕನೆಂದರೆ ಮನುಷ್ಯನಿಗೆ ಸಾಕ್ಷಾತ್ ವಿಷ್ಣುವೇ ಸರಿ" ಎಂದರು.

ಯದುದಿತಂ ಭವತಾ ವಿತಥಂ ನ ತತ್
ತದಪಿ ನ ಕ್ಷಮತೇ ವ್ರಜಿತುಂ ಮನಃ |
ಸುರಭುವಂ ಪ್ರವಿಹಾಯ ಮನುಷ್ಯಗಾಂ
ವ್ರಜಿತುಮಿಚ್ಛತಿ ಕೋಽತ್ರ ನರಃ ಸುಧೀಃ || ೨೬

ಆಗ ವೈದ್ಯರು "ಸ್ವಾಮಿ, ತಾವು ಹೇಳಿದ್ದು ಯಥಾರ್ಥವೇ ಸರಿ, ಆದರೂ ಹಿಂದಿರುಗಿ ಹೋಗಲು ಮನಸ್ಸು ಹಿಂಜರಿಯುತ್ತದೆ. ಸ್ವರ್ಗಲೋಕವನ್ನು ತ್ಯಜಿಸಿ ಮನುಷ್ಯರಿರುವ ಮರ್ತ್ಯ ಲೋಕಕ್ಕೆ ಹೋಗಲು ಯಾವ ಬುದ್ಧಿಶಾಲಿಯು ಬಯಸುತ್ತಾನೆ?" ಎಂದರು.

ಇತಿ ನಿಗದ್ಯ ಯಯುರ್ಭಿಷಜಾಂ ಗಣಾ
ವಿಮನಸಃ ಪಟವೋಽಪಿ ನಿಜಾನ್ ಗೃಹಾನ್ |
ಅಥ ಮುನಿರ್ವಿಜಹನ್ ಮಮತಾಂ ತನೌ
ಗುರುವರೋ ಗುರುದುಃಖಮಸೋಢ ಸಃ || ೨೭

ಹೀಗೆ ಹೇಳಿ ಆ ವೈದ್ಯರು ಚಿಕಿತ್ಸಾಪಟುಗಳಾಗಿದ್ದರೂ (ರೋಗವನ್ನು ಗುಣಪಡಿಸಲಾಗಲಿಲ್ಲ ವೆಂದು) ಖಿನ್ನಮನಸ್ಕರಾಗಿ ತಮ್ಮ ಮನೆಗಳಿಗೆ ನಿರ್ಗಮಿಸಿದರು. ಇತ್ತ ಗುರುಶ್ರೇಷ್ಠರಾದ ಶ್ರೀಶಂಕರಾಚಾರ್ಯರು ತಮ್ಮ ದೇಹದಲ್ಲಿ ಮಮತ್ವವನ್ನು ತೊರೆದು, ರೋಗದ ಮಹಾಯಾತನೆಯನ್ನು ಸಹಿಸಿಕೊಳ್ಳುತ್ತಿದ್ದರು.

ಪ್ರಥಿತೈರವನೌ ಪರಃ ಸಹಸ್ರೈ -
ರಗದಂಕಾರಚಯೈರಥಾಚಿಕಿತ್ಸ್ಯೇ |
ಪ್ರಬಲೇ ಸತಿ ಹಾ ಭಗಂದರಾಖ್ಯೇ
ಸ್ಮರತಿ ಸ್ಮ ಸ್ಮರಶಾಸನಂ ಮುನೀಂದ್ರಃ || ೨೮

ಅಯ್ಯೋ! ಲೋಕದಲ್ಲಿ ವಿಖ್ಯಾತರಾಗಿದ್ದ ಸಾವಿರಾರು ವೈದ್ಯರಿಗೂ ಭಗಂದರವೆಂಬ ಆ ರೋಗಕ್ಕೆ ಚಿಕಿತ್ಸೆಯನ್ನು ಮಾಡಲಾಗಲಿಲ್ಲ. ಶ್ರೀಶಂಕರ ಮುನೀಂದ್ರರು ಸ್ಮರಾರಿಯಾದ ಪರಮೇಶ್ವರನನ್ನು ಸತತವೂ ಧ್ಯಾನಿಸುತ್ತಿದ್ದರು.

ಅಗದಂಕಾರ =ಅಗದಂ ರೋಗರಹಿತಂ ಕರೋತೀತಿ ಅಗದಂಕಾರಃ. ಕಾರೇ ಸತ್ಯಾಗದಸ್ಯ-ಎಂಬ ಸೂತ್ರದಿಂದ ಮುಮಾಗಮ. ವೈದ್ಯನೆಂದರ್ಥ.

ಸ್ಮರಶಾಸನ ಶಾಸನಾನ್ನಿಯುಕ್ತೌ
ದ್ವಿಜವೇಷಂ ಪ್ರವಿಧಾಯ ಭೂಮಿಮಾಪ್ತೌ |
ಉಪಸೇದತುರಶ್ವಿನೌ ಚ ದೇವೌ
ಸುಭುಜೌ ಸಾಂಜನಲೋಚನೌ ಸುಪುಸ್ತೌ || ೨೯

ಆಗ ಪರಮೇಶ್ವರನ ಆಜ್ಞೆಯಂತೆ ನಿಯುಕ್ತರಾದ ಅಶ್ವಿನೀದೇವತೆಗಳು ಧರೆಗಿಳಿದು ಬ್ರಾಹ್ಮಣವೇಷಧಾರಿಗಳಾಗಿ ಆಚಾರ್ಯರ ಬಳಿಗೆ ಬಂದರು. ಸುಂದರಭುಜಗಳುಳ್ಳ ಅವರಿಬ್ಬರು ಕಣ್ಣಿಗೆ ಕಾಡಿಗೆಯನ್ನು ಹಚ್ಚಿಕೊಂಡು ಪುಸ್ತಕಗಳನ್ನೂ ಕೈಯಲ್ಲಿ ಹಿಡಿದಿದ್ದರು.

ಯತಿವರ್ಯ ಚಿಕಿತ್ಸಿತುಂ ನ ಶಕ್ಯಾ
ಪರಕೃತ್ಯಾಜನಿತಾ ಹಿ ತೇ ರುಗೇಷಾ |
ಇತಿ ತಂ ಸಮುದೀರ್ಯ ಯೋಗಿವರ್ಯಂ
ವಿಬುಧೌ ತೌ ಪ್ರತಿಜಗ್ಮತುರ್ಯಥೇತಮ್ || ೩೦

ಆಚಾರ್ಯರನ್ನು ಕುರಿತು "ಯತಿವರ್ಯರೆ, ಈ ರೋಗವನ್ನು ಚಿಕಿತ್ಸೆಯಿಂದ ಗುಣಪಡಿಸಲು ಶಕ್ಯವಾಗುವುದಿಲ್ಲ. ನಿಮಗಾಗದ ಯಾರೋ ಪರರು ಅಭಿಚಾರವನ್ನು ಮಾಡಿದ್ದರಿಂದ ಈ ರೋಗವು ಉತ್ಪನ್ನವಾಗಿದೆ" ಎಂದು ತಿಳಿಸಿ ಆ ದೇವತೆಗಳು ಬಂದಂತೆ ಹಿಂದಿರುಗಿ ಹೊರಟು ಹೋದರು.

ಟಿಪ್ಪಣಿ:- ಯಥೇತಂ = ಯಥಾ ಇತಂ (ಆಗತಂ).

ತದನು ಸ್ವಗುರೋರ್ಗದಾಪನುತ್ತ್ಯೈ
ಪರಮನ್ತ್ರಂ ತು ಜಜಾಪ ಜಾತಮನ್ಯುಃ |
ಮುಹುರಾರ್ಯಪದೇನ ವಾರ್ಯಮಾಣೋಽ-
ಪ್ಯರಿವರ್ಗೇಽಪ್ಯನುಕಂಪಿನಾಽಬ್ಜಪಾದಃ || ೩೧

(ಅಭಿಚಾರಕ್ರಿಯೆ ನಡೆದಿದೆಯೆಂಬುದನ್ನು ತಿಳಿದು) ಕುಪಿತರಾದ ಪದ್ಮಪಾದರು ತಮ್ಮ ಗುರುಗಳಿಗಾದ ವ್ಯಾಧಿಯನ್ನು ತೊಡೆಯುವುದಕ್ಕಾಗಿ ಒಂದು ಪರಮೋತ್ತಮಮಂತ್ರವನ್ನು ಜಪಿಸಲಾರಂಭಿಸಿದರು. ಶತ್ರುಗಳ ವಿಷಯದಲ್ಲಿಯೂ ದಯಾಳುಗಳಾದ ಶ್ರೀಶಂಕರರು "ಬೇಡ, ಬೇಡ" ವೆಂದು ಮತ್ತೆ ಮತ್ತೆ ಹೇಳಿದರು. ಆದರೂ ಪದ್ಮಪಾದರು ಕೇಳಲಿಲ್ಲ!

ಟಿಪ್ಪಣಿ:- ಪದ್ಮಪಾದರು ಜಪಿಸಿದ ಮಂತ್ರ ಪ್ರಣವವೆಂದೂ ಬೇರೆ ಮಂತ್ರದಲ್ಲಿ ಯತಿಗಳಿಗೆ ಅಧಿಕಾರ ವಿಲ್ಲವೆಂದೂ ಡಿಂಡಿಮದಲ್ಲಿ ಬರೆದಿದೆ.

ಅಮುನೈವ ತತೋ ಗದೇನ ನೀಚಃ
ಪ್ರತಿಯಾತೇನ ಹತೋ ಮಮಾರ ಗುಪ್ತಃ |
ಮತಿಪೂರ್ವಕೃತೋ ಮಹಾನುಭಾವೇ -
ಷ್ವನಯಃ ಕಸ್ಯ ಭವೇತ್ಸುಖೋಪಲಬ್ಧ್ಯೈ || ೩೨

(ಮಂತ್ರಜಪದ ಫಲವಾಗಿ) ಅದೇ ಭಗಂದರ ರೋಗವು ಹಿಂದಿರುಗಿ ಬಂದು, ಮಾಟಮಾಡಿದ ನೀಚನಾದ ಆ ಗುಪ್ತನನ್ನೇ ಬಡಿಯಿತು. ಅವನು ಆ ರೋಗದಿಂದ ಸತ್ತು ಹೋದನು. ಮಹಾನುಭಾವರ ವಿಷಯದಲ್ಲಿ ಬುದ್ಧಿಪೂರ್ವಕವಾಗಿ ನಡೆಸುವ ದುರ್ನೀತಿಯು ಯಾರಿಗೆ ಸುಖವನ್ನು ತಂದೀತು?

ಸ್ವಸ್ಥಃ ಸೋಽಯಂ ಬ್ರಹ್ಮ ಸಾಯಂ ಕದಾಚಿತ್
ಧ್ಯಾಯನ್ ಗಂಗಾಪೂರಸಂಗಾದ್ರ್ರವಾತೈಃ |
ಆಗಚ್ಛಂತಂ ಸೈಕತೇ ಪ್ರತ್ಯಗಚ್ಛತ್
ಯೋಗೀಶಾನಂ ಗೌಡಪಾದಾಭಿಧಾನಮ್ || ೩೩

(ರೋಗವು ಪೂರ್ತಿಯಾಗಿ ನಶಿಸಲು) ಆಚಾರ್ಯರು ಮೊದಲಿನಂತೆ ಆರೋಗ್ಯಶಾಲಿ ಗಳಾದರು. ಅವರು ಒಂದು ದಿನ ಸಂಜೆ ಗಂಗಾತಟದಲ್ಲಿ ಪರಬ್ರಹ್ಮವನ್ನು ಧ್ಯಾನಿಸುತ್ತಿದ್ದರು. ಆಗ ಗಂಗಾಪ್ರವಾಹದ ತಂಗಾಳಿಯೊಡನೆ ತೇಲಿಬಂದಂತೆ ಮರಳು ದಿಣ್ಣೆಯ ಮೇಲೆ ಬರುತ್ತಿದ್ದ ಒಬ್ಬ ಯೋಗೀಶ್ವರರನ್ನು ಕಂಡರು. ಅವರೇ ಶ್ರೀಗೌಡಪಾದರೆಂದು ಗುರುತಿಸಿದರು.

ಪಾಣೌ ಫುಲ್ಲಶ್ವೇತ ಪಂಕೇರುಹಶ್ರೀ-
ಮೈತ್ರೀಪಾತ್ರೀಭೂತಭಾಸಾ ಘಟೇನ ।
ಆರಾದ್ರಾಜತ್ಕೈರವಾನಂದಸಂಧ್ಯಾ-
ರಾಗಾರಕ್ತಾಂಭೋದಲೀಲಾಂ ದಧಾನಮ್ ॥ ೩೪

ಅರಳಿದ ಬಿಳಿದಾವರೆಯ ಸಿರಿಯಂತೆ ಶುಭ್ರವಾದ ಕಮಂಡಲುವನ್ನು ಶ್ರೀಗೌಡಪಾದರು ಕೈಯಲ್ಲಿ ಹಿಡಿದಿದ್ದರು. ಆದ್ದರಿಂದ ಬಳಿಯಲ್ಲಿರುವ ಬಿಳಿನೈದಿಲೆಗೆ ಆನಂದವನ್ನುಂಟು ಮಾಡುವ ಸಂಜೆಗೆಂಪಿನ ಮೋಡದ ಶೋಭೆಯು ಅವರಿಗೆ ಬಂದಿತ್ತು.

ಟಿಪ್ಪಣಿ:- ಸಂಜೆಯಾದಾಗ ಚಂದ್ರೋದಯವಾಗುವುದೆಂದೂ ನೈದಿಲೆಗೆ ಆನಂದವಾಗುತ್ತದೆಯೆಂದೂ ಕವಿಸಮಯ. ಆ ಯೋಗೀಶ್ವರರು ಕಾವಿಯ ಬಟ್ಟೆಯನ್ನು ಧರಿಸಿದ್ದರಿಂದ ಕೆಂಪು ಮೋಡದ ಹೋಲಿಕೆ.

ಪಾಣೌ ಶೋಣಾಂಭೋಜಬುದ್ಧ್ಯಾ ಸಮಂತಾತ್
ಭ್ರಾಮ್ಯದ್ಭೃಂಗೀಮಂಡಲೀತುಲ್ಯಕುಲ್ಯಾಮ್ ।
ಅಂಗುಲ್ಯಗ್ರಾಸಂಗಿರುದ್ರಾಕ್ಷಮಾಲಾಂ
ಅಂಗುಷ್ಠಾಗ್ರೇಣಾ ಸಕೃದ್ಭ್ರಾಮಯಂತಮ್ ॥ ೩೫

ಅವರ ಹಸ್ತವು ಕೆಂದಾವರೆಯೆಂಬ ಭ್ರಮೆಯಿಂದ ಸುತ್ತಲೂ ದುಂಬಿಗಳು ಮಂಡಲಾಕಾರವಾಗಿ ಮುಸುಕಿವೆಯೋ ಎಂಬಂತೆ ಅವರ ಒಂದು ಕೈಯ ಅಂಗುಲಿಗಳ ಅಗ್ರಭಾಗದಲ್ಲಿ ರುದ್ರಾಕ್ಷಮಾಲೆ ಇತ್ತು. ಅಂಗುಷ್ಠದ ತುದಿಯಿಂದ ಆ ರುದ್ರಾಕ್ಷಗಳನ್ನು ಆಗಾಗ (ಜಪಕ್ಕಾಗಿ) ತಳ್ಳುತಿದ್ದರು.

ಟಿಪ್ಪಣಿ:- ತುಲ್ಯಕುಲ್ಯಾಂ = ಸಮಾನವಾದ ಕುಲದಲ್ಲಿ ಜನಿಸಿದ ಎಂದು ಶಬ್ದಾರ್ಥ. ಸದೃಶವೆಂದು ತಾತ್ಪರ್ಯ.

ಆರ್ಯಸ್ಯಾಥೋ ಗೌಡಪಾದಸ್ಯ ಪಾದಾ -
ವಭ್ಯರ್ಚ್ಯಾಸೌ ಶಂಕರಃ ಪಂಕಜಾಭೌ ।
ಭಕ್ತಿಶ್ರದ್ಧಾಸಂಭ್ರಮಾಕ್ರಾಂತಚೇತಾಃ
ಪ್ರಹ್ವಸ್ತಸ್ಥಾವಗ್ರತಃ ಪ್ರಾಂಜಲಿಃ ಸನ್ ॥ ೩೬

ಆಗ ಶ್ರೀಶಂಕರಾಚಾರ್ಯರು ಪೂಜ್ಯರಾದ ಗೌಡಪಾದರ ಪಾದ ಕಮಲಗಳಿಗೆ ನಮಸ್ಕರಿಸಿ, ವಿನಯದಿಂದ ಅವರೆದುರಿಗೆ ಕೈಮುಗಿದು ನಿಂತುಕೊಂಡರು. ಆಚಾರ್ಯರ ಅಂತರಂಗವು ಭಕ್ತಿ, ಶ್ರದ್ಧೆ, ಸಂಭ್ರಮಗಳಿಂದ ತುಂಬಿ ತುಳುಕುತ್ತಿತ್ತು.

ಸಿಂಚನ್ನೇನಂ ಕ್ಷೀರವಾರಾಶಿವೀಚೀ-
ಸಾಚಿವ್ಯಾಯಾಽಽಸನ್ನಯತ್ನೈಃ ಕಟಾಕ್ಷೈಃ ।
ದಂತಜ್ಯೋತ್ಸ್ನಾದಂತುರಾಶ್ಚಾಪಿ ಕುರ್ವನ್
ಆಶಾಃ ಸೂಕ್ತಿಂ ಸಂದಧೇ ಗೌಡಪಾದಃ ॥ ೩೭

ಕ್ಷೀರಸಾಗರದ ಅಲೆಗಳಿಗೆ ಸದೃಶವಾಗಿ ಚಿಮ್ಮುತ್ತಿದ್ದ ಶುಭ್ರ ಕಟಾಕ್ಷಗಳಿಂದ ಶ್ರೀಗೌಡಪಾದರು ಆಚಾರ್ಯರನ್ನು ವೀಕ್ಷಿಸುತ್ತ ಮೃದುಮಧುರವಾದ ಮಾತನ್ನಾಡಿದರು. ಅವರ ದಂತಪಂಕ್ತಿಗಳ ಬೆಳದಿಂಗಳು ಸುತ್ತಲೂ ಹರಡಿತ್ತು.

ಕಚ್ಚಿತ್ಸರ್ವಾಂ ವೇತ್ಸಿ ಗೋವಿಂದನಾಮ್ನೋ
ಹೃದ್ಯಾ ವಿದ್ಯಾ ಸಂಸೃದುದ್ಧಾರಕೃದ್ಯಾ ।
ಕಚ್ಚಿತ್ತತ್ತ್ವಂ ತತ್ತ್ವಮಾನಂದರೂಪಂ
ನಿತ್ಯಂ ಸಚ್ಚಿನ್ನಿರ್ಮಲಂ ವೇತ್ಸಿ ವೇದ್ಯಮ್ ॥ ೩೮

ಶ್ರೀಗೌಡಪಾದರು ನುಡಿದರು: "ವತ್ಸ, ಸಂಸಾರದಿಂದ ಮೇಲೆತ್ತುವ ಹೃದ್ಯವಾದ ವಿದ್ಯೆಯಾವುದೋ ಅದೆಲ್ಲವನ್ನೂ ಗೋವಿಂದನಿಂದ ತಿಳಿದಿರುವೆಯಷ್ಟೆ? ನಿತ್ಯಾನಂದಸ್ವರೂಪವೂ ಸಚ್ಚಿದ್ರೂಪವೂ ನಿರ್ಮಲವೂ ತಿಳಿಯಬೇಕಾದದ್ದೂ ಶಾಸ್ತ್ರಸಿದ್ಧವೂ ಆದ ಆ ತತ್ತ್ವವನ್ನು ನೀನು ಅರಿತಿರುವೆಯಷ್ಟೆ?

ಟಿಪ್ಪಣಿ:- ತತ್ತ್ವಂ = ಎಂಬಲ್ಲಿ ಒಂದು ಕಡೆ ತತ್-ತ್ವಂ ಎಂದು ಪದವಿಭಾಗ. ಗೋವಿಂದ=ಗೋವಿಂದ ಭಗವತ್ಪಾದರು-ಶ್ರೀಗೌಡಪಾದರ ಶಿಷ್ಯರು.

ಭಕ್ತ್ಯಾ ಯುಕ್ತಾಃ ಸ್ವಾನುರಕ್ತಾ ವಿರಕ್ತಾಃ
ಶಾಂತಾ ದಾಂತಾಃ ಸಂತತಂ ಶ್ರದ್ದಧಾನಾಃ ।
ಕಚ್ಚಿತ್ತತ್ತ್ವಜ್ಞಾನಕಾಮಾ ವಿನೀತಾಃ
ಶುಶ್ರೂಷಂತೇ ಶಿಷ್ಯವರ್ಯಾ ಗುರುಂ ತ್ವಾಮ್ ॥ ೩೯

"ಈಗ ಗುರುಸ್ಥಾನದಲ್ಲಿರುವ ನಿನ್ನನ್ನು ತತ್ತ್ವಜ್ಞಾನಾಪೇಕ್ಷಿಗಳಾದ ಶಿಷ್ಯೋತ್ತಮರು ಭಕ್ತಿಯುಕ್ತರೂ ಅನುರಕ್ತರೂ ವಿನೀತರೂ ಆಗಿ ನಿನ್ನನ್ನು ಸೇವಿಸುತ್ತಿದ್ದಾರಲ್ಲವೆ? ಅವರೆಲ್ಲರೂ ವಿರಕ್ತರೂ ಶಾಂತರೂ ದಾಂತರೂ ಅತ್ಯಂತ ಶ್ರದ್ಧಾಳುಗಳೂ ಆಗಿದ್ದಾರಲ್ಲವೆ?

ಕಚ್ಚಿನ್ನಿತ್ಯಾಃ ಶತ್ರವೋ ನಿರ್ಜಿತಾಸ್ತೇ
ಕಚ್ಚಿತ್ಪ್ರಾಪ್ತಾಃ ಸದ್ಗುಣಾಃ ಶಾಂತಿಪೂರ್ವಾಃ ।
ಕಚ್ಚಿದ್ಯೋಗಃ ಸಾಧಿತೋಽಷ್ಟಾಂಗಯುಕ್ತಃ
ಕಚ್ಚಿಚ್ಚಿತ್ತಂ ಸಾಧು ಚಿತ್ತತ್ತ್ವಗಂ ತೇ ॥ ೪೦

ನಿತ್ಯಶತ್ರುಗಳಾದ ಕಾಮಕ್ರೋಧಾದಿಗಳನ್ನು ಗೆದ್ದಿರುವೆಯಷ್ಟೆ? ಶಮದಮಾದಿ ಸದ್ಗುಣಗಳು ಲಭಿಸಿವೆಯಲ್ಲವೆ? ಅಷ್ಟಾಂಗಯುಕ್ತವಾದ ಯೋಗವನ್ನು ಸಾಧಿಸಿದ್ದೀಯಲ್ಲವೆ? ಚೈತನ್ಯತತ್ತ್ವದಲ್ಲಿ ನಿನ್ನ ಚಿತ್ತವು ಸದಾ ನೆಲೆನಿಂತಿದೆಯಷ್ಟೆ?" ಎಂದರು.

ಟಿಪ್ಪಣಿ:- ನಿತ್ಯ ಶತ್ರುಗಳು = ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ. ಯೋಗದ ಅಷ್ಟಾಂಗ = ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ, ಸಮಾಧಿ.

ಇತ್ಯದ್ವೈತಾಚಾರ್ಯವರ್ಯೇಣ ತೇನ
ಪ್ರೇಮ್ಣಾ ಪೃಷ್ಟಃ ಶಂಕರಃ ಸಾಧುಶೀಲಃ ।
ಭಕ್ತ್ಯುದ್ರೇಕಾದ್ಬಾಷ್ಪಪರ್ಯಾಕುಲಾಕ್ಷೋ
ಬಧ್ನನ್ಮೂರ್ಧನ್ಯಂಜಲಿಂ ವ್ಯಾಜಹಾರ ॥ ೪೧

ಅದ್ವೈತವೇದಾಂತದ ಆಚಾರ್ಯೋತ್ತಮರಾದ ಶ್ರೀಗೌಡಪಾದರು ಹೀಗೆ ಕೇಳಲಾಗಿ, ಸಾಧು ಶೀಲರಾದ ಶ್ರೀಶಂಕರಾಚಾರ್ಯರು ತಮ್ಮ ತಲೆಯ ಮೇಲೆ ಕೈಗಳನ್ನಿಟ್ಟು ಬದ್ಧಾಂಜಲಿಗಳಾಗಿ ಕೈಮುಗಿದು ನುಡಿದರು. ಭಕ್ತಿಯ ಉದ್ರೇಕದಿಂದ ಅವರ ಕಣ್ಣುಗಳಲ್ಲಿ ಆನಂದಬಾಷ್ಪಗಳು ತುಳುಕುತ್ತಿದ್ದವು.

ಯದ್ಯತ್ಪೃಷ್ಟಂ ಸ್ಪಷ್ಟಮಾಚಾರ್ಯಪಾದೈಃ
ತತ್ತತ್ಸರ್ವಂ ಭೋ ಭವಿಷ್ಯತ್ಯವಶ್ಯಮ್ ।
ಕಾರುಣ್ಯಾಬ್ಧೇಃ ಕಲ್ಪಯುಷ್ಮತ್ಕಟಾಕ್ಷೈಃ
ದೃಷ್ಟಾಸ್ಯಾಽಽಹುರ್ದುರ್ಲಭಂ ಕಿಂನು ಜಂತೋಃ ॥ ೪೨

"ಆಚಾರ್ಯಪಾದರು ನನಗೆ ಸ್ಪಷ್ಟವಾಗಿ ಏನೇನನ್ನು ಕೇಳಿದರೋ, ಅದೆಲ್ಲವೂ ಪೂಜ್ಯರೆ, ಅವಶ್ಯವಾಗಿ ನಡೆಯುವುದು. ಕಾರುಣ್ಯ ಸಮುದ್ರಕ್ಕೆ ಸಮಾನವಾದ ತಮ್ಮ ಕಟಾಕ್ಷಗಳಿಗೆ ಪಾತ್ರನಾದ ಮನುಷ್ಯನಿಗೆ ದುರ್ಲಭವಾದದ್ದು ಯಾವುದಿದೆ?-ಎಂದು ಬಲ್ಲವರು ನುಡಿಯುತ್ತಾರೆ!

ಮೂಕೋ ವಾಗ್ಮೀ ಮಂದಧೀಃ ಪಂಡಿತಾಗ್ರ್ಯಃ
ಪಾಪಾಚಾರಃ ಪುಣ್ಯನಿಷ್ಠೇಷು ಗಣ್ಯಃ ।
ಕಾಮಾಸಕ್ತಃ ಕೀರ್ತಿಮಾನ್ನಿಃ ಸ್ಪೃಹಾಣಾಂ
ಆರ್ಯಾಪಾಂಗಾಲೋಕತಃ ಸ್ಯಾತ್ ಕ್ಷಣೇನ ॥ ೪೩

"ಮೂಕನು ವಾಗ್ಮಿಯಾಗುವನು. ಮೂಢನು ಪಂಡಿತೋತ್ತಮನಾಗುವನು. ಪೂಜ್ಯರಾದ ತಮ್ಮ ಅಪಾಂಗ ವೀಕ್ಷಣವು ಲಭಿಸಿದರೆ ಆ ಕ್ಷಣದಲ್ಲಿ ಪಾಪಿಯು ಪುಣ್ಯವಂತರಲ್ಲಿ ಗಣ್ಯನಾದಾನು. ಕಾಮಾಸಕ್ತನೂ ವಿರಕ್ತರ ನಡುವೆ ಕೀರ್ತಿಶಾಲಿಯಾದಾನು!

ಲೇಶಂ ವಾಪಿ ಜ್ಞಾತುಮೀಷ್ಟೇ ಪುಮಾನ್ ಕಃ
ಸೀಮಾತೀತಸ್ಯಾದ್ಯ ಯುಷ್ಮನ್ಮಹಿಮ್ನಃ |
ತುಷ್ಟ್ಯಾಽತ್ಯಂತಂ ತತ್ತ್ವವಿದ್ಯೋಪದೇಷ್ಟಾ
ಜಾತಃ ಸಾಕ್ಷಾದ್ಯಸ್ಯ ವೈಯಾಸಕಿಃ ಸಃ || ೪೪

"ಸೀಮಾತೀತವಾದ ತಮ್ಮ ಮಹಿಮೆಯ ಒಂದಂಶವನ್ನಾದರೂ ತಿಳಿಯಬಲ್ಲ ಪುರುಷನು ಇಂದು ಯಾವನಿದ್ದಾನೆ? ವೇದವ್ಯಾಸರ ಪುತ್ರರಾದ ಸಾಕ್ಷಾತ್ ಶುಕಮಹರ್ಷಿಗಳೇ ಅತ್ಯಂತ ಸಂತುಷ್ಟರಾಗಿ ತತ್ತ್ವವಿದ್ಯೆಯನ್ನು ತಮಗೆ ಉಪದೇಶಿಸಿದ್ದಾರೆ.

ಟಿಪ್ಪಣಿ:- ವೈಯಾಸಕಿಃ = ವ್ಯಾಸಸ್ಯ ಅಪತ್ಯಂ ಪುಮಾನ್.'ವ್ಯಾಸವರುಡನಿಷಾದಬಿಂಬಾನಾಂ ಚೇತಿ ವಕ್ತವ್ಯಮ್' ಎಂಬ ವಾರ್ತಿಕದಿಂದ ಅಕಙ್ ಆದೇಶ. ಇಞ್ ಪ್ರತ್ಯಯ.

ಆಜಾನಾತ್ಮಜ್ಞಾನಸಿದ್ಧಂ ಯಮಾರಾತ್
ಔದಾಸೀನ್ಯಾಜ್ಞಾತಮಾತ್ರಂ ವ್ರಜಂತಮ್ |
ಪ್ರೇಮಾವೇಶಾತ್ಪುತ್ರ ಪುತ್ರೇತಿ ಶೋಚನ್
ಪಾರಾಶರ್ಯಃ ಪೃಷ್ಠತೋಽನುಪ್ರಪೇದೇ || ೪೫

"ಜನಿಸುವಾಗಲೇ ಆತ್ಮಜ್ಞಾನಸಿದ್ಧರಾದ ಶುಕಮಹರ್ಷಿಗಳು ಜನಿಸಿದೊಡನೆ ಲೋಕದಲ್ಲಿ ಔದಾಸೀನ್ಯವನ್ನು ತಳೆದು ಪರಿವ್ರಾಜಕರಾಗಿ ಹೊರಟು ಬಿಟ್ಟರು. ಆಗ ವ್ಯಾಸಮುನಿಗಳು ಪ್ರೇಮಾತಿಶಯದಿಂದ ಶೋಕಿಸುತ್ತ 'ಪುತ್ರ ಪುತ್ರ' ಎಂದು ಕೂಗುತ್ತ ಅವರ ಹಿಂದೆ ಧಾವಿಸಿ ಹೋದರಂತೆ!

ಯಶ್ಚಾಹೂತೋ ಯೋಗಭಾಷ್ಯ ಪ್ರಣೇತ್ರಾ
ಪಿತ್ರಾ ಪ್ರಾಪ್ತಃ ಸ ಪ್ರಪಂಚೈಕಭಾವಮ್ |
ಸರ್ವಾಹಂತಾಶೀಲನಾದ್ಯೋಗಭೂಮೇಃ
ಪ್ರತ್ಯಾಕ್ರೋಶಂ ಪ್ರಾತನೋದ್‌ವೃಕ್ಷರೂಪಃ || ೪೬

"ತಂದೆಯೂ ಯೋಗಸೂತ್ರಭಾಷ್ಯಕಾರರೂ ಆದ ವ್ಯಾಸರು 'ಪುತ್ರಽಽಽ' ಎಂದು ಕರೆದಾಗ, ಶುಕ ಮುನಿಗಳು ಯೋಗಭೂಮಿಯನ್ನೇರಿ 'ಅಹಮೇವೇದಂ ಸರ್ವಂ' ಎಂದು ಆತ್ಮೈಕ್ಯದ

ಅನುಶೀಲನದಿಂದ ಪ್ರಪಂಚದೊಡನೆ ಏಕಭಾವದಿಂದ ಬೆರೆತು ವೃಕ್ಷರೂಪದಿಂದ ಪ್ರತಿಧ್ವನಿಯನ್ನಿತ್ತ ಮಹಾನುಭಾವರು.

ಟಿಪ್ಪಣಿ:- ಯಂ ಪ್ರವ್ರಜಂತಮನುಪೇತಮಪೇತಕೃತ್ಯಂ
ದ್ವೈಪಾಯನೋ ವಿರಹಕಾತರ ಆಜುಹಾವ|
ಪುತ್ರೇತಿ ತನ್ಮಯತಯಾ ತರವೋ ವಿನೇದುಃ
ತಂ ಸರ್ವಭೂತಹೃದಯಂ ಮುನಿಮಾನತೋಽಸ್ಮಿ ||

—ಪದ್ಮಪುರಾಣ, ಭಾಗವತ ಮಾಹಾತ್ಮ್ಯ.

ತತ್ತ್ವಾದೃಕ್ಷಜ್ಞಾನಪಾಥೋಧಿಯುಷ್ಮತ್
ಪಾದದ್ವಂದ್ವಂ ಪದ್ಮಸೌಹಾರ್ದಹೃದ್ಯಮ್ |
ದೈವಾದೇತದ್ದೀನದೃಗ್ಗೋಚರಶ್ಚೇತ್
ಭಕ್ತಸ್ಯೈತದ್ಭಾಗಧೇಯಂ ಹ್ಯಮೇಯಮ್ || ೪೭

ಅಂತಹ ಜ್ಞಾನಸಾಗರರಾದವರು ತಾವು. ಪದ್ಮದಂತೆ ಹೃದ್ಯವಾದ ತಮ್ಮ ಈ ಪಾದಯುಗಳವು ನಮ್ಮಂತಹ ದೀನರಿಗೆ ಅದೃಷ್ಟವಶದಿಂದ ಗೋಚರಿಸುತ್ತದೆ. ಇದು ಭಕ್ತನ ಊಹಾತೀತವಾದ ಭಾಗ್ಯವೇ ಸರಿ" ಎಂದರು.

ಇತ್ಯಾಕರ್ಣ್ಯಾಥಾಬ್ರವೀದ್ಗೌಡಪಾದೋ
ವತ್ಸ ಶ್ರುತ್ವಾ ವಾಸ್ತವಾಂಸ್ತ್ವದ್ಗುಣೌಘಾನ್ |
ದ್ರಷ್ಟುಂ ಶಾಂತಸ್ವಾಂತವಂತಂ ಮಮ ತ್ವಾಂ
ಗಾಢೋತ್ಕಂಠಾಗರ್ಭಿತಂ ಚಿತ್ತಮಾಸೀತ್ || ೪೮

ಆ ನುಡಿಯನ್ನು ಕೇಳಿ ಶ್ರೀಗೌಡಪಾದರು "ವತ್ಸ, ವಾಸ್ತವವಾಗಿ ನಿನ್ನ ಗುಣಸಂಪತ್ತುಗಳನ್ನು ನಾನು ಕೇಳಿದಾಗ, ಶಾಂತಚಿತ್ತನಾದ ನಿನ್ನನ್ನು ನೋಡಬೇಕೆಂದು ನನ್ನ ಮನಸ್ಸು ಗಾಢವಾಗಿ ಬಯಸಿತು.

ಕೃತಾಸ್ತ್ವಯಾ ಭಾಷ್ಯಮುಖಾ ನಿಬಂಧಾ
ಮತ್ಕಾರಿಕಾವಾರಿಜನುಃಸುಖಾರ್ಕಾಃ |
ಶ್ರುತ್ವೇತಿ ಗೋವಿಂದಮುಖಾತ್ಪ್ರಹೃಷ್ಯ
ದೃಗಧ್ವನೀನೋಽಸ್ಮಿ ತವಾದ್ಯ ವಿದ್ವನ್ || ೪೯

ನೀನು ಶಾರೀರಕ ಸೂತ್ರ ಭಾಷ್ಯವೇ ಮೊದಲಾದ ನಿಬಂಧಗಳನ್ನು ರಚಿಸಿರುವೆಯೆಂದೂ ಅವು ನನ್ನ ಮಾಂಡೂಕ್ಯಕಾರಿಕೆಗಳೆಂಬ ಕಮಲಗಳನ್ನು ಸುಖವಾಗಿ ಅರಳಿಸುವ ಸೂರ್ಯರಂತೆ

ಇವೆಯೆಂದೂ ಗೋವಿಂದಯತಿಯೇ ಹೇಳಿದನು. ಅದನ್ನು ಕೇಳಿ ನನಗೆ ತುಂಬ ಸಂತೋಷವಾಯಿತು. ಆದ್ದರಿಂದ, ವಿದ್ವದ್ವರ, ನಿನ್ನ ಕಣ್ಣಿಗೆ ಈಗ ಗೋಚರಿಸಿದ್ದೇನೆ" ಎಂದರು.

ಇತಿ ಸ್ಫುಟಂ ಪ್ರೋಕ್ತವತೇ ವಿನೀತಃ
ಸೋಽಶ್ರಾವಯದ್ಭಾಷ್ಯಮಶೇಷಮಸ್ಮೈ |
ವಿಶಿಷ್ಯ ಮಾಂಡೂಕ್ಯಗಭಾಷ್ಯಯುಗ್ಮಂ
ಶ್ರುತ್ವಾ ಪ್ರಹೃಷ್ಯನ್ನಿದಮಬ್ರವೀತ್ತಮ್ || ೫೦

ಶ್ರೀಗೌಡಪಾದರು ಸ್ಪಷ್ಟವಾಗಿ ಈ ರೀತಿ ನುಡಿಯಲಾಗಿ ಶ್ರೀಶಂಕರರು ವಿನೀತಭಾವದಿಂದ ತಮ್ಮ ಎಲ್ಲ ಭಾಷ್ಯಗಳ ವಿಷಯುವನ್ನು ನಿವೇದಿಸಿದರು. ವಿಶೇಷವಾಗಿ ಮಾಂಡೂಕ್ಯೋಪನಿಷತ್ತಿನ ಭಾಷ್ಯ ಮತ್ತು ಮಾಂಡೂಕ್ಯಕಾರಿಕಾಭಾಷ್ಯಗಳೆರಡನ್ನೂ ತೋರಿಸಿದರು. ಶ್ರೀಗೌಡಪಾದರು ಅವನ್ನು ನೋಡಿ ಬಹಳ ಸಂತುಷ್ಟರಾಗಿ ಇಂತೆಂದರು.

ಮತ್ಕಾರಿಕಾಭಾವವಿಬೋಧಿತಾದೃಙ್
ಮಾಂಡೂಕ್ಯಭಾಷ್ಯಶ್ರವಣೋತ್ಥಹರ್ಷಃ |
ದಾತುಂ ವರಂ ತೇ ವಿದುಷಾಂ ವರಾಯ
ಪ್ರೋತ್ಸಾಹಯತ್ಯಾಶು ವರಂ ವೃಣೀಷ್ವ || ೫೧

"ಈ ಮಾಂಡೂಕ್ಯಭಾಷ್ಯಗಳು ನನ್ನ ಕಾರಿಕೆಗಳ ಅಭಿಪ್ರಾಯವನ್ನು ಸ್ಫುಟವಾಗಿ ವಿವೇಚಿಸಿ ತಿಳಿಸಿಕೊಡುತ್ತಿವೆ. ನನಗಾದ ಹರ್ಷವು ವಿದ್ವದಗ್ರೇಸರನಾದ ನಿನಗೆ ಏನಾದರೊಂದು ವರವನ್ನು ನೀಡಬೇಕೆಂದು ಪ್ರೇರಿಸುತ್ತಿದೆ. ಒಂದು ವರವನ್ನು ಬೇಗನೆ ಕೇಳಿಕೊ" ಎಂದರು.

ಸ ಪ್ರಾಹ ಪರ್ಯಾಯಶುಕರ್ಷಿಮೀಕ್ಷ್ಯ
ಭವಂತಮದ್ರಾಕ್ಷಮತಿಷ್ಯಪೂರುಷಮ್ |
ವರಃ ಪರಃ ಕೋಽಸ್ತಿ ತಥಾಽಪಿ ಚಿಂತನಂ
ಚಿತ್ತತ್ತ್ವಗಂ ಮೇಽಸ್ತು ಗುರೋ ನಿರಂತರಮ್ || ೫೨

ಆಗ ಶ್ರೀಶಂಕರಾಚಾರ್ಯರು "ಓ ದರ್ಶನೀಯರಾದ ಮಹಾತ್ಮರೆ, ಮತ್ತೊಬ್ಬ ಶುಕಮಹರ್ಷಿಗಳೇ ಆದ ತಮ್ಮನ್ನು ನೋಡಿದೆನು. ಕಲಿಯುಗಕ್ಕೆ ಸಲ್ಲದ ಪುಣ್ಯಪುರುಷರನ್ನೇ ಕಂಡೆನು. ಇದಕ್ಕಿಂತ ಉತ್ತಮವಾದ ವರವು ಯಾವುದಿದ್ದೀತು? ಆದರೂ, ಪರಮಗುರುಗಳೆ, ನನ್ನ ಚಿಂತನವು ನಿರಂತರವೂ ಚಿದ್ವಸ್ತುವಿನಲ್ಲಿ ನೆಲೆಸುವಂತಾಗಲಿ" ಎಂದರು.

ಟಿಪ್ಪಣಿ:- ಶ್ಲೋಕದಲ್ಲಿ 'ಈಕ್ಷ್ಯ' ಎಂಬುದು ಸಂಬೋಧನೆ. ಹೇ ದರ್ಶನೀಯ-ಎಂದರ್ಥ. ಅದು ಲ್ಯಬಂತವಲ್ಲ. 'ಈಕ್ಷ್ಯಂ' ಎಂದು ಪಾಠವಿದ್ದರೆ ಇನ್ನೂ ಉತ್ತಮ. ಆಗ ದರ್ಶನೀಯರಾದ ತಮ್ಮನ್ನು ಎಂದರ್ಥ.

ತಥೇತಿ ಸೋಽಂತರ್ಧಿಮಪಾಸ್ತಮೋಹೇ
ಗತೇ ಚಿರಂಜೀವಿಮುನಾವಥಾಸೌ ।
ವೃತ್ತಾಂತಮೇತಂ ಸ ಮುದಾಽಽಶ್ರವೇಭ್ಯಃ
ಸಂಶ್ರಾವಯಂಸ್ತಾಂ ಕ್ಷಣದಾಮನೈಷೀತ್ ॥ ೫೩

"ತಥಾಸ್ತು" ಎಂದು ನುಡಿದು ಶ್ರೀಗೌಡಪಾದರು ಅಂತರ್ಧಾನ ಹೊಂದಿದರು. ಮೋಹಾತೀತರೂ ಚಿರಂಜೀವಿಗಳೂ ಆದ ಆ ಮುನಿಗಳು ಹೋದಮೇಲೆ ಆಚಾರ್ಯರು ಈ ವೃತ್ತಾಂತವನ್ನು ತಮ್ಮ ಶಿಷ್ಯರಿಗೆ ಆನಂದದಿಂದ ಹೇಳುತ್ತ ಸಂತೋಷಕರವಾದ ಆ ರಾತ್ರಿಯನ್ನು ಕಳೆದರು.

ಟಿಪ್ಪಣಿ:- ಕ್ಷಣದಾ ಶಬ್ದದ ಬಳಕೆ ಅರ್ಥವತ್ತಾಗಿದೆ. ಸಂತೋಷಕರವಾದ ರಾತ್ರಿ ಎಂದು ಶಬ್ದಾರ್ಥ.

ಅಥ ದ್ಯುನದ್ಯಾಮುಷಸಿ ಕ್ಷಮೀಂದ್ರೋ
ನಿರ್ವರ್ತ್ಯ ನಿತ್ಯಂ ವಿಧಿವತ್ಸ ಶಿಷ್ಯೈಃ ।
ತೀರೇ ನಿದಿಧ್ಯಾಸನ ಲಾಲಸೋಽಭೂತ್
ಅತ್ರಾಂತರೇಽಶ್ರೂಯತ ಲೋಕವಾರ್ತಾ ॥ ೫೪

ಆಮೇಲೆ ಉಷಃಕಾಲದಲ್ಲಿ ಆ ಯತೀಂದ್ರರು ಎಂದಿನಂತೆ ಶಿಷ್ಯರೊಡನೆ ವಿಧಿವತ್ತಾಗಿ ಗಂಗಾನದಿಯಲ್ಲಿ ನಿತ್ಯದ ಸ್ನಾನವನ್ನು ಮಾಡಿದಮೇಲೆ, ಧ್ಯಾನಕ್ಕೆ ಕುಳಿತು ಕೊಳ್ಳಬೇಕೆಂದಿದ್ದರು. ಅಷ್ಟರಲ್ಲಿ ಒಂದು ಲೋಕವಾರ್ತೆಯು ಕೇಳಿಬಂದಿತು.

ಜಂಬೂದ್ವೀಪಂ ಶಸ್ಯತೇಽಸ್ಯಾಂ ಪೃಥಿವ್ಯಾಂ
ತತ್ರಾಪ್ಯೇತನ್ಮಂಡಲಂ ಭಾರತಾಖ್ಯಮ್ ।
ಕಾಶ್ಮೀರಾಖ್ಯಂ ಮಂಡಲಂ ತತ್ರ ಶಸ್ತಂ
ಯತ್ರಾಽಽಸ್ತೇಽಸೌ ಶಾರದಾ ವಾಗಧೀಶಾ ॥ ೫೫

ಏನೆಂದರೆ: "ಈ ಪೃಥ್ವಿಯಲ್ಲಿ ಪ್ರಶಸ್ತವಾದದ್ದು ಜಂಬೂದ್ವೀಪ. ಅದರಲ್ಲಿಯೂ ಈ ಭಾರತರಾಷ್ಟ್ರವು ಉತ್ತಮವಾದದ್ದು. ಇದರಲ್ಲಿ ಕಾಶ್ಮೀರವೆಂಬ ದೇಶವು ಪ್ರಶಂಸನೀಯವಾದದ್ದು. ಅಲ್ಲಿ ವಾಗಧೀಶ್ವರಿಯಾದ ಶಾರದಾದೇವಿಯು ನೆಲೆಸಿದ್ದಾಳೆ.

ದ್ವಾರೈರ್ಯುಕ್ತಂ ಮಾಂಡಪೈಸ್ತಚ್ಚತುರ್ಭಿಃ
ದೇವ್ಯಾ ಗೇಹಂ ಯತ್ರ ಸರ್ವಜ್ಞ ಪೀಠಮ್ |
ಯತ್ರಾಽರೋಹೇ ಸರ್ವವಿತ್ಸಜ್ಜನಾನಾಂ
ನಾನ್ಯೇ ಸರ್ವೇ ಯತ್ಪ್ರವೇಷ್ಟುಂ ಕ್ಷಮಂತೇ || ೫೬

"ಆ ಪ್ರಾಂತದಲ್ಲಿರುವ ದೇವಿಯ ದೇವಸ್ಥಾನವು ಮಂಟಪಗಳಿಂದ ಸಹಿತವಾದ ನಾಲ್ಕು ದ್ವಾರಗಳಿಂದ ಕೂಡಿದೆ. ದೇವಾಲಯದೊಳಗೆ ಸರ್ವಜ್ಞಪೀಠ ಉಂಟು. ವಿದ್ವಾಂಸರಲ್ಲಿ ಸರ್ವಜ್ಞನಾದವನು ಮಾತ್ರ ಆ ಪೀಠವನ್ನೇರಲು ಅವಕಾಶವಿದೆ. ಉಳಿದವರಿಗೆ ಆ ಮಂಟಪದ ಒಳಗೂ ಹೋಗಲು ಸಾಧ್ಯವಿಲ್ಲ.

ಪ್ರಾಚ್ಯಾಃ ಪ್ರಾಚ್ಯಾಂ ಪಶ್ಚಿಮಾಃ ಪಶ್ಚಿಮಾಯಾಂ
ಯೇ ಚೋದೀಚ್ಯಾಸ್ತಾಮುದೀಚೀಂ ಪ್ರಪನ್ನಾಃ |
ಸರ್ವಜ್ಞಾಸ್ತದ್ದ್ವಾರಮುದ್ಘಾಟಯಂತೋ
ದಾಕ್ಷಾ ನದ್ಧಂ ನೋ ತದುದ್ಘಾಟಯಂತಿ || ೫೭

ಪೂರ್ವದೇಶದಿಂದ ಬಂದ ಸರ್ವಜ್ಞರು ಪೂರ್ವದಿಕ್ಕಿನ ಬಾಗಿಲನ್ನೂ ಪಶ್ಚಿಮದವರು ಪಶ್ಚಿಮದ ಬಾಗಿಲನ್ನೂ ಉತ್ತರದವರು ಉತ್ತರದ ಬಾಗಿಲನ್ನೂ ತೆರೆದು ಒಳಗೆ ಹೋಗಿದ್ದಾರೆ. ದಕ್ಷಿಣದ ಬಾಗಿಲನ್ನು ಇದುವರೆಗೆ ದಕ್ಷಿಣದವರು ಯಾರೂ ತೆರೆಯಲು ಶಕ್ತರಾಗಿಲ್ಲ!

ವಾರ್ತಾಮುಪಶ್ರುತ್ಯ ಸ ದಾಕ್ಷಿಣಾತ್ಯೋ
ಮಾನಂ ತದೀಯಂ ಪರಿಮಾತುಮಿಚ್ಛನ್ |
ಕಾಶ್ಮೀರದೇಶಾಯ ಜಗಾಮ ಹೃಷ್ಟಃ
ಶ್ರೀ ಶಂಕರೋ ದ್ವಾರಮಪಾವರೀತುಮ್ || ೫೮

ಈ ಸುದ್ದಿಯನ್ನು ಕೇಳಿ ದಾಕ್ಷಿಣಾತ್ಯರಾದ ಶ್ರೀಶಂಕರಾಚಾರ್ಯರಿಗೆ ಆ ಸರ್ವಜ್ಞತ್ವದ ಆಳವೆಷ್ಟೆಂಬುದನ್ನು ಅಳೆದು ಬಿಡಬೇಕೆಂದು ಮನಸ್ಸಾಯಿತು! ದಕ್ಷಿಣದ ಬಾಗಿಲನ್ನು ತೆರೆಯಿಸಬೇಕೆಂದು ನಿಶ್ಚಯಿಸಿ ಹರ್ಷೋತ್ಸಾಹಗಳಿಂದ ಕಾಶ್ಮೀರದೇಶಕ್ಕೆ ಪ್ರಯಾಣ ಮಾಡಿದರು.

ದ್ವಾರಂ ಪಿನದ್ಧಂ ಕಿಲ ದಾಕ್ಷಿಣಾತ್ಯಂ
ನ ಸಂತಿ ವಿದ್ವಾಂಸ ಇತೀಹ ದಾಕ್ಷಾಃ |
ತಾಂ ಕಿಂವದಂತೀಂ ವಿಫಲಾಂ ವಿಧಾತುಂ
ಜಗಾಮ ದೇವೀನಿಲಯಾಯ ಹೃಷ್ಯನ್ || ೫೯

ದಕ್ಷಿಣದ ಬಾಗಿಲು ಮುಚ್ಚಿಹೋಗಿದೆಯಂತೆ. ವಿದ್ವಾಂಸರಾದ ದಾಕ್ಷಿಣಾತ್ಯರೇ ಇಲ್ಲ! -ಈ ಕಿಂವದಂತಿಯನ್ನು ಸುಳ್ಳುಮಾಡುವುದಕ್ಕಾಗಿ ಆಚಾರ್ಯರು ಹರ್ಷಿಸುತ್ತಲೇ ಶ್ರೀಶಾರದಾದೇವಾಲಯಕ್ಕೆ ಹೋದರು.

ವಾದಿವ್ರಾತಗಜೇಂದ್ರದುರ್ಮದ ಘಟಾದುರ್ಗರ್ವಸಂಕರ್ಷಣ -
ಶ್ರೀಮಚ್ಛಂಕರದೇಶಿಕೇಂದ್ರಮೃಗರಾಡಾಯಾತಿ ಸರ್ವಾರ್ಥವಿತ್ |
ದೂರಂ ಗಚ್ಛತ ವಾದಿದುಃಶಠಗಜಾಃ ಸಂನ್ಯಾಸದಂಷ್ಟ್ರಾಯುಧೋ
ವೇದಾಂತೋರುವನಾಶ್ರಯಸ್ತದಪರಂ ದ್ವೈತಂ ವನಂ ಭಕ್ಷತಿ || ೬೦

ದಾರಿಯಲ್ಲಿ ಅವರ ಶಿಷ್ಯಪರಿವಾರದವರು ಈ ರೀತಿಯಾಗಿ ಘೋಷಿಸುತ್ತಿದ್ದರು: "ವಾದಿಗಳೆಂಬ ದುಷ್ಟಗಜಗಳೆ, ದೂರ ಸರಿಯಿರಿ! ವಾದಿವ್ರಾತವೆಂಬ ಮದ್ದಾನೆಗಳ ಹಿಂಡಿನ ಕೆಟ್ಟಗರ್ವವನ್ನು ಕಿತ್ತು ಈಡಾಡತಕ್ಕ ಶ್ರೀಶಂಕರದೇಶಿಕೇಂದ್ರರೆಂಬ ಸಿಂಹವು ಬರುತ್ತಿದೆ! ಸರಿಯಿರಿ. ಸರ್ವಶಾಸ್ತ್ರಾರ್ಥಗಳನ್ನು ಬಲ್ಲ ಸಿಂಹವಿದು. ಸಂನ್ಯಾಸವೆಂಬ ಕೋರೆಯ ಹಲ್ಲು ಇದರ ಆಯುಧ! ವೇದಾಂತವೆಂಬ ಬೃಹದ್ವನದಲ್ಲಿ ವಾಸಮಾಡುವ ಈ ಸಿಂಹವು ತನಗೆ ಎದುರಾದ ದ್ವೈತವೆಂಬ ವನವನ್ನು ಭಕ್ಷಿಸಿಬಿಡುತ್ತದೆ!

ಟಿಪ್ಪಣಿ:- ಭಕ್ಷತಿ= ಭಕ್ಷ ಅದನೇ. ಭ್ವಾದಿಯಲ್ಲಿದೆ.

ಕರಟತಟಾಂತವಾಂತ ಮದಸೌರಭಸಾರಭರ -
ಸ್ಖಲದಲಿಸಂಭ್ರಮತ್ಕಲಭಕುಂಭವಿಜೃಂಭಿಬಲಃ |
ಹರಿರಿವ ಜಂಬುಕಾನಮದದಂತಗಜಾನ್ಕುಜನಾ -
ನಪಿ ಖಲು ನಾಕ್ಷಿಗೋಚರಯತೀಹ ಯತಿರ್ಹತಕಾನ್ || ೬೧

ಗಂಡಸ್ಥಳದಿಂದ ಸುರಿಯುವ ಮದೋದಕದ ಸೌರಭಸಾರಕ್ಕೆ ದುಂಬಿಗಳು ಮುಸುಕುವುದರಿಂದ ತಲೆಯಾಡಿಸುವ ಮದ್ದಾನೆಗಳ ಕುಂಭಸ್ಥಳದಲ್ಲಿ ತನ್ನ ಬಲವನ್ನು ವಿಜೃಂಭಿಸುವ ಸಿಂಹವಿದು! ಇಂತಹ ಸಿಂಹವು ನರಿಗಳನ್ನೂ ಮದೋದಕವಿಲ್ಲದ-ದಂತ ಹುಟ್ಟದ ಆನೆಗಳನ್ನೂ ಹೇಗೆ ಲಕ್ಷಿಸುವುದಿಲ್ಲವೋ ಹಾಗೆ, ಈ ಯತಿರಾಜಸಿಂಹವು ಮೊದಲೇ ಸತ್ತಂತಿರುವ ಕುತ್ಸಿತಪಂಡಿತರನ್ನು ಕಣ್ಣೆತ್ತಿಯೂ ನೋಡುವುದಿಲ್ಲ!"

ಟಿಪ್ಪಣಿ:- ಈ ಶ್ಲೋಕವು ಮರ್ಕಟಕವೃತ್ತದಲ್ಲಿದೆ. ಅದರ ಲಕ್ಷಣ-ಯದಿ ಭವತೋ ನಜೌ ಭಜಜಲಾ ಗುರು ಮರ್ಕಟಕಮ್.

ಸಂಶ್ರಾವಯನ್ನಧ್ವನಿ ದೇಶಿಕೇಂದ್ರಃ
ಶ್ರೀದಕ್ಷಿಣದ್ವಾರಭುವಂ ಪ್ರಪೇದೇ |
ಕವಾಟಮುದ್ಘಾಟ್ಯ ನಿವೇಷ್ಟುಕಾಮಂ
ಸಸಂಭ್ರಮಂ ವಾದಿಗಣೋ ನ್ಯರೌತ್ಸೀತ್ || ೬೨

ಹೀಗೆ ಪರಿವಾರದವರು ದಾರಿಯಲ್ಲಿ ಘೋಷಿಸುತ್ತಿರುವಾಗ, ದೇಶಿಕೇಂದ್ರರು ಶ್ರೀಶಾರದಾದೇವಾಲಯದ ದಕ್ಷಿಣದ್ವಾರದ ಬಳಿಗೆ ಬಂದರು. ಕವಾಟವನ್ನು ತೆರೆದು ಒಳಗೆ ಪ್ರವೇಶಿಸಲು ಬಯಸಿದ ಅವರನ್ನು ನೋಡಿ ಅಲ್ಲಿದ್ದ ವಾದಿಗಳು ಸಂಭ್ರಮದಿಂದ ಬಂದು ತಡೆದರು.

ಅಥಾಬ್ರುವೀದ್ವಾದಿಗಣಃ ಸ ದೇಶಿಕಂ
ಕಿಮರ್ಥಮೇವಂ ಬಹುಸಂಭ್ರಮಕ್ರಿಯಾ ।
ಯದತ್ರ ಕಾರ್ಯಂ ತದುದೀರ್ಯತಾಂ ಶನೈಃ
ನ ಸಂಭ್ರಮಃ ಕರ್ತುಮಲಂ ತದೀಪ್ಸಿತಮ್ ॥ ೬೩

ಯಃ ಕಶ್ಚಿದೇತ್ಯೇತು ಪರೀಕ್ಷಿತುಂ ಚೇತ್
ವೇದಾಖಿಲಂ ನಾವಿದಿತಂ ಮಮಾಣು ।
ಇತ್ಥಂ ಭವಾನ್ವಕ್ತಿ ಸಮುನ್ನತೀಚ್ಛೋ
ದತ್ವಾ ಪರೀಕ್ಷಾಂ ವ್ರಜ ದೇವತಾಲಯಮ್ ॥ ೬೪

ಆ ವಾದಿಗಳು ಆಚಾರ್ಯರನ್ನು ಕುರಿತು "ಏತಕ್ಕಾಗಿ ಇಷ್ಟು ಬಹುಸಂಭ್ರಮದ ಉದ್ಯೋಗ? ಇಲ್ಲಿ ನಿಮ್ಮ ಕಾರ್ಯವೇನೆಂಬುದನ್ನು ನಿಧಾನವಾಗಿ ಹೇಳಿರಿ. ಬರಿಯ ಸಂಭ್ರಮವು ಇಷ್ಟವನ್ನು ಸಾಧಿಸಲಾರದು! 'ಯಾವನಾದರೂ ಪರೀಕ್ಷಿಸುವುದಕ್ಕೆ ಬರುವುದಾದರೆ ಬರಲಿ! ನಾನು ಅಖಿಲವನ್ನೂ ಬಲ್ಲೆ! ನನಗೆ ಗೊತ್ತಿಲ್ಲದ್ದು ಅಣುಮಾತ್ರವು ಇಲ್ಲ!' ಎಂದು ಹೇಳುತ್ತಿದ್ದೀರಿ. ಎಲೈ ಉನ್ನತ ಕೀರ್ತಿಕಾಮಿಗಳೆ! ಪರೀಕ್ಷೆಯನ್ನು ಕೊಟ್ಟು ದೇವತಾಲಯದೊಳಗೆ ಹೋಗಬೇಕು!" ಎಂದರು.

ಷಡ್‌ಭಾವವಾದೀ ಕಣಭುಙ್ಮತಸ್ಥಃ
ಪಪ್ರಚ್ಛ ತಂ ಸ್ವೀಯರಹಸ್ಯಮೇಕಮ್ ।
ಸಂಯೋಗಭಾಜಃ ಪರಮಾಣುಯುಗ್ಮಾತ್
ಜಾತಂ ಹಿ ಸೂಕ್ಷ್ಮಂ ದ್ವ್ಯಣುಕಂ ಮತಂ ನಃ ॥ ೬೫

ಅನಂತರ ಷಡ್‌ಭಾವವಾದಿಯಾದ ಕಣಾದಮತದ ವೈಶೇಷಿಕನು ಬಂದು ತನ್ನ ಮತದ ಒಂದು ರಹಸ್ಯದ ವಿಷಯವಾಗಿ ಪ್ರಶ್ನಿಸಿದನು: "ಎರಡು ಪರಮಾಣುಗಳು ಸಂಯುಕ್ತವಾಗಿ ಸೂಕ್ಷ್ಮವಾದ ದ್ವ್ಯಣುಕವು ಹುಟ್ಟುತ್ತದೆಯೆಂಬುದು ನಮ್ಮ ಸಿದ್ಧಾಂತ.

ಟಿಪ್ಪಣಿ:- ಷಡ್‌ಭಾವಗಳು - ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ ಮತ್ತು ಸಮವಾಯ.

ಯತ್ಸ್ಯಾದಣುತ್ವಂ ತದುಪಾಶ್ರಿತಂ ತತ್
ಜಾಯೇತ ಕಸ್ಮಾದ್ವದ ಸರ್ವವಿಚ್ಚೇತ್ |
ನೋ ಚೇತ್ಪ್ರಭುತ್ವಂ ತವ ವಕ್ತುಮೇತ್ಯೈಃ
ಸರ್ವಜ್ಞಭಾಷಾ ವಿಹಿತಾ ಕಥಂ ತೇ ? || ೬೬

ಈ ದ್ವ್ಯಣುಕವು ಅಣುಪರಿಮಾಣವುಳ್ಳದ್ದು. ನೀನು ಸರ್ವಜ್ಞನಾದರೆ, ಇದರಲ್ಲಿರುವ ಅಣುತ್ವಕ್ಕೆ ಕಾರಣವಾವುದೆಂಬುದನ್ನು ಹೇಳು. ಹೇಳಲು ನಿನಗೆ ಸಾಮರ್ಥ್ಯವಿಲ್ಲದಿದ್ದರೆ, ಈ ಜನರು ನಿನಗೆ ಸರ್ವಜ್ಞನೆಂಬ ಮಾತು ಅನ್ವರ್ಥವೆಂದು ಹೇಗೆ ನುಡಿಯುತ್ತಿದ್ದಾರೆ?" ಎಂದು ಕೇಳಿದನು.

ಟಿಪ್ಪಣಿ:- ಇಲ್ಲಿ 'ಏತೇ ಸರ್ವಜ್ಞಭಾಷಾಂ ವಿಹಿತಾಂ ಕಥಂತೇ' ಎಂದು ಪಾಠವಿದೆ. ಅದು ಅಶುದ್ಧವಾದ್ದರಿಂದ ಮೇಲ್ಕಂಡಂತೆ ತಿದ್ದಿಕೊಳ್ಳಲಾದಿದೆ.

ಯಾ ದ್ವಿತ್ವಸಂಖ್ಯಾ ಪರಮಾಣುನಿಷ್ಠಾ
ಸಾ ಕಾರಣಂ ತಸ್ಯ ಗತಸ್ಯ ಮಾತ್ರಾ |
ಇತೀರಿತೇ ತದ್ವಚನಂ ಪ್ರಪೂಜ್ಯ
ಸ್ವಯಂ ನ್ಯವರ್ತಿಷ್ಟ ಕಣಾದಲಕ್ಷ್ಮೀಃ || ೬೭

ಅದಕ್ಕೆ ಉತ್ತರವಾಗಿ "(ಎರಡು) ಪರಮಾಣುಗಳಲ್ಲಿರುವ ಯಾವ ದ್ವಿತ್ವಸಂಖ್ಯೆ ಉಂಟೋ ಅದು ದ್ವ್ಯಣುಕದಲ್ಲಿರುವ ಅಣುತ್ವಕ್ಕೆ ಕಾರಣ" ಎಂದು ಪ್ರಾಜ್ಞರಾದ ಶ್ರೀಶಂಕರರು ಹೇಳಿದರು. ಆ ಮಾತನ್ನು ಒಪ್ಪಿಕೊಂಡು ಕಣಾದಲಕ್ಷ್ಮಿಯು ತಾನಾಗಿ ಹಿಂದಕ್ಕೆ ಸರಿದಳು!

ಟಿಪ್ಪಣಿ:- ಮಾತ್ರಾ=ಪುಲ್ಲಿಂಗ ಮಾತೃ ಶಬ್ದದ ತೃತೀಯೈಕವಚನ. ಮಾತೃ=ಪ್ರಾಜ್ಞ. ಅಣುತ್ವವು ಪರಿಮಾಣ. ದ್ವ್ಯಣುಕದ ಈ ಪರಿಮಾಣಕ್ಕೆ ದ್ವಿತ್ವಸಂಖ್ಯೆ ಕಾರಣವೆಂದು ಸಿದ್ಧಾಂತಮುಕ್ತಾವಳಿಯ ಗುಣನಿರೂಪಣದಲ್ಲಿ ಸ್ಪಷ್ಟವಾಗಿದೆ.

ತತ್ರಾಪಿ ನೈಯಾಯಿಕ ಆತ್ತಗರ್ವಃ
ಕಣಾದಪಕ್ಷಾಚ್ಚರಣಾಕ್ಷಪಕ್ಷೇ |
ಮುಕ್ತೇರ್ವಿಶೇಷಂ ವದ ಸರ್ವವಿಚ್ಚೇತ್
ನೋ ಚೇತ್ಪ್ರತಿಜ್ಞಾಂ ತ್ಯಜ ಸರ್ವವಿತ್ತ್ವೇ || ೬೮

ಆಗ ನೈಯಾಯಿಕನು ಗರ್ವದಿಂದ ಮುಂದೆ ಬಂದು "ಕಣಾದಪಕ್ಷಕ್ಕಿಂತ ಗೌತಮಪಕ್ಷದಲ್ಲಿ ವಿಶೇಷವೇನು? ಅದರಲ್ಲಿಯೂ ಮುಕ್ತಿಯ ವಿಷಯದಲ್ಲಿ ಭೇದವೇನು? ನೀನು ಸರ್ವಜ್ಞನಾಗಿದ್ದರೆ ಉತ್ತರ ಹೇಳು. ಆಗದಿದ್ದರೆ ಸರ್ವಜ್ಞನೆಂಬ ಪ್ರತಿಜ್ಞೆಯನ್ನು ತ್ಯಜಿಸು!" ಎಂದನು.

ಟಿಪ್ಪಣಿ:- ಮುಂದೆ ಹೇಳುವ ಉತ್ತರಕ್ಕೆ ಅನುಗುಣವಾಗಿ ಪ್ರಶ್ನೆಯನ್ನು ಎರಡಾಗಿ ವಿಭಜಿಸಿಕೊಳ್ಳಲಾಗಿದೆ.

ಅತ್ಯಂತನಾಶೇ ಗುಣಸಂಗತೇರ್ಯಾ
ಸ್ಥಿತಿರ್ನಭೋವತ್ಕಣಭಕ್ಷಪಕ್ಷೇ ।
ಮುಕ್ತಿಸ್ತದೀಯೇ ಚರಣಾಕ್ಷಪಕ್ಷೇ
ಸಾಽಽನಂದಸಂವಿತ್ಸಹಿತಾ ವಿಮುಕ್ತಿಃ ॥ ೬೯

ಆಚಾರ್ಯರು ಹೇಳಿದರು: "(ಧರ್ಮಾಧರ್ಮಾದಿ)ಗುಣಗಳ ಸಂಬಂಧಕ್ಕೆ ಆತ್ಯಂತಿಕ ನಾಶವಾದಮೇಲೆ ಆಕಾಶದಂತೆ ನಿರ್ಮಲವಾದ (ಆತ್ಮನ) ಸ್ಥಿತಿ ಯಾವುದುಂಟೋ ಅದು ಕಣಾದರ ಪಕ್ಷದಲ್ಲಿ ಮುಕ್ತಿ ಎನಿಸುತ್ತದೆ. ಗೌತಮರ ಪಕ್ಷದಲ್ಲಿ ಆನಂದಾನುಭವಸಹಿತವಾದ ಅದೇ ಸ್ಥಿತಿಯು ಮುಕ್ತಿಯಾಗಿದೆ.

ಟಿಪ್ಪಣಿ:- ಮೋಕ್ಷದಲ್ಲಿ ಸುಖದುಃಖಗಳೇನೂ ಇರುವುದಿಲ್ಲವೆಂದು ಕಣಾದರ ಮತ.'ನಿತ್ಯ ಸುಖಾಭಿವ್ಯಕ್ತಿರ್ಮುಕ್ತಿಃ' ಎಂದು ನೈಯಾಯಿಕರು ಹೇಳುತ್ತಾರೆ.

ಪದಾರ್ಥಭೇದಃ ಸ್ಫುಟ ಏವ ಸಿದ್ಧಃ
ತಥೇಶ್ವರಃ ಸರ್ವಜಗದ್ವಿಧಾತಾ ।
ಸ ಈಶವಾದೀತ್ಯುದಿತೇಽಭಿನಂದ್ಯ
ನೈಯಾಯಿಕೋಽಪಿ ನ್ಯವೃತನ್ನಿರೋಧಾತ್ ॥ ೭೦

ಇನ್ನು ಉಭಯರೂ ವಿಂಗಡಿಸಿರುವ ಪದಾರ್ಥಗಳಲ್ಲಿ ಭೇದವು ಸ್ಪಷ್ಟವಾಗಿಯೇ ಇದೆ. ಸರ್ವಜಗತ್ತನ್ನೂ ನಿರ್ಮಿಸಿರುವ (ನಿಮಿತ್ತಕಾರಣನಾದ) ಈಶ್ವರನಿದ್ದಾನೆಂಬುದು ಕಣಾದಪಕ್ಷದಂತೆಯೇ ಗೌತಮ ಪಕ್ಷದಲ್ಲಿಯೂ ಇದೆ. ಗೌತಮರೂ ಕಣಾದರಂತೆ ಈಶ್ವರಾಸ್ತಿತ್ವವನ್ನು ಒಪ್ಪಿದ್ದಾರೆ" ಎಂದರು. ಅದನ್ನು ಮೆಚ್ಚಿ ನೈಯಾಯಿಕನೂ ತಡೆಯನ್ನುಂಟುಮಾಡದೆ ಸರಿದನು.

ವಿವರಣೆ: ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ಸಮವಾಯಾಭಾವಾಃ ಸಪ್ತ ಪದಾರ್ಥಾಃ- ಎಂಬುದು ಕಣಾದರ ಮತ. ಪ್ರಮಾಣ, ಪ್ರಮೇಯ, ಸಂಶಯ, ಪ್ರಯೋಜನ-ಇತ್ಯಾದಿಯಾದ ಹದಿನಾರು ಪದಾರ್ಥಗಳೆಂದು ಗೌತಮರ ಮತ. ವಿಭಾಗಕ್ರಮದಲ್ಲಿ ಮಾತ್ರ ಉಭಯರಲ್ಲಿ ವ್ಯತ್ಯಾಸವಿದೆ. ಪದಾರ್ಥಗಳು ಸಮಾನ.

ತಂ ಕಾಪಿಲಃ ಪ್ರಾಹ ಚ ಮೂಲಯೋನಿಃ
ಕಿಂ ವಾ ಸ್ವತಂತ್ರಾ ಚಿದಧಿಷ್ಠಿತಾ ವಾ ।
ಜಗನ್ನಿದಾನಂ ವದ ಸರ್ವವಿತ್ತ್ವಾತ್
ನೋ ಚೇತ್ಪ್ರವೇಶಸ್ತವ ದುರ್ಲಭಃ ಸ್ಯಾತ್ ॥ ೭೧

ಅನಂತರ ಕಪಿಲಸಿದ್ಧಾಂತದ ಸಾಂಖ್ಯನು "ಸಾಂಖ್ಯಸಿದ್ಧಾಂತದಲ್ಲಿ ಮೂಲಪ್ರಕೃತಿಯು ಸ್ವತಂತ್ರವಾಗಿದೆಯೊ? ಅಥವಾ ಚಿದ್ವಸ್ತುವನ್ನು ಆಶ್ರಯಿಸಿಕೊಂಡಿದೆಯೊ? ಜಗತ್ತಿಗೆ ಮೂಲಕಾರಣ ಯಾವುದು? ನೀನು ಸರ್ವಜ್ಞನೆಂದಮೇಲೆ ಉತ್ತರ ಹೇಳು. ಹೇಳಲಾಗದಿದ್ದರೆ ದೇವಾಲಯ ಪ್ರವೇಶವು ನಿನಗೆ ದುರ್ಲಭ!" ಎಂದು ನುಡಿದನು.

ಸಾ ವಿಶ್ವಯೋನಿರ್ಬಹುರೂಪಭಾಗಿನೀ
  ಸ್ವಯಂ ಸ್ವತಂತ್ರಾ ತ್ರಿಗುಣಾತ್ಮಿಕಾ ಸತೀ |
ಇತ್ಯೇವ ಸಿದ್ಧಾಂತಗತಿಸ್ತು ಕಾಪಿಲೀ
  ವೇದಾಂತಪಕ್ಷೇ ಪರತಂತ್ರತಾ ಮತಾ || ೭೨

ಆಚಾರ್ಯರು "ತ್ರಿಗುಣಾತ್ಮಕವಾದ ಮೂಲಪ್ರಕೃತಿಯು ನಾನಾರೂಪಗಳನ್ನು ಧರಿಸಿ ಜಗತ್ತಿಗೆ ಮೂಲಕಾರಣವಾಗಿರುತ್ತದೆ. ಅದು ಸ್ವಯಂ ಸ್ವತಂತ್ರವಾದದ್ದು. (ಚಿದ್ವಸ್ತುವನ್ನು ಆಶ್ರಯಿಸಿ ಕೊಂಡಿಲ್ಲ)- ಇದು ಕಪಿಲಸಿದ್ಧಾಂತದ ಸ್ಥಿತಿ. ವೇದಾಂತ ಪಕ್ಷದಲ್ಲಾದರೋ ಪ್ರಕೃತಿಯು ಪರತಂತ್ರವಾದದ್ದು" ಎಂದು ಹೇಳಿದರು. (ಸಾಂಖ್ಯನು ಹಿಂದಕ್ಕೆ ಸರಿದನು).

ತತೋ ನದಂತೋ ನ್ಯರುಧನ್ ಸಗರ್ವಾ
  ದತ್ವಾ ಪರೀಕ್ಷಾಂ ವ್ರಜ ಧಾಮ ದೇವ್ಯಾಃ |
ಬೌದ್ಧಾಸ್ತಥಾ ಸಂಪ್ರಥಿತಾಃ ಪೃಥಿವ್ಯಾಂ
  ಬಾಹ್ಯಾರ್ಥವಿಜ್ಞಾನಕಶೂನ್ಯವಾದೈಃ || ೭೩

ಬಾಹ್ಯಾರ್ಥವಾದೋ ದ್ವಿವಿಧಸ್ತದಂತರಂ
  ವಾಚ್ಯಂ ವಿವಿಕ್ಷುರ್ಯದಿ ದೇವತಾಲಯಮ್ |
ವಿಜ್ಞಾನವಾದಸ್ಯ ಚ ಕಿಂ ವಿಭೇದಕಂ
  ಭವನ್ಮತಾದ್ಬ್ರೂಹಿ ತತಃ ಪರಂ ವ್ರಜ || ೭೪

ಅನಂತರ ಬಾಹ್ಯಾರ್ಥವಾದ, ವಿಜ್ಞಾನವಾದ, ಶೂನ್ಯವಾದಗಳಿಂದ ಲೋಕದಲ್ಲಿ ಪ್ರಸಿದ್ಧರಾದ ಬೌದ್ಧರು ಗರ್ವದಿಂದ ಕೋಲಾಹಲ ಮಾಡುತ್ತಬಂದು - "ಪರೀಕ್ಷೆಯನ್ನು ಕೊಟ್ಟು ದೇವಿಯ ಆಯತನದೊಳಗೆ ಹೋಗು. ದೇವತಾಲಯದೊಳಗೆ ಹೋಗಬೇಕಾದರೆ, ನಮ್ಮ ಬಾಹ್ಯಾರ್ಥವಾದದಲ್ಲಿ ಎರಡು ವಿಧವಿದೆಯಷ್ಟೆ. ಅವುಗಳಲ್ಲಿರುವ ಭೇದವೇನೆಂಬುದನ್ನು ಹೇಳಬೇಕು. ವಿಜ್ಞಾನವಾದಕ್ಕೂ ನಿಮ್ಮ ವೇದಾಂತಮತಕ್ಕು ಭೇದಕವಾದದ್ದು ಯಾವುದು? ಹೇಳು. ಆಮೇಲೆ ಮುಂದೆ ಹೋಗು" ಎಂದರು.

ಸೌತ್ರಾಂತಿಕೋ ವಕ್ತಿ ಹಿ ವೇದ್ಯಜಾತಂ
ಲಿಂಗಾದಿಗಮ್ಯಂ ತ್ವಿತರೋಽಕ್ಷಿಗಮ್ಯಮ್ |
ತಯೋಸ್ತ್ವಯೋರ್ಭಂಗುರತಾಽವಿಶಿಷ್ಟಾ
ಭೇದಃ ಕಿಯಾನ್ವೇದನವೇದ್ಯಭಾಗೀ || ೭೫

ಆಚಾರ್ಯರು ಹೀಗೆಂದರು: "(ಬಾಹ್ಯಾರ್ಥವಾದವು ಸೌತ್ರಾಂತಿಕ, ವೈಭಾಷಿಕ-ಎಂದು ಎರಡು ವಿಧ) ಸೌತ್ರಾಂತಿಕನು ಜ್ಞೇಯವಾದ ಪದಾರ್ಥವೆಲ್ಲವೂ ಅನುಮಾನಗಮ್ಯವೆನ್ನುತ್ತಾನೆ. ವೈಭಾಷಿಕನಾದರೋ ಅದು ಪ್ರತ್ಯಕ್ಷಗಮ್ಯವೆನ್ನುತ್ತಾನೆ. ಇನ್ನು ಪದಾರ್ಥವೆಲ್ಲವೂ ಕ್ಷಣಿಕವೆಂಬುದು ಉಭಯರಿಗೂ ಸಮಾನವಾಗಿದೆ. ಜ್ಞೇಯವಾದದ್ದು ಅನುಮಾನಗಮ್ಯ-ಪ್ರತ್ಯಕ್ಷಗಮ್ಯ ಎಂದು ಅವರಲ್ಲಿ ಸ್ವಲ್ಪ ಮತಭೇದವಿದೆ.

ವಿಜ್ಞಾನವಾದೀ ಕ್ಷಣಿಕತ್ವಮೇಷಾಂ
ಅಂಗೀಚಕಾರಾಪಿ ಬಹುತ್ವಮೇಷಃ |
ವೇದಾಂತವಾದೀ ಸ್ಥಿರಸಂವಿದೇಕೇ -
ತ್ಯಂಗೀಚಕಾರೇತಿ ಮಹಾನ್ವಿಶೇಷಃ || ೭೬

ವಿಜ್ಞಾನವಾದಿಯು ಪದಾರ್ಥವೆಲ್ಲವೂ ವಿಜ್ಞಾನರೂಪಗಳೆಂದೂ ಅವು ಕ್ಷಣಿಕಗಳೆಂದೂ ಒಪ್ಪಿದ್ದಾನೆ. ಅಲ್ಲದೆ ಆತನು ವಿಜ್ಞಾನಗಳು ಬಹುಸಂಖ್ಯೆಯಲ್ಲಿವೆಯೆಂದು ಅಂಗೀಕರಿಸುತ್ತಾನೆ. ವೇದಾಂತವಾದಿಯಾದರೋ ಸ್ಥಿರವಾದ ಒಂದೇ ವಿಜ್ಞಾನವಿದೆಯೆಂದು ಒಪ್ಪಿದ್ದಾನೆ. ಇದೇ ಈ ಎರಡು ವಾದಗಳಲ್ಲಿರುವ ಮಹತ್ತರವಾದ ವಿಶೇಷ" ಎಂದರು.

ಟಿಪ್ಪಣಿ:- ಶೂನ್ಯವಾದದಲ್ಲಿ ಪ್ರಶ್ನೋತ್ತರಗಳು ಬರಲಿಲ್ಲ.

ಅಥಾಬ್ರವೀದ್ದಿಗ್ವಸನಾನುಸಾರೀ
ರಹಸ್ಯಮೇಕಂ ವದ ಸರ್ವವಿಚ್ಚೇತ್ |
ಯದಸ್ತಿಕಾಯೋತ್ತರಶಬ್ದವಾಚ್ಯಂ
ತತ್ಕಿಂ ಮತೇಽಸ್ಮಿನ್ವದ ದೇಶಿಕಾಽಽಶು || ೭೭

ಆಮೇಲೆ ದಿಗಂಬರ ಮತಾನುಸಾರಿಯಾದ ಜೈನವಾದಿಯು "ನೀನು ಸರ್ವಜ್ಞನಾದರೆ, ನಮ್ಮ ಮತದ ಒಂದು ರಹಸ್ಯವನ್ನು ಹೇಳು. ಆಚಾರ್ಯ, ಜೈನಮತದಲ್ಲಿ ಅಸ್ತಿಕಾಯ-ಅಸ್ತಿಕಾಯ ಎಂದು ಹೇಳುತ್ತಾರಲ್ಲ, ಅದು ಯಾವಯಾವುದು ಎಂಬುದನ್ನು ಕೂಡಲೆ ತಿಳಿಸು" ಎಂದು ನುಡಿದನು.

ತತ್ರಾಽಹ ದೇಶಿಕವರಃ ಶೃಣು ರೋಚತೇ ಚೇತ್
ಜೀವಾದಿಪಂಚಕಮಭೀಷ್ಟಮುದಾಹರಂತಿ |
ತಚ್ಛಬ್ದವಾಚ್ಯಮಿತಿ ಜೈನಮತೇಽಪ್ರಶಸ್ತೇ
ಯದ್ಯಸ್ತಿ ಬೋದ್ಧುಮಪರಂ ಕಥಯಾಽಽಶು ತನ್ಮೇ || ೭೮

ಅದಕ್ಕೆ ದೇಶಿಕೇಂದ್ರರು "ಅದು ಪ್ರಿಯವಾದರೆ ಹೇಳುತ್ತೇನೆ, ಕೇಳು! ಜೀವಾಸ್ತಿಕಾಯ, ಪುದ್ಗಲಾಸ್ತಿಕಾಯ, ಧರ್ಮಾಸ್ತಿಕಾಯ, ಅಧರ್ಮಾಸ್ತಿಕಾಯ, ಆಕಾಶಾಸ್ತಿಕಾಯ - ಎಂದು ಐದು ಬಗೆಯ ಪ್ರಿಯವಾದ ಅಸ್ತಿಕಾಯಗಳನ್ನು ಜೈನರು ಹೇಳುತ್ತಾರೆ. ಹುರುಳಿಲ್ಲದ ಈ ಜೈನಮತದಲ್ಲಿ ಇನ್ನೇನಾದರೂ ತಿಳಿಯಬೇಕಾದಿದ್ದರೆ ಬೇಗನೆ ಕೇಳಿಬಿಡು!" ಎಂದರು.

ದತ್ತೋತ್ತರೇ ವಾದಿಗಣೇ ತು ಬಾಹ್ಯೇ
ಬಭಾಣ ಕಶ್ಚಿತ್ಕಿಲ ಜೈಮಿನೀಯಃ |
ಶಬ್ದಃ ಕಿಮಾತ್ಮಾ ವದ ಜೈಮಿನೀಯೇ
ದ್ರವ್ಯಂ ಗುಣೋ ವೇತಿ ತತೋ ವ್ರಜ ತ್ವಮ್ || ೭೯

ಹೀಗೆ ವೇದಬಾಹ್ಯವಾದ ವಾದಿಗಣಕ್ಕೆ ಉತ್ತರವನ್ನು ಹೇಳಿದಮೇಲೆ, ಜೈಮಿನಿದರ್ಶನದ ವಾದಿಯೊಬ್ಬನು "ಜೈಮಿನಿಸಿದ್ಧಾಂತದಲ್ಲಿ ಶಬ್ದದ ಸ್ವರೂಪವೇನು? ಅದು ದ್ರವ್ಯವೆ ಅಥವಾ ಗುಣವೆ? ಇದಕ್ಕೆ ಸರಿಯಾದ ಉತ್ತರವನ್ನು ಹೇಳಿದಮೇಲೆ ಮುಂದೆ ಹೋಗು" ಎಂದನು.

ನಿತ್ಯಾ ವರ್ಣಾಃ ಸರ್ವಗಾಃ ಶ್ರೋತ್ರವೇದ್ಯಾ
ಯತ್ತದ್ರೂಪಂ ಶಬ್ದಜಾಲಂ ಚ ನಿತ್ಯಮ್ |
ದ್ರವ್ಯಂ ವ್ಯಾಪೀತ್ಯಬ್ರುವನ್ ಜೈಮಿನೀಯಾ
ಇತ್ಯೇವಂ ತಂ ಪ್ರೋಕ್ತವಾನ್ ದೇಶಿಕೇಂದ್ರಃ || ೮೦

ಶ್ರೀಶಂಕರದೇಶಿಕೇಂದ್ರರು "ನಿತ್ಯವಾದ ವರ್ಣಗಳು ಸರ್ವವ್ಯಾಪಕಗಳೂ ಶ್ರೋತ್ರೇಂದ್ರಿಯ ಗ್ರಾಹ್ಯಗಳೂ ಆಗಿವೆ. ಶಬ್ದವು ವರ್ಣಾತ್ಮಕವಾದದ್ದು. ಅದು ನಿತ್ಯವೂ ವ್ಯಾಪಕವೂ ಆದದ್ದು. ಅದು ದ್ರವ್ಯ - ಎಂದು ಜೈಮಿನೀಯ ಸಿದ್ಧಾಂತದವರು ಹೇಳಿದ್ದಾರೆ" ಎಂದು ಆತನಿಗೆ ತಿಳಿಸಿದರು.

ಶಾಸ್ತ್ರೇಷು ಸರ್ವೇಷ್ವಪಿ ದತ್ತವಂತಂ
ಪ್ರತ್ಯುತ್ತರಂ ತಂ ಸಮಪೂಜಯಂಸ್ತೇ |
ದ್ವಾರಂ ಸಮುದ್ಘಾಟ್ಯ ದದುಶ್ಚ ಮಾರ್ಗಂ
ತತೋ ವಿವೇಶಾಂತರ ಭೂಮಿಭಾಗಮ್ || ೮೧

ಈ ಪ್ರಕಾರವಾಗಿ ಸರ್ವಶಾಸ್ತ್ರಗಳಲ್ಲಿಯೂ ಸರಿಯಾದ ಪ್ರತ್ಯುತ್ತರವನ್ನಿತ್ತ ಶ್ರೀಶಂಕರಾಚಾರ್ಯರನ್ನು ಆ ವಾದಿಗಳೆಲ್ಲರೂ ಶ್ಲಾಘಿಸಿ ಗೌರವಿಸಿದರು. ದೇವಾಲಯದ ದಕ್ಷಿಣದ್ವಾರವನ್ನೂ ಅವರೇ ತೆರೆದು ದಾರಿಯನ್ನು ಬಿಟ್ಟರು. ಆಗ ಆಚಾರ್ಯರು ದೇವಾಲಯದ ಒಳಗೆ ಹೋದರು.

ಪಾಣೌ ಸನಂದನಮಸಾವವಲಂಬ್ಯ ವಿದ್ಯಾ-
ಭದ್ರಾಸನಂ ತದವರೋಢುಮನಾಶ್ಚಚಾಲ |
ಅತ್ರಾಂತರೇ ವಿಧಿವಧೂರ್ವಿಬುಧಾಗ್ರಗಣ್ಯ -
ಮಾಚಾರ್ಯಶಂಕರಮವೋಚದನಂಗವಾಚಾ || ೮೨

ಸನಂದನಾಚಾರ್ಯರನ್ನು (ಪದ್ಮಪಾದರನ್ನು) ಕೈಯಲ್ಲಿ ಹಿಡಿದುಕೊಂಡು ಶ್ರೀಶಂಕರಭಗವತ್ಪಾದರು ಜ್ಞಾನಸಿಂಹಾಸನವಾದ ಆ ಸರ್ವಜ್ಞಪೀಠವನ್ನೇರುವ ಉದ್ದೇಶದಿಂದ ಮುಂದಕ್ಕೆ ಚಲಿಸಿದರು. ಅಷ್ಟರಲ್ಲಿ ಬ್ರಹ್ಮನ ರಾಣಿಯಾದ ಸರಸ್ವತೀದೇವಿಯು ವಿದ್ವದಗ್ರಣಿಗಳಾದ ಆಚಾರ್ಯ ಶಂಕರರನ್ನು ಕುರಿತು ಅಶರೀರವಾಣಿಯಿಂದ ಇಂತೆಂದಳು-

ಸರ್ವಜ್ಞತಾ ತೇಽಸ್ತಿ ಪುರೈವ ಯಸ್ಮಾತ್
ಸರ್ವತ್ರ ಪರ್ಯೈಕ್ಷಿ ಭವಾನ್ನ ಚೇತ್ತೇ |
ವಿರಿಂಚಿರೂಪಾಂತರವಿಶ್ವರೂಪಃ
ಶಿಷ್ಯಃ ಕಥಂ ಸ್ಯಾತ್ಪೃಥಿತಾಗ್ರಣೀಃ ಸಃ || ೮೩

"ನೀನು ಸರ್ವಜ್ಞನೇ ಹೌದು; ಅದರಲ್ಲಿ ಸಂದೇಹವಿಲ್ಲ. ಈ ವಿಷಯದಲ್ಲಿ ನೀನು ಹಿಂದೆಯೇ ಪರೀಕ್ಷೆಗೆ ಒಳಗಾಗಿದ್ದೀಯೆ. ನಿನ್ನಲ್ಲಿ ಸರ್ವಜ್ಞತೆ ಇಲ್ಲದೆ ಹೋಗಿದ್ದರೆ, ಬ್ರಹ್ಮದೇವನ ಅವತಾರ ಸ್ವರೂಪನೂ ಪಂಡಿತ ಶ್ರೇಷ್ಠನೂ ಆದ ವಿಶ್ವರೂಪನು(ಮಂಡನಮಿಶ್ರನು) ಹೇಗೆ ತಾನೇ ನಿನಗೆ ಶಿಷ್ಯನಾಗುತ್ತಿದ್ದನು?

ಸರ್ವಜ್ಞತೈಕೈವ ಭವೇನ್ನ ಹೇತುಃ
ಪೀಠಾಧಿರೋಹೇ ಪರಿಶುದ್ಧತಾ ಚ |
ಸಾ ತೇಽಸ್ತಿ ವಾ ನೇತಿ ವಿಚಾರ್ಯಮೇತತ್
ತಿಷ್ಠ ಕ್ಷಣಂ ತ್ವಂ ಕುರು ಸಾಹಸಂ ಮಾ || ೮೪

"ಈ ಜ್ಞಾನಪೀಠವನ್ನೇರಲು ಸರ್ವಜ್ಞತೆಯೊಂದೇ ಕಾರಣವಲ್ಲ. ಪರಿಶುದ್ಧತೆಯೂ ಆವಶ್ಯಕ. ಆ ಪರಿಶುದ್ಧತೆಯು ನಿನಗಿದೆಯೊ ಇಲ್ಲವೊ?- ಎಂಬುದು ವಿಚಾರಣೀಯವಾಗಿದೆ. ಒಂದು ಕ್ಷಣ ನಿಲ್ಲು! ದುಡುಕಬೇಡ!

ತ್ವಂ ಚಾಂಗನಾಃ ಸಮುಪಭುಜ್ಯ ಕಲಾರಹಸ್ಯ-
ಪ್ರಾವೀಣ್ಯಭಾಜನಮಭೂರ್ಯತಿಧರ್ಮನಿಷ್ಠಃ |
ಆರೋಢುಮೀದೃಶಪದಂ ಕಥಮರ್ಹತಾ ತೇ
ಸರ್ವಜ್ಞತೇವ ವಿಮಲತ್ವಮಪೀಹ ಹೇತುಃ || ೮೫

ನೀನು ಯತಿಧರ್ಮನಿಷ್ಠನಾಗಿದ್ದುಕೊಂಡು, (ಅಮರುಕರಾಜನ) ಅಂಗನೆಯರನ್ನು ಭೋಗಿಸಿ ಕಾಮುಕಲಾರಹಸ್ಯದಲ್ಲಿ ಪ್ರಾವೀಣ್ಯವನ್ನು ಗಳಿಸಿದ್ದೀಯೆ. ಇಂತಹ ಪವಿತ್ರಸ್ಥಾನವನ್ನು ಹತ್ತಲು ನಿನಗೆ ಅರ್ಹತೆ ಹೇಗೆ ಬರುತ್ತದೆ? ಸರ್ವಜ್ಞತೆಯ ಹಾಗೆ ನಿರ್ಮಲತ್ವವೂ ಈ ಪೀಠವನ್ನೇರಲು ಆವಶ್ಯಕ" ಎಂದು ಅಶರೀರವಾಣಿಯಿಂದ ಹೇಳಿದಳು.

ನಾಸ್ಮಿನ್ಶರೀರೇ ಕೃತಕಿಲ್ಬಿಷೋಽಹಂ
ಜನ್ಮಪ್ರಭೃತ್ಯಂಬ ನ ಸಂದಿಹೇಽಹಮ್ |
ವ್ಯಧಾಯಿ ದೇಹಾಂತರಸಂಶ್ರಯಾದ್ಯ-
ನ್ನ ತೇನ ಲಿಪ್ಯೇತ ಹಿ ಕರ್ಮಣಾಽನ್ಯಃ || ೮೬

ಆಗ ಆಚಾರ್ಯರು "ಅಂಬ, ನಾನು ಹುಟ್ಟಿದಂದಿನಿಂದ ಈ ಶರೀರದಲ್ಲಿ ಯಾವ ಕಿಲ್ಬಿಷಕೃತ್ಯವನ್ನೂ ಮಾಡಿದವನಲ್ಲ. ಇದರಲ್ಲಿ ಸಂಶಯಲೇಶವೂ ಇಲ್ಲ. ದೇಹಾಂತರವನ್ನಾಶ್ರಯಿಸಿದಾಗ ಯಾವ ಕೃತ್ಯವು ನಡೆಯಿತೋ ಅದರ ಅಶುದ್ಧಿ ಇನ್ನೊಂದು ದೇಹಕ್ಕೆ ಹೋಗಿ ಅಂಟಿಕೊಳ್ಳುವುದಿಲ್ಲವಷ್ಟೆ?" ಎಂದರು.

ವಿವರಣೆ: ಜನ್ಮಾಂತರದಲ್ಲಿ ಮಾಡಿದ ಪಾಪಪುಣ್ಯಗಳು ಇನ್ನೊಂದು ಜನ್ಮದಲ್ಲಿ ಸಂಸ್ಕಾರರೂಪದಿಂದ ಬಂದು ಅಂಟಿಕೊಳ್ಳಬಹುದು. ಆದರೆ ಇಲ್ಲಿ ಪ್ರಕೃತವಾದದ್ದು ದೇಹಶುದ್ಧಿಮಾತ್ರ. ಜನ್ಮಾಂತರದಲ್ಲಿ ಗೃಹಸ್ಥನಾದವನು ಈಗ ಯತಿಯಾದರೆ ಅವನ ದೇಹವು ಅಪವಿತ್ರವೆನಿಸುವುದಿಲ್ಲ. ಅಮರುಕ ರಾಜನ ದೇಹದಲ್ಲಿದ್ದಾಗಲೂ ನನ್ನ ಮನಸ್ಸು ಶುದ್ಧವಾಗಿಯೇ ಇತ್ತು. ದೇಹಧರ್ಮವು ಇನ್ನೊಂದು ದೇಹಕ್ಕೆ ಬರುವುದಿಲ್ಲ - ಎಂದು ಅಭಿಪ್ರಾಯ.

ಇತ್ಥಂ ನಿರುತ್ತರ ಪದಾಂ ಸ ವಿಧಾಯ ದೇವೀಂ
ಸರ್ವಜ್ಞಪೀಠಮಧಿರುಹ್ಯ ನನಂದ ಸಭ್ಯಃ |
ಸಂಮಾನಿತೋಽಭವದಸೌ ವಿಬುಧೈಶ್ಚ ವಾಣ್ಯಾ
ಗಾರ್ಗ್ಯಾ ಕಹೋಲಮುಖರೈರಿವ ಯಾಜ್ಞವಲ್ಕ್ಯಃ || ೮೭

ಸಭ್ಯರಾದ ಆಚಾರ್ಯರು ಹೀಗೆ (ನಯದಿಂದ) ನುಡಿದು ಶ್ರೀಶಾರದಾದೇವಿಯನ್ನು ನಿರುತ್ತರಳನ್ನಾಗಿ ಮಾಡಿ, ಸರ್ವಜ್ಞಪೀಠವನ್ನೇರಿ ಕುಳಿತು ಸಂತೃಪ್ತರಾದರು. ಪೂರ್ವದಲ್ಲಿ ಗಾರ್ಗಿಯಿಂದಲೂ ಕಹೋಲನೇ ಮೊದಲಾದ ವಿದ್ವಾಂಸರಿಂದಲೂ ಪ್ರಶಂಸಿತರಾದ

ಯಾಜ್ಞವಲ್ಕ್ಯ ಮಹರ್ಷಿಗಳಂತೆ, ಶ್ರೀಶಂಕರಾಚಾರ್ಯರು ಶ್ರೀಶಾರದಾದೇವಿಯಿಂದಲೂ ವಿದ್ವಾಂಸರಿಂದಲೂ ಸಂಮಾನಿತರಾದರು.

ಟಿಪ್ಪಣಿ:- ಯಾಜ್ಞವಲ್ಕ್ಯರ ವೃತ್ತಾಂತವು ಬೃಹದಾರಣ್ಯಕೋಪನಿಷತ್ತಿನಲ್ಲಿ ಬಂದಿದೆ.

ವಾದಪ್ರಾದುರ್ವಿನೋದಪ್ರತಿಕಥನಸುಧೀವಾದದುರ್ವಾರತರ್ಕ -
ನ್ಯಕ್ಕಾರಸ್ಫೈರಧಾಟೀಭರಿತಹರಿದುಪನ್ಯಸ್ತಮಾಹಾನುಭಾವ್ಯಃ |
ಸರ್ವಜ್ಞೋ ವಸ್ತುಮರ್ಹಸ್ತ್ವಮಿತಿ ಬಹುಮತಃ ಸ್ಫಾರಭಾರತ್ಯಮೋಘ -
ಶ್ಲಾಘಾಜೋಘುಷ್ಯಮಾಣೋ ಜಯತಿ ಯತಿಪತೇಃ
ಶಾರದಾಪೀಠವಾಸಃ || ೮೮

"ವಾದಸಮಯದಲ್ಲಿ ವಿನೋದದಿಂದಲೇ ಉತ್ತರವನ್ನು ಕೊಡಲು ಸಮರ್ಥರಾದ ಪಂಡಿತೋತ್ತಮರು ಹೂಡಿದ ದುರ್ವಾರತರ್ಕಮಯ ವಾದವನ್ನು ಸರ್ವತಂತ್ರ ಸ್ವತಂತ್ರರಾದ ನೀವು ಧಿಕ್ಕರಿಸಿ ಖಂಡಿಸಿದ್ದೀರಿ. ಯಥೇಚ್ಛವಾಗಿ ಸರ್ವತ್ರ ವಿಜಯಯಾತ್ರೆಯನ್ನು ನಡೆಸಿದ ನಿಮ್ಮ ಮಹಾಮಹಿಮೆಯನ್ನು ಸಮಸ್ತದಿಕ್ಕುಗಳೂ ಹಾಡಿ ಹೊಗಳುತ್ತಿವೆ. ವಿಪುಲಗುಣ ಸಂಮಾನಿತರಾದ ನೀವು ಸರ್ವಜ್ಞರೇ ಹೌದು. ಈ ಜ್ಞಾನಪೀಠದಲ್ಲಿ ಕುಳಿತು ಕೊಳ್ಳಲು ಅರ್ಹರಾಗಿದ್ದೀರಿ" ಎಂದು ಶ್ರೀಶಾರದಾಂಬೆಯು ಸ್ಫುಟಾಕ್ಷರಗಳಿಂದ ನುಡಿಯಲು, ಸರ್ವರೂ ಮತ್ತೆ ಮತ್ತೆ ಜಯಘೋಷ ಮಾಡಿದರು. ಈ ಪ್ರಕಾರವಾಗಿ ಸಂಸ್ತುತರಾದ ಯತಿರಾಜ ಶ್ರೀಶಂಕರಭಗವತ್ಪಾದರ ಶಾರದಾಪೀಠವಾಸವು ಸರ್ವೋತ್ಕೃಷ್ಟವಾಗಿ ಇಂದಿಗೂ ವಿಜೃಂಭಿಸುತ್ತಿದೆ!

ಕುತ್ರಾಪ್ಯಾಸೀತ್ಪಲೀನೇಕ್ಷಣಚರಣಕಥಾ ಕಾಪಿಲೀ ಕ್ವಾಪಿ ಲೀನಾ
ಭಗ್ನಾಽಭಗ್ನಾ ಗುರೂಕ್ತಿಃ ಕ್ವಚಿದಜನಿ ಪರಂ ಭಟ್ಟಪಾದಪ್ರವಾದಃ |
ಭೂಮಾವಾಯೋಗಕಾಣಾದಜನಿಮತಮಥಾಭೂತವಾಗ್ಭೇದವಾರ್ತಾ
ದುರ್ದಾಂತಬ್ರಹ್ಮವಿದ್ಯಾಗುರುದುರುದರಕ
ಕಥಾದುಂದುಭೇರ್ಧಿಂಧಿಮಾತಃ || ೮೯

ಅಜೇಯರೂ ಬ್ರಹ್ಮವಿದ್ಯಾಗುರುಗಳೂ ಆದ ಶ್ರೀಶಂಕರಾಚಾರ್ಯರು ಪ್ರತಿವಾದಿಗಳೊಡನೆ ನಡೆಸಿದ ದ್ಯೂತವೆಂಬ ವಾದಕಥಾಸಂದರ್ಭದಲ್ಲಿ ಮೊಳಗಿದ ಭೇರಿಯ 'ಧಿಮ್‌ಧಿಮ್' ಶಬ್ದದಿಂದ ಹೆದರಿ ಅಕ್ಷಪಾದರ (ಗೌತಮರ) ಕಥೆಯು ಎಲ್ಲಿಯೋ ಅಡಗಿಕೊಂಡಿತು! ಕಪಿಲರ ಸಾಂಖ್ಯಸಿದ್ಧಾಂತವು ಮೂಲೆಗುಂಪಾಯಿತು! ಅದುವರೆಗೂ ಭಗ್ನವಾಗದಿದ್ದ ಪ್ರಭಾಕರಗುರುವಿನ ಮತವು ಭಗ್ನವಾಯಿತು! ಕುಮಾರಿಲಭಟ್ಟಪಾದರ ವಾದಸರಣಿಯು ಎಲ್ಲಿಯೋ ಉಳಿಯಿತು! ಪಾತಂಜಲಯೋಗ ಮತ್ತು ಕಣಾದರ ವೈಶೇಷಿಕ ಮತಗಳಿಂದ ಹಿಡಿದು ಜಗತ್ತಿನಲ್ಲಿದ್ದ ಸಮಸ್ತ ಭೇದವಾದವೂ ಸುಳ್ಳುಮಾತೆಂದು ಸಿದ್ಧವಾಯಿತು!

ಟಿಪ್ಪಣಿ:-ದುರುದರ ಏವ ದುರುದರಕಃ = ದ್ಯೂತ. ಸ್ವಾರ್ಥೇ ಕಃ. ದುರೋದರ ಎಂದು ರೂಪಾಂತರವೂ ಇದೆ. ಅಭೂತವಾಕ್ = ಸುಳ್ಳು ಮಾತು.'ಧಿಂಧಿಮೇತಃ' ಎಂಬುದನ್ನು 'ಧಿಂಧಿಮಾತಃ' ಎಂದು ತಿದ್ದಿಕೊಳ್ಳಲಾಗಿದೆ. ಇದು ಅನುಕರಣ ಶಬ್ದ.

ಕಾಣಾದಃ ಕ್ವ ಪ್ರಣಾದಃ ಕ್ವ ಚ ಕಪಿಲವಚಃ ಕ್ವಾಕ್ಷಿಪಾದಪ್ರವಾದಃ
ಕ್ವಾಪ್ಯಂಧಾ ಯೋಗಕಂಥಾ ಕ್ವ ಗುರುರತಿಲಘುಃ ಕ್ವಾಪಿ
ಭಾಟ್ಟಪ್ರಘಟ್ಟಮ್ ।
ಕ್ವ ದ್ವೈತಾದ್ವೈತ ವಾರ್ತಾ ಕ್ಷಪಣಕವಿವೃತಿಃ ಕ್ವಾಪಿ ಪಾಖಂಡಷಂಡ -
ಧ್ವಾಂತಧ್ವಂಸೈಕಭಾನೋರ್ಜಯತಿ ಯತಿಪತೇಃ
ಶಾರದಾಪೀಠವಾಸೇ ॥ ೬೦

ಶ್ರೀಶಂಕರಯತೀಶ್ವರರು ಪಾಖಂಡರ ಹಿಂಡು ಎಂಬ ಕತ್ತಲೆಯನ್ನು ಧ್ವಂಸಮಾಡುವ ಪ್ರಚಂಡಭಾಸ್ಕರನಂತಿದ್ದರು. ಅವರ ಶ್ರೀಶಾರದಾಪೀಠವಾಸವು ಜಯಶಾಲಿಯಾಗಿ ಮೆರೆಯುತ್ತಿರುವಾಗ ಕಾಣಾದರ ಕೂಗು ಎಲ್ಲಿರಬೇಕು! ಕಪಿಲರ ಸಾಂಖ್ಯಮತವು ಎಲ್ಲಿಗೆ ಹೋಯಿತೊ! ಗೌತಮರ ಕರ್ಕಶ ತರ್ಕವು ಎಲ್ಲಿ ಸೇರಿಕೊಂಡಿತೊ! ಯೋಗದವರ ಕುರುಡು ಕಂತೆಯು ಎಲ್ಲಿ ಮರೆಯಾಯಿತೊ! ಹಗುರವಾದ ಗುರುಮತವು ಎಲ್ಲಿಗೆ ಹಾರಿಹೋಗಿರಬಹುದು! ಭಟ್ಟಪಾದರ ಗಟ್ಟಿಯಾದ ವಾದವು ಎಲ್ಲಿಯೋ ಇದ್ದಿರಬಹುದು! ಭಟ್ಟಭಾಸ್ಕರನ ಭೇದಾಭೇದದ ಸುದ್ದಿ ಎಲ್ಲಿಯೋ ಅಡಗಿದ್ದೀತು! ಜೈನರ ವ್ಯಾಖ್ಯಾನವು ಎತ್ತಲೋ ಪಲಾಯನ ಮಾಡಿತು!

ತತೋ ದಿವಿಷದಧ್ವನಿ ತ್ವರಿತಮಧ್ವರಾಶಾವಲೀ -
ಧುರಂಧರಸಮೀರಿತತ್ರಿದಶಪಾಣಿಕೋಣಾಹತಃ ।
ಅರುಂದ್ಧ ಹರಿದಂತರಂ ಸ್ವರಭರೈರ್ಭ್ರಮತ್ಸಿಂಧುಭಿ -
ರ್ಘನಾಘನಘನಾರವಪ್ರಥಮಬಂಧುಭಿರ್ದುಂದುಭಿಃ ॥ ೬೧

ಆಚಾರ್ಯರು ಶಾರದಾಪೀಠವನ್ನೇರಿದ ಕೂಡಲೆ ಗಗನದಲ್ಲಿದ್ದ ದೇವತೆಗಳು ದೇವೇಂದ್ರನ ಆಜ್ಞೆಯಂತೆ ತಮ್ಮ ಕೈಯಲ್ಲಿದ್ದ ವಾದನದಂಡಗಳಿಂದ ದೇವದುಂದುಭಿಗಳನ್ನು ಬಡಿದರು. ಕಾರ್ಮೋಡದಿಂದ ಹೊರಟ ಗುಡುಗಿನಂತೆ ಮೊರೆಯುವ ಘೋಷಗಳಿಂದ ದುಂದುಭಿಯು ಸಮಸ್ತ ದಿಙ್ಮಂಡಲವನ್ನೂ ವ್ಯಾಪಿಸಿತು. ಅದರ ಅಬ್ಬರಕ್ಕೆ ಸಮುದ್ರವು ಅಲ್ಲಾಡಿತು!

ಟಿಪ್ಪಣಿ:- ಅಧ್ವರಾಶ = ದೇವತೆಗಳು. ಘನಾಘನ = ಕಾರ್ಮೋಡ. ಪ್ರಥಮ ಬಂಧು = ಹತ್ತಿರದ ಬಂಧು. ಸಮಾನವಾದ ಎಂದು ತಾತ್ಪರ್ಯ.

ಕಚಭರವಹನಂ ಪುಲೋಮಜಾಯಾಃ
ಕತಿಚಿದಹಾನ್ಯಪಗರ್ಭಕಂ ಯಥಾ ಸ್ಯಾತ್ ।
ಗುರುಶಿರಸಿ ತಥಾ ಸುಧಾಶನಾಃ ಸ್ವ -
ಸ್ತರುಕುಸುಮಾನ್ಯಥ ಹರ್ಷತೋಽಭ್ಯವರ್ಷನ್ ॥ ೬೨

ದೇವತೆಗಳು ಹರ್ಷದಿಂದ ಕಲ್ಪವೃಕ್ಷದ ಹೂಗಳನ್ನು ತಂದು ಶ್ರೀಶಂಕರಾಚಾರ್ಯರ ಶಿರಸ್ಸಿನಮೇಲೆ ಪುಷ್ಪವೃಷ್ಟಿಯನ್ನು ಸುರಿಸಿದರು. ಎಷ್ಟು ಸುರಿಸಿದರೆಂದರೆ,, ಶಚೀದೇವಿಯು ತನ್ನ ತಲೆಗೂದಲಿನ ಮುಡಿಯಲ್ಲಿ ಮುಡಿದುಕೊಳ್ಳಲು ಕೆಲವು ದಿನಗಳವರೆಗೆ ಹೂಮಾಲೆಯೇ ಇಲ್ಲವಾಯಿತು!

ಟಿಪ್ಪಣಿ:- ಗರ್ಭಕ = ತಲೆಯಲ್ಲಿ ಮುಡಿಯುವ ಹೂಮಾಲೆ.

ಇತಿ ಮುನಿರತಿತುಷ್ಟ್ಯೋಽಧ್ಯುಷ್ಯ ಸರ್ವಜ್ಞಪೀಠಂ
ನಿಜಮತಗುರುತಾಯೈ ನೋ ಪುನರ್ಮಾನಹೇತೋಃ |
ಕತಿಚನ ವಿನಿವೇಶ್ಯಾಥರ್ಷ್ಯಶೃಂಗಾಶ್ರಮಾದೌ
ಮುನಿರಥ ಬದರೀಂ ಸ ಪ್ರಾಪ ಕೈಶ್ಚಿತ್ಸ್ವಶಿಷ್ಯೈಃ || ೬೩

ಈ ಪ್ರಕಾರವಾಗಿ ಶ್ರೀಶಂಕರಭಗವತ್ಪಾದರು ಸರ್ವಜ್ಞಪೀಠವನ್ನೇರಿದುದು ಅದ್ವೈತಸಿದ್ಧಾಂತದ ಶ್ರೇಷ್ಠತೆಯನ್ನು ಎತ್ತಿಹಿಡಿಯುವುದಕ್ಕಾಗಿಯೇ ಹೊರತು ತಮ್ಮ ಕೀರ್ತಿಪ್ರತಿಷ್ಠೆಗಾಗಿ ಅಲ್ಲ. ಅನಂತರ ತಮ್ಮ ಕೆಲವು ಶಿಷ್ಯರನ್ನು ಋಷ್ಯಶೃಂಗಾದ್ಯಾಶ್ರಮಗಳಲ್ಲಿ ಸ್ಥಾಪಿಸಿ ಇತರ ಶಿಷ್ಯರೊಡನೆ ಬದರಿಗೆ ಪ್ರಯಾಣ ಮಾಡಿದರು.

ವಿವರಣೆ: ಇಲ್ಲಿ ಶ್ರೀಶೃಂಗೇರಿಜಗದ್ಗುರುಪೀಠವನ್ನು ಸ್ಪಷ್ಟವಾಗಿ ಉದಾಹರಿಸಲಾಗಿದೆ. ಆಚಾರ್ಯರಿಂದಲೇ ಸ್ವಯಮಧಿಷ್ಠಿತವಾದ ಪೀಠವಿದು. ಅನಂತರ ಶ್ರೀ ಸುರೇಶ್ವರರು ಈ ಪೀಠವನ್ನೇರಿದರು. ಜಗನ್ನಾಥದಲ್ಲಿ ಪದ್ಮಪಾದರು, ದ್ವಾರಕೆಯಲ್ಲಿ ಹಸ್ತಾಮಲಕರು, ಉತ್ತರದ ಜ್ಯೋತಿರ್ಮಠದಲ್ಲಿ ತೋಟಕಾಚಾರ್ಯರು ಪ್ರತಿಷ್ಠಿತರಾದರು. ಜಗನ್ನಾಥದಲ್ಲಿ ಹಸ್ತಾಮಲಕರೆಂದೂ ದ್ವಾರಕೆಯಲ್ಲಿ ಪದ್ಮಪಾದರೆಂದೂ ಭಿನ್ನಾಭಿಪ್ರಾಯವಿದೆ.

ದಿವಸಾನ್ವಿನಿನಾಯ ತತ್ರ ಕಾಂಶ್ಚಿತ್
ಸ ಚ ಪಾತಂಜಲತಂತ್ರನಿಷ್ಠಿತೇಭ್ಯಃ |
ಕೃಪಯೋಪದಿಶನ್ ಸ್ವಸೂತ್ರಭಾಷ್ಯಂ
ವಿಜಿತತ್ಯಾಜಿತಸರ್ವದರ್ಶನೇಭ್ಯಃ || ೬೪

ಪಾತಂಜಲಯೋಗಶಾಸ್ತ್ರದಲ್ಲಿ ನಿಷ್ಠೆಯನ್ನು ತಳೆದಿದ್ದ ಕೆಲವರು ಬದರಿಯಲ್ಲಿ ಆಚಾರ್ಯರೊಡನೆ ವಾದ ಮಾಡಿ ಪರಾಜಿತರಾದರು. ಅವರು ಉಳಿದ ಎಲ್ಲ ದರ್ಶನಗಳ ಗೊಡವೆಯನ್ನೂ ಪರಿತ್ಯಜಿಸಿ ಅದ್ವೈತದರ್ಶನಕ್ಕೆ ಶರಣಾದರು. ಅವರಿಗೆ ಆಚಾರ್ಯರು ತಮ್ಮ ಬ್ರಹ್ಮಸೂತ್ರಭಾಷ್ಯವನ್ನು ಕೃಪೆಯಿಂದ ಬೋಧಿಸುತ್ತ ಬದರಿಯಲ್ಲಿ ಕೆಲವು ದಿನಗಳನ್ನು ಕಳೆದರು.

ನಿತರಾಂ ಯತಿರಾಡುಡುರಾಜಕರ-
ಪ್ರಕರಪ್ರಚುರಪ್ರಸರಸ್ಸ್ವಯಶಾಃ |
ಸ್ವಮಯಂ ಸಮಯಂ ಗಮಯನ್ ರಮಯನ್
ಹೃದಯಂ ಸದಯಂ ಸುಧಿಯಾಂ ಶುಶುಭೇ || ೮೫

ಉಡುರಾಜನಾದ ಚಂದ್ರನ ಕಿರಣಗಳು ಪ್ರಸರಿಸಿದಂತೆ, ಆ ಯತಿರಾಜರ ಶುಭ್ರಕೀರ್ತಿಯು ಎಲ್ಲೆಲ್ಲಿಯೂ ಹರಡಿತು. ಆಚಾರ್ಯರು ತಮ್ಮ ಅದ್ವೈತಸಿದ್ಧಾಂತವನ್ನು ಕೃಪೆಯಿಂದ ಬೋಧಿಸುತ್ತ, ವಿಶೇಷವಾಗಿ ವಿದ್ವಾಂಸರ ಹೃದಯವನ್ನು ಸೂರೆಗೊಂಡು ಆನಂದಪಡಿಸುತ್ತ ವಿರಾಜಿಸುತ್ತಿದ್ದರು.

ಟಿಪ್ಪಣಿ:- ಉಡು = ನಕ್ಷತ್ರ. ಸಮಯ = ಸಿದ್ಧಾಂತ.

ಏವಂ ಪ್ರಕಾರೈಃ ಕಲಿಕಲ್ಮಷಘ್ನೈಃ
ಶಿವಾವತಾರಸ್ಯ ಶುಭೈಶ್ಚರಿತ್ರೈಃ |
ದ್ವಾತ್ರಿಂಶದತ್ಯುಜ್ಜ್ವಲಕೀರ್ತಿರಾಶೇಃ
ಸಮಾ ವ್ಯತೀಯುಃ ಕಿಲ ಶಂಕರಸ್ಯ || ೮೬

ಈ ಪ್ರಕಾರವಾಗಿ ಕಲಿಕಲ್ಮಷಹಾರಿಗಳಾದ ಶುಭಚರಿತೆಗಳಿಂದ ಆಚಾರ್ಯರು ಅತ್ಯುಜ್ಜ್ವಲಕೀರ್ತಿಶಾಲಿಗಳಾದರು. ಶಿವಾವತಾರ ಸ್ವರೂಪರಾದ ಶ್ರೀಶಂಕರರಿಗೆ(ವಯಸ್ಸು) ಮೂವತ್ತೆರಡು ವರ್ಷಗಳಾದವು!

ಭಾಷ್ಯಂ ಭೂಷ್ಯಂ ಸುಶೀಲೈರಕಲಿ ಕಲಿಮಲಧ್ವಂಸಿ ಕೈವಲ್ಯಮೂಲ್ಯಂ
ಹಂತಾಹಂತಾ ಸಮಂತಾತ್ಕುಮತಿನತಿಕೃತಾ ಖಂಡಿತಾ ಪಂಡಿತಾನಾಮ್ |
ಸದ್ಯೋ ವಿದ್ಯೋತಿತಾಸೌ ವಿಪಥವಿಮಥನೈರ್ಮುಕ್ತಿಪದ್ಯಾಽನವದ್ಯಾ
ಶ್ರೇಯೋ ಭೂಯೋ ಬುಧಾನಾಮಧಿಕತರಮಿತಃ ಶಂಕರಃ ಕಿಂಕರೋತು ||

ಸಜ್ಜನರು (ಅಧ್ಯಯನ ವ್ಯಾಖ್ಯಾನಾದಿಗಳಿಂದ) ಭೂಷಿಸಬೇಕಾದದ್ದೂ ಕಲಿಕಲ್ಮಷಧ್ವಂಸಿಯೂ ಆದ ಪ್ರಸ್ಥಾನತ್ರಯ ಭಾಷ್ಯವನ್ನು ರಚಿಸಿದ್ದಾಯಿತು. ಕೈವಲ್ಯ ಪ್ರಾಪ್ತಿಯೇ ಇದರ ಮೂಲ್ಯ! ಎಲ್ಲೆಲ್ಲಿಯೂ ಮೂರ್ಖಜನರು ಮಾಡುವ ನಮಸ್ಕಾರಗಳಿಂದ ಏರಿಮೆರೆಯುತ್ತಿದ್ದ ಪಂಡಿತಂಮನ್ಯರ ಅಹಂಕಾರವನ್ನು, ಆಹಾ, ಖಂಡಿಸಿ ಒಗೆದದ್ದಾಯಿತು. ದುರ್ಮಾರ್ಗಿಗಳನ್ನು ಮಥನಮಾಡಿ, ಮೋಕ್ಷಕ್ಕೆ ಶುದ್ಧವೂ ನೇರವೂ ಆದ ಹೆದ್ದಾರಿಯನ್ನು ಬೆಳಗಿಸಿ ತೋರಿಸಿದ್ದಾಯಿತು. ಬುದ್ಧಿ ಇರತಕ್ಕವರಿಗೆ ಇದಕ್ಕಿಂತ ಅಥವಾ ಇನ್ನೂ ಹೆಚ್ಚಾದ ಬೇರೆ ಯಾವ ಶ್ರೇಯಸ್ಸನ್ನು ಶ್ರೀಶಂಕರರು ಮಾಡಿಕೊಡಬೇಕಾಗಿದೆ?

ಹಂತಾಽಶೋಭಿ ಯಶೋಭರೈಸ್ತ್ರಿಜಗತೀಮಂದಾರಕುಂದೇಂದುಭಾ -
ಮುಕ್ತಾಹಾರಪಟೀರಹೀರವಿಹರನ್ನೀಹಾರತಾರಾನಿಭೈಃ |
ಕಾರುಣ್ಯಾಮೃತನಿರ್ಝರೈಃ ಸುಕೃತಿನಾಂ ದೈನ್ಯಾನಲಃ ಶೂನ್ಯತಾಂ
ನೀತಃ ಶಂಕರಯೋಗಿನಾ ಕಿಮಧುನಾ ಸೌರಭ್ಯಮಾರಭ್ಯತಾಮ್ || ೯೮

ಆಹಾ! ಆಚಾರ್ಯರ ಶುಭ್ರವಾದ ಯಶೋರಾಶಿಯು ಮಂದಾರದ ಹೂವಿನಂತೆ, ಮಲ್ಲಿಗೆಯಂತೆ, ಬೆಳದಿಂಗಳಿನಂತೆ, ಮುತ್ತಿನ ಸರದಂತೆ, ಶ್ರೀಗಂಧದಂತೆ, ವಜ್ರಮಣಿಯಂತೆ, ಚಲಿಸುವ ಹಿಮರಾಶಿಯಂತೆ, ತಾರಾಪುಂಜದಂತೆ ಬೆಳಗುತ್ತ ಸರ್ವತ್ರ ಹರಡಿತು. ಶ್ರೀಶಂಕರಯೋಗೀಶ್ವರರು ಪುಣ್ಯಾತ್ಮರಿಗೊದಗುವ ದೈನ್ಯವೆಂಬ ಬೆಂಕಿಯನ್ನು ಕಾರುಣ್ಯಾಮೃತದ ಬುಗ್ಗೆಗಳಿಂದ ಆರಿಸಿದರು. ಈಗ ಇನ್ನಾವ(ಸೌಜನ್ಯದ) ಕೀರ್ತಿಯನ್ನು ಅವರು ಗಳಿಸಬೇಕಾಗಿದೆ?

ಟಿಪ್ಪಣಿ:- ಸೌರಭ್ಯ = ಒಳ್ಳೆಯ ಕೀರ್ತಿ. Reputation, Glory, fame (ಆಪ್ಟೆಯವರ ಸಂಸ್ಕೃತ-ಇಂಗ್ಲಿಷ್ ಕೋಶ).

ಆಕ್ರಾಂತಾನಿ ದಿಗಂತರಾಣಿ ಯಶಸಾ ಸಾಧೀಯಸಾ ಭೂಯಸಾ
ವಿಸ್ಮೇರಾಣಿ ದಿಗಂತರಾಣಿ ರಚಿತಾನ್ಯತ್ಯದ್ಭುತೈಃ ಕ್ರೀಡಿತೈಃ |
ಭಕ್ತಾಃ ಸ್ವೇಪ್ಸಿತ ಭುಕ್ತಿಮುಕ್ತಿಕಲನೋಪಾಯೈಃ ಕೃತಾರ್ಥೀಕೃತಾ
ಭಿಕ್ಷುಕ್ಷ್ಮಾಪತಿನಾ ಕಿಮನ್ಯದಧುನಾ ಸೌಜನ್ಯಮಾತನ್ಯತಾಮ್ || ೯೯

ಶ್ರೀಶಂಕರಯತೀಶ್ವರರು ತಮ್ಮ ನಿರ್ಮಲವಾದ ವಿಪುಲಕೀರ್ತಿಯು ದಿಗ್‌ದಿಗಂತರಗಳಲ್ಲಿ ವ್ಯಾಪಿಸುವಂತೆ ಮಾಡಿದರು. ಅದ್ಭುತವಾದ ಲೀಲೆಗಳಿಂದ ಸಮಸ್ತ ದಿಕ್ಕುಗಳೂ ವಿಸ್ಮಯಗೊಳ್ಳುವಂತೆ ಆಚರಿಸಿದರು. ಭೋಗಾರ್ಥಿಗಳಾದ ಭಕ್ತರಿಗೂ ಮೋಕ್ಷಾರ್ಥಿಗಳಾದ ಭಕ್ತರಿಗೂ ಅವರವರಿಗೆ ತಕ್ಕ ಮಾರ್ಗೋಪಾಯಗಳನ್ನು ತಿಳಿಸಿ, ಸರ್ವರೂ ಕೃತಾರ್ಥರಾಗುವ ದಾರಿಯನ್ನು ತೋರಿಸಿದರು. ಆ ಮಹಾತ್ಮರು ಸಜ್ಜನೋಚಿತವಾದ ಯಾವ ಕಾರ್ಯವನ್ನೀಗ ಎಸಗಬೇಕಾಗಿದೆ?

ಟಿಪ್ಪಣಿ:- ಶುದ್ಧವಾದ ವೈದಿಕ ಕರ್ಮ ಮಾರ್ಗದಿಂದ ಭೋಗವನ್ನೂ ಜ್ಞಾನಮಾರ್ಗದಿಂದ ಮೋಕ್ಷವನ್ನೂ ಪಡೆಯಬಹುದೆಂದು ಆಚಾರ್ಯರು ಬೋಧಿಸಿದರು. ಸುಜನಸ್ಯ ಕರ್ಮ = ಸೌಜನ್ಯಮ್. ಗುಣವಚನ ಬ್ರಾಹ್ಮಣಾದಿಭ್ಯಃ ಕರ್ಮಣಿ ಚ - ಎಂಬ ಸೂತ್ರದಿಂದ ಕರ್ಮಾರ್ಥದಲ್ಲಿ ಷ್ಯಞ್ ಪ್ರತ್ಯಯ.

ಪಾರಿಕಾಂಕ್ಷೀಶ್ವರೋಽಪ್ಯಾಪದುದ್ಧಾರಕಂ
ಸೇವಮಾನಾತುಲಸ್ವಸ್ತಿವಿಸ್ತಾರಕಮ್ ।
ಪಾಪದಾವಾನಲಾತಾಪಸಂಹಾರಕಂ
ಯೋಗಿ ವೃಂದಾಧಿಪಃ ಪ್ರಾಪ ಕೇದಾರಕಮ್ ॥ ೧೦೦

ಆಮೇಲೆ ತಪಸ್ವಿಗಳಿಗೆ ಈಶ್ವರರೂ ಯೋಗಿವೃಂದಕ್ಕೆ ಅಧಿಪತಿಗಳೂ ಆದ ಶ್ರೀಶಂಕರಾಚಾರ್ಯರು ಕೇದಾರಕ್ಕೆ ಹೋದರು. ಆ ಕ್ಷೇತ್ರವು ಸೇವಿಸುವ ಭಕ್ತರಿಗೆ ಅಪಾರವಾದ ಶುಭವನ್ನು ಕೊಡತಕ್ಕದ್ದು. ಪಾಪವೆಂಬ ಕಾಳ್ಗಿಚ್ಚಿನ ತಾಪವನ್ನು ಪರಿಹರಿಸತಕ್ಕದ್ದು.

ಟಿಪ್ಪಣಿ:- ಪಾರಿಕಾಂಕ್ಷೀ = ತಪಸ್ವಿ.

ತತ್ರಾತಿಶೀತಾರ್ದಿತಶಿಷ್ಯಸಂಘ-
ಸಂರಕ್ಷಣಾಯಾತುಲಿತ ಪ್ರಭಾವಃ ।
ತಪ್ತೋದಕಂ ಪ್ರಾರ್ಥಯತೇ ಸ್ಮ ಚಂದ್ರ-
ಕಲಾಧರಾತ್ತೀರ್ಥಕರ ಪ್ರಧಾನಃ ॥ ೧೦೧

ಅಲ್ಲಿ ಬಹಳ ಚಳಿ ಇದ್ದುದರಿಂದ ಶಿಷ್ಯರು ಕಷ್ಟಕ್ಕೀಡಾದರು. ಅವರ ಸಂರಕ್ಷಣೆಗಾಗಿ ತೀರ್ಥಕರರಲ್ಲಿ ಪ್ರಧಾನರೂ ಅಪಾರ ಮಹಿಮಶಾಲಿಗಳೂ ಆದ ಆಚಾರ್ಯರು ಬಿಸಿನೀರಿಗಾಗಿ ಶ್ರೀಚಂದ್ರಮೌಳೀಶ್ವರನನ್ನು ಪ್ರಾರ್ಥಿಸಿಕೊಂಡರು.

ಕರ್ಮಂದಿವೃಂದಪತಿನಾ ಗಿರಿಶೋಽರ್ಥಿತಃ ಸನ್
ಸಂತಪ್ತವಾರಿ ಲಹರೀಂ ಸ್ವಪದಾರವಿಂದಾತ್ ।
ಪ್ರಾವರ್ತಯತ್ಪೃಥಯತೇ ಯತಿನಾಥಕೀರ್ತಿಂ
ಯಾಽದ್ಯಾಪಿ ತತ್ರ ಸಮುದಂಚತಿ ತಪ್ತತೋಯಾ ॥ ೧೦೨

ಯತೀಶ್ವರರಾದ ಶ್ರೀಶಂಕರಾಚಾರ್ಯರು ಹಾಗೆ ಪ್ರಾರ್ಥಿಸಿಕೊಳ್ಳಲಾಗಿ ಶ್ರೀಚಂದ್ರಮೌಳೀಶ್ವರನು ತನ್ನ ಪಾದಕಮಲದಿಂದ ಬಿಸಿನೀರಿನ ಪ್ರವಾಹವನ್ನು ಹರಿಸಿದನು. ಅದು ಈಗಲೂ ಯತೀಶ್ವರರ ಕೀರ್ತಿಯನ್ನು ಬಿತ್ತರಿಸುತ್ತಿದೆ. ಈಗಲೂ ಬಿಸಿನೀರಿನ ಬುಗ್ಗೆ ಉಕ್ಕುತ್ತಲೇ ಇದೆ!

ಟಿಪ್ಪಣಿ:- ಶ್ಲೋಕದಲ್ಲಿ 'ಪ್ರಥಯತೀ' ಎಂದಿರುವ ಮುದ್ರಿತ ಪಾಠವು ಅಶುದ್ಧ. ಪ್ರಥಯಂತೀ ಎಂದು ತಿದ್ದಿದರೆ ಛಂದೋಭಂಗ ವಾಗುತ್ತದೆಯಾದ್ದರಿಂದ ಪ್ರಥಯತೇ= ಎಂದು ತಿದ್ದಿಕೊಳ್ಳಲಾಗಿದೆ.

ಇತಿ ಕೃತ ಸುರಕಾರ್ಯಂ ನೇತುಮಾಜಗ್ಮುರೇನಂ
ರಜತಶಿಖರಶೃಂಗಂ ತುಂಗಮೀಶಾವತಾರಮ್ |
ವಿಧಿಶತಮಖಚಂದ್ರೋಪೇಂದ್ರವಾಯ್ವಗ್ನಿಪೂರ್ವಾಃ
ಸುರನಿಕರವರೇಣ್ಯಾಃ ಸರ್ಷಿಸಂಘಾಃ ಸಸಿದ್ಧಾಃ || ೧೦೨

ಈ ಪ್ರಕಾರದಲ್ಲಿ ಈಶ್ವರಾವತಾರರಾದ ಶ್ರೀಶಂಕರರು ದೇವಕಾರ್ಯವನ್ನು ಪೂರೈಸಿದರು. ಅದು ಪೂರ್ಣವಾದ್ದರಿಂದ ಬ್ರಹ್ಮ, ಇಂದ್ರ, ಚಂದ್ರ, ವಿಷ್ಣು, ವಾಯು, ಅಗ್ನಿ - ಮೊದಲಾದ ದೇವ ಮುಖ್ಯರು ಅವರನ್ನು ಕೈಲಾಸಪರ್ವತದ ಶಿಖರಕ್ಕೆ ಕರೆದೊಯ್ಯಲು ಋಷಿಗಳಿಂದಲೂ ಸಿದ್ಧಪುರುಷರಿಂದಲೂ ಸಮೇತರಾಗಿ ಆಗಮಿಸಿದರು.

ವಿದ್ಯುದ್ವಲ್ಲೀನಿಯುತಸಮುದಾರಬ್ಧಯುದ್ಧೈರ್ವಿಮಾನೈಃ
ಸಂಖ್ಯಾತೀತೈಃ ಸಪದಿ ಗಗನಾಭೋಗಮಾಚ್ಛಾದಯಂತಃ |
ಸ್ತುತ್ವಾ ದೇವಂ ತ್ರಿಪುರಮಥನಂ ತೇ ಯತೀಶಾನವೇಷಂ
ಮಂದಾರೋತ್ಥೈಃ ಕುಸುಮನಿಚಯೈರಭ್ಯವನ್ನರ್ಚಯಂತಃ || ೧೦೪

ಲಕ್ಷಾಂತರಮಿಂಚಿನ ಬಳ್ಳಿಗಳೊಡನೆ ಹೋರಾಡಬಲ್ಲ - ಎಂದರೆ - ಮಿಂಚುಗಳಂತೆ ಹೊಳೆಯುವ ಸಂಖ್ಯಾತೀತ ದೇವವಿಮಾನಗಳು ಒಡನೆಯೇ ನೆರೆದು ಆಕಾಶವನ್ನು ಮುಚ್ಚಿದವು. ವಿಮಾನಗಳಲ್ಲಿ ಬಂದ ಆ ಎಲ್ಲದೇವತೆಗಳೂ ಯತೀಶ್ವರ ವೇಷದಲ್ಲಿದ್ದ ತ್ರಿಪುರಸಂಹಾರಿಯಾದ ಸಾಕ್ಷಾತ್ ಪರಶಿವನನ್ನು ಸ್ತೋತ್ರಮಾಡಿದರು. ಮಂದಾರಪುಷ್ಪಗಳಿಂದ ಪೂಜಿಸುತ್ತ ಇಂತೆಂದರು.

ಭವಾನಾದ್ಯೋ ದೇವಃ ಕವಲಿತವಿಷಃ ಕಾಮದಹನಃ
ಪುರಾರಾತಿರ್ವಿಶ್ವಪ್ರಭವಲಯಹೇತುಸ್ತ್ರಿನಯನಃ |
ಯದರ್ಥಂ ಗಾಂ ಪ್ರಾಪ್ತೋ ಭವಮಥನ ವೃತ್ತಂ ತದಧುನಾ
ತದಾಯಾಹಿ ಸ್ವರ್ಗಂ ಸಪದಿ ಗಿರಿಶಾಸ್ಮತ್ಪ್ರಿಯಕೃತೇ || ೧೦೫

"ಹೇ ಸ್ವಾಮಿ, ನೀನು ಸರ್ವರಿಗೂ ಆದಿಯಾದ ಮಹಾದೇವನಾಗಿದ್ದೀಯೆ. (ಜಗದ್ರಕ್ಷಣೆಗಾಗಿ) ಹಾಲಾಹಲವಿಷವನ್ನು ಕುಡಿದಿದ್ದೀಯೆ. ಮನ್ಮಥನನ್ನು ಸುಟ್ಟು ಬೂದಿಮಾಡಿದ್ದೀಯೆ. ತ್ರಿಪುರಾಂತಕನೂ ವಿಶ್ವದ ಉತ್ಪತ್ತಿಲಯಗಳಿಗೆ ಕಾರಣನೂ ಆದ ತ್ರ್ಯಂಬಕನು ನೀನು. ಯಾವ ಕಾರ್ಯಕ್ಕಾಗಿ ನೀನು ಭೂಮಿಯಲ್ಲಿವತರಿಸಿದೆಯೋ, ಹೇ ಸಂಸಾರತಾಪನಾಶಕ, ಆ ಕಾರ್ಯವು ಈಗ ನೆರವೇರಿದೆ. ಆದ್ದರಿಂದ, ಹೇ ಗಿರಿಶ, ಶೀಘ್ರವಾಗಿ ಸ್ವರ್ಗಕ್ಕೆ - ಕೈಲಾಸಕ್ಕೆ ಆಗಮಿಸು. ಆದರಿಂದ ನಮಗೆ ಸಂತೋಷವಾಗುತ್ತದೆ" ಎಂದರು.

ಉನ್ಮೀಲದ್ವಿನಯಪ್ರಧಾನಸುಮನೋವಾಕ್ಯಾವಸಾನೇ ಮಹಾ -
ದೇವೇ ಸಂಭೃತಸಂಭ್ರಮೇ ನಿಜಪದಂ ಗಂತುಂ ಮನಃ ಕುರ್ವತಿ |
ಶೈಲಾದಿಃ ಪ್ರಮಥೈಃ ಪರಿಷ್ಕೃತವಪುಸ್ತಸ್ಥೌ ಪುರಸ್ತತ್‍ಕ್ಷಣಾ -
ದುಕ್ಷಾ ಶಾರದವಾರಿದುಗ್ಧವರಟಾಹಂಕಾರಹುಂಕಾರಕೃತ್ || ೧೦೬

ಈ ರೀತಿಯಲ್ಲಿ ದೇವತೆಗಳು ಅತ್ಯಂತವಿನಯದಿಂದ ನುಡಿದಮೇಲೆ ಮಹಾದೇವನಾದ ಆ ಪರಶಿವನು ಸಂಭ್ರಮಗೊಂಡು ತನ್ನ ಸ್ಥಾನಕ್ಕೆ ತೆರಳಲು ಮನಸ್ಸು ಮಾಡಿದನು. ಪ್ರಮಥಗಣಗಳಿಂದ ಅಲಂಕೃತವಾದ ನಂದಿಯೆಂಬ ವೃಷಭವು ಒಂದು ಕ್ಷಣದಲ್ಲಿ ಎದುರಿಗೆ ಬಂದು ನಿಂತಿತು. ಆ ವೃಷಭವು ಶರತ್ಕಾಲದ ಜಲ, ಕ್ಷೀರ, ಹಂಸ - ಇವುಗಳ ಅಹಂಕಾರವನ್ನು ಹುಂಕಾರದಿಂದ ಓಡಿಸುವಷ್ಟು ಸ್ವಚ್ಛವೂ ಬಿಳಿಯದೂ ಆಗಿತ್ತು!

ಇಂದ್ರೋಪೇಂದ್ರಪ್ರಧಾನೈಸ್ತ್ರಿದಶಪರಿವೃಢೈಃ ಸ್ತೂಯಮಾನಃ ಪ್ರಸೂನೈ -
ರ್ದಿವ್ಯೈರಭ್ಯರ್ಚ್ಯಮಾನಃ ಸರಸಿರುಹಭುವಾ ದತ್ತಹಸ್ತಾವಲಂಬಃ |
ಆರುಹ್ಯೋಕ್ಷಾಣಮಗ್ರ್ಯಂ ಪ್ರಕಟಿತಸುಜಟಾಜೂಟಚಂದ್ರಾವತಂಸಃ
ಶೃಣ್ವನ್ನಾಲೋಕಶಬ್ದಂ ಸಮುದಿತಮೃಷಿಭಿರ್ಧಾಮ ನೈಜಂ ಪ್ರತಸ್ಥೇ ||

ದೇವೇಂದ್ರ, ವಿಷ್ಣು - ಮೊದಲಾದ ದೇವೋತ್ತಮರು ಸ್ತುತಿಸುತ್ತಿರಲು, ದೇವಲೋಕದ ಹೂಗಳಿಂದ ಪೂಜಿಸುತ್ತಿರಲು, ಬ್ರಹ್ಮನು (ಗೌರವ ಬುದ್ಧಿಯಿಂದ) ಕೈಹಿಡಿದಿರಲು ಶ್ರೀಶಂಕರಾಚಾರ್ಯರು ವೃಷಭೋತ್ತಮದ ಮೇಲೆ ಹತ್ತಿ ಕುಳಿತರು. ಒಡನೆಯೇ ಅವರ ಶಿರಸ್ಸಿನಲ್ಲಿ ಜಟಾಜೂಟವು ಮೂಡಿತು! ಮೌಳಿಯಲ್ಲಿ ಚಂದ್ರನು ಕಾಣಿಸಿಕೊಂಡನು! ಋಷಿಗಳು ಘೋಷಿಸುತ್ತಿದ್ದ 'ಜಯ ಜಯ!' ಶಬ್ದವನ್ನು ಕೇಳುತ್ತ ಪರಶಿವನು ತನ್ನ ನಿಜಧಾಮಕ್ಕೆ ತೆರಳಿದನು.

ಇತಿ ಶ್ರೀಮಾಧವೀಯೇ ತಚ್ಛಾರದಾಪೀಠವಾಸಗಃ |
ಸಂಕ್ಷೇಪಶಂಕರಜಯೇ ಸರ್ಗಃ ಪೂರ್ಣೋಽಪಿ ಷೋಡಶಃ ||

ಇಲ್ಲಿಗೆ ಮಾಧವೀಯ ಶ್ರೀಸಂಕ್ಷೇಪ ಶಂಕರವಿಜಯದಲ್ಲಿ ಶ್ರೀಶಾರದಾಪೀಠವಾಸವನ್ನು ವರ್ಣಿಸುವ ಹದಿನಾರನೆಯ ಸರ್ಗವು ಸಮಾಪ್ತವಾಯಿತು.

ಇತಿ ಶ್ರೀಮದ್ವಿದ್ಯಾರಣ್ಯ ವಿರಚಿತಃ ಶ್ರೀಮಚ್ಛಂಕರದಿಗ್ವಿಜಯಃ ಸಮಾಪ್ತಃ ||

✤ ✤ ✤

# ಅನುಬಂಧಗಳು

## ೧

### ಶ್ರೀ ಶಂಕರಭಗವತ್ಪಾದರ ಸೂಕ್ತಿಗಳು

#### ವೇದ - ಉಪನಿಷತ್

೧ ನಿಯತರಚನಾವತೋ ವಿದ್ಯಮಾನಸ್ಯೈವ ವೇದಸ್ಯ ಅಭಿವ್ಯಕ್ತಿಃ, ಪುರುಷನಿಃಶ್ವಾಸವತ್, ನ ಚ ಪುರುಷಬುದ್ಧಿಪ್ರಯತ್ನಪೂರ್ವಕಃ ಸಃ | ಅತಃ ಪ್ರಮಾಣ ನಿರಪೇಕ್ಷ ಏವ ಶಾಸ್ತ್ರೇ |

-ಬೃಹ. ೨-೪-೧೦

ಆನುಪೂರ್ವೀ ವಿಶಿಷ್ಟವಾಗಿ ಮೊದಲೇ ಇದ್ದ ವೇದವು, ಮನುಷ್ಯನ ನಿಃಶ್ವಾಸದಂತೆ ಪರಮಾತ್ಮನಿಂದ ಅಭಿವ್ಯಕ್ತವಾಗಿದೆ. ಅದು ಯಾವನೊಬ್ಬನ ಬುದ್ಧಿಪ್ರಯತ್ನಗಳಿಂದ ರಚಿತವಾದ್ದಲ್ಲ. ಆದ್ದರಿಂದ ವೇದವು ತಾನು ಭೋಧಿಸುವ ವಿಷಯದಲ್ಲಿ ಅನ್ಯನಿರಪೇಕ್ಷವಾಗಿ ಸ್ವತಂತ್ರಪ್ರಮಾಣವಾಗಿರುತ್ತದೆ.

೨ ಶ್ರುತಿಶ್ಚ ನಃ ಪ್ರಮಾಣಮತೀಂದ್ರಿಯಾರ್ಥಜ್ಞಾನೋತ್ಪತ್ತೌ |

-ಸೂ. ಭಾ. ೨-೩-೧

ಇಂದ್ರಿಯಗೋಚರವಲ್ಲದ ವಸ್ತುವಿನ ಜ್ಞಾನಕ್ಕೆ ಶ್ರುತಿಯೇ ನಮಗೆ ಪ್ರಮಾಣವು.

೩ ಬ್ರಹ್ಮೈವೈಕಂ ಪರಮಾರ್ಥಸತ್ಯಮಿತಿ ವೇದಾನು ಶಾಸನಮ್|

-ಮುಂ.ಭಾ. ೩-೧-೧೨

ಪರಮಾರ್ಥವಾಗಿ ಸತ್ಯವಾದದ್ದು ಬ್ರಹ್ಮವೆಂಬುದೊಂದೇ ಸರಿ ಎಂದು ವೇದದ ಉಪದೇಶವಾಗಿದೆ.

#### ಶಾಸ್ತ್ರ

೪ ಜ್ಞಾಪಕಂ ಹಿ ಶಾಸ್ತ್ರಂ ನ ಕಾರಕಮಿತಿ ಸ್ಥಿತಿಃ |

-ಬೃಹ.ಭಾ. ೧-೪-೧೦

ಶಾಸ್ತ್ರವು ವಸ್ತುಜ್ಞಾನವನ್ನುಂಟುಮಾಡುತ್ತದೆಯೇ ಹೊರತು ಕಾರಕವಲ್ಲ. - ಎಂದರೆ ಹೀಗೆ ಮಾಡಬೇಕು-ಎಂದು ಮಾಡಿಸುವುದಿಲ್ಲ.

೫ ಅಯಂ ಧರ್ಮೋಽಯಮಧರ್ಮ ಇತಿ ಶಾಸ್ತ್ರಮೇವ ವಿಜ್ಞಾನೇ ಕಾರಣಮ್ |

ಸೂ.ಭಾ. ೩-೧-೨೫

ಇದು ಧರ್ಮ ಇದು ಅಧರ್ಮ -ಎಂದು ತಿಳಿಯುವುದಕ್ಕೆ ಶಾಸ್ತ್ರವೇ ಸಾಧನ.

## ಪರಬ್ರಹ್ಮ

೬ ಶ್ರುತ್ಯವಗಾಹ್ಯಮೇವೇದಮತಿಗಂಭೀರಂ ಬ್ರಹ್ಮ, ನ ತರ್ಕಾವಗಾಹ್ಯಮ್|

-ಸೂ.ಭಾ.೨-೧-೩೧

ಅತಿಗಂಭೀರವಾದ ಈ ಬ್ರಹ್ಮವು ಶ್ರುತಿಯಿಂದ ಮಾತ್ರ ಗೊತ್ತಾಗತಕ್ಕದ್ದು. ಇದು ತರ್ಕಕ್ಕೆ ನಿಲುಕತಕ್ಕದ್ದಲ್ಲ.

೭ ತದ್ಬ್ರಹ್ಮ ಸರ್ವಜ್ಞಂ ಸರ್ವಶಕ್ತಂ ಜಗದುತ್ಪತ್ತಿಸ್ಥಿತಿಲಯಕಾರಣಂ
ವೇದಾಂತಶಾಸ್ತ್ರಾದೇವಾವಗಮ್ಯತೇ |

-ಸೂ.ಭಾ. ೧-೪-೪

ಸರ್ವಜ್ಞವೂ ಸರ್ವಶಕ್ತವೂ ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣವೂ ಆದ ಆ ಬ್ರಹ್ಮವಸ್ತು ವೇದಾಂತಶಾಸ್ತ್ರದಿಂದ ಮಾತ್ರ ತಿಳಿಯಲ್ಪಡುತ್ತದೆ.

೮ ನಿರ್ಗುಣಮಪಿ ಸದ್ ಬ್ರಹ್ಮ ನಾಮರೂಪಗತಗುಣೈಃ ಸಗುಣಮುಪಾಸನಾರ್ಥಂ
ತತ್ರ ತತ್ರ ಉಪದಿಶ್ಯತೇ|ಸರ್ವಗತಸ್ಯಾಪಿ ಬ್ರಹ್ಮಣಃ ಉಪಲಬ್ಧ್ಯರ್ಥಂ
ಸ್ಥಾನವಿಶೇಷೋ ನ ವಿರುಧ್ಯತೇ, ಶಾಲಗ್ರಾಮ ಇವ ವಿಷ್ಣೋಃ|

-ಸೂ. ಭಾ. ೧-೨-೧೪

ಬ್ರಹ್ಮವು ನಿರ್ಗುಣವಾಗಿದ್ದರೂ ನಾಮರೂಪಸಂಬಂಧಿಗಳಾದ ಗುಣಗಳಿಂದ ಸಗುಣವನ್ನಾಗಿ ವರ್ಣಿಸಿ ಅಲ್ಲಲ್ಲಿ ಉಪದೇಶಿಸಿರುವುದುಂಟು. ಅದು ಉಪಾಸನೆಗೋಸ್ಕರ. ಬ್ರಹ್ಮವು ಸರ್ವತ್ರ ಇದ್ದರೂ ಉಪಾಸಕನ ಜ್ಞಾನಕ್ಕೆ ಗೋಚರವಾಗಲೆಂದು ಅದಕ್ಕೊಂದು ಸ್ಥಾನವಿಶೇಷವನ್ನು ಹೇಳಿರುವುದು ವಿರುದ್ಧವೇನೂ ಅಲ್ಲ. ಸಾಲಗ್ರಾಮವು ವಿಷ್ಣುವಿನ ಸ್ಥಾನವೆಂದು ಹೇಳುವುದಿಲ್ಲವೆ? ಹಾಗೆ

೯ ನಿತ್ಯನಿರತಿಶಯ ಜ್ಞಾನಶಕ್ತ್ಯುಪಾಧಿರಾತ್ಮಾ ಅಂತರ್ಯಾಮೀಈಶ್ವರ ಉಚ್ಯತೇ|

-ಬೃಹ. ೩-೮-೧೨

ನಿತ್ಯವೂ ನಿರತಿಶಯವೂ ಆದ ಜ್ಞಾನಶಕ್ತಿಯೆಂಬ (ಅದಕ್ಕೆ ಕಾರಣವಾದ ಮಾಯಾ ಶಕ್ತಿಯೆಂಬ)ಉಪಾಧಿಯಿಂದ ಸಹಿತನಾದ ಆತ್ಮನು ಅಂತ್ಯರ್ಯಾಮಿಯೆಂದೂ ಈಶ್ವರನೆಂದೂ (ದೇವರೆಂದೂ)ಉಕ್ತನಾಗಿದ್ದಾನೆ.

೧೦ ನ ಹಿ ಈಶ್ವರದ್ವಯಂ ಸಂಭವತಿ| ಅನೇಕೇಶ್ವರತ್ವೇ ವ್ಯವಹಾರಾನುಪಪತ್ತೇಃ|

-ಗೀತಾ ೧೧-೪೩

ಇಬ್ಬರು ಈಶ್ವರರಿರುವುದು ಆಗತಕ್ಕದ್ದಲ್ಲ. ಈಶ್ವರರು ಅನೇಕರಾದರೆ (ಕ್ರಮಬದ್ಧವಾದ)ವ್ಯವಹಾರವೇ ನಡೆಯದೆ ಹೋದೀತು.

## ಆತ್ಮಸ್ವರೂಪ

೧೧ ನ ಚ ಆತ್ಮನಃ ಸಂಸಾರಿತ್ವಮ್ ,ಅವಿದ್ಯಾಧ್ಯಸ್ತತ್ವಾತ್ ಆತ್ಮನಿ ಸಂಸಾರಸ್ಯ|

-ಛಾಂ.ಭಾ. ೮-೧೨-೧

ಆತ್ಮನಿಗೆ ಸಂಸಾರವೆಂಬುದಿಲ್ಲ. ಅವಿದ್ಯೆಯಿಂದ ಸಂಸಾರವು ಅವನಲ್ಲಿ ಆರೋಪಿತವಾಗಿದೆ.

೧೨ ಆತ್ಮನಶ್ಚ ಪ್ರತ್ಯಾಖ್ಯಾತುಮಶಕ್ಯತ್ವಾತ್|ಯ ಏವ ನಿರಾಕರ್ತಾ ತಸ್ಯೈವ ಆತ್ಮತ್ವಾತ್|

-ಸೂ.ಭಾ. ೧-೧-೪

ಆತ್ಮನು ಇಲ್ಲವೆಂದು ಆತನನ್ನು ಪ್ರತ್ಯಾಖ್ಯಾನಮಾಡುವುದಕ್ಕಾಗುವುದಿಲ್ಲ. ಏಕೆಂದರೆ, 'ಇಲ್ಲ'ಎಂದು ಯಾವನು ಹೇಳುತ್ತಾನೋ ಅವನೇ ಆತ್ಮನಾಗಿರುತ್ತಾನೆ.

೧೩ ಇಷ್ಯತೇ ಚ ಸರ್ವೋಪನಿಷದಾಂ ಸರ್ವಾತ್ಮೈಕ್ಯಪ್ರತಿಪಾದಕತ್ವಮ್|

-ಮಾಂಡೂಕ್ಯ ಭಾ. ೩

ಎಲ್ಲರ ಆತ್ಮನೂ ಒಬ್ಬನೇ ಎಂಬುದಾಗಿ ಸಕಲೋಪನಿಷತ್ತುಗಳೂ ಪ್ರತಿಪಾದಿಸುತ್ತವೆ ಎಂಬುದು ನಮಗೆ ಸಂಮತವಾಗಿದೆ.

## ಸೃಷ್ಟಿ-ಜಗತ್ತು-ಮಿಥ್ಯಾ

೧೪ ನ ಚೇಯಂ ಪರಮಾರ್ಥವಿಷಯಾ ಸೃಷ್ಟಿಶ್ರುತಿಃ |ಅವಿದ್ಯಾಕಲ್ಪಿತನಾಮರೂಪ-ಗೋಚರತ್ವಾತ್ |ಬ್ರಹ್ಮಾತ್ಮಭಾವಪ್ರತಿಪಾದನ ಪರತ್ವಾಚ್ಚ |

-ಸೂ.ಭಾ. ೨-೧-೩೩

'ಈಶ್ವರನು ಜಗತ್ತನ್ನು ಸೃಷ್ಟಿಸಿದನು' ಎಂಬ ಶ್ರುತಿವಾಕ್ಯವು ನಿಜವಾದ ಸೃಷ್ಟಿಯನ್ನು ವಿಷಯೀಕರಿಸಿ ಹೊರಟದ್ದಲ್ಲ. ಏಕೆಂದರೆ, ಈ ಸೃಷ್ಟಿಯು ಅವಿದ್ಯಾಕಲ್ಪಿತನಾಮರೂಪಗಳಿಗೆ ಸಂಬಂಧಿಸಿದ್ದು. ಮತ್ತು ಇದೆಲ್ಲವೂ ಬ್ರಹ್ಮಸ್ವರೂಪವೇ ಎಂದು ತಿಳಿಸುವುದಕ್ಕಾಗಿ ಅದು ಹೊರಟಿದೆ.

೧೫ ಸ ಚ ಭಗವಾನ್ ಜ್ಞಾನೈಶ್ವರ್ಯಶಕ್ತಿ -ಬಲ-ವೀರ್ಯತೇಜೋಭಿಃ ಸದಾ ಸಂಪನ್ನಃ ತ್ರಿಗುಣಾತ್ಮಿಕಾಂ ವೈಷ್ಣವೀಂ ಸ್ವಾಂ ಮಾಯಾಂ ಮೂಲಪ್ರಕೃತಿಂ ವಶೀಕೃತ್ಯ ಅಜೋಽವ್ಯಯೋ ಭೂತಾನಾಮೀಶ್ವರೋ.ನಿತ್ಯಶುದ್ಧ -ಬುದ್ಧ-ಮುಕ್ತ

ಸ್ವಭಾವೋಽಪಿ ಸನ್ ಸ್ವಮಾಯಯಾ ದೇಹವಾನಿವ ಜಾತ ಇವ ಚ ಲೋಕಾನುಗ್ರಹಂ ಕುರ್ವನ್ ಲಕ್ಷ್ಯತೇ|

-ಸೂ. ಭಾ. ಉಪೋದ್ಘಾತ

ಜ್ಞಾನ, ಐಶ್ವರ್ಯ ಶಕ್ತಿ, ಬಲ, ವೀರ್ಯ, ತೇಜಸ್ಸುಗಳಿಂದ ಸದಾ ಕೂಡಿದವನೇ ಆಗಿರುವ ಆ ಭಗವಂತನು, ತ್ರಿಗುಣಾತ್ಮಕವಾದ ತನ್ನ ವೈಷ್ಣವೀಮಾಯೆಯೆಂಬ ಮೂಲಪ್ರಕೃತಿಯನ್ನು ವಶಪಡಿಸಿಕೊಂಡು, ತಾನು ಸ್ವತಃ ಜನ್ಮರಹಿತನೂ ನಾಶರಹಿತನೂ ಪ್ರಾಣಿಗಳಿಗೆ ಅಧೀಶ್ವರನೂ ನಿತ್ಯಶುದ್ಧಬುದ್ಧಮುಕ್ತಸ್ವಭಾವದವನೂ ಆಗಿದ್ದರೂ ತನ್ನ ಮಾಯೆಯಿಂದ ದೇಹಧಾರಿಯಂತೆಯೂ ಹುಟ್ಟಿದವನಂತೆಯೂ ಲೋಕಾನುಗ್ರಹವನ್ನು ಮಾಡತಕ್ಕವನಾಗಿ ಕಂಡುಬರುತ್ತಾನೆ.

ಟಿಪ್ಪಣಿ : ಐಶ್ವರ್ಯ =ಸ್ವಾತಂತ್ರ್ಯ, ಶಕ್ತಿ =ನಿರ್ಮಾಣ ಸಾಮರ್ಥ್ಯ, ಬಲ=ಆಯಾಸ ವಿಲ್ಲದೆ ಜಗತ್ತನ್ನು ಸೃಷ್ಟಿಸಿ ಕಾಪಾಡುವುದು. ವೀರ್ಯ =ಪರಾಕ್ರಮ. ತೇಜಸ್ಸು =ಇನ್ನೊಂದು ಸಹಕಾರಿಸಾಮಗ್ರಿ ಇಲ್ಲದೆ ಸೃಷ್ಟಿಮಾಡುವ ಯೋಗ್ಯತೆ. ಮೂಲಪ್ರಕೃತಿ =ಮಾಯೆ.

## ತತ್ತ್ವಜ್ಞಾನದಲ್ಲಿ ಅಧಿಕಾರ

೧೬ ವಿರಕ್ತಸ್ಯ ಹಿ ಸಂಸಾರಾತ್ ಭಗವತ್ತತ್ತ್ವಜ್ಞಾನೇ ಅಧಿಕಾರಃ ನಾನ್ಯಸ್ಯ |

-ಗೀತಾ. ಭಾ. ೧೫-೧

ಸಂಸಾರದಲ್ಲಿ ವಿರಕ್ತನಾದವನಿಗೆ ಮಾತ್ರ ಭಗವಂತನ ತತ್ತ್ವಜ್ಞಾನದಲ್ಲಿ ಅಧಿಕಾರವಿದೆಯೇ ಹೊರತು ಬೇರೆ ಯಾರಿಗೂ ಇಲ್ಲ.

೧೭ ಸರ್ವಾನರ್ಥಮೂಲಮುಕ್ತಂ ವಿಷಯಾಭಿಧ್ಯಾನಮ್ |

-ಗೀತಾ. ಭಾ. ೨-೬೪

ಎಲ್ಲ ಅನರ್ಥಗಳಿಗೂ ಮೂಲವಾದದ್ದು (ಭೋಗಕ್ಕೆ ಬೇಕಾದ)ವಿಷಯಗಳನ್ನು ಆಸಕ್ತಿಯಿಂದ ಚಿಂತಿಸುವುದೇ ಆಗಿದೆ.

## ತತ್ತ್ವಜ್ಞಾನ

೧೮ ಅದ್ವೈತಜ್ಞಾನಾವಸಾನತ್ವಾತ್ ಶಾಸ್ತ್ರಶಿಷ್ಯಶಾಸನಾದಿ ಭೇದಜ್ಞಾನಸ್ಯ |

-ಬೃಹ.ಭಾ. ೫-೧-೧

ಶಾಸ್ತ್ರ, ಶಿಷ್ಯ, ಶಾಸನ ಮುಂತಾದ ದ್ವೈತಭೇದವು ಅದ್ವೈತಜ್ಞಾನದಲ್ಲಿ ಕೊನೆಗಾಣುತ್ತದೆ.

೧೯ ಏಕರೂಪೇಣ ವ್ಯವಸ್ಥಿತೋ ಯೋಽರ್ಥಃ ಸ ಪರಮಾರ್ಥಃ |ಲೋಕೇ ತದ್ವಿಷಯಂ ಜ್ಞಾನಂ ಸಮ್ಯಗ್ಜ್ಞಾನಮುಚ್ಯತೇ |

-ಸೂ. ಭಾ. ೨-೧-೧೧

ಯಾವ ಬದಲಾವಣೆಯೂ ಆಗದೆ ಏಕರೂಪದಲ್ಲಿ ಯಾವುದಿರುತ್ತದೆಯೋ ಅದು ಪರಮಾರ್ಥ. ಅಂತಹ ಪರಮಾರ್ಥದ ಜ್ಞಾನಕ್ಕೆ ಲೋಕದಲ್ಲಿ ಸಮ್ಯಗ್‌ಜ್ಞಾನ ಎಂದು ಹೆಸರು.

## ಉಪಾಸನೆ -ಭಕ್ತಿ

೨೦ ಏಕಮಪಿ ಹಿ ಬ್ರಹ್ಮ ವಿಭೂತಿಭೇದೈರನೇಕಧೋಪಾಸ್ಯತ ಇತಿ ಸ್ಥಿತಿಃ |

-ಸೂ. ಭಾ. ೩-೩-೨೩

ಬ್ರಹ್ಮವು ಒಂದೇ ಆಗಿದ್ದರೂ ತನ್ನ ವಿಭೂತಿಭೇದದಿಂದ ಅನೇಕ ಪ್ರಕಾರವಾಗಿ (ಬೇರೆ ಬೇರೆ ದೇವತಾಸ್ವರೂಪವಾಗಿ)ಉಪಾಸ್ಯವಾಗಿರುತ್ತದೆ -ಎನ್ನುವುದೇ ವಸ್ತುಸ್ಥಿತಿ.

೨೧ ಉಪಾಸನಂ ಚ ಯಥಾ ಶಾಸ್ತ್ರಂ ತುಲ್ಯ ಪ್ರತ್ಯಯ ಸಂತತಿಃ |

-ತೈತ್ತಿರೀಯ ಭಾ. ೧-೩

ಶಾಸ್ತ್ರೋಕ್ತವಾದ ವಿಧಾನವನ್ನನುಸರಿಸಿದ ಏಕಾಕಾರವಾದ ಜ್ಞಾನಧಾರೆಯು ಉಪಾಸನೆ ಎನಿಸುತ್ತದೆ. (ಧ್ಯಾನವೆಂದರೂ ಇದೇ.)

೨೨ ಏವಂ ಭಗವತಃ ಸತ್ಯಪ್ರತಿಜ್ಞಾತ್ವಂ ಬುದ್ಧ್ವಾ ಭಗವದ್ಭಕ್ತೇರವಶ್ಯಂಭಾವಿ
ಮೋಕ್ಷಫಲಮವಧಾರ್ಯ ಭಗವಚ್ಛರಣೈಕಪರಾಯಣೋ ಭವೇದಿತಿ ವಾಕ್ಯಾರ್ಥಃ|

-ಗೀತಾ ೧೮-೬೫

ಈ ರೀತಿಯಾಗಿ ಭಗವಂತನು ಸತ್ಯಪ್ರತಿಜ್ಞನೆಂದು ನಿಶ್ಚಯಿಸಿಕೊಂಡು, ಭಗವದ್ಭಕ್ತಿಗೆ ಮೋಕ್ಷವು ಫಲವಾಗಿ ಅವಶ್ಯ ದೊರೆಯುತ್ತದೆಯೆಂದು ತಿಳಿದು, ಭಗವಂತನಿಗೇ ಪೂರ್ತಿಯಾಗಿ ಶರಣುಹೋಗಬೇಕೆಂದು ಈ ಶ್ಲೋಕದ ತಾತ್ಪರ್ಯ.

-ಗೀತಾ ೧೮-೬೮

## ಕರ್ಮ

೨೩ ತಸ್ಮಾದ್ಯಜ್ಞಾದೀನಿ ಶಮದಮಾದೀನಿ ಚ ಯಥಾಶ್ರಮಂ ಸರ್ವಾಣ್ಯೇವ
ಆಶ್ರಮಕರ್ಮಾಣಿ ವಿದ್ಯೋತ್ಪತ್ತೌ ಅಪೇಕ್ಷಿತಾನಿ |

-ಸೂ. ಭಾ. ೩-೪-೨೭

ಆದ್ದರಿಂದ ಯಜ್ಞಾದಿ ನಿತ್ಯನೈಮಿತ್ತಿಕ ಕರ್ಮಗಳೂ ಶಮದಮಾದಿ ಜ್ಞಾನಸಾಧನಗಳೂ ಆತ್ಮಜ್ಞಾನೋತ್ಪತ್ತಿಗೆ ಆವಶ್ಯಕ. ಆಶ್ರಮಾನುಗುಣವಾಗಿ ಆ ಕರ್ಮಗಳೆಲ್ಲವನ್ನೂ ಮಾಡಲೇಬೇಕು.

೨೪ ಆತ್ಮತತ್ತ್ವವಿದಃ ಸಮ್ಯಗ್ ದರ್ಶನವಿರುದ್ಧೋ ಮಿಥ್ಯಾದರ್ಶನಹೇತುಕಃ
ಕರ್ಮಯೋಗಃ ಸ್ವಪ್ನೇಽಪಿ ಸಂಭಾವಯಿತುಂ ನ ಶಕ್ಯಃ |

-ಗೀ. ಭಾ. ೫-೧

ಸಮ್ಯಗ್‌ದರ್ಶನಕ್ಕೆ ವಿರುದ್ಧವೂ ಮಿಥ್ಯಾದರ್ಶನದಿಂದ ಬರತಕ್ಕದ್ದೂ ಆದ ಕರ್ಮಯೋಗವು ಜ್ಞಾನಿಗೆ ಇದೆಯೆಂದು ಸ್ವಪ್ನದಲ್ಲಿಯೂ ಊಹಿಸಲೂ ಶಕ್ಯವಿಲ್ಲ.

-ಗೀ. ಭಾ. ೫-೧

## ವರ್ಣಾಶ್ರಮಧರ್ಮ

೨೫ ಬ್ರಹ್ಮಕ್ಷತ್ರೇ ಪರಿಪಾಲಿತೇ ಜಗತ್‌ಪರಿಪಾಲಯಿತುಮಲಮ್|

-ಗೀ. ಭಾ. ೪-೧

ಬ್ರಾಹ್ಮಣ್ಯ ಮತ್ತು ಕ್ಷತ್ರಿಯಧರ್ಮಗಳನ್ನು ಪರಿಪಾಲಿಸಿದರೆ ಅವು ಜಗತ್ತನ್ನೇ ಪಾಲಿಸುವುದಕ್ಕೆ ಸಮರ್ಥವಾಗುತ್ತವೆ.

೨೬ ಕ್ಷತ್ರಾತ್ ಪರಂ ನಾಸ್ತಿ ಬ್ರಾಹ್ಮಣಜಾತೇರಪಿ ನಿಯಂತೃ|

-ಬೃಹ೧-೪-೧೧

ಬ್ರಾಹ್ಮಣಜಾತಿಯನ್ನು ನಿಯಂತ್ರಿಸತಕ್ಕದ್ದು ಕ್ಷತ್ರಿಯಜಾತಿಗಿಂತ ಇನ್ನೊಂದಿಲ್ಲ.

ಟಿಪ್ಪಣಿ :- ಧರ್ಮವನ್ನು ಮೀರಿದ ಬ್ರಾಹ್ಮಣನನ್ನು ದಂಡಿಸಲು ರಾಜನಿಗೆ ಅಧಿಕಾರ ಉಂಟು.

೨೭ ಗುಣಾಧಿಕೈರ್ಹಿ ಗೃಹೀತೋಽನುಷ್ಠೀಯಮಾನಶ್ಚ ಧರ್ಮಃ ಪ್ರಚಯಂ ಗಮಿಷ್ಯತಿ ||

-ಗೀತಾ-ಪೀಠಿಕೆ

ಅಧಿಕಗುಣಶಾಲಿಗಳು ಧರ್ಮವನ್ನು ತಿಳಿದುಕೊಂಡು ಆಚರಿಸುತ್ತಿದ್ದರೆ, ಆ ಧರ್ಮವು ಇನ್ನೂ ವರ್ಧಿಸುತ್ತದೆ.

## ಸಂಕೀರ್ಣ

೨೮ ಪ್ರತ್ಯಕ್ಷಾ ಚ ವಿದ್ವತ್‌ಸಂಯೋಗೇ ಪ್ರಜ್ಞಾವೃದ್ಧಿಃ|

-ಬೃಹ.ಭಾ.೪-೧-೧

ವಿದ್ವಾಂಸರ ಸಹವಾಸದಲ್ಲಿ ಬುದ್ಧಿ ಶಕ್ತಿಯು ವರ್ಧಿಸುತ್ತದೆಯೆಂಬುದು ಪ್ರತ್ಯಕ್ಷವಾಗಿದೆ.

೨೯ ತಸ್ಮಾತ್ ನ ಪರಮಪೀಡಯಿತ್ವಾ ಗ್ರಸಿತುಮಪಿ ಶಕ್ಯತೇ|

-ಬೃಹ.ಭಾ. ೧-೫-೨

(ಅನ್ನದ ಮೇಲೆ ಸರ್ವರಿಗೂ ಅಧಿಕಾರವಿದೆ)ಆದ್ದರಿಂದ ಇನ್ನೊಬ್ಬರಿಗೆ ತೊಂದರೆಯನ್ನು ಕೊಡದೆ ತಿನ್ನಲು ಸಹ ಶಕ್ಯವಿಲ್ಲ.

೩೦ ಪೃಥಿವೀ ಚ್ಛಾಯಾಂ ಹಿ ಶಾರ್ವರಂ ತಮ ಆಚಕ್ಷತೇ |

-ಬೃಹ. ೬-೨-೧೧

ಭೂಮಿಯ ನೆರಳನ್ನು ರಾತ್ರಿಯ ಕತ್ತಲೆ ಎನ್ನುತ್ತಾರೆ.

೩೧ ಅಥವಾ ನ ದೇವಾ ಅಸುರಾ ವಾ ಅನ್ಯೇ ಕೇಚನ ವಿದ್ಯಂತೇ|

-ಬೃಹ. ೫-೨-೩

ಅಥವಾ ಮನುಷ್ಯರಿಗಿಂತ ಬೇರೆಯಾಗಿ ದೇವತೆಗಳಾಗಲಿ ಅಸುರರಾಗಲಿ ಇಲ್ಲ.

೩೨ ಉದಯಶ್ಚ ನಾಮ ಸವಿತುಸ್ತನ್ನಿವಾಸಿನಾಂ ಪ್ರಾಣಿನಾಂ ಚಕ್ಷುರ್ಗೋಚರತಾಪತ್ತಿಃ ತದತ್ಯಯಶ್ಚ ಅಸ್ತಮನಮ್ | ನ ಪರಮಾರ್ಥತಃ ಉದಯಾಸ್ತಮಾನೇ ಸ್ತಃ|

-ಛಾಂ. ಭಾ. ೩-೧೦-೪

ಆಯಾ ಪ್ರಾಂತದಲ್ಲಿ ವಾಸಮಾಡುವ ಪ್ರಾಣಿಗಳಿಗೆ ದೃಷ್ಟಿಗೋಚರವಾಗುವುದೇ ಸೂರ್ಯನ ಉದಯ. ಹಾಗೆ ಗೋಚರವಾಗದೆ ಹೋದಾಗ ಅಸ್ತಮನ. ನಿಜವಾಗಿ ಸೂರ್ಯನಿಗೆ ಉದಯಾಸ್ತಮಾನಗಳಿಲ್ಲ.

೩೩ ಲೋಕಸ್ಯ ಉನ್ಮಾರ್ಗಪ್ರವೃತ್ತಿನಿವಾರಣಂ ಲೋಕಸಂಗ್ರಹಃ |

-ಗೀ. ಭಾ. ೩-೨೦

ಜನರು ತಪ್ಪುದಾರಿಯಲ್ಲಿ ಹೋಗುವುದನ್ನು ತಡೆಯುವುದೇ ಲೋಕಸಂಗ್ರಹ.

ಮೋಕ್ಷ

೩೪ ತಸ್ಮಾತ್ ಅವಿದ್ಯಾದಿಕರ್ಮೋಪಾದಾನ ಹೇತುನಿವೃತ್ತೌ ಸ್ವಾತ್ಮನ್ಯವಸ್ಥಾನಂ ಮೋಕ್ಷಃ |

-ತೈತ್ತಿ. ಶೀಕ್ಷಾ. (ಪೀಠಿಕೆ)

ಮೋಕ್ಷವು ಕ್ರಿಯಾಜನ್ಯವಲ್ಲವಾದ್ದರಿಂದ ಕರ್ಮಕ್ಕೆ ಮೂಲಕಾರಣಗಳಾದ ಅವಿದ್ಯಾ ಕಾಮಗಳು ತೊಲಗಲಾಗಿ ಸ್ವಸ್ವರೂಪದಲ್ಲಿ ನೆಲೆನಿಲ್ಲುವುದು ಮೋಕ್ಷವೆನಿಸುತ್ತದೆ.

೩೫ ಕೇವಲಾದೇವ ಜ್ಞಾನಾತ್ ಮೋಕ್ಷಃ ಇತ್ಯೇಷೋಽರ್ಥೋ ನಿಶ್ಚಿತೋ ಗೀತಾಸು ಸರ್ವೋಪನಿಷತ್ಸು ಚ|

ಗೀತಾ ೩ನೇ ಅಧ್ಯಾಯದಪೀಠಿಕೆ

ಕೇವಲ ಆತ್ಮಜ್ಞಾನದಿಂದ ಮಾತ್ರವೇ ಮೋಕ್ಷವಾಗುವುದೆಂಬುದು ಗೀತೆಯಲ್ಲಿಯೂ ಸರ್ವೋಪನಿಷತ್ತುಗಳಲ್ಲಿಯೂ ನಿಶ್ಚಿತವಾದ ಸಿದ್ಧಾಂತವಾಗಿದೆ.

## ೨

## ಭೇದಾಭೇದವಾದ

ಈ ವಾದವು ಬಹಳ ಪ್ರಾಚೀನವಾದದ್ದು. ಔಡುಲೋಮಿ, ಆಶ್ಮರಥ್ಯ, ಭರ್ತೃಪ್ರಪಂಚ-ಮೊದಲಾದ ಪ್ರಾಚೀನ ಆಚಾರ್ಯರು ಭೇದಾಭೇದವಾದಿಗಳಾಗಿದ್ದರು. ಇವರ ಪ್ರತಿಪಾದನೆ ಕೆಲವು ವಿಷಯಗಳಲ್ಲಿ ಪರಸ್ಪರ ಭಿನ್ನವಾಗಿತ್ತು. ಮುಕ್ತಿಯ ಸ್ಥಿತಿಯಲ್ಲಿ ಇವರೆಲ್ಲರೂ ಜೀವಾತ್ಮ-ಪರಮಾತ್ಮರಿಗೆ ಅಭೇದವನ್ನು ಒಪ್ಪುತ್ತಾರೆ. ಭಾಸ್ಕರ, ಯಾದವಪ್ರಕಾಶ, ನಿಂಬಾರ್ಕ-ಮೊದಲಾದ ಆಚಾರ್ಯರೂ ಈ ವಾದವನ್ನು ಪುರಸ್ಕರಿಸಿದ್ದಾರೆ. ಶ್ರೀಶಂಕರವಿಜಯದಲ್ಲಿ ಭಾಸ್ಕರಾಚಾರ್ಯನ ವಿಷಯವು ಮಾತ್ರ ಪ್ರಸ್ತುತವಾಗಿದೆ. ಇದರಲ್ಲಿ ಭಟ್ಟಭಾಸ್ಕರ ಎಂಬ ಹೆಸರನ್ನು ಬಳಸಿದ್ದಾರೆ. ಭಾಸ್ಕರಾಚಾರ್ಯನು ಬ್ರಹ್ಮಸೂತ್ರಗಳಿಗೆ ವಿಸ್ತಾರವಾದ ಭಾಷ್ಯವನ್ನು ಬರೆದಿದ್ದಾನೆ. ಈತನ ಸಿದ್ಧಾಂತವನ್ನು ಹೀಗೆ ಸಂಗ್ರಹಿಸಬಹುದು–

ಬ್ರಹ್ಮನು (ಪರಮಾತ್ಮನು)ಸತ್ಯಜ್ಞಾನಾನಂತಸ್ವರೂಪನಾಗಿದ್ದಾನೆ. ಈತನು ಸಗುಣ. ನಿರ್ಗುಣನಲ್ಲ. ಬ್ರಹ್ಮನು ಕಾರಣರೂಪದಲ್ಲಿ ನಿರಾಕಾರ. ಕಾರ್ಯರೂಪದಲ್ಲಿ ಜೀವನೂ ಸಾಕಾರನೂ ಆಗಿದ್ದಾನೆ. ಈ ಮತವು ಪರಿಣಾಮ ವಾದವನ್ನಂಗೀಕರಿಸುತ್ತದೆ. ಬ್ರಹ್ಮವೇ ಜೀವ ಮತ್ತು ಜಗದ್ರೂಪದಲ್ಲಿ ಪರಿಣಾಮ ಹೊಂದಿದೆ. ಪ್ರಳಯಾವಸ್ಥೆಯಲ್ಲಿ ಇವೆಲ್ಲವೂ ಬ್ರಹ್ಮದಲ್ಲಿ ಲೀನವಾಗುತ್ತದೆ. ಭೋಗ್ಯಶಕ್ತಿ, ಭೋಕ್ತೃಶಕ್ತಿಎಂಬ ಎರಡುಶಕ್ತಿಗಳು ಬ್ರಹ್ಮದಲ್ಲಿವೆ. ಭೋಗ್ಯಶಕ್ತಿಯಿಂದ ಭೂಮಿ ಜಲಾದಿರೂಪಗಳಿಂದ ಬ್ರಹ್ಮವು ಪರಿಣಾಮಹೊಂದುತ್ತದೆ. ಭೋಕ್ತೃಶಕ್ತಿಯಿಂದ ನಾನಾ ಜೀವರೂಪಗಳಾಗಿ ಪರಿಣಾಮಹೊಂದುತ್ತದೆ. ಜೀವನು ಚೇತನರೂಪದಲ್ಲಿರುತ್ತಾನೆ. ಬ್ರಹ್ಮನು ಸ್ವತಃ ನಿರಾಕಾರನೂ ಸರ್ವಜ್ಞನೂ ಸರ್ವಶಕ್ತನೂ ಆಗಿದ್ದಾನೆ.

ಬ್ರಹ್ಮ ಸ್ವತಃ ಪರಿಣಮತೇ ತತ್‌ಸ್ವಾಭಾವ್ಯಾತ್ ।
ಯಥಾ ಕ್ಷೀರಂ ದಧಿ ಭಾವಾಯ, ಅಂಭೋ ಹಿಮಭಾವಾಯ ॥
(ಬ್ರ. ಸೂ. ೨-೧-೧೪ ಭಾಸ್ಕರಭಾಷ್ಯ)

"ಹಾಲು ಮೊಸರಾಗಿಯೂ ನೀರು ಮಂಜುಗಡ್ಡೆಯಾಗಿಯೂ ಪರಿಣಮಿಸುವಂತೆ ಬ್ರಹ್ಮವು ಸ್ವತಃ ಪರಿಣಮಿಸುತ್ತದೆ. ಹೀಗೆ ಪರಿಣಾಮ ಹೊಂದುವುದು ಅದರ ಸ್ವಭಾವವಾಗಿದೆ. "

ಆದರೆ ಅದು ತನ್ನ ನಿಜಸ್ವರೂಪವನ್ನು ಬಿಟ್ಟುಗೊಡದೆ, ಜೇಡರಹುಳು ನೂಲಿನ ಎಳೆಗಳನ್ನು ಸೃಜಿಸಿ ಪರಿಣಾಮಹೊಂದುವಂತೆ, ಜಗತ್ತನ್ನು ಸೃಜಿಸಿ ತನ್ನ ಸ್ವರೂಪದಲ್ಲಿಯೇ ಇರುತ್ತದೆ. ಜೀವನು ಅಣುಸ್ವರೂಪನಾಗಿದ್ದಾನೆ. ಬೆಂಕಿಯಿಂದ ಕಿಡಿಗಳು ಹುಟ್ಟುವಂತೆ ಬ್ರಹ್ಮದಿಂದ ಜೀವರು ಆವಿರ್ಭವಿಸಿದ್ದಾರೆ. ಅಂತಃಕರಣಾದ್ಯುಪಾಧಿಗಳಿಂದ ಜೀವರು ಬ್ರಹ್ಮಕ್ಕಿಂತ

ಭಿನ್ನರಾಗಿದ್ದಾರೆ. ಮುಕ್ತಿ ದಶೆಯಲ್ಲಿ ಉಪಾಧಿಯು ನಷ್ಟವಾಗಿ ಬ್ರಹ್ಮದಲ್ಲಿ ಅಭೇದದಿಂದ ಸೇರಿಹೋಗುತ್ತಾರೆ.

ಕಾರ್ಯರೂಪೇಣ ನಾನಾತ್ವಮಭೇದಃ ಕಾರಣಾತ್ಮನಾ ।
ಹೇಮಾತ್ಮನಾ ಯಥಾऽಭೇದಃ ಕುಂಡಲಾದ್ಯಾತ್ಮನಾ ಭಿದಾ ॥

"ಕಾರ್ಯರೂಪದಿಂದ ಬ್ರಹ್ಮನಿಗೂ ಜೀವಗಳಿಗೂ ಭೇದವಿದೆ. ಕಾರಣರೂಪದಿಂದ ಅಭೇದವೇ ಇದೆ. ಹೇಗೆಂದರೆ ಚಿನ್ನವು ಕುಂಡಲ, ಕಡಗ, ಉಂಗುರಗಳ ರೂಪದಲ್ಲಿ ಪರಿಣಾಮಹೊಂದಿದಾಗ ಚಿನ್ನಕ್ಕೂ ಆ ಒಡವೆಗಳಿಗೂ ಭೇದವಿರುತ್ತದೆ. ಕಾರಣರೂಪದಲ್ಲಿ ಒಡವೆಗಳೂ ಚಿನ್ನವೇ ಆಗಿರುವುದರಿಂದ ಅಭೇದವಿರುತ್ತದೆ". ಸಮುದ್ರರೂಪದಿಂದ ನೀರಿಗೂ ತರಂಗಗಳಿಗೂ ಅಭೇದ. ತರಂಗರೂಪದಲ್ಲಿ ನೀರು ಪರಿಣಾಮ ಹೊಂದಿದಾಗ ಸಮುದ್ರಕ್ಕೂ ತರಂಗಗಳಿಗೂ ಭೇದ ಉಂಟಾಗುತ್ತದೆ. 'ಸಮುದ್ರದ ಅಲೆಗಳು, ಸಮುದ್ರದಲ್ಲಿ ಅಲೆಗಳಿವೆ' ಮುಂತಾದ ವ್ಯವಹಾರವು ಭೇದವನ್ನು ಸೂಚಿಸುತ್ತದೆ.

ಮೋಕ್ಷಕ್ಕೆ ಬರಿಯ ಜ್ಞಾನವು ಸಾಕಾಗುವುದಿಲ್ಲ. ಜ್ಞಾನಕರ್ಮಗಳೆರಡೂ ಬೇಕೆಂದು ಸಮುಚ್ಚಯವಾದವನ್ನು ಭಾಸ್ಕರನು ಆಶ್ರಯಿಸಿದ್ದಾನೆ. ಉಪಾಸನೆ ಅಥವಾ ಯೋಗಾಭ್ಯಾಸವಿಲ್ಲದೆ ಅಪರೋಕ್ಷಜ್ಞಾನವು ಲಭಿಸುವುದಿಲ್ಲ. ಸದ್ಯೋಮುಕ್ತಿ, ಕ್ರಮ ಮುಕ್ತಿಗಳೆರಡನ್ನು ಭಾಸ್ಕರನು ಒಪ್ಪುತ್ತಾನೆ. ಹೀಗೆ ಈತನ ಸಿದ್ಧಾಂತವು ಭೇದಾ-ಭೇದಗಳೆರಡನ್ನೂ ಒಪ್ಪುತ್ತದೆ.

## ೩

## ಬೌದ್ಧದರ್ಶನ

ಗೌತಮಬುದ್ಧನಿಗಿಂತಲೂ ಪ್ರಾಚೀನರಾದ ಕಾಶ್ಯಪ, ಕನಕಮುನಿ ಮೊದಲಾದವರಿಂದ ಈ ಸಿದ್ಧಾಂತವು ಉಪದಿಷ್ಟವಾಗಿದೆಯೆಂದು ಬೌದ್ಧಗ್ರಂಥಗಳಲ್ಲಿದೆ. ಇದು ಬುದ್ಧನಿಂದ ಪ್ರಸಿದ್ಧಿಗೆ ಬಂದಿತು. ದುಃಖಮಯವಾದ ಸಂಸಾರದಿಂದ ಬಿಡುಗಡೆ ಹೊಂದುವುದಕ್ಕಾಗಿ ಸರಳವಾದ ಆಚಾರಮಾರ್ಗವನ್ನು ಬೋಧಿಸುವುದು ಆತನ ಮುಖ್ಯಧ್ಯೇಯವಾಗಿತ್ತು. ಆಧ್ಯಾತ್ಮಿಕ ತತ್ತ್ವದ ವಿಷಯವಾಗಿ ಶಿಷ್ಯರು ಪ್ರಶ್ನೆಮಾಡಿದಾಗ "ಅದು ನಿಮಗೆ ಬೇಕಾಗಿಲ್ಲ. ಅತಿಪ್ರಶ್ನೆಯನ್ನು ಮಾಡಬಾರದು" ಎಂದು ಬಿಡುತ್ತಿದ್ದನಂತೆ. ಅಹಿಂಸೆ, ಸತ್ಯ, ಅಸ್ತೇಯ, ವೈರಾಗ್ಯ, ಸುರಾಪಾನನಿಷೇಧ - ಮುಂತಾದ ಸಾಮಾನ್ಯಧರ್ಮಗಳನ್ನೇ ಬುದ್ಧನು ಬೋಧಿಸುತ್ತಿದ್ದನೆಂದೂ ವಿಷಯಸುಖಗಳಲ್ಲಿ ಆಸೆಯೆನ್ನಿಡದೆ ಇಂದ್ರಿಯಗಳನ್ನು ನಿಗ್ರಹಿಸುವುದೇ ಸುಖಕ್ಕೆ ಮಾರ್ಗವೆಂದು ಉಪದೇಶಿಸುತ್ತಿದ್ದನೆಂದೂ ತಿಳಿದು ಬರುತ್ತದೆ. ಜಗತ್ತಿನಲ್ಲಿ ಸರ್ವವೂ ನಶ್ವರವಾದ್ದರಿಂದ ತ್ಯಾಜ್ಯವೆನ್ನುವುದು ಆತನ ಬೋಧೆಯ

ತಿರುಳಾಗಿತ್ತೆಂದೂ ಕಂಡು ಬರುತ್ತದೆ. ಆತನು ನಿರ್ವಾಣ ಹೊಂದಿ ಬಹಳ ಕಾಲವಾದಮೇಲೆ ಈಗ ಪ್ರಚಾರದಲ್ಲಿರುವ ಬೌದ್ಧಸಿದ್ಧಾಂತವು ರೂಪಿತವಾಯಿತೆಂದು ಇತಿಹಾಸಕಾರರು ಹೇಳಿದ್ದಾರೆ.

ದುಃಖಮಯವಾದ ಈ ಪ್ರಪಂಚವನ್ನು ಐದು ಸ್ಕಂಧಗಳನ್ನಾಗಿ ಬೌದ್ಧರು ವಿಭಾಗಿಸುತ್ತಾರೆ. ರೂಪಸ್ಕಂಧ, ವಿಜ್ಞಾನಸ್ಕಂಧ, ವೇದನಾಸ್ಕಂಧ, ಸಂಜ್ಞಾಸ್ಕಂಧ, ಮತ್ತು ಸಂಸ್ಕಾರಸ್ಕಂಧವೆಂದು ಪಂಚಸ್ಕಂಧಗಳಿವೆ.

೧ ರೂಪಸ್ಕಂಧ - ಇಂದ್ರಿಯ ಪಂಚಕ, ಶಬ್ದಾದಿ ವಿಷಯಪಂಚಕ, ಭೂತಪಂಚಕ.

೨ ವಿಜ್ಞಾನಸ್ಕಂಧ -ಮನಸ್ಸು, ಬುದ್ಧಿ, ಚಿತ್ತ -ಎಂದು ಹೇಳಲ್ಪಡುವ ಅಂತಃ ಕರಣ, ನಾನು ಎಂಬ ಭಾವನೆ - ಆಲಯವಿಜ್ಞಾನ. (ಇದನ್ನೇ ಅನ್ಯರು ಆತ್ಮ ಎನ್ನುತ್ತಾರೆ. ಬೇರೆ ಆತ್ಮನಿಲ್ಲ).

೩ ವೇದನಾಸ್ಕಂಧ -ಸುಖ, ದುಃಖ, ಅಪೇಕ್ಷೆಗಳು.

೪ ಸಂಜ್ಞಾಸ್ಕಂಧ -ಇದೇ ಸವಿಕಲ್ಪಕ ಪ್ರತ್ಯಯ ಅಥವಾ ಮನುಷ್ಯ, ಹಸು, ಕಪ್ಪು, ಕೆಂಪು ಇತ್ಯಾದಿ ರೂಪದಲ್ಲಿ ಸಂಜ್ಞೆಗೆ ವಿಷಯವಾಗತಕ್ಕ ವಸ್ತು.

೫ ಸಂಸ್ಕಾರಸ್ಕಂಧ -ರಾಗ, ದ್ವೇಷ, ಮದ, ಮಾತ್ಸರ್ಯ ಮೊದಲಾದವು. ಜನ್ಮ ಮರಣಾದಿ ಕ್ಲೇಶಗಳು. ಇವು ಸಂಸ್ಕಾರ ಜನ್ಯವಾದವುಗಳು.

ಪಂಚಸ್ಕಂಧಗಳ ಹೊರತಾಗಿ ಬೇರೆ ಜೀವಾತ್ಮನೂ ಇಲ್ಲ. ಪರಮಾತ್ಮನೂ ಇಲ್ಲ.

ಈ ವಿಷಯವಾಗಿ ಬೌದ್ಧರಲ್ಲಿ ಮತಭೇದಗಳಿಂದ ನಾಲ್ಕು ಪಂಗಡಗಳಾದವು.

೧ ವೈಭಾಷಿಕರು

ಈ ಜಗತ್ತು ಪ್ರತ್ಯಕ್ಷಗೋಚರವಾದ್ದರಿಂದ ಸತ್ಯವಾಗಿ ಇದೆ. ಆದರೆ ಕ್ಷಣಿಕ. ಪ್ರತಿಕ್ಷಣದಲ್ಲಿಯೂ ಹುಟ್ಟಿನಾಶವಾಗಿ ಮತ್ತೆ ಹುಟ್ಟುವುದು. ಇದು ಬಾಹ್ಯದಲ್ಲಿಯೂ ಇದೆ. ಬುದ್ಧಿಗೋಚರವಾದ್ದರಿಂದ ಆಂತರಿಕವಾಗಿಯೂ ಇದೆ. ಇದು ದುಃಖಮಯವಾದ್ದರಿಂದ ತ್ಯಾಜ್ಯವಾದದ್ದು.

೨ ಸೌತ್ರಾಂತಿಕರು

ಜಗತ್ತು ಕ್ಷಣಿಕವಾದ್ದರಿಂದ ಪ್ರತ್ಯಕ್ಷವಲ್ಲ. ಇದು ಅನುಮಾನಗಮ್ಯವಾದದ್ದು. ವರ್ತಮಾನಕಾಲವು ಸತ್ಯವಾಗಿದೆ. ಭೂತಭವಿಷ್ಯತ್ತುಗಳ ಅಸ್ತಿತ್ವವು ಕಾಲ್ಪನಿಕ -ಎನ್ನುತ್ತಾರೆ. ಜಗತ್ತು ಪ್ರತ್ಯಕ್ಷಗೋಚರವೆಂದು ವೈಭಾಷಿಕರು ಹೇಳಿದರೆ, ಸೌತ್ರಾಂತಿಕರು ಇದು ಅನುಮಾನಗಮ್ಯವೆಂದೂ ಪ್ರತ್ಯಕ್ಷವಲ್ಲವೆಂದೂ ಹೇಳುತ್ತಾರೆ. ಇದೇ ಇವರಲ್ಲಿರುವ ಮುಖ್ಯವಾದ ಮತಭೇದ. ಕ್ಷಣಿಕ ವಾದರೂ ಜಗತ್ತು ಸತ್ಯವಾಗಿದೆ- ಎನ್ನುವುದು ಉಭಯರಿಗೂ

ಸಂಮತ. ಇವರೀರ್ವರೂ ಸರ್ವಾಸ್ತಿತಾವಾದಿಗಳು.

### ೩ ಯೋಗಾಚಾರರು (ವಿಜ್ಞಾನವಾದಿಗಳು)

ಆಲಯವಿಜ್ಞಾನವನ್ನು ಸರಿಯಾಗಿ ತಿಳಿದುಕೊಳ್ಳಬೇಕಾದರೆ ಯೋಗಾನುಷ್ಠಾನವು ಅತ್ಯಾವಶ್ಯಕವೆಂದು ಇವರು ಪ್ರತಿಪಾದಿಸುತ್ತಾರೆ. ಜಗತ್ತು ಸತ್ಯವಲ್ಲ. ಅದು ಇಲ್ಲವೇ ಇಲ್ಲ. ಅದರ ಜ್ಞಾನವು ಮಾತ್ರಹುಟ್ಟುತ್ತದೆ. ಮತ್ತೆ ಒಂದು ಕ್ಷಣದಲ್ಲಿ ಲಯಿಸುತ್ತದೆ. ಈ ಕ್ಷಣಿಕವಿಜ್ಞಾನಗಳು ಪರಂಪರೆಯಾಗಿ ಮುಂದುವರಿಯುತ್ತವೆ. ಆದ್ದರಿಂದ ವಿಜ್ಞಾನ ಒಂದೇ ಸತ್ಯ. ಜಗತ್ತು ಸತ್ಯವಲ್ಲ.

### ೪ ಮಾಧ್ಯಮಿಕರು

ಇವರೇ ಶೂನ್ಯವಾದಿಗಳು. ಸ್ವಪ್ನದಲ್ಲಿ ಕಾಣಿಸತಕ್ಕದ್ದು ವಾಸ್ತವವಾಗಿ ಹೇಗೆ ಇಲ್ಲವೋ ಹಾಗೆ ಜಾಗ್ರತ್ತಿನಲ್ಲಿ ಕಾಣಿಸತಕ್ಕದ್ದೂ ವಾಸ್ತವವಾಗಿ ಇಲ್ಲ. ಹಗ್ಗವನ್ನು ಹಾವೆಂದು ಭ್ರಮಿಸಿದಾಗ ಐದು ಅಂಶಗಳಿರುತ್ತವೆ. ಇದು, ಹಾವು, ಅವೆರಡರ ಸಂಬಂಧ, ಹಾವು ಎಂಬ ಜ್ಞಾನ, ಹಾವೆಂದು ಭ್ರಮಿಸಿದ ಮನುಷ್ಯ-ಇವು ಐದು ಅಂಶಗಳು. ಇವುಗಳಲ್ಲಿ 'ಇದು'ಎಂಬುದು ನಿಜ, ಉಳಿದವು ಸುಳ್ಳು -ಎಂದು ಕೆಲವರೂ 'ಹಾವು'ಎಂಬುದು ನಿಜ, ಉಳಿದವು ಸುಳ್ಳು-ಎಂದು ಕೆಲವರೂ ಹೇಳುತ್ತಾರೆ, ಈ ರೀತಿ ಇವರು ಐದರಲ್ಲೊಂದನ್ನು ನಿಜವೆಂದು ಹೇಳಿ ಉಳಿದವು ಸುಳ್ಳೆನ್ನುತ್ತಾರೆ. ಶೂನ್ಯವಾದಿಗಳಾದರೋ ಐದೂ ಸುಳ್ಳು ಎಂದು ವಾದಿಸುತ್ತಾರೆ. ಸರ್ವಸತ್ತಾ ನಿರಾಸ, ಸರ್ವವಸ್ತುಗಳ ಅಭಾವವೇ ಶೂನ್ಯವೆಂದು ಕೆಲವರ ಮತ. ಭಾವಾ-ಭಾವಾಂತದ್ವಯರಹಿತವಾದ ಮಧ್ಯಮಪ್ರತಿಪತ್ ಶೂನ್ಯವೆಂದೂ ಈ ಮಧ್ಯಮ ಪ್ರತಿಪತ್ತನ್ನು ಆಶ್ರಯಿಸಿದವರು ಮಾಧ್ಯಮಿಕರೆಂದೂ ಬೌದ್ಧರು ಹೇಳುತ್ತಾರೆ.

ಪ್ರಪಂಚೋಪಶಮಾಯೈವ ಶೂನ್ಯತಾ ಸೂಪದಿಶ್ಯತೇ |
ತಸ್ಮಾತ್ ಪ್ರಪಂಚೋಪಶಮಃ ಶೂನ್ಯತಾಯಾಃ ಪ್ರಯೋಜನಮ್ ||

"ಪ್ರಪಂಚದ ವಿಷಯದಲ್ಲಿ ಸರ್ವ ಅಭಿಮಾನವೂ ನಶಿಸಿಹೋಗಲೆಂದು ಶೂನ್ಯತೆಯನ್ನು ಪ್ರಯತ್ನಪೂರ್ವಕವಾಗಿ ಪ್ರತಿಪಾದಿಸಲಾಗಿದೆ. ಪ್ರಪಂಚದ ವಿಷಯದಲ್ಲಿ ಎಲ್ಲ ಅಭಿಮಾನವೂ ತೊರೆದು ಹೋಗುವುದೇ ಶೂನ್ಯವಾದದ ಪರಮ ಪ್ರಯೋಜನ"ಎಂಬುದು ಮಾಧ್ಯಮಿಕರ ಸಿದ್ಧಾಂತ.

ಹೀಗೆ ಜಗದ್ವಿಷಯಕವಾದ ಅಭಿಮಾನವು ಶಾಂತವಾದಾಗ ಮನುಷ್ಯನಿಗೆ ಸಂಪೂರ್ಣವಾದ ಶಾಂತಿ ದೊರಕುತ್ತದೆ. ಈ ಪರಮಶಾಂತಿಯೇ ನಿರ್ವಾಣ-ಮೋಕ್ಷ.

ಆಶ್ಚರ್ಯವೇನೆಂದರೆ ಚಂದ್ರ ಕೀರ್ತಿ, ನಾಗಾರ್ಜುನ -ಮೊದಲಾದ ಪಂಡಿತದಿಗ್ಗಜರು ಈ ವಾದವನ್ನು ಪೋಷಿಸಿ ಪ್ರೌಢಗ್ರಂಥಗಳನ್ನು ರಚಿಸಿದ್ದಾರೆ -ಎನ್ನುವುದು. ಇತರ ಎಲ್ಲ ಶಾಸ್ತ್ರಕಾರರು ಈ ವಾದವನ್ನು ಖಂಡಿಸಿದ್ದಾರೆ.

## ೪

## ಜೈನದರ್ಶನ

ಜೈನಮತವು ಬಹಳ ಪ್ರಾಚೀನವಾದದ್ದು. ಇದರ ಪ್ರಚಾರಕರು ಇಪ್ಪತ್ತುನಾಲ್ಕು ತೀರ್ಥಂಕರರು. ತೀರ್ಥಂಕರರೆಂದರೆ ಶಾಸ್ತ್ರಪ್ರವರ್ತಕರು. ವೃಷಭದೇವನು ಆದಿತೀರ್ಥಂಕರ. ಮಹಾವೀರನು ಇಪ್ಪತ್ತುನಾಲ್ಕನೆಯವನು. ಇನ್ನುಮುಂದೆ ತೀರ್ಥಂಕರರಾಗುವುದಿಲ್ಲವೆಂದು ಜೈನಮತವು ಹೇಳುತ್ತದೆ. ಇವರೆಲ್ಲರೂ ಕ್ಷತ್ರಿಯರೂ ರಾಜರೂ ಆಗಿದ್ದು ಪರಮವೈರಾಗ್ಯವನ್ನು ಹೊಂದಿ ಸಿದ್ಧಿಯನ್ನು ಪಡೆದವರು. ಇವರು ಪೂಜಾರ್ಹರಾದ್ದರಿಂದ 'ಅರ್ಹನ್'ಎಂದೂ ಹೆಸರಿರುವುದರಿಂದ ಜೈನದರ್ಶನಕ್ಕೆ ಆರ್ಹತದರ್ಶನವೆಂದು ಹೆಸರಿದೆ. ಸಂಸಾರವನ್ನೂ ಕರ್ಮವನ್ನೂ ಜಯಿಸಿದವರಾದ್ದರಿಂದ ಜಿನರೆಂದೂ ಇವರ ಮತಕ್ಕೆ ಜೈನಮತವೆಂದೂ ಪ್ರಸಿದ್ಧಿಬಂದಿತು.

ಕಡೆಯ ತೀರ್ಥಂಕರನಾದ ಮಹಾವೀರನು (ವರ್ಧಮಾನನು) ಕ್ರಿಸ್ತಪೂರ್ವ ಐದನೆಯ ಶತಮಾನದಲ್ಲಿದ್ದನೆಂದು ಇತಿಹಾಸದಲ್ಲಿದೆ. ಸುಮಾರು ಐನೂರು ವರ್ಷಗಳವರೆಗೆ ಜೈನಮತವು ಕೇವಲ ಉಪದೇಶರೂಪದಲ್ಲಿತ್ತೇ ಹೊರತು ಗ್ರಂಥರೂಪದಲ್ಲಿರಲಿಲ್ಲ. ಅನಂತರ ಮಾಗಧೀಭಾಷೆಯಲ್ಲಿಯೂ ಸಂಸ್ಕೃತದಲ್ಲಿಯೂ ವಿದ್ವಾಂಸರು ಗ್ರಂಥಗಳನ್ನು ರಚಿಸಿದರು.

### ಸಿದ್ಧಾಂತಸಾರ

ಪ್ರಪಂಚವು ಸತ್ಯವಾದದ್ದು. ಇದನ್ನು ನಿರ್ಮಿಸಿದ ಈಶ್ವರನೆಂಬವನಿಲ್ಲ. ಕರ್ಮದ ಬಲದಿಂದ ಎಲ್ಲಕಾರ್ಯಗಳೂ ನಡೆಯುತ್ತವೆ. ಜೀವಾತ್ಮರು ಅಸಂಖ್ಯಾತರಾಗಿದ್ದಾರೆ. ಎಲ್ಲರೂ ಚಿದಾನಂದಸ್ವರೂಪರು. ತಮ್ಮ ಕರ್ಮಗಳಿಂದ ನಾನಾ ಯೋನಿಗಳಲ್ಲಿ ಜನಿಸುತ್ತಾರೆ. ಜೀವಾತ್ಮರು ಮಧ್ಯಮ ಪರಿಮಾಣದವರು. ಅಣುಗಳೂ ಅಲ್ಲ. ವಿಭುಗಳೂ ಅಲ್ಲ. ಜೀವನಿಗೆ ತನ್ನ ಪ್ರಮಾಣವನ್ನು ಹಿಗ್ಗಿಸುವ ಮತ್ತು ಕುಗ್ಗಿಸುವ ಸಾಮರ್ಥ್ಯವಿದೆ. ಮನುಷ್ಯಾದಿ ಶರೀರಗಳಲ್ಲಿ ಸಂಪೂರ್ಣವಾಗಿ ವ್ಯಾಪಿಸುತ್ತಾನೆ. ಆನೆಯ ಶರೀರದಲ್ಲಿ ಗಾತ್ರಕ್ಕೆ ತಕ್ಕಂತೆ ಹಿಗ್ಗುತ್ತಾನೆ. ಸೊಳ್ಳೆಯ ಶರೀರಬಂದರೆ ಅದಕ್ಕೆ ತಕ್ಕಂತೆ ಕುಗ್ಗುತ್ತಾನೆ, ಇವನು ನಿತ್ಯ. ಶುಭಕರ್ಮದ ಫಲವಾಗಿ ಭವ್ಯ ಜೀವನಿಗೆ ಸಮ್ಯಗ್ ದರ್ಶನ, ಸಮ್ಯಗ್ ಜ್ಞಾನ, ಸಮ್ಯಕ್ ಚಾರಿತ್ರ -ಎಂಬ ರತ್ನತ್ರಯಗಲ್ಲಿ ಆಸಕ್ತಿಮೂಡುತ್ತದೆ. ಅದರಿಂದ ತತ್ತ್ವಸ್ವರೂಪದ ಅರಿವಾದಾಗ ಎಲ್ಲ ಕರ್ಮಗಳಿಂದಲೂ ಬಿಡುಗಡೆ ಹೊಂದಿ ದೇಹವನ್ನು ತೊರೆದು ತನ್ನ ನಿಜಸ್ವರೂಪವನ್ನು ಪಡೆಯುತ್ತಾನೆ. ಮುಕ್ತನಾದ ಜೀವಾತ್ಮನು ಅನಂತಜ್ಞಾನಾದಿಗಳಿಂದ ಬೆಳಗುತ್ತಾ ಲೋಕಾಗ್ರದಲ್ಲಿರುವ ಸಿದ್ಧಶಿಲೆಯಲ್ಲಿ ಶಾಶ್ವತವಾಗಿ ನೆಲೆಸುತ್ತಾನೆ. ಈ ಸ್ಥಿತಿಯೇ ಮೋಕ್ಷ.

## ಪದಾರ್ಥವಿಭಾಗ

ದ್ರವ್ಯ ಎಂದು ಒಂದೇ ಪದಾರ್ಥವಿದೆ. ಗುಣ, ಆಕೃತಿ, ಕರ್ಮ -ಇವು ದ್ರವ್ಯದ ಪರ್ಯಯಗಳು ಅಥವಾ ಪರ್ಯಾಯಗಳು. ಪರ್ಯಾಯವೆಂದರೆ ಪರಿಣಾಮ ವಿಶೇಷ. ಈ ದ್ರವ್ಯವು ಜೀವ, ಅಜೀವ-ಎಂದು ಎರಡು ವಿಧ. ಜೀವದ ಸ್ವರೂಪವನ್ನು ಮೇಲೆ ಹೇಳಿದೆ. ಅಜೀವವು ಪುದ್ಗಲ, ಧರ್ಮ, ಅಧರ್ಮ, ಆಕಾಶ ಮತ್ತು ಕಾಲ-ಎಂದು ಐದು ಬಗೆ.

### ೧ ಪುದ್ಗಲ

ಇದು ಅತಿಸೂಕ್ಷ್ಮವಾದ ನಿತ್ಯದ್ರವ್ಯ. ಇದನ್ನು ಪರಮಾಣು ಪುಂಜವೆನ್ನಬಹುದು. ತಾರ್ಕಿಕರ ತ್ರ್ಯಣುಕಕ್ಕೆ ಸಮಾನವಾದದ್ದು. ಇದರಲ್ಲಿ ರೂಪ, ರಸ, ಗಂಧ, ಸ್ಪರ್ಶಗಳೆಂಬ ನಾಲ್ಕು ಗುಣಗಳಿವೆ. ಶಬ್ದವು ಪುದ್ಗಲದಿಂದಾದ ದ್ರವ್ಯ, ಗುಣವಲ್ಲ. ಪೃಥಿವೀ, ಜಲ, ಅಗ್ನಿ, ವಾಯು -ಈ ನಾಲ್ಕು ಭೂತಗಳೂ ಸ್ಥಾವರ ಜಂಗಮಗಳೂ ಪುದ್ಗಲಗಳಿಂದಾಗಿವೆ. ಇಂದ್ರಿಯ, ಮನಸ್ಸುಗಳೂ ಪುದ್ಗಲಗಳೇ.

### ೨ ಧರ್ಮ

ಇದು ಒಂದು ಪಾರಿಭಾಷಿಕ ಶಬ್ದ. ಜೀವ, ಪುದ್ಗಲಗಳ ಚಲನ ಕ್ರಿಯೆಗೆ ಕಾರಣವಾದದ್ದು. ಮೀನಿಗೆ ಈಜಲು ನೀರು ಇದ್ದಂತೆ ಜೀವ, ಪುದ್ಗಲಗಳ ಚಲನೆಗೆ ಈ ಧರ್ಮದ್ರವ್ಯ ಬೇಕು.

### ೩ ಅಧರ್ಮ

ಜೀವ, ಪುದ್ಗಲಗಳು ಒಂದೆಡೆ ನಿಲ್ಲಲು ಅವುಗಳ ಸ್ಥಿತಿಗೆ ಬೇಕಾದ ದ್ರವ್ಯ.

### ೪ ಆಕಾಶ

ಜೀವಾಜೀವಗಳಿಗೆ ಇರಲು ಅವಕಾಶವನ್ನು ಕೊಡುವ ದ್ರವ್ಯ. ಇದು ಸರ್ವವ್ಯಾಪಿ. ಲೋಕಾಕಾಶ, ಅಲೋಕಾಕಾಶ -ಎಂದು ಇದರಲ್ಲಿ ಎರಡು ವಿಧ. ಸಕಲ ದ್ರವ್ಯಗಳೂ ಲೋಕಾಕಾಶದಲ್ಲಿವೆ. ಲೋಕಾಕಾಶದ ಹೊರಗೆ ಇರತಕ್ಕದ್ದು ಅಲೋಕಾಕಾಶ. ಅಲ್ಲಿ ಬೇರೆ ಯಾವ ವಸ್ತುವೂ ಇರುವುದಿಲ್ಲ.

### ೫ ಕಾಲ

ಪ್ರತಿಯೊಂದು ವಸ್ತುವಿನ ಪರಿವರ್ತನೆಗೆ ಸಹಾಯಕವಾಗಿ ಅದರ ರೂಪಾಂತರಕ್ಕೆ ನೆರವಾಗತಕ್ಕದ್ದು ಕಾಲದ್ರವ್ಯ.

ಇವುಗಳಲ್ಲಿ ಕಾಲವನ್ನು ಬಿಟ್ಟು ಉಳಿದ ನಾಲ್ಕು ದ್ರವ್ಯಗಳಿಗೂ ಜೀವನಿಗೂ ಅಸ್ತಿಕಾಯ ವೆಂದು ಹೆಸರು.

ಒಂದು ಪ್ರದೇಶವನ್ನು ವ್ಯಾಪಿಸುವ ವಸ್ತು ಕಾಯವೆನಿಸುತ್ತದೆ. ಅಸ್ತಿ (ಸತ್)ಮತ್ತು ಕಾಯವಾದದ್ದು ಅಸ್ತಿಕಾಯ. ಕಾಲಕ್ಕೆ ಯಾವ ಪ್ರದೇಶವೂ ಬೇಕಿಲ್ಲವಾದರಿಂದ ಅದು ಅಸ್ತಿಕಾಯವಲ್ಲ. ಏವಂಚ ಜೀವಾಸ್ತಿಕಾಯ, ಪುದ್ಗಲಾಸ್ತಿಕಾಯ, ಧರ್ಮಾಸ್ತಿಕಾಯ, ಅಧರ್ಮಾಸ್ತಿಕಾಯ, ಆಕಾಶಾಸ್ತಿಕಾಯ - ಎಂದು ಪಂಚಾಸ್ತಿಕಾಯಗಳಿವೆ. ಕಾಲವೂ ಸೇರಿ ಷಡ್ ದ್ರವ್ಯಗಳು, ಮುಂದೆ ಹೇಳುವ ಆಸ್ರವ - ಮೊದಲಾದವು ಜೀವದಲ್ಲಿಯೂ ಪುದ್ಗಲದಲ್ಲಿಯೂ ಆಗುವ ಪರ್ಯಾಯಗಳು (ಪರಿಣಾಮಗಳು).

೧ ಆಸ್ರವ

ರಾಗದ್ವೇಷಮೋಹಗಳಿಂದ ಜೀವಿಯ ಮನೋವಾಕ್ಕಾಯಗಳಲ್ಲಿ ಕ್ರಿಯೆ ನಡೆಯುತ್ತದೆ. ಈ ಕ್ರಿಯೆಯಿಂದ ಶುಭಾಶುಭಪರಿಣಾಮಗಳುಂಟಾಗಿ ಕರ್ಮಪುದ್ಗಲಗಳು ಹರಿದು ಬಂದು ಜೀವನಲ್ಲಿ ಅಂಟಿಕೊಳ್ಳುತ್ತವೆ. ಇವು ಹರಿದು ಬರುವುದಕ್ಕೆ ಆಸ್ರವವೆಂದು ಹೆಸರು. ಇದರಿಂದ ಜೀವಿಯು ಸುಖದುಃಖಗಳನ್ನನುಭವಿಸುತ್ತ ಸಂಸಾರದಲ್ಲಿ ಇರುತ್ತಾನೆ.

೨ ಬಂಧ

ಹರಿದು ಬಂದ ಪುದ್ಗಲಗಳು ಜೀವನಲ್ಲಿ ಅಂಟಿಕೊಳ್ಳುವುದು ಬಂಧ. ಒದ್ದೆಯ ಬಟ್ಟೆಯಲ್ಲಿ ಧೂಳಿಯ ಕಣಗಳು ಸೇರುವಂತೆ ಈ ಕರ್ಮಪುದ್ಗಲಗಳು ಜೀವನಲ್ಲಿ ಅಂಟಿಕೊಳ್ಳುತ್ತವೆ.

೩. ಸಂವರ

ಕರ್ಮಪುದ್ಗಲಗಳು ತನ್ನೆಡೆಗೆ ಹರಿದು ಬರುವುದನ್ನು ತಡೆಯುವುದೇ ಸಂವರ. ಹೊಸದಾದ ಕರ್ಮಲೇಪವನ್ನು ತಪ್ಪಿಸಿ ಕೊಳ್ಳುವುದೇ ಇದಕ್ಕೆ ಪ್ರಯೋಜನ. ಇಂದ್ರಿಯ ಜಯದಿಂದ ಕರ್ಮಪುದ್ಗಲಗಳ ಆಸ್ರವವನ್ನು ತಡೆಯಬಹುದು.

೪ ನಿರ್ಜರಾ

ಮೋಕ್ಷವನ್ನು ಬಯಸತಕ್ಕವನು ಸಂವರವನ್ನು ಸಾಧಿಸಿದರೂ ಮೊದಲೇ ಸೇರಿಕೊಂಡ ಕರ್ಮಪುದ್ಗಲಗಳಿಂದ ತಪ್ಪಿಸಿ ಕೊಳ್ಳಬೇಕಾಗುತ್ತದೆ. ಭವ್ಯಜೀವಿಯು ತಪೋಬಲದಿಂದ ಈ ಕರ್ಮಕಣಗಳನ್ನು ನಿಃಸತ್ತ್ವಗೊಳಿಸುತ್ತಾನೆ. ಇದೇ ನಿರ್ಜರಾ, ಕರ್ಮಫಲವನ್ನು ಭೋಗಿಸಿದಾಗಲೂ ಈ ಪುದ್ಗಲಗಳು ನಿಃಸತ್ತ್ವವಾಗಿ ಜೀವಾತ್ಮನಿಂದ ಕಳಚಿಕೊಳ್ಳುತ್ತವೆ.

೫ ಮೋಕ್ಷ

ಕರ್ಮಬಂಧದಿಂದ ಜೀವನು ಸಂಸಾರದಲ್ಲಿ ಸಿಕ್ಕಿಕೊಂಡಿದ್ದಾನೆ. ಈ ಕರ್ಮಬಂಧವು ತಪ್ಪಿದರೆ ಮೋಕ್ಷವು ಸಹಜವಾಗಿ ಆಗುತ್ತದೆ. ಹಿಂದೆ ಹೇಳಿದ ಸಂವರದಿಂದ ಕರ್ಮಾಸ್ರವವನ್ನು ತಡೆದು ನಿರ್ಜರೆಯಿಂದ ಮೊದಲಿದ್ದ ಕರ್ಮಪುದ್ಗಲಗಳನ್ನು ನಿಃಸತ್ತ್ವಗೊಳಿಸಿದಾಗ, ಜೀವನು

ಪರಿಶುದ್ಧನಾಗುತ್ತಾನೆ. ಅವನು ಸರ್ವಜ್ಞನೂ ಚೈತನ್ಯಸ್ವರೂಪನೂ ಸಕಲ ವ್ಯಾಪಾರ ವರ್ಜಿತನೂ ನಿತ್ಯಸುಖಾಸ್ಪದನೂ ಆಗುತ್ತಾನೆ. ಈ ದೇಹವನ್ನು ತೊರೆದು ಊರ್ಧ್ವಗತಿಯಲ್ಲಿ ಹೋಗಿ ಲೋಕಾಕಾಶದ ಮೇಲಿರುವ ಸಿದ್ಧಶಿಲೆಯಲ್ಲಿ ನೆಲೆಸುತ್ತಾನೆ. ಅದೇ ಮೋಕ್ಷ. ಅವನಿಗೆ ಪುನರ್ಜನ್ಮವಿಲ್ಲ.

ಈ ಆಸ್ರವಾದಿಗಳು ಪರಿಣಾಮಗಳು. ಇವನ್ನೂ ಜೀವ, ಅಜೀವ-ಎಂಬವನ್ನು ಸೇರಿಸಿ ಸಪ್ತತತ್ತ್ವಗಳಿವೆಯೆಂದೂ ಜೈನರು ಹೇಳುತ್ತಾರೆ.

ಜೀವನನ್ನು ಬಂಧಿಸುವ ಕರ್ಮಗಳು ಎಂಟುವಿಧ -ಅವುಗಳಲ್ಲಿ ಘಾತಿಕರ್ಮಗಳು ಜ್ಞಾನಾವರಣೀಯ, ದರ್ಶನಾವರಣೀಯ, ಮೋಹನೀಯ, ಅಂತರಾಯ -ಎಂದು ನಾಲ್ಕುವಿಧ. ಅಘಾತಿಕರ್ಮಗಳು ವೇದನೀಯ, ನಾಮಿಕ, ಗೋತ್ರಿಕ, ಆಯುಷ್ಕ-ಎಂದು ನಾಲ್ಕುವಿಧ. ಹೀಗೆಯೇ ಕರ್ಮದಲ್ಲಿ ವಿಪುಲವಾದ ಭೇದಗಳುಂಟು.

**ಸಪ್ತಭಂಗೀನಯ**

ಭಂಗವೆಂದರೆ ಭೇದ ಅಥವಾ ಏಕಾಂತತತ್ತ್ವದ ಭಂಗ. ಈ ನಯ ಪರಿಪಾಟಿಯಲ್ಲಿ ಏಳು ಭಂಗಗಳಿರುವುದರಿಂದ ಸಪ್ತಭಂಗೀನಯವೆಂದು ಹೆಸರು. ಪ್ರತಿಯೊಂದು ಸ್ತರದಲ್ಲಿಯೂ 'ಸ್ಯಾತ್'ಎಂಬ ಪದವನ್ನು ಸೇರಿಸುವುದರಿಂದ ಸ್ಯಾದ್ವಾದ ಎಂದೂ ಇದಕ್ಕೆ ಹೆಸರಿದೆ. ಈ ಜಗತ್ತಿನಲ್ಲಿ ಯಾವ ಪದಾರ್ಥವೂ ಏಕಾಂತವಾಗಿ (ಏಕಸ್ವರೂಪ ವುಳ್ಳದ್ದಾಗಿ) ಇಲ್ಲ. ಎಲ್ಲವೂ ವಿರುದ್ಧಶಕ್ತಿಗಳಿಂದ ಕೂಡಿ ಅನೇಕ ಸ್ವರೂಪವುಳ್ಳದ್ದಾಗಿವೆ - ಎಂದು ಜೈನಸಿದ್ಧಾಂತವಿದೆ. ಇದಕ್ಕೆ ಅನೇಕಾಂತವಾದ ಎಂದೂ ಹೆಸರಿದೆ. ಅಂತವೆಂದರೆ ಧರ್ಮವೆಂದರ್ಥ. ಪ್ರತಿಯೊಂದು ವಸ್ತುವೂ ವಿರುದ್ಧವಾದ ಅನೇಕಧರ್ಮಗಳನ್ನು ಹೊಂದಿದೆ ಎಂಬ ವಾದಕ್ಕೆ ಅನೇಕಾಂತವಾದ ಎಂದು ಹೆಸರು.

**ಸಪ್ತ ಭಂಗಗಳು ಹೀಗಿವೆ -**

೧. ಸ್ಯಾದಸ್ತಿ ೨. ಸ್ಯಾನ್ನಾಸ್ತಿ ೩. ಸ್ಯಾದಸ್ತಿ ನಾಸ್ತಿ ಚ ೪. ಸ್ಯಾದವಕ್ತವ್ಯಃ ೫. ಸ್ಯಾದಸ್ತಿ ಚ ಅವಕ್ತವ್ಯಶ್ಚ ೬. ಸ್ಯಾನ್ನಾಸ್ತಿ ಚ ಅವಕ್ತವ್ಯಶ್ಚ ೭. ಸ್ಯಾದಸ್ತಿ ನಾಸ್ತಿ ಚ ಅವಕ್ತವ್ಯಶ್ಚ.

ಇಲ್ಲಿ 'ಸ್ಯಾತ್'ಎಂಬುದು ಅವ್ಯಯ. ಕಥಂಚಿತ್ -ಎಂದರ್ಥ. ಸ್ಯಾದಸ್ತಿ-ಎಂದರೆ ಒಂದಾನೊಂದು ಪ್ರಕಾರವಿಶೇಷದಿಂದ ಇದೆ ಎಂದರ್ಥ. ವೈದಿಕದರ್ಶನಗಳಲ್ಲಿ ಸತ್, ಅಸತ್, ಅನಿರ್ವಚನೀಯ -ಎಂಬ ಮೂರು ಮುಖ್ಯವಾದಗಳುಂಟು. ಆ ಮೂರರ ಸಂಮಿಶ್ರಣದಿಂದ ಮತ್ತೆ ನಾಲ್ಕು ಪ್ರಕಾರಗಳನ್ನು ಸೇರಿಸಿದಾಗ ಸಪ್ತಭಂಗೀನಯವು ಸಿದ್ಧವಾಗುತ್ತದೆ. ಇತರ ಯಾವ ದಾರ್ಶನಿಕರೂ ಈ ವಾದವನ್ನು ಅಂಗೀಕರಿಸಿಲ್ಲ.

# ಶ್ರೀಶಂಕರಾಚಾರ್ಯವಿರಚಿತ ಸ್ತೋತ್ರಗಳು

## ೧. ಕನಕಧಾರಾ ಸ್ತೋತ್ರಮ್

ಅಂಗಂ ಹರೇಃ ಪುಲಕಭೂಷಣಮಾಶ್ರಯಂತೀ
ಭೃಂಗಾಂಗನೇವ ಮುಕುಲಾಭರಣಂ ತಮಾಲಮ್ |
ಅಂಗೀಕೃತಾಖಿಲವಿಭೂತಿರಪಾಂಗಲೀಲಾ
ಮಾಂಗಲ್ಯದಾಸ್ತು ಮಮ ಮಂಗಲದೇವತಾಯಾಃ || ೧

ಮುಗ್ಧಾ ಮುಹುರ್ವಿದಧತೀ ವದನೇ ಮುರಾರೇಃ
ಪ್ರೇಮತ್ರಪಾಪ್ರಣಿಹಿತಾನಿ ಗತಾಗತಾನಿ |
ಮಾಲಾ ದೃಶೋರ್ಮಧುಕರೀವ ಮಹೋತ್ಪಲೇ ಯಾ
ಸಾ ಮೇ ಶ್ರಿಯಂ ದಿಶತು ಸಾಗರಸಂಭವಾಯಾಃ || ೨

ವಿಶ್ವಾಮರೇಂದ್ರ ಪದವಿಭ್ರಮದಾನದಕ್ಷ-
ಮಾನಂದಹೇತುರಧಿಕಂ ಮುರವಿದ್ವಿಷೋಽಪಿ |
ಈಷನ್ನಿಷೀದತು ಮಯಿ ಕ್ಷಣಮೀಕ್ಷಣಾರ್ಧ-
ಮಿಂದೀವರೋದರ ಸಹೋದರಮಿಂದಿರಾಯಾಃ || ೩

ಆಮೀಲಿತಾಕ್ಷಮಧಿಗಮ್ಯ ಮುದಾ ಮುಕುಂದ-
ಮಾನಂದಕಂದಮನಿಮೇಷಮನಂಗತಂತ್ರಮ್ |
ಆಕೇಕರಸ್ಥಿತಕನೀನಿಕಪಕ್ಷ್ಮನೇತ್ರಂ
ಭೂತ್ಯೈ ಭವೇನ್ಮಮ ಭುಜಂಗಶಯಾಂಗನಾಯಾಃ || ೪

ಬಾಹ್ವಂತರೇ ಮಧುಜಿತಃ ಶ್ರಿತಕೌಸ್ತುಭೇ ಯಾ
ಹಾರಾವಲೀವ ಹರಿನೀಲಮಯೀ ವಿಭಾತಿ |
ಕಾಮಪ್ರದಾ ಭಗವತೋಽಪಿ ಕಟಾಕ್ಷಮಾಲಾ
ಕಲ್ಯಾಣಮಾವಹತು ಮೇ ಕಮಲಾಲಯಾಯಾಃ || ೫

ಕಾಲಾಂಬುದಾಲಿಲಲಿತೋರಸಿ ಕೈಟಭಾರೇ-
ರ್ಧಾರಾಧರೇ ಸ್ಫುರತಿ ಯಾ ತಟಿದಂಗನೇವ |
ಮಾತುಃ ಸಮಸ್ತಜಗತಾಂ ಮಹನೀಯಮೂರ್ತಿ-
ರ್ಭದ್ರಾಣಿ ಮೇ ದಿಶತು ಭಾರ್ಗವನಂದನಾಯಾಃ || ೬

ಪ್ರಾಪ್ತಂ ಪದಂ ಪ್ರಥಮತಃ ಖಲು ಯತ್ಪ್ರಭಾವಾ-
ನ್ಮಾಂಗಲ್ಯಭಾಜಿ ಮಧುಮಾಥಿನಿ ಮನ್ಮಥೇನ |
ಮಯ್ಯಾಪತೇತ್ತದಿಹ ಮಂಥರಮೀಕ್ಷಣಾರ್ಧಂ
ಮಂದಾಲಸಂ ಚ ಮಕರಾಲಯಕನ್ಯಕಾಯಾಃ || ೭

ದದ್ಯಾದ್ದಯಾನುಪವನೋ ದ್ರವಿಣಾಂಬುಧಾರಾ-
ಮಸ್ಮಿನ್ನಕಿಂಚನವಿಹಂಗಶಿಶೌ ವಿಷಣ್ಣೇ |
ದುಷ್ಕರ್ಮಘರ್ಮಮಪನೀಯ ಚಿರಾಯ ದೂರಂ
ನಾರಾಯಣಪ್ರಣಯಿನೀ ನಯನಾಂಬುವಾಹಃ || ೮

ಇಷ್ಟಾವಿಶಿಷ್ಟಮತಯೋಽಪಿ ಯಯಾ ದಯಾರ್ದ್ರ-
ದೃಷ್ಟ್ಯಾ ತ್ರಿವಿಷ್ಟಪಪದಂ ಸುಲಭಂ ಲಭಂತೇ |
ದೃಷ್ಟಿಃ ಪ್ರಹೃಷ್ಟಕಮಲೋದರದೀಪ್ತಿರಿಷ್ಟಾಂ
ಪುಷ್ಟಿಂ ಕೃಷೀಷ್ಟ ಮಮ ಪುಷ್ಕರವಿಷ್ಟರಾಯಾಃ || ೯

ಗೀರ್ದೇವತೇತಿ ಗರುಡಧ್ವಜಸುಂದರೀತಿ
ಶಾಕಂಭರೀತಿ ಶಶಿಶೇಖರವಲ್ಲಭೇತಿ |
ಸೃಷ್ಟಿಸ್ಥಿತಿಪ್ರಲಯಕೇಲಿಷು ಸಂಸ್ಥಿತಾಯೈ
ತಸ್ಯೈ ನಮಸ್ತ್ರಿಭುವನೈಕಗುರೋಸ್ತರುಣ್ಯೈ || ೧೦

ಶ್ರುತ್ಯೈ ನಮೋಽಸ್ತು ಶುಭಕರ್ಮಫಲಪ್ರಸೂತ್ಯೈ
ರತ್ಯೈ ನಮೋಽಸ್ತು ರಮಣೀಯ ಗುಣಾರ್ಣವಾಯೈ |
ಶಕ್ತ್ಯೈ ನಮೋಽಸ್ತು ಶತಪತ್ರನಿಕೇತನಾಯೈ
ಪುಷ್ಟ್ಯೈ ನಮೋಽಸ್ತು ಪುರುಷೋತ್ತಮವಲ್ಲಭಾಯೈ || ೧೧

ನಮೋಽಸ್ತು ನಾಲೀಕನಿಭಾನನಾಯೈ
ನಮೋಽಸ್ತು ದುಗ್ಧೋದಧಿಜನ್ಮಭೂಮ್ಯೈ |
ನಮೋಽಸ್ತು ಸೋಮಾಮೃತಸೋದರಾಯೈ
ನಮೋಽಸ್ತು ನಾರಾಯಣವಲ್ಲಭಾಯೈ || ೧೨

ಸಂಪತ್ಕರಾಣಿ ಸಕಲೇಂದ್ರಿಯನಂದನಾನಿ
ಸಾಮ್ರಾಜ್ಯದಾನವಿಭವಾನಿ ಸರೋರುಹಾಕ್ಷಿ |
ತ್ವದ್ವಂದನಾನಿ ದುರಿತಾಹರಣೋದ್ಯತಾನಿ
ಮಾಮೇವ ಮಾತರನಿಶಂ ಕಲಯಂತು ಮಾನ್ಯೇ || ೧೩

ಯತ್ಕಟಾಕ್ಷ ಸಮುಪಾಸನಾವಿಧಿಃ
ಸೇವಕಸ್ಯ ಸಕಲಾರ್ಥಸಂಪದಃ |
ಸಂತನೋತಿ ವಚನಾಂಗಮಾನಸ್ಯೈ-
ಸ್ತ್ವಾಂ ಮುರಾರಿಹೃದಯೇಶ್ವರೀಂ ಭಜೇ || ೧೪

ಸರಸಿಜನಿಲಯೇ ಸರೋಜಹಸ್ತೇ
ಧವಲತಮಾಂಶುಕ ಗಂಧಮಾಲ್ಯಶೋಭೇ |
ಭಗವತಿ ಹರಿವಲ್ಲಭೇ ಮನೋಜ್ಞೇ
ತ್ರಿಭುವನಭೂತಿಕರಿ ಪ್ರಸೀದ ಮಹ್ಯಮ್ || ೧೫

ದಿಗ್ಘಸ್ತಿಭಿಃ ಕನಕಕುಂಭಮುಖಾವಸೃಷ್ಟ-
ಸ್ವರ್ವಾಹಿನೀ ವಿಮಲಚಾರುಜಲಪ್ಲುತಾಂಗೀಮ್ |
ಪ್ರಾತರ್ನಮಾಮಿ ಜಗತಾಂ ಜನನೀಮಶೇಷ-
ಲೋಕಾಧಿನಾಥಗೃಹಿಣೀಮಮೃತಾಬ್ಧಿಪುತ್ರೀಮ್ || ೧೬

ಕಮಲೇ ಕಮಲಾಕ್ಷವಲ್ಲಭೇ
ಕರುಣಾಪೂರತರಂಗಿತೈರಪಾಂಗೈಃ |
ಅವಲೋಕಯ ಮಾಮಕಿಂಚನಾನಾಂ
ಪ್ರಥಮಂ ಪಾತ್ರಮಕೃತ್ರಿಮಂ ದಯಾಯಾಃ || ೧೭

ಸ್ತುವಂತಿ ಯೇ ಸ್ತುತಿಭಿರಮೂಭಿರನ್ವಹಂ
ತ್ರಯೀಮಯೀಂ ತ್ರಿಭುವನಮಾತರಂ ರಮಾಮ್ |
ಗುಣಾಧಿಕಾ ಗುರುತರಭಾಗ್ಯಭಾಜಿನೋ
ಭವಂತಿ ತೇ ಭುವಿ ಬುಧಭಾವಿತಾಶಯಾಃ || ೧೮

✤ ✤ ✤

## ೨. ಮನೀಷಾ ಪಂಚಕಮ್

ಜಾಗ್ರತ್ಸ್ವಪ್ನಸುಷುಪ್ತಿಷು ಸ್ಫುಟತರಾ ಯಾ ಸಂವಿದುಜ್ಜೃಂಭತೇ
ಯಾ ಬ್ರಹ್ಮಾದಿಪಿಪೀಲಿಕಾಂತತನುಷು ಪ್ರೋತಾ ಜಗತ್ಸಾಕ್ಷಿಣೀ |
ಸೈವಾಹಂ ನ ಚ ದೃಶ್ಯವಸ್ತ್ವಿತಿ ದೃಢಪ್ರಜ್ಞಾಪಿ ಯಸ್ಯಾಸ್ತಿ ಚೇ-
ಚ್ಚಾಂಡಾಲೋಽಸ್ತು ಸ ತು ದ್ವಿಜೋಽಸ್ತು ಗುರುರಿತ್ಯೇಷಾ
ಮನೀಷಾ ಮಮ || ೧

ಬ್ರಹ್ಮೈವಾಹಮಿದಂ ಜಗಚ್ಚ ಸಕಲಂ ಚಿನ್ಮಾತ್ರವಿಸ್ತಾರಿತಂ
ಸರ್ವಂ ಚೈತದವಿದ್ಯಯಾ ತ್ರಿಗುಣಯಾಽಶೇಷಂ ಮಯಾ ಕಲ್ಪಿತಮ್ |
ಇತ್ಥಂ ಯಸ್ಯ ದೃಢಾ ಮತಿಃ ಸುಖತರೇ ನಿತ್ಯೇ ಪರೇ ನಿರ್ಮಲೇ
ಚಾಂಡಾಲೋಽಸ್ತು ಸ ತು ದ್ವಿಜೋಽಸ್ತು ಗುರುರಿತ್ಯೇಷಾ
ಮನೀಷಾ ಮಮ || ೨

ಶಶ್ವನ್ನಶ್ವರಮೇವ ವಿಶ್ವಮಖಿಲಂ ನಿಶ್ಚಿತ್ಯ ವಾಚಾ ಗುರೋ-
ರ್ನಿತ್ಯಂ ಬ್ರಹ್ಮ ನಿರಂತರಂ ವಿಮೃಶತಾ ನಿರ್ವ್ಯಾಜಶಾಂತಾತ್ಮನಾ |
ಭೂತಂ ಭಾವಿ ಚ ದುಷ್ಕೃತಂ ಪ್ರದಹತಾ ಸಂವಿನ್ಮಯೇ ಪಾವಕೇ
ಪ್ರಾರಬ್ಧಾಯ ಸಮರ್ಪಿತಂ ಸ್ವವಪುರಿತ್ಯೇಷಾ ಮನೀಷಾ ಮಮ || ೩

ಯಾ ತಿರ್ಯಙ್ನರದೇವತಾಭಿರಹಮಿತ್ಯಂತಃ ಸ್ಫುಟಾ ಗೃಹ್ಯತೇ
ಯದ್ಭಾಸಾ ಹೃದಯಾಕ್ಷದೇಹವಿಷಯಾ ಭಾಂತಿ ಸ್ವತೋಽಚೇತನಾಃ |
ತಾಂ ಭಾಸ್ಯೈಃ ಪಿಹಿತಾರ್ಕಮಂಡಲನಿಭಾಂ ಸ್ಫೂರ್ತಿಂ ಸದಾ ಭಾವಯ-
ನ್ಯೋಗೀ ನಿರ್ವೃತಮಾನಸೋ ಹಿ ಗುರುರಿತ್ಯೇಷಾ ಮನೀಷಾ ಮಮ || ೪

ಯತ್ಸೌಖ್ಯಾಂಬುಧಿ ಲೇಶಲೇಶತ ಇಮೇ ಶಕ್ರಾದಯೋ ನಿರ್ವೃತಾ
ಯಚ್ಚಿತ್ತೇ ನಿತರಾಂ ಪ್ರಶಾಂತಕಲನೇ ಲಬ್ಧ್ವಾ ಮುನಿರ್ನಿರ್ವೃತಃ |
ಯಸ್ಮಿನ್ನಿತ್ಯಸುಖಾಂಬುಧೌ ಗಲಿತಧೀರ್ಬ್ರಹ್ಮೈವ ನ ಬ್ರಹ್ಮವಿತ್-
ದ್ಯಃ ಕಶ್ಚಿತ್ಸ ಸುರೇಂದ್ರವಂದಿತಪದೋ ನೂನಂ ಮನೀಷಾ ಮಮ || ೫

✣ ✣ ✣

## ೩. ಶ್ರೀ ಲಕ್ಷ್ಮೀ ನೃಸಿಂಹ ಕರಾವಲಂಬ ಸ್ತೋತ್ರಮ್

ಶ್ರೀಮತ್ಪಯೋನಿಧಿ ನಿಕೇತನ ಚಕ್ರಪಾಣೇ
ಭೋಗೀಂದ್ರ ಭೋಗಮಣಿರಾಜಿತ ಪುಣ್ಯಮೂರ್ತೇ |
ಯೋಗೀಶ ಶಾಶ್ವತ ಶರಣ್ಯ ಭವಾಬ್ಧಿಪೋತ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ || ೧

ಬ್ರಹ್ಮೇಂದ್ರರುದ್ರಮರುದರ್ಕಕಿರೀಟಕೋಟಿ-
ಸಂಘಟ್ಟಿತಾಂಘ್ರಿ ಕಮಲಾಮಲಕಾಂತಿಕಾಂತ |
ಲಕ್ಷ್ಮೀಲಸತ್ಕುಚ ಸರೋರುಹರಾಜಹಂಸ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ || ೨

ಸಂಸಾರದಾವದಹನಾಕುಲಭೀಕರೋರು-
ಜ್ವಾಲಾವಲೀಭಿರತಿದಗ್ಧತನೂರುಹಸ್ಯ |
ತ್ವತ್ಪಾದಪದ್ಮಸರಸೀಂ ಶರಣಾಗತಸ್ಯ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ || ೩

ಸಂಸಾರಜಾಲಪತಿತಸ್ಯ ಜಗನ್ನಿವಾಸ
ಸರ್ವೇಂದ್ರಿಯಾರ್ಥಬಡಿಶಾಗ್ರಝಷೋಪಮಸ್ಯ |
ಪ್ರೋತ್ಕಂಪಿತ ಪ್ರಚುರತಾಲುಕಮಸ್ತಕಸ್ಯ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ || ೪

ಸಂಸಾರಕೂಪಮತಿಘೋರಮಗಾಧಮೂಲಂ
ಸಂಪ್ರಾಪ್ಯ ದುಃಖ ಶತಸರ್ಪ ಸಮಾಕುಲಸ್ಯ |
ದೀನಸ್ಯ ದೇವ ಕೃಪಯಾ ಪದಮಾಗತಸ್ಯ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ || ೫

ಸಂಸಾರಭೀಕರ ಕರೀಂದ್ರ ಕರಾಭಿಘಾತ-
ನಿಷ್ಪೀಡ್ಯಮಾನವಪುಷಃ ಸಕಲಾರ್ತಿನಾಶ |
ಪ್ರಾಣಪ್ರಯಾಣ ಭವಭೀತಿ ಸಮಾಕುಲಸ್ಯ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ || ೬

ಸಂಸಾರಸರ್ಪ ವಿಷದಿಗ್ಧಮಹೋಗ್ರ ತೀವ್ರ-
ದಂಷ್ಟ್ರಾಗ್ರಕೋಟಿಪರಿದಷ್ಟವಿನಷ್ಟಮೂರ್ತೇಃ |
ನಾಗಾರಿವಾಹನ ಸುಧಾಬ್ಧಿನಿವಾಸ ಶೌರೇ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ || ೭

ಸಂಸಾರವೃಕ್ಷಮಘಬೀಜಮನಂತಕರ್ಮ-
ಶಾಖಾಯುತಂ ಕರಣಪತ್ರಮನಂಗಪುಷ್ಪಮ್ |
ಆರುಹ್ಯ ದುಃಖಫಲಿನಂ ಪತತೋ ದಯಾಲೋ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ || ೮

ಸಂಸಾರಸಾಗರ ವಿಶಾಲಕರಾಲವಾಲ-
ನಕ್ರಗ್ರಹಗ್ರಸಿತ ನಿಗ್ರಹ ವಿಗ್ರಹಸ್ಯ |
ವ್ಯಗ್ರಸ್ಯ ರಾಗನಿಚಯೋರ್ಮಿನಿಪೀಡಿತಸ್ಯ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ || ೯

ಸಂಸಾರಸಾಗರ ನಿಮಜ್ಜನಮುಹ್ಯಮಾನಂ
ದೀನಂ ವಿಲೋಕಯ ವಿಭೋ ಕರುಣಾನಿಧೇ ಮಾಮ್ |
ಪ್ರಹ್ಲಾದಖೇದಪರಿಹಾರ ಕೃತಾವತಾರ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ || ೧೦

ಸಂಸಾರ ಘೋರಗಹನೇ ಚರತೋ ಮುರಾರೇ
ಮಾರೋಗ್ರಭೀಕರಮೃಗ ಪ್ರಚುರಾರ್ದಿತಸ್ಯ |
ಆರ್ತಸ್ಯ ಮತ್ಸರನಿದಾಘಸುದುಃಖಿತಸ್ಯ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ || ೧೧

ಬದ್ಧ್ವಾ ಗಲೇ ಯಮಭಟಾ ಬಹು ತರ್ಜಯಂತಃ
ಕರ್ಷಂತಿ ಯತ್ರ ಭವಪಾಶಶತೈರ್ಯುತಂ ಮಾಮ್ |
ಏಕಾಕಿನಂ ಪರವಶಂ ಚಕಿತಂ ದಯಾಲೋ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ || ೧೨

ಲಕ್ಷ್ಮೀಪತೇ ಕಮಲನಾಭ ಸುರೇಶ ವಿಷ್ಣೋ
ಯಜ್ಞೇಶ ಯಜ್ಞ ಮಧುಸೂದನ ವಿಶ್ವರೂಪ |
ಬ್ರಹ್ಮಣ್ಯ ಕೇಶವ ಜನಾರ್ದನ ವಾಸುದೇವ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ || ೧೩

ಏಕೇನ ಚಕ್ರಮಪರೇಣ ಕರೇಣ ಶಂಖ-
ಮನ್ಯೇನ ಸಿಂಧುತನಯಾಮವಲಂಬ್ಯತಿಷ್ಠನ್ |
ವಾಮೇತರೇಣ ವರದಾಭಯ ಪದ್ಮ ಚಿಹ್ನಂ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ || ೧೪

ಅಂಧಸ್ಯ ಮೇ ಹೃತವಿವೇಕಮಹಾಧನಸ್ಯ
ಚೋರೈರ್ಮಹಾಬಲಿಭಿರಿಂದ್ರಿಯ ನಾಮಧೇಯೈಃ |
ಮೋಹಾಂಧಕಾರಕುಹರೇ ವಿನಿಪಾತಿತಸ್ಯ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ || ೧೫

ಪ್ರಹ್ಲಾದ ನಾರದ ಪರಾಶರ ಪುಂಡರೀಕ-
ವ್ಯಾಸಾದಿ ಭಾಗವತ ಪುಂಗವಹೃನ್ನಿವಾಸ |
ಭಕ್ತಾನುರಕ್ತ ಪರಿಪಾಲನ ಪಾರಿಜಾತ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ || ೧೬

ಲಕ್ಷ್ಮೀನೃಸಿಂಹ ಚರಣಾಬ್ಜಮಧುವ್ರತೇನ
ಸ್ತೋತ್ರಂ ಕೃತಂ ಶುಭಕರಂ ಭುವಿ ಶಂಕರೇಣ |
ಯೇ ತತ್ಪಠಂತಿ ಮನುಜಾ ಹರಿಭಕ್ತಿಯುಕ್ತಾ-
ಸ್ತೇ ಯಾಂತಿ ತತ್ಪದ ಸರೋಜಮಖಂಡರೂಪಮ್ || ೧೭

## ೪. ಗಣೇಶ ಪಂಚರತ್ನಮ್

ಮುದಾ ಕರಾತ್ತಮೋದಕಂ ಸದಾ ವಿಮುಕ್ತಿಸಾಧಕಂ
ಕಲಾಧರಾವತಂಸಕಂ ವಿಲಾಸಿಲೋಕ ರಕ್ಷಕಮ್ |
ಅನಾಯಕೈಕನಾಯಕಂ ವಿನಾಶಿತೇಭದೈತ್ಯಕಂ
ನತಾಶುಭಾಶುನಾಶಕಂ ನಮಾಮಿ ತಂ ವಿನಾಯಕಮ್ || ೧

ನತೇತರಾತಿಭೀಕರಂ ನವೋದಿತಾರ್ಕಭಾಸ್ವರಂ
ನಮತ್ಸುರಾರಿ ನಿರ್ಜರಂ ನತಾಧಿಕಾಪದುದ್ಧರಮ್ |
ಸುರೇಶ್ವರಂ ನಿಧೀಶ್ವರಂ ಗಜೇಶ್ವರಂ ಗಣೇಶ್ವರಂ
ಮಹೇಶ್ವರಂ ತಮಾಶ್ರಯೇ ಪರಾತ್ಪರಂ ನಿರಂತರಮ್ || ೨

ಸಮಸ್ತಲೋಕಶಂಕರಂ ನಿರಸ್ತದೈತ್ಯಕುಂಜರಂ
ದರೇತರೋದರಂ ವರಂ ವರೇಭವಕ್ತ್ರಮಕ್ಷರಮ್ |
ಕೃಪಾಕರಂ ಕ್ಷಮಾಕರಂ ಮುದಾಕರಂ ಯಶಸ್ಕರಂ
ಮನಸ್ಕರಂ ನಮಸ್ಕೃತಾಂ ನಮಸ್ಕರೋಮಿ ಭಾಸ್ವರಮ್ || ೩

ಅಕಿಂಚನಾರ್ತಿಮಾರ್ಜನಂ ಚಿರಂತನೋಕ್ತಿಭಾಜನಂ
ಪುರಾರಿಪೂರ್ವನಂದನಂ ಸುರಾರಿಗರ್ವ ಚರ್ವಣಮ್ |
ಪ್ರಪಂಚನಾಶಭೀಷಣಂ ಧನಂಜಯಾದಿ ಭೂಷಣಂ
ಕಪೋಲದಾನವಾರಣಂ ಭಜೇ ಪುರಾಣವಾರಣಮ್ || ೪

ನಿತಾಂತಕಾಂತದಂತಕಾಂತಿ ಮಂತಕಾಂತಕಾತ್ಮಜಂ
ಅಚಿಂತ್ಯರೂಪಮಂತಹೀನಮಂತರಾಯಕೃಂತನಮ್ |
ಹೃದಂತರೇ ನಿರಂತರಂ ವಸಂತಮೇವ ಯೋಗಿನಾಂ
ತಮೇಕದಂತಮೇವ ತಂ ವಿಚಿಂತಯಾಮಿ ಸಂತತಮ್ || ೫

ಮಹಾಗಣೇಶ ಪಂಚರತ್ನಮಾದರೇಣ ಯೋऽನ್ವಹಂ
ಪ್ರಜಲ್ಪತಿ ಪ್ರಭಾತಕೇ ಹೃದಿ ಸ್ಮರನ್ ಗಣೇಶ್ವರಮ್ |
ಅರೋಗತಾಮದೋಷತಾಂ ಸುಸಾಹಿತೀಂ ಸುಪುತ್ರತಾಂ
ಸಮಾಹಿತಾಯುರಷ್ಟಭೂತಿಮಭ್ಯುಪೈತಿ ಸೋऽಚಿರಾತ್ || ೬

✤ ✤ ✤

## ೫. ಮೋಹಮುದ್ಗರಃ

ಭಜ ಗೋವಿಂದಂ ಭಜ ಗೋವಿಂದಂ
ಗೋವಿಂದಂ ಭಜ ಮೂಢಮತೇ |
ಸಂಪ್ರಾಪ್ತೇ ಸನ್ನಿಹಿತೇ ಕಾಲೇ
ನ ಹಿ ನಹಿ ರಕ್ಷತಿ ಡುಕುರುಞ್ಕರಣೇ || ೧

ಮೂಢ ಜಹೀಹಿ ಧನಾಗಮತೃಷ್ಣಾಂ
ಕುರು ಸದ್ಬುದ್ಧಿಂ ಮನಸಿವಿತೃಷ್ಣಾಮ್ |
ಯಲ್ಲಭಸೇ ನಿಜಕರ್ಮೋಪಾತ್ತಂ
ವಿತ್ತಂ ತೇನ ವಿನೋದಯ ಚಿತ್ತಮ್ || ೨

ನಾರೀಸ್ತನಭರನಾಭೀದೇಶಂ
ದೃಷ್ಟ್ವಾ ಮಾ ಗಾ ಮೋಹಾವೇಶಮ್ |
ಏತನ್ಮಾಂಸವಸಾದಿ ವಿಕಾರಂ
ಮನಸಿ ವಿಚಿಂತಯ ವಾರಂ ವಾರಮ್ || ೩

ನಲಿನೀದಲಗತ ಜಲಮತಿತರಲಂ
ತದ್ವಜ್ಜೀವಿತಮತಿಶಯಚಪಲಮ್ |
ವಿದ್ಧಿ ವ್ಯಾಧ್ಯಭಿಮಾನಗ್ರಸ್ತಂ
ಲೋಕಂ ಶೋಕಹತಂ ಚ ಸಮಸ್ತಮ್ || ೪

ಯಾವದ್ವಿತ್ತೋಪಾರ್ಜನಸಕ್ತ-
ಸ್ತಾವನ್ನಿಜಪರಿವಾರೋ ರಕ್ತಃ |
ಪಶ್ಚಾಜ್ಜೀವತಿ ಜರ್ಜರದೇಹೇ
ವಾರ್ತಾಂ ಪೃಚ್ಛತಿ ಕೋಽಪಿ ನ ಗೇಹೇ || ೫

ಯಾವತ್ಪವನೋ ನಿವಸತಿ ದೇಹೇ
ತಾವತ್ಪೃಚ್ಛತಿ ಕುಶಲಂ ಗೇಹೇ |
ಗತವತಿ ವಾಯೌ ದೇಹಾಪಾಯೇ
ಭಾರ್ಯಾ ಬಿಭ್ಯತಿ ತಸ್ಮಿನ್ಕಾಯೇ || ೬

ಬಾಲಸ್ತಾವತ್ಕ್ರೀಡಾಸಕ್ತಃ
ತರುಣಸ್ತಾವತ್ತರುಣೀಸಕ್ತಃ |
ವೃದ್ಧಸ್ತಾವಚ್ಚಿಂತಾಸಕ್ತಃ
ಪರಮೇ ಬ್ರಹ್ಮಣಿ ಕೋಽಪಿ ನ ಸಕ್ತಃ || ೭

ಕಾ ತೇ ಕಾಂತಾ ಕಸ್ತೇ ಪುತ್ರಃ
ಸಂಸಾರೋಽಯಮತೀವ ವಿಚಿತ್ರಃ |
ಕಸ್ಯ ತ್ವಂ ಕಃ ಕುತ ಆಯಾತ-
ಸ್ತತ್ತ್ವಂ ಚಿಂತಯ ಯದಿದಂ ಭ್ರಾತಃ || ೮

ಸತ್ಸಂಗತ್ವೇ ನಿಃಸಂಗತ್ವಂ
ನಿಃಸಂಗತ್ವೇ ನಿರ್ಮೋಹತ್ವಮ್ |
ನಿರ್ಮೋಹತ್ವೇ ನಿಶ್ಚಲತತ್ತ್ವಂ
ನಿಶ್ಚಲತತ್ತ್ವೇ ಜೀವನ್ಮುಕ್ತಿಃ || ೯

ವಯಸಿ ಗತೇ ಕಃ ಕಾಮವಿಕಾರಃ
ಶುಷ್ಕೇ ನೀರೇ ಕಃ ಕಾಸಾರಃ |
ಕ್ಷೀಣೇ ವಿತ್ತೇ ಕಃ ಪರಿವಾರಃ
ಜ್ಞಾತೇ ತತ್ತ್ವೇ ಕಃ ಸಂಸಾರಃ || ೧೦

ಮಾ ಕುರು ಧನಜನ ಯೌವನಗರ್ವಂ
ಹರತಿ ನಿಮೇಷಾತ್ಕಾಲಃ ಸರ್ವಮ್ |
ಮಾಯಾಮಯಮಿದಮಖಿಲಂ ಹಿತ್ವಾ-
ಬ್ರಹ್ಮಪದಂ ತ್ವಂ ಪ್ರವಿಶ ವಿದಿತ್ವಾ || ೧೧

ದಿನಯಾಮಿನ್ಯೌ ಸಾಯಂ ಪ್ರಾತಃ
ಶಿಶಿರವಸಂತೌ ಪುನರಾಯಾತಃ |
ಕಾಲಃ ಕ್ರೀಡತಿ ಗಚ್ಛತ್ಯಾಯು-
ಸ್ತದಪಿ ನ ಮುಂಚತ್ಯಾಶಾವಾಯುಃ || ೧೨

ಕಾ ತೇ ಕಾಂತಾ ಧನಗತ ಚಿಂತಾ
ವಾತುಲ ಕಿಂ ತವ ನಾಸ್ತಿ ನಿಯಂತಾ |
ತ್ರಿಜಗತಿ ಸಜ್ಜನಸಂಗತಿರೇಕಾ
ಭವತಿ ಭವಾರ್ಣವತರಣೇ ನೌಕಾ || ೧೩

ಜಟಿಲೋ ಮುಂಡೀ ಲುಂಚಿತಕೇಶಃ
ಕಾಷಾಯಾಂಬರ ಬಹುಕೃತವೇಷಃ |
ಪಶ್ಯನ್ನಪಿ ಚ ನ ಪಶ್ಯತಿ ಮೂಢೋ
ಹ್ಯುದರನಿಮಿತ್ತಂ ಬಹುಕೃತವೇಷಃ || ೧೪

ಅಂಗಂ ಗಲಿತಂ ಪಲಿತಂ ಮುಂಡಂ
ದಶನವಿಹೀನಂ ಜಾತಂ ತುಂಡಮ್ |
ವೃದ್ಧೋಯಾತಿ ಗೃಹೀತ್ವಾ ದಂಡಂ
ತದಪಿ ನ ಮುಂಚತ್ಯಾಶಾಪಿಂಡಮ್ || ೧೫

ಅಗ್ರೇ ವಹ್ನಿಃ ಪೃಷ್ಠೇ ಭಾನೂ
ರಾತ್ರೌ ಚುಬುಕಸಮರ್ಪಿತಜಾನುಃ |
ಕರತಲಭಿಕ್ಷಸ್ತರುತಲವಾಸಃ
ತದಪಿ ನ ಮುಂಚತ್ಯಾಶಾಪಾಶಃ || ೧೬

ಕುರುತೇ ಗಂಗಾಸಾಗರಗಮನಂ
ವ್ರತಪರಿಪಾಲನಮಥವಾ ದಾನಮ್ |
ಜ್ಞಾನವಿಹೀನಃ ಸರ್ವಮತೇನ
ಮುಕ್ತಿಂ ನ ಭಜತಿ ಜನ್ಮಶತೇನ || ೧೭

ಸುರಮಂದಿರ ತರುಮೂಲನಿವಾಸಃ
ಶಯ್ಯಾ ಭೂತಲಮಜಿನಂ ವಾಸಃ |
ಸರ್ವಪರಿಗ್ರಹ ಭೋಗತ್ಯಾಗಃ
ಕಸ್ಯ ಸುಖಂ ನ ಕರೋತಿ ವಿರಾಗಃ || ೧೮

ಯೋಗರತೋ ವಾ ಭೋಗರತೋ ವಾ
ಸಂಗರತೋ ವಾ ಸಂಗವಿಹೀನಃ |
ಯಸ್ಯ ಬ್ರಹ್ಮಣಿ ರಮತೇ ಚಿತ್ತಂ
ನಂದತಿ ನಂದತಿ ನಂದತ್ಯೇವ || ೧೯

ಭಗವದ್ಗೀತಾ ಕಿಂಚಿದಧೀತಾ
ಗಂಗಾಜಲಲವಕಣಿಕಾ ಪೀತಾ |
ಸಕೃದಪಿ ಯೇನ ಮುರಾರಿಸಮರ್ಚಾ
ಕ್ರಿಯತೇ ತಸ್ಯ ಯಮೇನ ನ ಚರ್ಚಾ || ೨೦

ಪುನರಪಿ ಜನನಂ ಪುನರಪಿ ಮರಣಂ
ಪುನರಪಿ ಜನನೀ ಜಠರೇ ಶಯನಮ್ |
ಇಹ ಸಂಸಾರೇ ಬಹುದುಸ್ತಾರೇ
ಕೃಪಯಾಽಪಾರೇ ಪಾಹಿ ಮುರಾರೇ || ೨೧

ಕಸ್ತ್ವಂ ಕೋಽಹಂ ಕುತ ಆಯಾತಃ
ಕಾ ಮೇ ಜನನೀ ಕೋ ಮೇ ತಾತಃ |
ಇತಿ ಪರಿಭಾವಯ ಸರ್ವಮಸಾರಂ
ವಿಶ್ವಂ ತ್ಯಕ್ತ್ವಾ ಸ್ವಪ್ನವಿಚಾರಮ್ || ೨೨

ತ್ವಯಿ ಮಯಿ ಚಾನ್ಯತ್ರೈಕೋ ವಿಷ್ಣು-
ರ್ವ್ಯರ್ಥಂ ಕುಪ್ಯಸಿ ಮಯ್ಯಸಹಿಷ್ಣುಃ |
ಸರ್ವಸ್ಮಿನ್ನಪಿ ಪಶ್ಯಾತ್ಮಾನಂ
ಸರ್ವತ್ರೋತ್ಸೃಜ ಭೇದಜ್ಞಾನಮ್ || ೨೩

ಶತ್ರೌ ಮಿತ್ರೇ ಪುತ್ರೇ ಬಂಧೌ
ಮಾ ಕುರು ಯತ್ನಂ ವಿಗ್ರಹಸಂಧೌ |
ಭವ ಸಮಚಿತ್ತಃ ಸರ್ವತ್ರ ತ್ವಂ
ವಾಂಛಸ್ಯಚಿರಾದ್ಯದಿ ವಿಷ್ಣುತ್ವಮ್ || ೨೪

ಕಾಮಂ ಕ್ರೋಧಂ ಲೋಭಂ ಮೋಹಂ
ತ್ಯಕ್ತ್ವಾತ್ಮಾನಂ ಭಾವಯ ಕೋಽಹಮ್ |
ಆತ್ಮಜ್ಞಾನವಿಹೀನಾ ಮೂಢಾ-
ಸ್ತೇ ಪಚ್ಯಂತೇ ನರಕನಿಗೂಢಾಃ || ೨೫

ಗೇಯಂ ಗೀತಾ ನಾಮಸಹಸ್ರಂ
ಧ್ಯೇಯಂ ಶ್ರೀಪತಿರೂಪಮಜಸ್ರಮ್ |
ನೇಯಂ ಸಜ್ಜನಸಂಗೇ ಚಿತ್ತಂ
ದೇಯಂ ದೀನಜನಾಯ ಚ ವಿತ್ತಮ್ || ೨೬

ಸುಖತಃ ಕ್ರಿಯತೇ ರಾಮಾಭೋಗಃ
ಪಶ್ಚಾದ್ ಹಂತ ಶರೀರೇ ರೋಗಃ |
ಯದ್ಯಪಿ ಲೋಕೇ ಮರಣಂ ಶರಣಂ
ತದಪಿ ನ ಮುಂಚತಿ ಪಾಪಾಚರಣಮ್ || ೨೭

ಅರ್ಥಮನರ್ಥಂ ಭಾವಯ ನಿತ್ಯಂ
ನಾಸ್ತಿ ತತಃ ಸುಖಲೇಶಃ ಸತ್ಯಮ್ |
ಪುತ್ರಾದಪಿ ಧನಭಾಜಾಂ ಭೀತಿಃ
ಸರ್ವತ್ರೈಷಾ ವಿಹಿತಾ ರೀತಿಃ || ೨೮

ಪ್ರಾಣಾಯಾಮಂ ಪ್ರತ್ಯಾಹಾರಂ
ನಿತ್ಯಾನಿತ್ಯವಿವೇಕ ವಿಚಾರಮ್ |
ಜಾಪ್ಯಸಮೇತ ಸಮಾಧಿವಿಧಾನಂ
ಕುರ್ವವಧಾನಂ ಮಹದವಧಾನಮ್ || ೨೯

ಗುರುಚರಣಾಂಬುಜ ನಿರ್ಭರಭಕ್ತಃ
ಸಂಸಾರಾದಚಿರಾದ್ಭವ ಮುಕ್ತಃ |
ಸೇಂದ್ರಿಯಮಾನಸ ನಿಯಮಾದೇವ
ದ್ರಕ್ಷ್ಯಸಿ ನಿಜಹೃದಯಸ್ಥಂ ದೇವಮ್ || ೩೦

✤ ✤ ✤

## ೬. ನಿರ್ವಾಣಷಟ್ಕಮ್

ಮನೋಬುದ್ಧ್ಯಹಂಕಾರ ಚಿತ್ತಾನಿ ನಾಹಂ
ನ ಚ ಶ್ರೋತ್ರಜಿಹ್ವೇ ನ ಚ ಘ್ರಾಣನೇತ್ರೇ ।
ನ ಚ ವ್ಯೋಮ ಭೂಮೀ ನ ತೇಜೋ ನ ವಾಯುಃ
ಚಿದಾನಂದ ರೂಪಃ ಶಿವೋಽಹಂ ಶಿವೋಽಹಮ್ ॥ ೧

ನ ಚ ಪ್ರಾಣಸಂಜ್ಞೋ ನ ವೈ ಪಂಚವಾಯು
ನ ವಾ ಸಪ್ತಧಾತು ನ ವಾ ಪಂಚಕೋಶಮ್ ।
ನ ವಾಕ್‌ಪಾಣಿಪಾದಂ ನ ಚೋಪಸ್ಥಪಾಯೂ
ಚಿದಾನಂದ ರೂಪಃ ಶಿವೋಽಹಂ ಶಿವೋಽಹಮ್ ॥ ೨

ನ ಮೇ ದ್ವೇಷರಾಗೌ ನ ಮೇ ಲೋಭ ಮೋಹೌ
ಮದೋ ನೈವ ಮೇ ನೈವ ಮಾತ್ಸರ್ಯಭಾವಃ ।
ನ ಧರ್ಮೋ ನ ಚಾರ್ಥೋ ನ ಕಾಮೋ ನ ಮೋಕ್ಷಃ
ಚಿದಾನಂದ ರೂಪಃ ಶಿವೋಽಹಂ ಶಿವೋಽಹಮ್ ॥ ೩

ನ ಪುಣ್ಯಂ ನ ಪಾಪಂ ನ ಸೌಖ್ಯಂ ನ ದುಃಖಂ
ನ ಮಂತ್ರೋ ನ ತೀರ್ಥಂ ನ ವೇದಾ ನ ಯಜ್ಞಾಃ ।
ಅಹಂ ಭೋಜನಂ ನೈವ ಭೋಜ್ಯಂ ನ ಭೋಕ್ತಾ
ಚಿದಾನಂದ ರೂಪಃ ಶಿವೋಽಹಂ ಶಿವೋಽಹಮ್ ॥ ೪

ನ ಮೃತ್ಯುರ್ನ ಶಂಕಾ ನ ಮೇ ಜಾತಿಭೇದಃ
ಪಿತಾ ನೈವ ಮೇ ನೈವ ಮಾತಾ ಚ ಜನ್ಮ ।
ನ ಬಂಧುರ್ನ ಮಿತ್ರಂ ಗುರುರ್ನೈವ ಶಿಷ್ಯಃ
ಚಿದಾನಂದ ರೂಪಃ ಶಿವೋಽಹಂ ಶಿವೋಽಹಮ್ ॥ ೫

ಅಹಂ ನಿರ್ವಿಕಲ್ಪೋ ನಿರಾಕಾರರೂಪೋ
ವಿಭುತ್ವಾಚ್ಚ ಸರ್ವತ್ರ ಸರ್ವೇಂದ್ರಿಯಾಣಾಮ್ ।
ನ ಚಾ ಸಂಗತಿ ರ್ನೈವ ಮುಕ್ತಿರ್ನ ಮೇಯಃ
ಚಿದಾನಂದ ರೂಪಃ ಶಿವೋಽಹಂ ಶಿವೋಽಹಮ್ ॥ ೬

❖ ❖ ❖

## ಹಸ್ತಾಮಲಕ ಸ್ತೋತ್ರಮ್
## (ಹಸ್ತಾಮಲಕಾಚಾರ್ಯ ರಚಿತ)

ನಿಮಿತ್ತಂ ಮನಶ್ಚಕ್ಷುರಾದಿಪ್ರವೃತ್ತೌ
ನಿರಸ್ತಾಖಿಲೋಪಾಧಿರಾಕಾಶಕಲ್ಪಃ ।
ರವಿರ್ಲೋಕ ಚೇಷ್ಟಾನಿಮಿತ್ತಂ ಯಥಾ ಯಃ
ಸ ನಿತ್ಯೋಪಲಬ್ಧಿಸ್ವರೂಪೋಽಹಮಾತ್ಮಾ ॥ ೧

ಯಮ ಗ್ನ್ಯುಷ್ಣವನ್ನಿತ್ಯ ಬೋಧಸ್ವರೂಪಂ
ಮನಶ್ಚಕ್ಷುರಾದೀನ್ಯಬೋಧಾತ್ಮಕಾನಿ ।
ಪ್ರವರ್ತಂತ ಆಶ್ರಿತ್ಯ ನಿಷ್ಕಂಪಮೇಕಂ
ಸ ನಿತ್ಯೋಪಲಬ್ಧಿಸ್ವರೂಪೋಽಹಮಾತ್ಮಾ ॥ ೨

ಮುಖಾಭಾಸಕೋ ದರ್ಪಣೇ ದೃಶ್ಯಮಾನೋ
ಮುಖತ್ವಾತ್ ಪೃಥಕ್ತ್ವೇನ ನೈವಾಸ್ತಿ ವಸ್ತು ।
ಚಿದಾಭಾಸಕೋ ಧೀಷು ಜೀವೋಽಪಿ ತದ್ವತ್
ಸ ನಿತ್ಯೋಪಲಬ್ಧಿಸ್ವರೂಪೋಽಹಮಾತ್ಮಾ ॥ ೩

ಯಥಾ ದರ್ಪಣಾಭಾವ ಆಭಾಸಹಾನೌ
ಮುಖಂ ವಿದ್ಯತೇ ಕಲ್ಪನಾಹೀನಮೇಕಮ್ ।
ತಥಾ ಧೀವಿಯೋಗೇ ನಿರಾಭಾಸಕೋ ಯಃ
ಸ ನಿತ್ಯೋಪಲಬ್ಧಿಸ್ವರೂಪೋಽಹಮಾತ್ಮಾ ॥ ೪

ಮನಶ್ಚಕ್ಷುರಾದೇರ್ವಿಯುಕ್ತಃ ಸ್ವಯಂ ಯೋ
ಮನಶ್ಚಕ್ಷುರಾದೇರ್ಮನಶ್ಚಕ್ಷುರಾದಿಃ ।
ಮನಶ್ಚಕ್ಷುರಾದೇರಗಮ್ಯಸ್ವರೂಪಃ
ಸ ನಿತ್ಯೋಪಲಬ್ಧಿಸ್ವರೂಪೋಽಹಮಾತ್ಮಾ ॥ ೫

ಯ ಏಕೋ ವಿಭಾತಿ ಸ್ವತಃ ಶುದ್ಧಚೇತಾಃ
ಪ್ರಕಾಶಸ್ವರೂಪೋಽಪಿ ನಾನೇವ ಧೀಷು ।
ಶರಾವೋದಕಸ್ಥೋ ಯಥಾ ಭಾನುರೇಕಃ
ಸ ನಿತ್ಯೋಪಲಬ್ಧಿ ಸ್ವರೂಪೋಽಹಮಾತ್ಮಾ ॥ ೬

ಯಥಾಽನೇಕಚಕ್ಷುಃ ಪ್ರಕಾಶೋ ರವಿರ್ನ
ಕ್ರಮೇಣ ಪ್ರಕಾಶೀಕರೋತಿ ಪ್ರಕಾಶ್ಯಮ್ |
ಅನೇಕಾ ಧಿಯೋ ಯಸ್ತ್ವಥೈಕ ಪ್ರಬೋಧಃ
ಸ ನಿತ್ಯೋಪಲಬ್ಧಿಸ್ವರೂಪೋಽಹಮಾತ್ಮಾ || ೭

ವಿವಸ್ವತ್ಪ್ರಭಾತಂ ಯಥಾರೂಪಮಕ್ಷಂ
ಪ್ರಗೃಹ್ಣಾತಿ ನಾಽಽಭಾತಮೇವಂ ವಿವಸ್ವಾನ್ |
ತಥಾ ಭಾತ ಆಭಾಸಯತ್ಯೇಕಮಕ್ಷಂ
ಸ ನಿತ್ಯೋಪಲಬ್ಧಿಸ್ವರೂಪೋಽಹಮಾತ್ಮಾ || ೮

ಯಥಾ ಸೂರ್ಯ ಏಕೋಽಪ್ಯನೇಕಶ್ಚಲಾ ಸು
ಸ್ಥಿರಾಸ್ವಪ್ಸು ಚೈಕೋಽಗ್ನಿಭಾವ್ಯಸ್ವರೂಪಃ |
ಚಲಾಸು ಪ್ರಭಿನ್ನಃ ಸ್ವಧೀಷ್ವೇಕ ಏವ
ಸ ನಿತ್ಯೋಪಲಬ್ಧಿ ಸ್ವರೂಪೋಽಹಮಾತ್ಮಾ || ೯

ಘನಚ್ಛನ್ನದೃಷ್ಟಿರ್ಘನಚ್ಛನ್ನಮರ್ಕಂ
ಯಥಾ ಮನ್ಯತೇ ನಿಷ್ಪ್ರಭಂ ಚಾತಿಮೂಢಃ |
ತಥಾ ಬದ್ಧವದ್ಭಾತಿ ಕೋ ಮೂಢ ದೃಷ್ಟೇಃ
ಸ ನಿತ್ಯೋಪಲಬ್ಧಿ ಸ್ವರೂಪೋಽಹಮಾತ್ಮಾ || ೧೦

ಸಮಸ್ತೇಷು ವಸ್ತುಷ್ವನುಸ್ಯೂತ ಮೇಕಂ
ಸಮಸ್ತಾನಿ ವಸ್ತೂನಿ ಯಂ ನ ಸ್ಪೃಶಂತಿ |
ವಿಯದ್ವತ್ ಸದಾ ಶುದ್ಧಮಚ್ಛಸ್ವರೂಪಃ
ಸ ನಿತ್ಯೋಪಲಬ್ಧಿಸ್ವರೂಪೋಽಹಮಾತ್ಮಾ || ೧೧

ಉಪಾಧೌ ಯಥಾ ಭೇದತಾ ಸನ್ಮಣೀನಾಂ
ತಥಾ ಭೇದತಾ ಬುದ್ಧಿ ಭೇದೇಷು ತೇಽಪಿ |
ಯಥಾ ಚಂದ್ರಿಕಾಣಾಂ ಜಲೇ ಚಂಚಲತ್ವಂ
ಸ ನಿತ್ಯೋಪಲಬ್ಧಿಸ್ವರೂಪೋಽಹಮಾತ್ಮಾ || ೧೨

❖ ❖ ❖

## ಶ್ರೀ ತೋಟಕಾಷ್ಟಕಮ್
## (ತೋಟಕಾಚಾರ್ಯರಚಿತ)

ವಿದಿತಾಖಿಲಶಾಸ್ತ್ರ ಸುಧಾಜಲಧೇ
ಮಹಿತೋಪನಿಷತ್ಕಥಿತಾರ್ಥನಿಧೇ ।
ಹೃದಯೇ ಕಲಯೇ ವಿಮಲಂ ಚರಣಂ
ಭವ ಶಂಕರದೇಶಿಕ ಮೇ ಶರಣಮ್ ॥ ೧

ಕರುಣಾವರುಣಾಲಯ ಪಾಲಯ ಮಾಂ
ಭವಸಾಗರದುಃಖ ವಿದೂರಹೃದಮ್ ।
ರಹಿತಾಖಿಲದರ್ಶನತತ್ತ್ವರುಚಿಂ
ಭವ ಶಂಕರದೇಶಿಕ ಮೇ ಶರಣಮ್ ॥ ೨

ಭವತಾ ಜನತಾ ಸುಹಿತಾ ಭವಿತಾ
ನಿಜಬೋಧವಿಚಾರಣಚಾರುಮತೇ ।
ಕಲಯೇಶ್ವರ ಜೀವ ವಿವೇಕಭಿದಂ
ಭವ ಶಂಕರದೇಶಿಕ ಮೇ ಶರಣಮ್ ॥ ೩

ಭವ ಏವ ಭವಾನಿತಿ ಮೇ ನಿತರಾಂ
ಸಮಜಾಯತ ಚೇತಸಿ ಕೌತುಕಿತಾ ।
ಮಮ ವಾರಯ ಮೋಹಮಹಾಜಲಧಿಂ
ಭವ ಶಂಕರದೇಶಿಕ ಮೇ ಶರಣಮ್ ॥ ೪

ಸುಕೃತೇಽಧಿಕೃತೇ ಬಹುಧಾ ಭವತೋ
ಭವಿತಾ ಪದದರ್ಶನ ಲಾಲಸತಾ ।
ಅತಿದೀನಮಿಮಂ ಪರಿಪಾಲಯ ಮಾಂ
ಭವ ಶಂಕರದೇಶಿಕ ಮೇ ಶರಣಮ್ ॥ ೫

ಜಗತೀಮವಿತುಂ ಕಲಿತಾಕೃತಯೋ
ವಿಚರಂತಿ ಮಹಾಮಹಸಶ್ಛ ಪರಮ್ ।
ಅಹಿಮಾಂಶುರಿವಾತ್ರ ವಿಭಾಸಿ ಗುರೋ
ಭವ ಶಂಕರದೇಶಿಕ ಮೇ ಶರಣಮ್ ॥ ೬

ವಿದಿತಾ ನ ಮಯಾ ವಿಶದೈಕಕಲಾ
ನ ಚ ಕಿಂಚನ ಕಾಂಚನಮಸ್ತಿ ಗುರೋ ।
ದ್ರುತಮೇವ ವಿಧೇಹಿ ಕೃಪಾಂ ಸಹಜಾಂ
ಭವ ಶಂಕರದೇಶಿಕ ಮೇ ಶರಣಮ್ ॥ ೭

ಭಗವನ್ನುದಧೌ ಮೃತಿ ಜನ್ಮಜಲೇ
ಸುಖದುಃಖಝುಷೇ ಪತಿತಂ ವ್ಯಥಿತಮ್ ।
ಕೃಪಯಾ ಶರಣಾಗತಮುದ್ಧರ ಮಾಂ
ಅನುಶಾದ್ಧ್ಯುಪಪನ್ನಮನನ್ಯಗತಿಮ್ ॥ ೮

ಟಿಪ್ಪಣಿ :- ಶ್ರೀಶಂಕರರ ಅನುಗ್ರಹದಿಂದ ಆಶುಕವಿತೆಯನ್ನು ಮಾಡಿ ಈ ಶ್ಲೋಕಗಳನ್ನು ಗಿರಿಯೆಂಬ ಶಿಷ್ಯನು ಹೇಳುತ್ತಾ ಬಂದನು. ಇವು ತೋಟಕವೃತ್ತಗಳಲ್ಲಿರುವುದರಿಂದ ಆತನಿಗೆ ತೋಟಕಾಚಾರ್ಯನೆಂದು ಹೆಸರಾಯಿತು. ಆಚಾರ್ಯಶಿಷ್ಯರಲ್ಲಿ ಆನಂದಗಿರಿ ಎಂಬವರು ತೋಟಕಾಚಾರ್ಯರೇ ಆಗಿರಬಹುದೆಂದು ತೋರುತ್ತದ. ಶ್ರೀಶಂಕರದಿಗ್ವಿಜಯದ ೧೩ನೆಯ ಸರ್ಗದಲ್ಲಿ ಇವರ ಹೆಸರುಬಂದಿದೆ (ಶ್ಲೋ. ೨೦, ೭೪, ೭೫). ಭಾಷ್ಯಗಳಿಗೆ ವ್ಯಾಖ್ಯಾನ ಗಳನ್ನು ಬರೆದವರು ಆನಂದಜ್ಞಾನ. ಅವರು ಶುದ್ಧಾನಂದರ ಶಿಷ್ಯರು.

✣ ✣ ✣

## ಶ್ರೀ ಜಗದ್ಗುರು ಶಂಕರಭಗವತ್ಪೂಜ್ಯಪಾದಾಚಾರ್ಯಸ್ತವಃ

ಮುದಾ ಕರೇಣ ಪುಸ್ತಕಂ ದಧಾನ ಮೀಶರೂಪಿಣಂ
ತಥಾಽಪರೇಣ ಮುದ್ರಿಕಾಂ ನಮತ್ತಮೋವಿನಾಶಿನೀಮ್ ।
ಕುಸುಂಭವಾಸಸಾವೃತಂ ವಿಭೂತಿಭಾಸಿಫಾಲಕಂ
ನತಾಘನಾಶನೇ ರತಂ ನಮಾಮಿ ಶಂಕರಂ ಗುರುಮ್ ॥ ೧

ಪರಾಶರಾತ್ಮಜಪ್ರಿಯಂ ಪವಿತ್ರಿತಕ್ಷಮಾತಲಂ
ಪುರಾಣಸಾರವೇದಿನಂ ಸನಂದನಾದಿಸೇವಿತಮ್ ।
ಪ್ರಸನ್ನವಕ್ತ್ರಪಂಕಜಂ ಪ್ರಪನ್ನಲೋಕರಕ್ಷಕಂ
ಪ್ರಕಾಶಿತಾದ್ವಿತೀಯತತ್ತ್ವಮಾಶ್ರಯಾಮಿ ದೇಶಿಕಮ್ ॥ ೨

ಸುಧಾಂಶುಶೇಖರಾರ್ಚಕಂ ಸುಧೀಂದ್ರಸೇವ್ಯಪಾದುಕಂ
ಸುತಾದಿಮೋಹನಾಶಕಂ ಸುಶಾಂತಿದಾಂತಿ ದಾಯಕಮ್ ।
ಸಮಸ್ತವೇದಪಾರಗಂ ಸಹಸ್ರಸೂರ್ಯಭಾಸುರಂ
ಸಮಾಹಿತಾಖಿಲೇಂದ್ರಿಯಂ ಸದಾ ಭಜಾಮಿ ಶಂಕರಮ್ ॥ ೩

ಯಮೀಂದ್ರ ಚಕ್ರವರ್ತಿನಂ ಯಮಾದಿಯೋಗವೇದಿನಂ
ಯಥಾರ್ಥತತ್ತ್ವಬೋಧಕಂ ಯಮಾಂತಕಾರ್ಭಕಾರ್ಚಕಮ್ ।
ಯಮೇವ ಮುಕ್ತಿಕಾಂಕ್ಷಯಾ ಸಮಾಶ್ರಯಂತಿ ಸಜ್ಜನಾಃ
ನಮಾಮ್ಯಹಂ ಸದಾ ಗುರುಂ ತಮೇವ ಶಂಕರಾಭಿಧಮ್ ॥ ೪

ಸ್ವಬಾಲ್ಯ ಏವ ನಿರ್ಭರಂ ಯ ಆತ್ಮನೋ ದಯಾಲುತಾಂ
ದರಿದ್ರವಿಪ್ರಮಂದಿರೇ ಸುವರ್ಣವೃಷ್ಟಿಮಾನಯನ್ ।
ಪ್ರದರ್ಶ್ಯ ವಿಸ್ಮಯಾಂಬುಧೌ ನ್ಯಮಜ್ಜಯತ್ ಸಮಾನ್ ಜನಾನ್
ಸ ಏವ ಶಂಕರಃ ಸದಾ ಜಗದ್ಗುರುರ್ಗತಿರ್ಮಮ ॥ ೫

ಯದೀಯಪುಣ್ಯಜನ್ಮನಾ ಪ್ರಸಿದ್ಧಿಮಾಪ ಕಾಲಟೀ
ಯದೀಯಶಿಷ್ಯತಾಂ ವ್ರಜನ್ ಸ ತೋಟಕೋಽಪಿ ಪಪ್ರಥೇ ।
ಯ ಏವ ಸರ್ವದೇಹಿನಾಂ ವಿಮುಕ್ತಿಮಾರ್ಗದರ್ಶಕೋ
ನರಾಕೃತಿಂ ಸದಾಶಿವಂ ತಮಾಶ್ರಯಾಮಿ ಸದ್ಗುರುಮ್ ॥ ೬

ಸನಾತನಸ್ಯ ವರ್ತ್ಮನಃ ಸದೈವ ಪಾಲನಾಯ ಯಃ
ಚತುರ್ದಿಶಾಸು ಸನ್ಮಠಾನ್ ಚಕಾರ ಲೋಕವಿಶ್ರುತಾನ್ |
ವಿಭಾಂಡಕಾತ್ಮಜಾಶ್ರಮಾದಿ ಸುಸ್ಥಲೇಷು ಪಾವನಾನ್
ತಮೇವ ಲೋಕಶಂಕರಂ ನಮಾಮಿ ಶಂಕರಂ ಗುರುಮ್ || ೭

ಯದೀಯಹಸ್ತವಾರಿಜಾತಸುಪ್ರತಿಷ್ಠಿತಾ ಸತೀ
ಪ್ರಸಿದ್ಧಶೃಂಗಭೂಧರೇ ಸದಾ ಪ್ರಶಾಂತಿಭಾಸುರೇ |
ಸ್ವಭಕ್ತಪಾಲನವ್ರತಾ ವಿರಾಜತೇ ಹಿ ಶಾರದಾ
ಸ ಶಂಕರಃ ಕೃಪಾನಿಧಿಃ ಕರೋತು ಮಾಮನೇನಸಮ್ || ೮

ಇಮಂ ಸ್ತವಂ ಜಗದ್ಗುರೋರ್ಗುಣಾನುವರ್ಣನಾತ್ಮಕಂ
ಸಮಾದರೇಣ ಯಃ ಪಠೇದನನ್ಯಭಕ್ತಿಸಂಯುತಃ |
ಸಮಾಪ್ನುಯಾತ್ ಸಮೀಹಿತಂ ಮನೋರಥಂ ನರೋಽಚಿರಾತ್
ದಯಾನಿಧೇಃ ಸ ಶಂಕರಸ್ಯ ಸದ್ಗುರೋಃ ಪ್ರಸಾದತಃ ||

—ಶೃಂಗೇರಿ ಜಗದ್ಗುರು ಶ್ರೀ ಶ್ರೀ ಭಾರತೀತೀರ್ಥ ಮಹಾಸ್ವಾಮಿಗಳು

✤ ✤ ✤

## ಶ್ರೀಶಂಕರಾಚಾರ್ಯರ ವಿಷಯವಾಗಿ ಪ್ರಾಚ್ಯಪ್ರತೀಚ್ಯ ವಿದ್ವಾಂಸರ ಅಭಿಪ್ರಾಯಗಳು

### 1

Supreme as a philosopher and a dialectician, great as a man of calm judgement and wide toleration, Sankara taught us to love truth respect reason and realise the purpose of life. Twelve centuries have passed and yet his influence is visible. He destroyed many an old dogma not by violently attacking it, but by quietly suggesting something more reasonable, which was at the same time more spiritual too. He put into general circulation a vast body of spiritual knowledge and formative ideas, which, contained in the upanishads, were forgotten by the people and thus recreated for us the distant past. He was not a dreaming idealist, but a practical visionary, a philosopher, and at the same time a man of action, what we may call a socialist idealist on a grand scale. Even those who do not agree with his general attitude to life will not be reluctant to allow him a place among the immortals.

S. Radhakrishnan,
Indian philosphy. Vol 2, P. 658

"ಶಂಕರಾಚಾರ್ಯರು ಶ್ರೇಷ್ಠದರ್ಜೆಯ ದಾರ್ಶನಿಕರೂ ತಾರ್ಕಿಕರೂ ಆಗಿದ್ದರಲ್ಲದೆ, ಶಾಂತವಾಗಿ ಒಂದು ತೀರ್ಪನ್ನು ತೆಗೆದುಕೊಳ್ಳುವ ದೊಡ್ಡತನವುಳ್ಳ ವ್ಯಕ್ತಿಯಾಗಿದ್ದರು. ಸತ್ಯವನ್ನು ಪ್ರಿತಿಸಬೇಕೆಂಬುದನ್ನೂ ಸರಿಯಾದ ಕಾರಣಕ್ಕೆ ಮಣಿಯಬೇಕೆಂಬುದನ್ನೂ ತಿಳಿಸಿಕೊಟ್ಟರು. ಅಲ್ಲಿಂದೀಚೆಗೆ ಹನ್ನೆರಡು ಶತಮಾನಗಳು ಕಳೆದು ಹೋದರೂ ಅವರ ಪ್ರಭಾವವು ಅಚ್ಚಳಿಯದೆ ಉಳಿದಿದೆ. ತತ್ತ್ವಸಂಬಂಧಿಗಳಾದ ಎಷ್ಟೋ ನಂಬಿಕೆಗಳು, ಅವುಗಳಿಗಿಂತ ಉತ್ತಮ ವಾದ ತತ್ತ್ವವನ್ನು ಶಂಕರರು ಸೂಚಿಸಿದ್ದರಿಂದ ನಿರ್ನಾಮವಾದವೇ ಹೊರತು, ನಿರ್ದಾಕ್ಷಿಣ್ಯವಾಗಿ ಅವನ್ನು ಖಂಡಿಸಿದ್ದರಿಂದಲ್ಲ. ಅವರು ತಿಳಿಸಿದ ತತ್ತ್ವವು ಯುಕ್ತತರವೂ ಆಧ್ಯಾತ್ಮಿಕವಾಗಿ ಹೆಚ್ಚು ಸಮಂಜಸವೂ ಆದದ್ದು. ಆಧ್ಯಾತ್ಮಿಕವೂ ನ್ಯಾಯಬದ್ಧವೂ ಆದ ವಿಪುಲವಿಚಾರಗಳನ್ನೂ ಪ್ರಮೇಯಗಳನ್ನೂ ತಿಳಿಸಿಕೊಟ್ಟು ಸಾರ್ವತ್ರಿಕವಾಗಿ ಪ್ರಚಾರಕ್ಕೆ ತಂದರು. ಅವೆಲ್ಲವೂ ಹಿಂದೆ ಉಪನಿಷತ್ತುಗಳಲ್ಲಿ ಇದ್ದವುಗಳೇ ಸರಿ. ಬಹಳ ಪ್ರಾಚೀನ ಕಾಲದಲ್ಲಿ ಪ್ರತಿಪಾದಿತವಾದ ಆ ವಿಷಯಗಳನ್ನು ಜನರು ಮರೆತು ಬಿಟ್ಟಿದ್ದರಿಂದ ಶಂಕರರು ಅವನ್ನು ಮತ್ತೆ ನಮಗೆ ಹೊಸದಾಗಿ ತೋರಿಸಿಕೊಟ್ಟಿದ್ದಾರೆ. ಅವರು

ಕನಸುಗಾಣುವ ದಾರ್ಶನಿಕರಾಗದೆ, ಕ್ರಿಯೆಯಲ್ಲಿ ತೋರಿಸಿಕೊಡುವ ತತ್ತ್ವವೇದಿಗಳಾಗಿದ್ದರು. ತತ್ತ್ವಬೋಧನೆಯ ಜೊತೆಗೆ ಅವರು ಆ ದಿಕ್ಕಿನಲ್ಲಿ ಕಾರ್ಯಪ್ರವೃತ್ತರಾದ ದಾರ್ಶನಿಕರು. ಅವರನ್ನು ನಾವು ಅತ್ಯುನ್ನತಮಟ್ಟದ ಸಾಮಾಜಿಕ ಕಾರ್ಯಕರ್ತರಾದ ತತ್ತ್ವದರ್ಶಿಗಳೆನ್ನಬಹುದು. ಅವರು ಜೀವನದ ವಿಷಯವಾಗಿಟ್ಟುಕೊಂಡಿದ್ದ ದೃಷ್ಟಿಯನ್ನು ಸಾಮಾನ್ಯವಾಗಿ ಒಪ್ಪದ ಜನರೂ ಸಹ, ಶಂಕರರು ಅಮರರಾಗಿರತಕ್ಕವರಲ್ಲಿ ಒಬ್ಬರೆಂಬುದನ್ನು ಅಂಗೀಕರಿಸದಿರಲು ಸಾಧ್ಯವಿಲ್ಲ"

ಡಾ|| ಎಸ್. ರಾಧಾಕೃಷ್ಣನ್

2

Shankara was a man of amazing energy and vast activity. He was no escapist, escaping into his shell or into a corner of the forest seeking his own individual perfection oblivious of what happened to others. In a brief life of thirty two years, he did the work of many long lives and left such an impression of his powerful mind and such personality on India that is very evident to - day.

- Discovery of India by Jawaharlal Nehru. P. 147

"ಶಂಕರರು ವಿಸ್ಮಯಕರವಾದ ಉತ್ಸಾಹಶಕ್ತಿಯನ್ನು ಪಡೆದು ವಿಶಾಲವಾದ ಕಾರ್ಯಭಾರವನ್ನು ನಿರ್ವಹಿಸಿದ ವ್ಯಕ್ತಿ. ಜನರ ಕಷ್ಟವನ್ನು ಉಪೇಕ್ಷಿಸಿ ಯಾವುದೋ ಗೂಡಿನೊಳಗೆ ಸೇರಿಕೊಳ್ಳತಕ್ಕವರಲ್ಲ. ಇತರರಿಗೆ ಏನಾದರೂ ಆಗಲಿ, ನನಗೊಬ್ಬನಿಗೆ ಆಧ್ಯಾತ್ಮಿಕಸಿದ್ಧಿಯಾದರೆ ಸಾಕೆಂದು ಕಾಡಿನ ಒಂದು ಮೂಲೆಗೆ ಹೋಗಿ ಕುಳಿತುಕೊಂಡವರಲ್ಲ. ಕೇವಲ ಮೂವತ್ತೆರಡು ವರ್ಷಗಳವರೆಗಿದ್ದ ಜೀವಿತದ ಅಲ್ಪಕಾಲದಲ್ಲಿ, ದೀರ್ಘಕಾಲ ಜೀವಿಸಿದ ಎಷ್ಟೋ ಜನರು ಮಾಡದಷ್ಟು ಕಾರ್ಯವನ್ನು ನಿರ್ವಹಿಸಿದ್ದಾರೆ. ಅಷ್ಟು ಅಲ್ಪಕಾಲದಲ್ಲಿಯೇ ತಮ್ಮ ಪ್ರಬಲವಾದ ಮಾನಸ ಶಕ್ತಿಯ ಪ್ರಭಾವವನ್ನು ವೈಯಕ್ತಿಕ ಮಹಿಮೆಯನ್ನೂ ಭಾರತದೇಶದಲ್ಲಿ ಮೂಡಿಸಿ ಹೋಗಿದ್ದಾರೆ. ಈಗಲೂ ಅದು ದೃಷ್ಟಿಗೋಚರವಾಗಿದೆ"

- ಜವಹರ್‌ಲಾಲ್ ನೆಹ್ರೂ

3

Western people can hardly imagine a personality that of Shankaracharya. We contemplate with wonder and delight, the devotion of Francis Assisi, the intellect of A berald, the virile force of force and freedom of Martin Luther and the political efficiency of

Ignatious Lyola, but who could imagine all these united in one person?

- Sister Nivedita

"ಪಾಶ್ಚಾತ್ಯಜನರು ಶಂಕರಾಚಾರ್ಯರ ವ್ಯಕ್ತಿತ್ವವೇನೆಂಬುದನ್ನು ಊಹಿಸಿಕೊಳ್ಳಲೂ ಆರರು. ನಾವು ಪ್ರಾನ್ಸಿಸ್ ಆಸ್ಸಿಸಿಯ ಭಕ್ತಿಧಾರೆಯನ್ನೂ ಅಬರಾಲ್ಡನ ಬುದ್ಧಿಶಕ್ತಿಯನ್ನೂ ಮಾರ್ಟಿನ್ ಲೂಥರನ ಸಾಮರ್ಥ್ಯಾತಿಶಯ ಮತ್ತು ಸ್ವಾತಂತ್ರ್ಯಶಕ್ತಿಗಳನ್ನೂ ಇಗ್ನಾಟಿಸ್‌ಲಯೋಲನ ರಾಜಕೀಯ ಧುರಂಧರತೆಯನ್ನೂ ಹರ್ಷವಿಸ್ಮಯಗಳಿಂದ ಕೂಡಿ ಮೆಚ್ಚುಗೆಯಿಂದ ನೆನೆಸಿಕೊಳ್ಳುತ್ತೇವೆ. ಆದರೆ ಈ ಎಲ್ಲ ಮಹಾಗುಣಗಳೂ ಶಂಕರಾಚಾರ್ಯರೆಂಬ ಒಬ್ಬ ವ್ಯಕ್ತಿಯಲ್ಲಿ ಕೇಂದ್ರೀಕೃತವಾಗಿದ್ದವೆಂಬುದನ್ನು ಯಾರು ಊಹಿಸಬಲ್ಲರು?"

-ಸೋದರಿ ನಿವೇದಿತಾ

4

The system of vedantha as founded on the Upanishads and Vedantha Sutras and accompanied by Shankara's commentaries on them - equal in rank to Plato and Kant is one of the most valuable products of the genius of mankind in his researches of the eternal truth.... but Shankara in his conclusion goes perhaps more fully than any one of them...

- Dr. Paul Deusseun

"ಉಪನಿಷತ್ತುಗಳ ಮತ್ತು ವೇದಾಂತಸೂತ್ರಗಳ ಆಧಾರದಿಂದಲೂ ಅವುಗಳ ಮೇಲಿರುವ ಶಾಂಕರಭಾಷ್ಯಗಳಿಂದಲೂ ಸಿದ್ಧವಾದ ವೇದಾಂತದರ್ಶನವು ತನ್ನಯೋಗ್ಯತೆಯಲ್ಲಿ ಪ್ಲೇಟೋ ಮತ್ತು ಕ್ಯಾಂಟ್ ಇವರ ಸಿದ್ಧಾಂತಕ್ಕೆ ಸಮಾನವಾಗಿದೆ. ಈ ದರ್ಶನವು ಶಾಶ್ವತಸತ್ಯದ ಶೋಧನೆಗಾಗಿ ಮನವಕುಲವು ನಡೆಸಿದ ಪ್ರಯತ್ನಗಳಲ್ಲಿ ತೀವ್ರವಾದ ಪ್ರಜ್ಞೆಯಿಂದ ಸಿದ್ಧವಾದ ಬಹುಮೂಲ್ಯದ ವಸ್ತುವಾಗಿದೆ. ಶಂಕರಾಚಾರ್ಯರ ಸಿದ್ಧಾಂತವು ಪ್ಲೇಟೋ ಮತ್ತು ಕ್ಯಾಂಟ್ -ಇವರೀರ್ವರ ಸಿದ್ಧಾಂತಕ್ಕಿಂತ ಅಧಿಕವಾದ ಪೂರ್ಣತೆಯನ್ನೂ ಪಡೆದಿದೆ."

-ಡಾ|| ಪಾಲ್ ಡಯ್ಸನ್

5

"ಶಂಕರಾಚಾರ್ಯರು ಅಲೌಕಿಕಮೇಧಾಸಂಪನ್ನ ವ್ಯಕ್ತಿಯಾಗಿದ್ದರು. ಇವರ ಅಸಾಮಾನ್ಯವಾದ ವಿದ್ವತ್ತು, ಸರ್ವಾತಿಶಯವಾದ ಪ್ರತಿಭೆ, ಅಸಾಧಾರಣವಾದ ತರ್ಕಪಾಂಡಿತ್ಯ -ಇವುಗಳನ್ನು ನೋಡಿ ವಿಮರ್ಶಕನ ಶಿರವು ಇವರ ಪಾದಗಳಿಗೆ ನಮಸ್ಕಾರವನ್ನು ಮಾಡುತ್ತದೆ"

-ಪಂಡಿತ ಬಲದೇವ ಉಪಾಧ್ಯಾಯ -ಭಾರತೀಯ ದರ್ಶನದಲ್ಲಿ.

# ಶ್ಲೋಕಾನುಕ್ರಮಣಿಕೆ

## ಸರ್ಗ ೧೦-೧೬